|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೨೯



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1952

# ಮುನ್ನುಡಿ

ಮಹಾದೇವ ನಾಮಾಂಕಿತವಾದ ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶವು ಈ ಗ್ರಂಥಭಾಗದಲ್ಲಿ ಪೂರ್ಣಗೊಳ್ಳುತ್ತದೆ. ಶಿವರಹಸ್ಯದಲ್ಲಿ ಕಂಡುಬರುವ ಪ್ರತಿಯೊಂದು ಅಂಶದಲ್ಲಿಯೂ, ಶೈವಧರ್ಮವಿಷಯಕಗಳಾದ ಅನೇಕ ಹೊಸ ವೈದಿಕ ಧರ್ಮನಿರೂಪಣೆಗಳು ಕಂಡುಬರುತ್ತಲೇ ಇವೆ. ಚಾಂದ್ರಮಾನದಿಂದ ಬರುವ ಚೈತ್ರ, ವೈಶಾಖಾದಿ ಹನ್ನೆರಡು ತಿಂಗಳುಗಳಲ್ಲಿಯೂ ಪರಮೇಶ್ವರನನ್ನು ಬೇರೆ ಬೇರೆ ಹೆಸರಿನಿಂದ, ಭಿನ್ನ ಭಿನ್ನ ನಿಯಮಗಳಿಂದ ಅರ್ಚಿಸಬೇಕೆಂಬ ವಿಷಯವು ಇದರಲ್ಲಿ ಉಪಾತ್ತವಾಗಿದೆ. ಶನಿಪ್ರದೋಷವ್ರತ, ಸೋಮವಾರ ವ್ರತ, ಅದರ ಉದ್ಯಾಪನೆ, ಮಾಸಶಿವರಾತ್ರೀವ್ರತ, ಮುಂತಾದ ಶಿವವ್ರತಗಳ ವಿಚಾರವು ಈ ಭಾಗದಲ್ಲಿ ಸ್ವಲ್ಪಮಟ್ಟಿಗೆ ಪ್ರತಿಪಾದಿತವಾಗಿದೆ. ಆದರೆ ಇದೇ ವ್ರತಗಳ ಪ್ರಕರಣವು ಹಿಂದಿನಂಶಗಳಲ್ಲಿ ವಿಶೇಷವಾಗಿ ವರ್ಣಿತವೇ ಆಗಿದೆ. ಈ ಭಾಗದಲ್ಲಿ ಶಾಂತಿಧರ್ಮವೆಂಬುದು ಒಂದು ಹೊಸವಿಷಯ. ಭಕ್ತನು ಭಕ್ತಿಯಿಂದ ನಡೆಸಿದ ಈಶ್ವರಪೂಜೆಯಿಂದ ಸಕಲ ದೇವತೆಗಳೂ ಸಂತುಷ್ಟರಾಗಿ ಅವರವರ ಪ್ರಭಾವಕ್ಕೆ ಅನುಗುಣವಾದ ಶಾಂತಿಯನ್ನು ತನಗೆ ಕರುಣಿಸಲಿ, ಎಂದು ಕೇಳಿಕೊಳ್ಳುವುದೇ ಶಾಂತಿಧರ್ಮ. ಇದು ಸುಮಾರು ನಾಲ್ಕು ಅಧ್ಯಾಯಗಳಲ್ಲಿ ವಿವರವಾಗಿ ಬಂದಿದೆ. ಗೋವಿನ ಮಹಿಮೆ, ಗೋಪೂಜಾಕ್ರಮ, ಶಿವವ್ರತಕಾಲದಲ್ಲಿ ಮಾಡಬೇಕಾದ ಗೋದಾನಗಳ ಆವಶ್ಯಕತೆ ಇತ್ಯಾದಿ ವಿಷಯಗಳು ಅಲ್ಲಲ್ಲಿ ಪ್ರಾಕರಣಿಕವಾಗಿ ಬಂದಿವೆ.

> ಶಿವಾರ್ಚನರತೋ ನಿತ್ಯಂ ಮಹಾಪಾತಕಸಂಯುತೈಃ ।
> ದೋಷೈಃ ಕೃತ್ಯೈರ್ನ ಲಿಪ್ಯೇತ ಪದ್ಮಪತ್ರಮಿವಾಂಭಸಾ ॥

ಇತ್ಯಾದಿ ಅನೇಕ ಫಲಶ್ರುತಿಗಳು, ನಿತ್ಯವೂ ಶಿವಾರ್ಚನೆಮಾಡುವವರಿಗೆ ಯಾವ ದೋಷವೂ ಸಂಭವಿಸುವುದಿಲ್ಲ ಎಂಬುದನ್ನು ಸೂಚಿಸುತ್ತವೆ. ಇದರಿಂದ ಶಿವಾರ್ಚಕನು ಯಾವ ತಪ್ಪುಗಳನ್ನಾದರೂ ಮಾಡಬಹುದೆಂದು ತಾತ್ಪರ್ಯವಲ್ಲ. ಶಿವಾರ್ಚನೆಯಿಂದ ಸಕಲ ಪಾಪಗಳೂ ನಿವೃತ್ತಿಯಾಗುವುವು ಎಂಬುದೇ ಇದರ ರಹಸ್ಯ. ಸಾಮಾನ್ಯವಾಗಿ ಎಲ್ಲ ಪುರಾಣಗಳಲ್ಲಿಯೂ, ಒಂದು ಕರ್ಮಕ್ಕೆ ಫಲಶ್ರುತಿಯನ್ನು ಹೇಳದೇ ಇರುವುದೇ ಇಲ್ಲ. ಜನಸಾಮಾನ್ಯಕ್ಕೆ ಆ ಕರ್ಮದಲ್ಲಿ ಪ್ರವೃತ್ತಿ ಹುಟ್ಟಲಿ ಎಂಬುದೇ ಫಲಶ್ರುತಿ ಹೇಳುವ ಪುರಾಣಕಾರರ ಉದ್ದೇಶ. ಜನ್ಮಾಂತರಗಳ ಪುಣ್ಯಪಾಪಗಳಿಗೆ ಅನುಗುಣವಾಗಿ ಜೀವನದಲ್ಲಿ ಸುಖದುಃಖಗಳು ಒದಗುತ್ತವೆ ಎಂಬುದೇ ನಿಶ್ಚಿತವಾದ ಅಭಿಪ್ರಾಯ,

ಇದನ್ನನುಸರಿಸಿಯೇ ನಾವು ಈ ಜನ್ಮದಲ್ಲಿ ದೇವತಾಸೇವೆಯೇ ಮೊದಲಾದ ಸತ್ಕರ್ಮ ಗಳನ್ನೆಸಗಿ, ಪುಣ್ಯಾರ್ಜನೆಮಾಡಿ, ಮುಂದಿನ ಜನ್ಮದಲ್ಲಿ ಸೌಖ್ಯವನ್ನೋ ಮೋಕ್ಷ ವನ್ನೋ ಪಡೆಯಬೇಕು. ಮೋಕ್ಷಪ್ರಾಪ್ತಿಗೆ ಕರ್ಮ ಮತ್ತು ಜ್ಞಾನಗಳು ಹೇಗೆ ಸಾಧಕ ಗಳೋ, ಭಕ್ತಿಯೂ ಅದೇ ರೀತಿ ಸಹಕಾರಿಯಾಗುವುದು ಎಂಬುದೇ ಪುರಾಣಕಾರರ ಸಿದ್ಧಾಂತ. ಇಂದಿನ ಜನತೆಗೆ ಸಾಧ್ಯವಾಗುವುದೂ ಭಕ್ತಿಮಾರ್ಗವೇ. ಆದ್ದರಿಂದ ಈ ಪುರಾಣದ ತತ್ತ್ವಗಳು ಈ ಕಾಲದ ಜನರಿಗೆ ಪ್ರಾಯಶಃ ಒಪ್ಪುವಂತಿವೆ. ನಮ್ಮ ಪ್ರಾಚೀನ ಸಂಸ್ಕೃತಿಯನ್ನು ಉಜ್ಜೀವನಗೊಳಿಸಲು ತೊಡಗಿರುವ ಈಗಿನ ಸರ್ಕಾರ ದವರಿಗೆ ಇಂತಹ ಪ್ರಾಚೀನಗ್ರಂಥಗಳು ವಿಶೇಷ ಸಹಕಾರಿಗಳಾಗುತ್ತವೆ ಎಂಬುದನ್ನು ಒತ್ತಿ ಹೇಳಬೇಕಾಗಿಲ್ಲ.

ನಮ್ಮ ಪ್ರಾಚೀನ ಸಂಸ್ಕೃತಿಯ ಪ್ರಚಾರವನ್ನು ಗ್ರಂಥಗಳ ರೂಪದಲ್ಲಿ ನಮ್ಮನ್ನಾಳುವ ಶ್ರೀಮನ್ಮಹಾರಾಜರವರು ಈಗ್ಗೆ ಸುಮಾರು ಹನ್ನೆರಡು ವರ್ಷ ಗಳಿಂದಲೂ ನಡೆಸುತ್ತಲೇ ಇರುವರು. ಬಹುಧನವ್ಯಯದಿಂದ ನಡೆಸುವ ಈ ಗ್ರಂಥ ಪ್ರಸಾರಕಾರ್ಯವೇ ಬಹು ಮುಖ್ಯವಾದುದು ಮತ್ತು ಶಾಶ್ವತವಾದುದು. ನಮ್ಮ ಮಹಾ ಪ್ರಭುಗಳವರ ಆಳ್ವಿಕೆಯಲ್ಲಿ ಅಷ್ಟಾದಶ ಮಹಾಪುರಾಣಗಳೂ, ಅಷ್ಟಾದಶ ಉಪಪುರಾಣ ಗಳೂ, ಇತರ ವೈದಿಕಗ್ರಂಥಗಳೂ ಕನ್ನಡಭಾಷೆಗೆ ಸಂಸ್ಕೃತಮಾತೃಕೆಯೊಡನೆ ಬಂದು, ಕನ್ನಡಿಗರು ಸಂಸ್ಕೃತಿಯನ್ನು ಹೆಚ್ಚಿಸಿಕೊಳ್ಳಲು ವಿಶೇಷವಾಗಿ ಸಹಾಯ ವನ್ನು ನೀಡಿವೆ. ಈಗ ಸರ್ಕಾರದವರು ಕೈಗೊಂಡಿರುವ ಸಂಸ್ಕೃತಿಪ್ರಚಾರವು ಯಶಸ್ವಿಯಾಗಿ ನಡೆಯುವುದಾದರೆ ಅದಕ್ಕೆ ಮೂಲಕಾರಣರು ನಮ್ಮನ್ನಾಳುವ ಮಹಾಸ್ವಾಮಿಯವರು ಎಂದೇ ಧಾರಾಳವಾಗಿ ಹೇಳಬಹುದು.

ಹೀಗೆ ಪ್ರಾಚೀನಗ್ರಂಥಗಳ ಪರಿಷ್ಕರಣಕ್ಕೆ ಸರ್ವತೋಮುಖವಾದ ಪ್ರೋತ್ಸಾಹ ಕೊಟ್ಟು, ಗ್ರಂಥಭಂಡಾರವನ್ನು ಕನ್ನಡಿಗರಿಗೆ ಒದಗಿಸುತ್ತಿರುವ ನಮ್ಮ ಶ್ರೀಮನ್ಮಹಾ ರಾಜರಾದ **ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುಗಳವರಿಗೆ ಸರ್ವಲೋಕರಕ್ಷಕನಾದ ಸರ್ವೇಶ್ವರನು ಸತ್ಸಂತಾನಾದಿ ಸಕಲ ಸನ್ಮಂಗಳಗಳನ್ನೂ ಕರುಣಿಸಿ ಸಲಹುತ್ತಿರಲಿ ಎಂದು ಅನನ್ಯ ಭಕ್ತಿಯಿಂದ ಪರಮಾತ್ಮನನ್ನು ಪ್ರಾರ್ಥಿಸುತ್ತೇನೆ.

ಶ್ರೀ ನಂದನಸಂವತ್ಸರದ
ಪುಷ್ಯ ಶುದ್ಧ ಷಷ್ಠೀ
ಸೋಮವಾರ
ತಾ॥ 22—12—1952.

ಸಜ್ಜನ ವಿಧೇಯ
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದ ವಿಷಯಾನುಕ್ರಮಣಿಕಾ

(೨೬—೫೦ ಅಧ್ಯಾಯಗಳು ಪೂರ್ತಿ)

## ನಲವತ್ತುಮೂರನೆಯ ಅಧ್ಯಾಯ



## ನಲವತ್ತುನಾಲ್ಕನೆಯ ಅಧ್ಯಾಯ



## ನಲವತ್ತೈದನೆಯ ಅಧ್ಯಾಯ



## ನಲವತ್ತಾರನೆಯ ಅಧ್ಯಾಯ



## ನಲವತ್ತೇಳನೆಯ ಅಧ್ಯಾಯ



## ನಲವತ್ತೆಂಟನೆಯ ಅಧ್ಯಾಯ



## ನಲವತ್ತೊಂಬತ್ತನೆಯ ಅಧ್ಯಾಯ



## ಐವತ್ತನೆಯ ಅಧ್ಯಾಯ





॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಷಡ್ತ್ರಿಂಶೋಽಧ್ಯಾಯಃ

॥ ಶ್ರೀಸ್ಕಂದ ಉವಾಚ ॥

**ಶೃಣು ಗುಹ್ಯತಮಂ ಪುಣ್ಯಂ ಸರ್ವಸಿದ್ಧಿಪ್ರದಾಯಕಂ ।**
**ದೇವ್ಯೈ ದೇವೇನ ಕಥಿತಂ ಪೂಜಾರ್ಚನವಿಧಿಕ್ರಮಂ ॥೧॥**

**ಕರ್ತುರಪ್ಯಧಿಕಂ ಪುಣ್ಯಂ ಲಭತೇ ಶ್ರಾವಕೋ ನರಃ ।**
**ಯದಿ ಭಕ್ತೋ ಮಹಾದೇವೇ ಶ್ರುತ್ವಾ ಪಾಪಿ ವಿಮುಚ್ಯತೇ ॥೨॥**

**ಯತಸ್ತ್ವಂ ಶಿವಭಕ್ತೇಷು ಶ್ರೇಷ್ಠಸ್ತಸ್ಮಾದ್ವದಾಮಿ ತೇ ।**
**ಚತುರ್ದಶ್ಯಾಮಥಾಷ್ಟಮ್ಯಾಂ ಪಕ್ಷಯೋಃ ಕೃಷ್ಣಶುಕ್ಲಯೋಃ ॥೩॥**

## ಇಪ್ಪತ್ತಾರನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳನ್ನು ಕುರಿತು ಇಂತೆಂದನು. “ ಮಹರ್ಷಿಯೇ, ಕೇಳು. ಇಲ್ಲಿಯವರೆಗೂ ಪಾರ್ವತಿಗೆ ಪರಮೇಶ್ವರನು ಹೇಳಿದ್ದ ಪೂಜಾರ್ಚನವಿಧಿಯನ್ನು ನಿನಗೆ ಪೂರ್ಣವಾಗಿ ತಿಳಿಸಿರುವೆನು. ಇದು ಬಹಳ ನಿಗೂಢವಾದ ವಿಷಯ. ಈ ಕ್ರಮದಂತೆ ಶಿವಾರ್ಚನೆ ಮಾಡುವವನಿಗೂ, ಇದನ್ನು ಭಕ್ತಿಯಿಂದ ಕೇಳುವವನಿಗೂ ವಿಶೇಷ ಪುಣ್ಯವುಂಟು. ಶಿವನಲ್ಲಿ ನಿಜವಾದ ಭಕ್ತಿಯುಳ್ಳವನು, ಇದನ್ನು ಶ್ರದ್ಧೆಯಿಂದ ಕೇಳಲೇಬೇಕು. ॥೧-೨॥

“ ಜೈಗೀಷವ್ಯಮುನಿಯೆ, ನೀನಂತೂ ಶಿವಭಕ್ತವರ್ಯನಾದುದರಿಂದ ಇದನ್ನು ಭಕ್ತಿಯಿಂದ ಕೇಳು. ನನ್ನ ಈ ಮಾತನ್ನು ನಿಜವೆಂದು ನಂಬು. ಪ್ರತಿಪಕ್ಷದ

ಯೋಽಬ್ದಮೇಕಂ ನ ಭುಂಜೀತ ಶಿವಾರ್ಚನರತಶ್ಶುಚಿಃ ।
ಯತ್ಪುಣ್ಯಮಕ್ಷಯಂ ಪ್ರೋಕ್ತಂ ಸತತಂ ಸತ್ರಯಾಜಿನಾಂ ॥೪॥

ಸತ್ಯವಾದಿಷು ಯತ್ಪುಣ್ಯಂ ಯತ್ಪುಣ್ಯಂ ತೀರ್ಥಗಾಮಿನಾಂ ।
ಅಗ್ನಿಹೋತ್ರೇಣ ಯತ್ಪುಣ್ಯಂ ಯತ್ಪುಣ್ಯಂ ಯಜ್ಞಯಾಜಿನಾಂ ॥೫॥

ತತ್ಪುಣ್ಯಂ ಸಕಲಂ ಪ್ರಾಪ್ಯ ಶಿವಲೋಕಂ ಸ ಗಚ್ಛತಿ ।
ನಕ್ತಂ ಶಕ್ತೋಽಪಿ ಕುರ್ವೀತ ಭಾವಭಕ್ತೋ ಜಿತೇಂದ್ರಿಯಃ ॥೬॥

ಪೃಥಿವೀಂ ಭಾಜನಂ ಕೃತ್ವಾ ಭುಂಕ್ತೇ ಪರ್ವಸು ಯೋ ನರಃ ।
ಅಹೋರಾತ್ರೇಣ ಚೈಕೇನ ತ್ರಿರಾತ್ರಫಲಮಶ್ನುತೇ ॥೭॥

ದ್ವಯೋರ್ಮಾಸಸ್ಯ ಚಾಷ್ಟಮ್ಯಾಂ ಭೂತಯೋರಪಿ ಭಕ್ತಿಮಾನ್ ।
ಶಿವಮಭ್ಯರ್ಚ್ಯ ವಿಧಿವನ್ನಿಶಿ ಬಿಲ್ವೈಶ್ಚ ಪಂಕಜೈಃ ॥೮॥

ಚತುರ್ದಶೀ ಮತ್ತು ಅಷ್ಟಮೀ ತಿಥಿಗಳಲ್ಲಿ ಭೋಜನಮಾಡದೆ ಶಿವಾರ್ಚನೆಯಿಂದಲೇ ಕಾಲಕಳೆಯುತ್ತಾ ಒಂದು ವರ್ಷಪರ್ಯಂತ ಈ ವ್ರತವನ್ನು ಮಾಡಿದರೆ ಅಕ್ಷಯವಾದ ಪುಣ್ಯವು ಲಭಿಸುವುದೆಂದು ಶ್ರುತಿಯಿರುವುದು. ||೩-೪||

ಮತ್ತು ಈ ರೀತಿ ಒಂದು ವರ್ಷ ಮಾಸಾರ್ಚನೆ ನಡೆಸಿದವನಿಗೆ ಸಮಸ್ತ ಯಾಗಗಳನ್ನು ಆಚರಿಸುವಿಕೆಯಿಂದಲೂ, ಸತ್ಯವಾದದಿಂದಲೂ, ತೀರ್ಥಯಾತ್ರೆಯಿಂದಲೂ, ಅಗ್ನಿಹೋತ್ರಾದಿಗಳಿಂದಲೂ, ಯಾಗಾಚರಣೆಗಳಿಂದಲೂ ಎಂತಹ ಪುಣ್ಯನಿಚಯವು ಲಭಿಸುವುದೋ ಅಂತಹ ಸುಕೃತವೈಭವವೇ ದೊರೆಯುವುದು. ಅದರ ಫಲವಾಗಿ ಅವನಿಗೆ ಶಿವಲೋಕವೇ ಲಭಿಸುವುದು. ಶಕ್ತಿಯಿರುವ ಈಶ್ವರ ಪೂಜಕನು ಶಿವವ್ರತ ದಿನಗಳಲ್ಲಿ ಜಿತೇಂದ್ರಿಯನಾಗಿ ನಕ್ತವ್ರತವನ್ನು ನಡೆಸಲೇ ಬೇಕು. ||೫-೬||

ಯಾವನು ಪರ್ವದಿನಗಳಲ್ಲಿ ಒಂದು ದಿನ ನೆಲದ ಮೇಲೆಯೇ ಊಟಮಾಡುತ್ತಾನೆಯೋ ಅವನು ತ್ರಿರಾತ್ರ ಉಪವಾಸಮಾಡಿದ ಫಲವನ್ನು ಪಡೆಯುತ್ತಾನೆ. ಒಂದು ತಿಂಗಳನ ಎರಡು ಅಷ್ಟಮೀ ಮತ್ತು ಎರಡು ಚತುರ್ದಶೀ ತಿಥಿಗಳಲ್ಲಿಯೂ ರಾತ್ರಿಹೊತ್ತು ಬಿಲ್ವಕಮಲಾದಿಗಳಿಂದ ಈಶ್ವರನನ್ನು ಅರ್ಚಿಸಿದವರು ಶಿವಾನುಗ್ರಹವನ್ನು ಪಡೆಯುವರು. ||೭-೮||

ಸೋಽಪವಾಸಸ್ಸ್ರಗಂಧಾಂಗಃ ಶಯೀತ ಪ್ರಿಯಯಾ ಸಹ ।
ಶೇತೇ ನಿಶ್ಚಲಚಿತ್ತೋ ಯೋ ರತಿರಾಗವಿವರ್ಜಿತಃ ॥೯॥

ಶಿವೈಕಗತಚಿತ್ತಸ್ಯ ತಸ್ಯ ಪುಣ್ಯಫಲಂ ಶೃಣು ।
ದಿವ್ಯವರ್ಷಸಹಸ್ರಾಣಿ ದಿವ್ಯವರ್ಷಶತಾನಿ ಚ ॥೧೦॥

ತಪಸ್ತಪ್ತಂ ಮಹತ್ತೇನ ಭವೇದೇವ ನ ಸಂಶಯಃ ।
ಭವಭಕ್ತಶ್ಚ ಪೂತಾತ್ಮಾ ಯದ್ಯಪಿ ಸ್ಯಾತ್ಸುಪಾಪಕೃತ್ ॥೧೧॥

ವಿಧೂಯ ಪಾಪಸಲಿಲಂ ಶಿವಲೋಕೇ ಮಹೀಯತೇ ।
ಸರ್ವಮಾಸೇಷು ಪುಣ್ಯಾತ್ಮಾ ಪಕ್ಷಯೋಃ ಶುಕ್ಲಕೃಷ್ಣಯೋಃ ॥೧೨॥

ಶಕ್ತೋಽಥ ಭವಭಕ್ತೋ ಯೋ ಮುಕ್ತೋ ನಕ್ತಾಶನೋ ಭವೇತ್ ।
ಇಹಭೋಗಮವಾಪ್ನೋತಿ ಪರತ್ರ ಚ ಪರಾಂಗತಿಂ ॥೧೩॥

ಶಿವಲೋಕೇ ವಸೇನ್ನಿತ್ಯಂ ಶಿವವತ್ಸಂವೃತೋ ಗಣೈಃ ।
ಯೋಽಬ್ದಮೇಕಂ ನ ಭುಂಜೀತ ಶಕ್ತೋ ನಕ್ತಂ ಚ ಪರ್ವಣಿ ॥೧೪॥

ಮತ್ತು ಆ ದಿನಗಳಲ್ಲಿ ಉಪವಾಸದಿಂದಿದ್ದು, ಗಂಧದಿಂದ ಲಿಪ್ತವಾದ ಶರೀರವುಳ್ಳವನಾಗಿ, ಪತ್ನಿಯೊಡನೆ ಮಲಗಿದ್ದರೂ, ಕಾಮುಕನಾಗದೆ ಜಿತೇಂದ್ರಿಯನಾಗಿದ್ದು ಪರಶಿವನ ಧ್ಯಾನದಲ್ಲಿದ್ದವನಿಗೆ ಸಹಸ್ರಾರು ವರ್ಷಗಳು ತಪಸ್ಸನ್ನಾಚರಿಸಿದ ಫಲವು ಲಭಿಸುವುದು. ॥೯-೧೦॥

ಒಂದುವೇಳೆ ಆತನು ಎಂತಹ ಪಾಪಿಯಾಗಿದ್ದರೂ, ಶಿವಭಕ್ತಿಯ ದೆಸೆಯಿಂದ ಪಾಪವನ್ನು ಕಳೆದುಕೊಂಡವನಾಗಿ, ಶಿವಲೋಕವನ್ನು ಸೇರುವನು. ಪ್ರತಿಮಾಸದ ಎರಡು ಪಕ್ಷದ ಅಷ್ಟಮಿ ಮತ್ತು ಚತುರ್ದಶೀ ತಿಥಿಗಳಲ್ಲಿ ತಪ್ಪದೆ ನಕ್ತವ್ರತಗಳನ್ನು ಆಚರಿಸುವವರು ಈ ಲೋಕದಲ್ಲಿ ಸರ್ವಸೌಖ್ಯವನ್ನೂ ಪಡೆದು, ಪರಲೋಕದ ಸುಖವನ್ನೆಲ್ಲಾ ಅನುಭವಿಸಿ, ಕೊನೆಗೆ ಶಿವಸಾರೂಪ್ಯವನ್ನು ಪಡೆದು ಶಿವಗಣಪರಿವೃತನಾಗಿ ಕೈಲಾಸದಲ್ಲಿ ವಾಸಮಾಡುವನು. ॥೧೧-೧೨-೧೩॥

ಯಾವನು ಸ್ವಶಕ್ತಿಯಿಂದ ಒಂದು ವರ್ಷಪೂರ್ತಿ ಪರ್ವದಿನಗಳಲ್ಲಿ ಉಪವಾಸದಿಂದಿದ್ದು ರಾತ್ರಿಯೂ ಸಹ ಭೋಜನಮಾಡದೆ ಶಿವಾರಾಧನೆ ನಡೆಸಿ, ವರ್ಷಾಂತ್ಯ

ಬ್ರಹ್ಮಚಾರೀ ಜಿತಕ್ರೋಧೋ ಭಸ್ಮರುದ್ರಾಕ್ಷಭೂಷಣಃ ।
ಶಿವಲಿಂಗಾರ್ಚನರತೋ ವಿರಕ್ತೋ ವಿಷಯೇಷು ಚ ॥೧೫॥

ಸಂವತ್ಸರಾಂತೇ ವಿಪ್ರೇಂದ್ರಾನ್ ಶಿವಭಕ್ತಾನ್ ಸದಕ್ಷಿಣಂ ।
ಭೋಜಯಿತ್ವಾ ತತೋ ಬ್ರೂಯಾತ್ಪ್ರೀಯತಾಮಿತಿ ವೈ ಶಿವಃ ॥೧೬॥

ಭೋಜಯೇದ್ಯದಿ ವಿದ್ವಾಂಸಂ ಕಪಾಲವ್ರತಧಾರಿಣಂ ।
ಭಸ್ಮಾಭ್ಯಕ್ತಂ ಶುಚಿಂ ಶಾಂತಮುಮಾಕಾಂತರತಂ ದ್ವಿಜಂ ॥೧೭॥

ಭೋಜಿತಾಸ್ತೇನ ದೇವೇಶ ಬ್ರಹ್ಮವಿಷ್ಣುಮಹೇಶ್ವರಾಃ ।
ಕಪಾಲಪೂರ್ಣಮಶನಂ ಭೈಕ್ಷ್ಯಂ ಯೋ ಯಸ್ಯ ಗೃಹ್ಣತೇ ॥೧೮॥

ಕುಲಂ ತಸ್ಯೋದ್ಧರತ್ಯೇವ ದಶಪೂರ್ವಾನ್ ದಶಾಪರಾನ್ ।
ಪಾದ್ಯಾರ್ಘ್ಯಾಚಮನೀಯಾನಿ ಗಂಧಪುಷ್ಪೈಃ ಪ್ರಪೂಜಯೇತ್ ॥೧೯॥

ಪರ್ವಸ್ವಪಿ ವಿಶೇಷೇಣ ಭೋಜಯೇಚ್ಛಿವಯೋಗಿನಂ ।
ಶಿವವ್ರತೇಷು ಸರ್ವೇಷು ನಕ್ತಭೋಜನಮುತ್ತಮಂ ॥೨೦॥

ದಲ್ಲಿ ಶಿವಧರ್ಮನಿಷ್ಠರಾದವರನ್ನು ಭೋಜನಾದಿಗಳಿಂದ ತೃಪ್ತಿಪಡಿಸಿ ಶಿವಪ್ರೀತಿಯಾಗಲೆಂದು ಹೇಳಿ ನೈವೇದ್ಯವನ್ನು ಭಕ್ಷಿಸಿ ತೃಪ್ತನಾಗುವನೋ, ಅಂತಹವನೂ ಸಹ ಶಿವಸಾರೂಪ್ಯವನ್ನು ಪಡೆದು ಶಿವಲೋಕದಲ್ಲಿ ನೆಲಸುವನು. ||೧೪-೧೫-೧೬||

ಕಪಾಲವ್ರತಧಾರಿಯಾಗಿ, ಭಸ್ಮಭೂಷಿತನೂ, ಶುಚೀಭೂತನೂ, ಸದಾ ಪರಶಿವಾರಾಧನಸಕ್ತನೂ, ಆದ ಬ್ರಾಹ್ಮಣನೊಬ್ಬನಿಗೆ ಶಿವವ್ರತದಿನದಲ್ಲಿ ತೃಪ್ತಿಕರವಾದ ಭೋಜನವನ್ನು ನಡೆಸಿದ್ದೇ ಆದರೆ, ಬ್ರಹ್ಮ, ವಿಷ್ಣು, ಮಹೇಶ್ವರರನ್ನು ತೃಪ್ತಿಪಡಿಸಿದಂತೆಯೇ ಆಗುವುದು. ಕಾಪಾಲವ್ರತಧಾರಿಗೆ ಅವನ ಕಪಾಲದ ಪೂರ್ತಿ ಭಿಕ್ಷಾನ್ನವನ್ನು ಕೊಟ್ಟು ಸಂತೋಷಗೊಳಿಸಿ, ಅವನನ್ನು ಪಾದ್ಯ, ಅರ್ಘ್ಯ, ಆಚಮನ ಮುಂತಾದುವುಗಳಿಂದಲೂ, ಗಂಧಪುಷ್ಪಾದಿಗಳಿಂದಲೂ ಸತ್ಕಾರಮಾಡಿದರೆ, ಸತ್ಕರಿಸಿದವನ ಹಿಂದಿನ ಮತ್ತು ಮುಂದಿನ ಹತ್ತು ವಂಶದವರು ಸ್ವರ್ಗಸುಖವನ್ನು ಅನುಭವಿಸುವರು. ||೧೭-೧೮-೧೯||

ಪರ್ವತಿಥಿಗಳಲ್ಲಿ ಶಿವಾರಾಧನೆಮಾಡುವಂತೆ ನಕ್ತಭೋಜನವೂ ಶ್ರೇಷ್ಠವೆನಿಸಿದೆ. ಉಪವಾಸಮಾಡುವುದಕ್ಕಿಂತ ಭಿಕ್ಷಾವೃತ್ತಿಯಿಂದ, ಆದರಲ್ಲಿಯೂ ಯಾಚನೆ

ಉಪವಾಸಾತ್ಪರಂ ಭೈಕ್ಷ್ಯಂ ಭೈಕ್ಷಾತ್ಪರಮಯಾಚಿತಂ ।
ಪೂಜಿತಸ್ಸಶಿವಃ ಸಾಕ್ಷಾದ್ಯತ್ರ ಶೈವಂ ಪ್ರಪೂಜಯೇತ್ ॥೨೦॥

ಅಯಾಚಿತಾತ್ಪರಂ ನಕ್ತಂ ತಸ್ಮಾನ್ನಕ್ತೇನ ವರ್ತಯೇತ್ ।
ಅಮಾಸೋಮಾನ್ವಿತಾ ಯಾ ಸಾ ತಸ್ಯಾಂ ನಕ್ತಂ ಸಮಾಚರೇತ್॥೨೧॥

ಮುಹೂರ್ತೋನಂ ದಿನಂ ನಕ್ತಂ ನ ನಕ್ತಂ ನಿಶಿಭೋಜನಂ ।
ದೇವೈಸ್ತು ಭುಕ್ತಂ ಪೂರ್ವಾಹ್ಣೇ ಮಧ್ಯಾಹ್ನೇ ಋಷಿಭಿಸ್ತಥಾ ॥೨೩॥

ಅಪರಾಹ್ನೇ ತು ಪಿತೃಭಿಃ ಸಂಧ್ಯಾಯಾಂ ಗುಹ್ಯಕಾದಿಭಿಃ ।
ಸರ್ವಾಂ ವೇಲಾಮತಿಕ್ರಮ್ಯ ನಕ್ತಭೋಜನಮಾಚರೇತ್ ॥೨೪॥

ಶಿವಕ್ಷೇತ್ರೇಷು ಸರ್ವೇಷು ವರ್ಷಂ ನಕ್ತಾಶನೋ ಭವೇತ್ ।
ಅವಿಮುಕ್ತೇ ವಿಶೇಷೇಣ ಯಾವಜ್ಜೀವಂ ಪ್ರತಿಜ್ಞಯಾ ॥೨೫॥

ಮಾಡದ ಭಿಕ್ಷೆಯಿಂದ ಭೋಜನಮಾಡುವುದು ಶ್ರೇಷ್ಠವೆನಿಸುವುದು. ಇವೆಲ್ಲಕ್ಕಿಂತಲೂ ರಾತ್ರಿ ಯಾಚನೆ ಮಾಡದೆ ಸ್ವಾರ್ಜಿತದಿಂದ ಊಟಮಾಡುವುದು ಶಿವವ್ರತಗಳಲ್ಲಿ ಅತಿ ಮುಖ್ಯವೆನಿಸುವುದು. ಪರ್ವತಿಥಿಗಳಲ್ಲಿ ಶಿವಯೋಗಿಯನ್ನು ಭೋಜನಾದಿಗಳಿಂದ ತೃಪ್ತಿಪಡಿಸುವುದು ಶ್ರೇಯಸ್ಕರ. ಅದರಲ್ಲಿಯೂ ನಕ್ತಭೋಜನದಿಂದ ಶೈವನನ್ನು ಸಂತೋಷಗೊಳಿಸಬೇಕು. ಅಮಾವಾಸ್ಯಾತಿಥಿಯು ಸೋಮವಾರದಿಂದ ಕೂಡಿದ ದಿನದಲ್ಲಿ ನಕ್ತವ್ರತವನ್ನು ತಪ್ಪದೆ ಆಚರಿಸಬೇಕು. ॥೨೦-೨೧-೨೨॥

ಹಗಲಿನಲ್ಲಿ ಸಾಯಂಸಂಧ್ಯಾಕಾಲಾನಂತರ ಕೊನೆಯ ಮುಹೂರ್ತಕಾಲಕ್ಕೆ ನಕ್ತಕಾಲವೆಂದು ಹೆಸರು. ಅರ್ಧರಾತ್ರಿಯಲ್ಲಿ ಊಟಮಾಡುವುದು ನಕ್ತಭೋಜನವೆನಿಸಲಾರದು. ಏಕೆಂದರೆ, ಪೂರ್ವಾಹ್ಣಕಾಲವು ದೇವತೆಗಳಿಗೂ, ಮಧ್ಯಾಹ್ನಕಾಲವು ಋಷಿಗಳಿಗೂ, ಅಪರಾಹ್ಣವು ಪಿತೃಗಳಿಗೂ, ಸಂಧ್ಯಾಕಾಲವು ಗುಹ್ಯಕರೇ ಮೊದಲಾದ ದೇವಯೋನಿಗಳಿಗೂ, ಪ್ರಶಸ್ತವಾದ ಕಾಲವೆನಿಸಿದೆ. ಇವನ್ನು ಬಿಟ್ಟ ಮುಂದಿನ ಕಾಲವೇ ನಕ್ತಕಾಲವೆಂದು ಭಾವಿಸಬೇಕು. ಆಗ ಮಾಡುವ ಭೋಜನಕ್ಕೆ ನಕ್ತಭೋಜನವೆಂದು ಹೆಸರು. ಶಿವಕ್ಷೇತ್ರಗಳಲ್ಲಿ ಅದರಲ್ಲಿಯೂ ವಿಶೇಷವಾಗಿ ಕಾಶೀಕ್ಷೇತ್ರದಲ್ಲಿ ಒಂದು ವರ್ಷಪರ್ಯಂತ ನಕ್ತಭೋಜನದಿಂದ ಶಿವಾರಾಧನೆ ಮಾಡುವುದು ಬಹುಶ್ರೇಷ್ಠವಾದುದು. ॥೨೩-೨೪-೨೫॥

ಭಸ್ಮೋದ್ಧೂಲಿತಸರ್ವಾಂಗೋ ಭವೇನ್ನಕ್ತಾಶನೀ ಸದಾ ।
ಹವಿಷ್ಯಭೋಜನಂ ಸ್ನಾನಂ ಸತ್ಯಮಾಹಾರಲಾಘವಂ ॥೨೬॥

ಶಿವಾಗ್ನಿಕಾರ್ಯಂ ಲಿಂಗಾರ್ಚಾಂ ನಕ್ತಭೋಜೀ ಸಮಾಚರೇತ್ ।
ಕೃಷ್ಣಾಷ್ಟಮ್ಯಾಂ ಚತುರ್ದಶ್ಯಾಂ ಸೋಮವಾರೇ ಪ್ರದೋಷಕೇ॥೨೭॥

ಸರ್ವಮಾಸೇಷು ಸರ್ವತ್ರ ವಿಧಿರ್ನಕ್ತಾಶನಸ್ಯ ಹಿ ।
ತತ್ರಾಪಿ ಚ ಶಿವಕ್ಷೇತ್ರೇ ಅವಿಮುಕ್ತೇ ಚ ನೈತ್ಯಕಃ ॥೨೮॥

ಜಾಬಾಲೋಕ್ತೇ ವಿಧಿಸ್ಸಾಕ್ಷಾನ್ನಕ್ತಾಶೀ ಮುಕ್ತಿಮಾಪ್ನುಯಾತ್ ।
ಭಸ್ಮನಿಷ್ಠೋ ಲಿಂಗರತೋ ಯಾಂ ಗತಿಂ ಲಭತೇ ಮುನೇ ॥೨೯॥

ನ ತಾಂ ಗತಿಮವಾಪ್ನೋತಿ ವೇದವೇದಾಂತವೇದ್ಯಪಿ ।
ಮಾರ್ಗಶೀರ್ಷೇ ಶುಭೇ ಮಾಸಿ ಶಂಕರಂ ತು ಸಮರ್ಚಯೇತ್॥೩೦॥

ಪೀತ್ವಾ ತು ಭಕ್ತ್ಯಾ ಗೋಮೂತ್ರಂ ಅನಾಹಾರೋ ನಿಶಿಸ್ವಪೇತ್ ।
ಅತಿರಾತ್ರಸ್ಯ ಯಜ್ಞಸ್ಯ ಫಲಮಷ್ಟಗುಣಂ ಲಭೇತ್ ॥೩೧॥

ಶಿವಕ್ಷೇತ್ರಗಳಲ್ಲಿ ಭಸ್ಮಲಿಪ್ತಗಾತ್ರನಾಗಿ ನಕ್ತಾಶನದಲ್ಲಿ ಹವಿಸ್ಸ (ಹುಗ್ಗಿ) ನ್ನೇ ಭಕ್ಷಿಸುತ್ತಾ, ಅಲ್ಪಾಹಾರ, ಸತ್ಯಮಾರ್ಗ, ನದೀಸ್ನಾನ, ಶಿವಾಗ್ನಿಕಾರ್ಯ, ಶಿವಲಿಂಗಾರ್ಚನೆ ಇವುಗಳನ್ನು ನಡೆಸುವವನು ಮಹಾತ್ಮನೇ ಸರಿ. ಕೃಷ್ಣಾಷ್ಟಮಿ, ಕೃಷ್ಣ ಚತುರ್ದಶೀ, ಸೋಮಪ್ರದೋಷ ಈ ದಿನಗಳಲ್ಲಿ ಪ್ರತಿತಿಂಗಳಲ್ಲಿಯೂ ನಕ್ತವ್ರತದಿಂದ, ಶಿವಕ್ಷೇತ್ರಗಳಲ್ಲಿ ಅಥವಾ ಕಾಶಿಯಲ್ಲಿ ಶಿವಾರ್ಚನೆಮಾಡುವವನು ನಿಶ್ಚಯವಾಗಿ ಮುಕ್ತನಾಗುವನು. ||೨೬-೨೭-೨೮||

ಈ ರೀತಿ ನಕ್ತವ್ರತಾಚರಣೆಯಿಂದ ಮುಕ್ತಿಯನ್ನು ಪಡೆಯುವನೆಂದು ಜಾಬಾಲಮಹರ್ಷಿಯೇ ಹೇಳಿರುವನು. ಭಸ್ಮಧಾರಿಯಾಗಿ ಶಿವಲಿಂಗ ಪೂಜೆಮಾಡಿದವನಿಗೆ ದೊರಕುವ ಸದ್ಗತಿಯು ವೇದವೇದಾಂತಗಳನ್ನು ಅರಿತಿರುವ ವಿಪ್ರರಿಗೂ ಲಭಿಸಲಾರದು. ಮಾರ್ಗಶೀರ್ಷಮಾಸದಲ್ಲಿ ವಿಶೇಷವಾಗಿ ಶಂಕರನನ್ನು ಆರಾಧಿಸಬೇಕು. ಮತ್ತು ಆ ತಿಂಗಳಲ್ಲಿ ಹಗಲೆಲ್ಲಾ ಶಿವಾರ್ಚನೆಮಾಡಿ ರಾತ್ರಿ ಗೋಮೂತ್ರವನ್ನು ಮಾತ್ರ ಕುಡಿದು, ನಿರಾಹಾರನಾಗಿ ಮಲಗಿ ನಿದ್ರಿಸಿದವನಿಗೆ ಅತಿರಾತ್ರಯಾಗಾಚರಣೆಯ ಎಂಟರಷ್ಟು ಸುಕೃತವು ಲಭಿಸುವುದು. ||೨೯-೩೦-೩೧||

ಏವಂ ಪುಷ್ಯೇಽಪಿ ಸಂಪೂಜ್ಯ ಪುಷ್ಪೈಶ್ಶಂಭುಂ ನಿಶಿ ದ್ವಿಜ ।
ಕೃಷ್ಣಾಷ್ಟಮ್ಯಾಂ ಘೃತಂ ಪ್ರಾಶ್ಯ ವಾಜಪೇಯಾಷ್ಟಕಂ ಲಭೇತ್ ॥೩೨॥

ಮಾಘಮಾಸೇ ತು ಸಂಪ್ರಾಪ್ತೇ ಕೃಷ್ಣಾಷ್ಟಮ್ಯಾಂ ಪ್ರಪೂಜಯೇತ್ ।
ಯವಾಂಶ್ಚ ಸಂಚಿತಾನ್ ಪ್ರಾಶ್ಯ ಸೋಽಶ್ವಮೇಧಫಲಂ ಲಭೇತ್ ॥೩೩॥

ಕಾಲಾಷ್ಟಮ್ಯಾಂ ತಥಾ ಕಾಶ್ಯಾಂ ಭೈರವಂ ಪೂಜಯೇನ್ನರಃ ।
ವಿಶ್ವೇಶ್ವರಾರ್ಚನರತೋ ಬಿಲ್ವಪತ್ರೈಶ್ಚ ಕೋಮಲೈಃ ॥೩೪॥

ಹವಿರ್ನಿವೇದ್ಯ ಸಾಪೂಪಂ ಮಾಷಾಪೂಪಾಂಶ್ಚ ಸತ್ತಮ ।
ಶತಾಷ್ಟೋತ್ತರಸಂಖ್ಯಾಭಿರ್ಭೈರವಂ ಚಾಪಿ ಪೂಜಯೇತ್ ॥೩೫॥

ಗಂಧಪುಷ್ಪೈರ್ಧೂಪದೀಪೈಃ ಕಾಶ್ಯಾಂ ನಿರ್ವಿಘ್ನಕಾರಿಣಂ ।
ಪ್ರತಿಮಾಸಂ ಕೃಷ್ಣಪಕ್ಷೇ ಶಿವರಾತ್ರಿಂ ಚ ಸತ್ತಮ ॥೩೬॥

ಪೂಜಯೇದವಿಮುಕ್ತೇಶಮನ್ಯಕ್ಷೇತ್ರೇಽಪಿ ವಾ ಶಿವಂ ।
ಮಾಘ್ಯಾಂ ಕೃಷ್ಣಚತುರ್ದಶ್ಯಾಂ ಪೂಜಯೇದಿಂದುಶೇಖರಂ ॥೩೭॥

ಹೀಗೆಯೇ ಪುಷ್ಯಮಾಸದಲ್ಲಿಯೂ ನಾನಾಜಾತಿಯ ಹೂವುಗಳಿಂದ ಶಂಕರನನ್ನು ಪೂಜಿಸಿ, ಕೃಷ್ಣಾಷ್ಟಮಿಯಲ್ಲಿ ಕೇವಲ ಘೃತಪ್ರಾಶನದಿಂದ ಶಿವಾರ್ಚನೆಯನ್ನು ನಡೆಸಿದರೆ, ಎಂಟು ವಾಜಪೇಯಯಾಗಗಳನ್ನು ನಡೆಸಿದಷ್ಟು ಸುಕೃತವು ಲಭಿಸುವುದು. ಹಾಗೆಯೇ ಮಾಘಮಾಸದಲ್ಲಿಯೂ ಶಿವಾರಾಧನೆ ನಡೆಸಿ ಕೃಷ್ಣಾಷ್ಟಮಿಯ ದಿನ ಯವಧಾನ್ಯದ (ಅಕ್ಕಿ) ಗಂಜಿಯಿಂದ ಕಾಲಕಳೆದರೆ ಅಶ್ವಮೇಧಯಾಗದ ಫಲವು ಸಿಗುವುದು. ॥೩೨-೩೩॥

ಅದೇ ಮಾಸದ ಕೃಷ್ಣಾಷ್ಟಮಿಯ ದಿನ ಕಾಶೀ ವಿಶ್ವೇಶ್ವರನನ್ನೂ ಕಾಲಭೈರವನನ್ನೂ ಕೋಮಲವಾದ ಬಿಲ್ವಪತ್ರೆಗಳಿಂದಲೂ, ಹುಗ್ಗಿ, ಒಬ್ಬಟ್ಟು ನೂರೆಂಟು ಉದ್ದಿನ ಒಡೆ, ಇವುಗಳ ನೈವೇದ್ಯದಿಂದಲೂ ಆರಾಧಿಸಿದವರಿಗೆ ವಿಶೇಷವಾದ ಸುಕೃತವು ಲಭಿಸುವುದು. ॥೩೪-೩೫॥

ಹಾಗೆಯೇ ಕಾಶಿಯಲ್ಲಿರುವ ವಿಘ್ನರಾಜನೆನಿಸಿದ ಗಣಪತಿಯನ್ನೂ, ವಿಶ್ವೇಶ್ವರಲಿಂಗವನ್ನೂ ಪ್ರತಿಮಾಸದ ಕೃಷ್ಣಪಕ್ಷದ ಅಷ್ಟಮೀ ಚತುರ್ದಶಿಗಳಲ್ಲಿ ಭಕ್ತಿಯಿಂದ ರ್ಚಿಸಬೇಕು. ಕಾಶಿಯಾಗಲಿ, ಇತರ ಶಿವಕ್ಷೇತ್ರವಾಗಲಿ ಮಾಘ ಕೃಷ್ಣ ಚತುರ್ದಶೀ

ಚೈತ್ರೇ ತ್ರಿನೇತ್ರನಾಮಾನಂ ಪೂಜಯೇತ್ಪರಮೇಶ್ವರಂ ।
ದ್ವಾದಶಾಹಕ್ರತುಫಲಂ ಲಭತೇ ಸೋಽಚಿರಾನ್ಮನೇ ॥೩೮॥

ವೈಶಾಖೇ ಶಿವನಾಮಾನಂ ಪೂಜ್ಯ ರಾತ್ರೌ ಕುಶೋದಕಂ ।
ಪೀತ್ವಾ ಪುರುಷಮೇಧಸ್ಯ ಫಲಮಷ್ಟಗುಣಂ ಲಭೇತ್ ॥೩೯॥

ಜ್ಯೇಷ್ಠೇ ಪಶುಪತಿಂ ಪೂಜ್ಯ ಗವಾಂ ಶೃಂಗೋದಕಂ ಪಿಬೇತ್ ।
ಗವಾಂ ಕೋಟಿಪ್ರದಾನಸ್ಯ ಯತ್ಫಲಂ ತದವಾಪ್ನುಯಾತ್ ॥೪೦॥

ಆಷಾಢೇ ಚೋಗ್ರನಾಮಾನಂ ದೃಷ್ಟ್ವಾ ಪ್ರಾಶ್ಯ ಚ ಗೋಮಯಂ ।
ಸೌತ್ರಾಮಣ್ಯಯುತಸ್ಯೈವ ಸಫಲಂ ಪ್ರಾಪ್ನುಯಾನ್ನರಃ ॥೪೧॥

ಶ್ರಾವಣೇ ಶರ್ವನಾಮಾನಂ ಪೂಜ್ಯ ಪರ್ಣಾನಿ ಭಕ್ಷಯೇತ್ ।
ವರ್ಷಕೋಟಿಶತಂ ಸಾಗ್ರಂ ಸೂರ್ಯಲೋಕೇ ಮಹೀಯತೇ ॥೪೨॥

ಮಾಸಿ ಭಾದ್ರಪದೇಽಷ್ಟಮ್ಯಾಂ ತ್ರ್ಯಂಬಕಂ ನಾಮ ಪೂಜಯೇತ್ ।
ಪ್ರಾಶ್ಯ ಬಿಲ್ವಫಲಂ ಪಕ್ವಂ ಸತ್ರಯಾಗಫಲಂ ಲಭೇತ್ ॥೪೩॥

---

ತಿಥಿಯ ದಿನದ ಶಿವಾರ್ಚನೆಯಿಂದ ಪೂಜಕನು ವಿಶೇಷವಾದ ಸುಕೃತವನ್ನು ಸಂಪಾದಿಸುವನು. ಚೈತ್ರಮಾಸದಲ್ಲಿಯೂ ತ್ರಿನೇತ್ರನಾಮಕನಾದ ಪರಶಿವನನ್ನು ತಪ್ಪದೆ ಆರಾಧಿಸುವವನು ಹನ್ನೆರಡು ವರ್ಷಕಾಲ ನಡೆಸಿದ ಯಾಗದ ಫಲವನ್ನು ಪಡೆಯುವನು. ||೩೬-೩೭-೩೮||

ವೈಶಾಖಮಾಸದಲ್ಲಿ ಶಿವನಾಮಕನಾದ ಶಂಕರನನ್ನು ಪೂಜಿಸಿ, ಕುಶೋದಕ ಪಾನದಿಂದ ರಾತ್ರಿಯನ್ನು ಕಳೆಯುವವನು ಪುರುಷಮೇಧದ ಸುಕೃತದ ಎಂಟರಷ್ಟು ವಿಶೇಷಫಲವನ್ನು ಪಡೆಯುವನು. ಹಾಗೆಯೇ ಜ್ಯೇಷ್ಠಮಾಸದಲ್ಲಿ ಪಶುಪತಿನಾಮಕನಾದ ಶಂಕರನನ್ನು ಪೂಜಿಸಿ, ಹಸುವಿನಕೊಂಬಿನ ತೀರ್ಥಜಲವನ್ನು ಕುಡಿದವನು ಕೋಟಿ ಗೋದಾನಗಳ ಫಲವನ್ನು ಹೊಂದುವನು. ||೩೯-೪೦||

ಆಷಾಢಮಾಸದಲ್ಲಿ ಉಗ್ರನಾಮದಿಂದ ಶಿವನನ್ನು ಅರ್ಚಿಸಿ, ಗೋಮಯ ಭಕ್ಷಣದಿಂದ ಕಾಲಕಳೆಯುವವನು ಸೌತ್ರಾಮಣೀನಾಮಕವಾದ ಹತ್ತುಸಾವಿರ ಯಾಗಾಚರಣೆಯ ಫಲವನ್ನು ಪಡೆಯುವನು. ಹಾಗೆಯೇ ಶ್ರಾವಣಮಾಸದಲ್ಲಿ ಶರ್ವನಾಮದಿಂದಲೂ, ಭಾದ್ರಪದಮಾಸದಲ್ಲಿ ತ್ರ್ಯಂಬಕನಾಮದಿಂದಲೂ, ಶಂಕರ

ಮಾಸೇ ಚಾಶ್ವಯುಜೇಷ್ಟಮ್ಯಾಮೀಶ್ವರಂ ನಾಮ ಪೂಜಯೇತ್ ।
ಪೌರ್ಣಮ್ಯಾಮಾಶ್ವಯುಜ್ಯಾಂ ಚ ಅಶ್ವಿನ್ಯರ್ಕ್ಷೇ ಪ್ರದೋಷಕೇ ॥೪೪॥

ಅಂಧಸಾಂ ರಾಶಿಭಿರ್ಲಿಂಗಂ ಛಾದಯೇದ್ಯಾಮಮಾತ್ರಕಂ ।
ಸಿಕ್ಥೇ ಸಿಕ್ಥೇಶ್ವಮೇಧಸ್ಯ ಫಲಮಾಪ್ನೋತಿ ಮಾನವಃ ॥೪೫॥

ತಂಡುಲೋದಕಮಾಪೀಯ ತಸ್ಮಿನ್ ಮಾಸಿ ಶಿವಾರ್ಚಕಃ ।
ಪೌಂಡರೀಕಾಷ್ಟಕಸ್ಯೈವಂ ಫಲಂ ಚ ಸಕಲಂ ಲಭೇತ್ ॥೪೬॥

ಕಾರ್ತಿಕೇ ರುದ್ರನಾಮಾನಂ ಪೂಜ್ಯ ಪೀತ್ವಾ ಕುಶೋದಕಂ ।
ಅಗ್ನಿಷ್ಟೋಮಾದಿದಶಕಂ ಫಲಂ ಪ್ರಾಪ್ಯ ವಿಮುಚ್ಯತೇ ॥೪೭॥

ಮಾರ್ಗಶೀರ್ಷೇ ಮಹಾದೇವಮುಗ್ರನಾಮ್ನಾ ಪ್ರಪೂಜಯೇತ್ ।
ಸ ಉಕ್ಥ್ಯದಶಕಸ್ಯೈವ ಫಲಂ ಲಭ್ಯೇತ ಚಾಂಬುಪಃ ॥೪೮॥

ಪುಷ್ಯಮಾಸೇ ತು ಸಂಪ್ರಾಪ್ತೇ ಯಃ ಕುರ್ಯಾನ್ನಕ್ತಭೋಜನಂ ।
ಶಿವಾರ್ಚನರತೋ ಧೀಮಾನ್ ಫಲಮೂಲೇನ ವರ್ತಯೇತ್ ॥೪೯॥

---

ನನ್ನು ಪರ್ವತಿಥಿಗಳಲ್ಲಿ ಅರ್ಚಿಸಿ ಕ್ರಮವಾಗಿ ಪರ್ಣಭಕ್ಷಣ, ಬಿಲ್ವಫಲಭಕ್ಷಣ ಇವುಗಳಿಂದ ಜೀವನವನ್ನು ನಡೆಸಿದವರು ನೂರಾರು ಮಹಾಯಾಗಗಳ ಫಲವನ್ನು ಪಡೆದು ಸೂರ್ಯಲೋಕದಲ್ಲಿ ಸ್ಥಿರವಾಗಿ ನೆಲಸುವರು. ॥೪೧-೪೨-೪೩॥

ಆಶ್ವಯುಜಮಾಸದ ಅಷ್ಟಮಿಯಲ್ಲಿಯೂ, ಪೂರ್ಣಿಮಾ ತಿಥಿಯಲ್ಲಿಯೂ, ಅಶ್ವಿನೀನಕ್ಷತ್ರಯುಕ್ತವಾದ ಪ್ರದೋಷಕಾಲದಲ್ಲಿಯೂ, ಈಶ್ವರನಾಮಕನಾದ ಶಂಕರ ನನ್ನು ಅನ್ನರಾಶಿ (ಶಾಲ್ಯನ್ನ)ಯ ಅಭಿಷೇಕದಿಂದ ರಾತ್ರಿ ಒಂದು ಯಾಮ ಅರ್ಚನೆ ಮಾಡಿದರೆ ಅಶ್ವಮೇಧಯಾಗದ ಫಲವು ಬರುವುದೆಂದು ತಿಳಿಯಬೇಕು. ಆ ದಿನ ಗಳಲ್ಲಿ ಅಕ್ಕಿತೊಳೆದ ನೀರನ್ನು ಕುಡಿದು ಉಪವಾಸಮಾಡುವವರಿಗೆ ಎಂಟು ಪೌಂಡರೀಕಯಾಗಾಚರಣೆಯ ಫಲವು ಬರುವುದು. ॥೪೪-೪೫-೪೬॥

ಕಾರ್ತಿಕಮಾಸದಲ್ಲಿ ಕುಶೋದಕ ಪಾನದಿಂದ ರುದ್ರನಾಮಕನಾದ ಈಶ್ವರ ನನ್ನು ಪೂಜಿಸಿದವರಿಗೆ ಹತ್ತು ಅಗ್ನಿಷ್ಟೋಮಯಾಗಗಳ ಸುಕೃತವು ಬರುವುದು. ಮಾರ್ಗಶೀರ್ಷಮಾಸದಲ್ಲಿ ಕೇವಲ ಜಲಪಾನದಿಂದ ಉಗ್ರನಾಮಕನಾದ ಶಂಕರನನ್ನು ಪೂಜಿಸುವುದರಿಂದ ಹತ್ತು ಉಕ್ಥ್ಯಯಾಗಾಚರಣೆಯ ಪುಣ್ಯವನ್ನು ಸಂಪಾದಿಸುವನು.

ಅಪ್ತೋರ್ಯಾಮಾಯುತಫಲಂ ಪ್ರಾಪ್ನೋತ್ಯೇವ ವಿಶೇಷತಃ ।
ಮಾಘಮಾಸೇ ತು ಸಂಪ್ರಾಪ್ತೇ ಯಃ ಕುರ್ಯಾನ್ನಕ್ತಭೋಜನಂ ॥೫೦॥

ಕೃಸರಂ ಮಧುಸಂಯುಕ್ತಂ ಭುಕ್ತ್ವಾ ಸಂಪೂಜ್ಯ ಶಂಕರಂ ।
ಸ ಷೋಡಶೀಶತಫಲಂ ಪ್ರಾಪ್ನೋತ್ಯಮರಪೂಜಿತಃ ॥೫೧॥

ಸಂಪ್ರಾಪ್ತೇ ಫಾಲ್ಗುನೇ ಮಾಸಿ ನಕ್ತಾಶೀ ಶಿವಪೂಜಕಃ ।
ಶಾಮ್ಯಾಕಕ್ಷೀರನೀವಾರೈರ್ಜಿತಕ್ರೋಧೋ ಜಿತೇಂದ್ರಿಯಃ ॥೫೨॥

ಅತ್ಯಗ್ನಿಷ್ಟೋಮದಶಕಂ ಫಲಂ ಲಭ್ಯೇಚ್ಛಿವಪ್ರಿಯಃ ।
ಸೋಪವಾಸಂ ಚತುರ್ದಶ್ಯಾಂ ಭವೇದುಭಯಪಕ್ಷಯೋಃ ॥೫೩॥

ಶಿವಾಯ ಪೌರ್ಣಮಾಸ್ಯಾಂ ತು ಯೋ ದದ್ಯಾದ್ಘೃತಕಂಬಲಂ ।
ಮಾಘ್ಯಾಂ ಮಘಾಯುತ್ಯೈರ್ಯುಕ್ತೋ ಭವೇದೇವ ಮಹಾಮುನೇ ॥೫೪॥

ಮಾಸಾ ದ್ವಾದಶ ಏವಂ ಸ್ಯಾತ್ಪೂಜಯೇಚ್ಛಶಿಶೇಖರಂ ।
ವರ್ಷಾಂತೇ ಭೋಜಯೇದ್ವಿಪ್ರಾಂಛಿವಭಕ್ತಾನ್ ಜಿತೇಂದ್ರಿಯಃ ॥೫೫॥

---

ಪುಷ್ಯಮಾಸದಲ್ಲಿ ಹಗಲುಹೊತ್ತು ಹಣ್ಣು, ಗೆಡ್ಡೆಗಳನ್ನು ತಿನ್ನುತ್ತಾ ನಕ್ತಭೋಜನದಿಂದ ಶಿವಾರ್ಚನೆ ನಡೆಸಿದವನಿಗೆ ಹತ್ತು ಅಪ್ತೋರ್ಯಾಮಯಾಗದ ಸುಕೃತವು ಒದಗುವುದು. ॥೪೭-೪೮-೪೯॥

ಮಾಘಮಾಸದಲ್ಲಿ ಕೃಸರಾನ್ನಕ್ಕೆ ಜೇನುತುಪ್ಪವನ್ನು ಬೆರಸಿ ಶಂಕರನನ್ನು ಪೂಜಿಸಿದರೆ ಷೋಡಶೀ ಯಾಗದ ಫಲವನ್ನು ಹೊಂದುವರು. ಫಾಲ್ಗುನಮಾಸದ ಪರ್ವದಿನಗಳಲ್ಲಿ ಶಿವಾರ್ಚನೆಮಾಡಿ ನವಣೆಯ ಹಾಲು, ನೀವಾರಧಾನ್ಯ ಇವುಗಳನ್ನು ಭಕ್ಷಿಸಿ ಜಿತೇಂದ್ರಿಯನಾಗಿ ನಡೆದರೆ, ಹತ್ತು ಅಗ್ನಿಷ್ಟೋಮಯಾಗಗಳ ಫಲವನ್ನು ಪಡೆಯಬಹುದು. ॥೫೦-೫೧-೫೧॥

ಮಾಘಮಾಸದ ಎರಡುಪಕ್ಷದ ಚತುರ್ದಶೀ ತಿಥಿಗಳಲ್ಲಿ ಉಪವಾಸಮಾಡಿ, ಪೂರ್ಣಿಮಾ ತಿಥಿಯಲ್ಲಿ ಈಶ್ವರನಿಗೆ ಘೃತವನ್ನೂ, ವಸ್ತ್ರವನ್ನೂ ಅರ್ಪಿಸುವವನಿಗೆ ಶಿವಾನುಗ್ರಹವು ಸುಲಭವಾಗಿ ದೊರೆಯುವುದು. ಮಘಾನಕ್ಷತ್ರಯುಕ್ತವಾದ ಮಾಘಮಾಸದ ಪೂರ್ಣಿಮಾ ದಿನ ಶಿವಾರ್ಚನೆಮಾಡುವುದು ಶ್ರೇಯಸ್ಕರ. ಈರೀತಿ ಹನ್ನೆರಡು ತಿಂಗಳು ಚಂದ್ರಶೇಖರನೆನಿಸಿದ ಮಹಾದೇವನನ್ನು ಪರ್ವದಿನಗಳಲ್ಲಿ

ಪಾಯಸಂ ಮಧುಸಂಯುಕ್ತಂ ಘೃತೇನ ಚ ಪರಿಪ್ಲುತಂ ।
ಭಕ್ತ್ಯಾ ಹಿರಣ್ಯವಾಸಾಂಸಿ ಭಕ್ತೇಭ್ಯೋ ಯೋ ನಿವೇದಯೇತ್ ॥೫೬॥

ವರ್ಷಮೇಕಂ ಚರೇದೇವಂ ನೈರಂತರ್ಯೇಣ ಯೋ ನರಃ ।
ವರ್ಷಯಜ್ಞಫಲಂ ಲಬ್ಧ್ವಾ ಶಿವಕ್ಷೇತ್ರೇ ವಿಮುಚ್ಯತೇ ॥೫೭॥

ಅವಿಮುಕ್ತೇ ತು ನಿಯತಮೇವಂ ಕುರ್ಯಾದ್ವ್ರತಂ ನರಃ ।
ಜಿತೇಂದ್ರಿಯಃ ಸತ್ಯವಾದೀ ವಿತ್ತಶಾಠ್ಯವಿವರ್ಜಿತಃ ॥೫೮॥

ದೇಹಾಂತೇ ಶಿವಸಾರೂಪ್ಯಂ ಲಭೇತ್ಪುಣ್ಯಫಲಂ ಶೃಣು ।
ಸೂರ್ಯಕೋಟಿಪ್ರತೀಕಾಶೈರ್ವಿಮಾನೈಃ ಸಾರ್ವಗಾಮಿಕೈಃ ॥೫೯॥

ರುದ್ರಕನ್ಯಾಸಮಾಕೀರ್ಣೈರ್ಮಹಾವೃಷಭಸಂಯುತೈಃ ।
ಸಂಗೀತನೃತ್ಯವಾದ್ಯಾದ್ಯೈರಪ್ಸರೋಗಣಶೋಭಿತೈಃ ॥೬೦॥

ಚಾಮರೈರ್ಧೂಯಮಾನಸ್ತು ಸ್ತೂಯಮಾನಸ್ಸುರಾಸುರೈಃ ।
ಗತ್ವಾ ಶಿವಪುರಂ ದಿವ್ಯಂ ವಸೇದಾಭೂತಸಂಪ್ಲವಂ ॥೬೧॥

---

ನಿಯಮದಿಂದ ಪೂಜಿಸಿ ವರ್ಷಾಂತ್ಯದಲ್ಲಿ ಜಿತೇಂದ್ರಿಯನಾಗಿ ಈಶ್ವರಾರ್ಚಕರಾದ ಬ್ರಾಹ್ಮಣರನ್ನು ಭೋಜನದಿಂದ ತೃಪ್ತಿಪಡಿಸಬೇಕು. ||೫೩-೫೪-೫೫||

ಹಾಗೆಯೇ, ಪಾಯಸ, ಮಧು, ಘೃತ, ಸುವರ್ಣ, ವಸ್ತ್ರ ಇವುಗಳನ್ನು ಈಶ್ವರ ಭಕ್ತರಿಗೆ ದಾನಮಾಡಬೇಕು. ಈರೀತಿ ಒಂದು ವರ್ಷ ಮಾಡಿದರೆ ಆ ವರ್ಷದಲ್ಲಿ ಪ್ರತಿದಿನವೂ ನಿತ್ಯಯಜ್ಞಮಾಡಿದ ಫಲವು ಲಭಿಸುವುದು. ಆದರಲ್ಲಿಯೂ ಅವಿಮುಕ್ತ ಕ್ಷೇತ್ರವೆನಿಸಿದ ಕಾಶೀನಗರದಲ್ಲಿ ಈರೀತಿ ವ್ರತಾಚರಣೆಮಾಡಿ, ನಿಜವಾಗಿಯೂ ಜಿತೇಂದ್ರಿಯನೂ, ಸತ್ಯವಾದಿಯೂ ಆಗಿದ್ದು, ದುಡ್ಡಿನಲ್ಲಿ ವಿಶೇಷ ಮೋಹವಿಡದೆ ಈಶ್ವರಾನುಗ್ರಹವನ್ನು ಪಡೆದವನು, ದೇಹಾಂತದಲ್ಲಿ ಶಿವಸಾರೂಪ್ಯವನ್ನು ಪಡೆಯು ವನು. ||೫೬-೫೭-೫೮||

ಅಲ್ಲದೆ ಅವನು ಸರ್ವತ್ರ ಸುಲಭವಾಗಿ ಹೋಗುವ ಕೋಟಿ ಸೂರ್ಯರಂತೆ ಪ್ರಕಾಶಿಸುವ ದಿವ್ಯವಿಮಾನಗಳಲ್ಲಿ ರುದ್ರಕನ್ಯೆಯರಿಂದಲೂ, ಮಹಾವೃಷಭಗಳಿಂದಲೂ ಸಂಗೀತ, ನಾಟ್ಯ, ವಾದ್ಯಗಳಿಂದಲೂ ಶೋಭಿಸುತ್ತಿರುವ, ರುದ್ರಾಣಿಯರ ಚಾಮರಗಳ ಮಾರುತವನ್ನು ಸೇವಿಸುತ್ತಾ ಆನಂದದಿಂದ ಕಾಲಕಳೆಯುವನು. ಅದೂ ಅಲ್ಲದೆ

ಜ್ಞಾನಂ ಲಬ್ಧ್ವಾ ಶಿವಮುಖಾತ್ಸ ತತ್ರೈವ ವಿಮುಚ್ಯತೇ ।
ವಸಂತೇ ಕಿಂಶುಕೈಃ ಪೂಜ್ಯ ದಮನೈರ್ಮದನಾರ್ದನಂ ॥೬೨॥

ಗೋಮೇಧಫಲಮಾಪ್ನೋತಿ ಗ್ರೀಷ್ಮೇಪಿ ಚ ಮಹೇಶ್ವರಂ ।
ಮಲ್ಲಿಕಾಭಿಸ್ಸಮಭ್ಯರ್ಚ್ಯ ನರಮೇಧಫಲಂ ಲಭೇತ್ ॥೬೩॥

ವರ್ಷಾಸು ಕುಟಜೈಃ ಪೂಜ್ಯ ಶಿವಂ ಸತ್ರಫಲಂ ಲಭೇತ್ ।
ಶರತ್ಸು ಚ ಮಹಾದೇವಂ ಪಾರಿಜಾತೈಸ್ಸಮರ್ಚಯೇತ್ ॥೬೪॥

ಗವಾಮಯುತಯಜ್ಞಸ್ಯ ಫಲಂ ಲಬ್ಧ್ವಾ ವಿಮುಚ್ಯತೇ ।
ಉಮಾಕಾಂತಂ ಚ ಹೇಮಂತೇ ಮಂದಾರೈಶ್ಚ ಸಮರ್ಚಯೇತ್ ॥೬೫॥

ಕರ್ಣಿಕಾರೈಃ ಸಾಗ್ನಿಚಿತ್ಯಕ್ರತೋಃ ಫಲಮವಾಪ್ನುಯಾತ್ ।
ಶಿಶಿರೇ ಕರವೀರೈಶ್ಚ ಸಿತರಕ್ತೈಸ್ಸಮರ್ಚಯನ್ ॥೬೬॥

ದಶರಾತ್ರಫಲಂ ಲಬ್ಧ್ವಾ ಮೋದತೇ ಶಿವಸನ್ನಿಧೌ
ಕೃಷ್ಣಾಷ್ಟಮ್ಯಾಂ ಸರ್ವಮಾಪಿ ಅವಿಮುಕ್ತೇ ವಿಶೇಷತಃ ।
ಸಂಪೂಜ್ಯ ಸಂಸ್ತುವೀತೈವಂ ಕಾಶ್ಯಾಂ ಶ್ರೀಕಾಲಭೈರವಂ ॥೬೭॥

ಪರಶಿವಾನುಗ್ರಹದಿಂದ ಸುಜ್ಞಾನವನ್ನು ಪಡೆದು ಶಿವಸಾರೂಪ್ಯವನ್ನು ಅನಾಯಾಸವಾಗಿ ಪಡೆಯುವನು. ॥೫೯-೬೦-೬೧॥

ವಸಂತಋತುವಿನಲ್ಲಿ ಮುತ್ತುಗ ಮತ್ತು ದವನಗಳಿಂದ ಮದನಾಂತಕನನ್ನು ಪೂಜಿಸಿದವರಿಗೆ ಗೋಮೇಧಯಾಗದ ಫಲವು ಲಭಿಸುವುದು. ಹಾಗೆಯೇ ಗ್ರೀಷ್ಮಋತುವಿನಲ್ಲಿ ಮಲ್ಲಿಗೆ ಹೂವುಗಳಿಂದ ಶಂಕರಾರ್ಚನೆ ಮಾಡಿದವರಿಗೆ ನರಮೇಧಯಾಗದ ಫಲವು ದೊರೆಯುವುದು. ವರ್ಷಋತುವಿನಲ್ಲಿ ಕುಟಜ (ಕಾಡುಮಲ್ಲಿಗೆ ಹೂವು) ಪುಷ್ಪದಿಂದ ಶಿವಾರ್ಚನೆಮಾಡಿದರೆ ಸತ್ರಯಾಗದ ಫಲವೂ ಶರದೃತುವಿನಲ್ಲಿ ಪಾರಿಜಾತಪುಷ್ಪದಿಂದ ಮಹಾದೇವನನ್ನು ಪೂಜಿಸಿದವರಿಗೆ ಹತ್ತುಸಾವಿರ ಗೋಮೇಧಯಾಗಗಳ ಫಲವೂ ಸಿಕ್ಕುವುದು. ॥೬೨-೬೩-೬೪॥

ಹಿಮಂತಋತುವಿನಲ್ಲಿ ಮಂದಾರಪುಷ್ಪಗಳಿಂದಲೂ ಕರ್ಣಿಕಾರ ಪುಷ್ಪಗಳಿಂದಲೂ ಅರ್ಚಿಸಿದವನು ಅಗ್ನಿಚಿತ್ಯಯಾಗದ ಫಲವನ್ನೂ, ಶಿಶಿರಋತುವಿನಲ್ಲಿ ಬಿಳುಪು ಮತ್ತು ಕೆಂಪು ಕಣಿಗಲು ಹೂವುಗಳಿಂದ ಅರ್ಚಿಸಿದವನು ದಶರಾತ್ರಯಾಗದ ಫಲ

ಭೈರವಂ ಪೂಜಯೇದ್ಭಕ್ತ್ಯಾ ಸ್ರಗ್ಗಂಧಾಭರಣಾರ್ಪಣೈಃ ।
ಹವಿಷಾ ವಾಪಿ ತಾಂಬೂಲೈರ್ಮಾಷಾಪೂಪೈಃ ಸಮರ್ಚಯೇತ್ ॥೧೮॥

ಕಾಶ್ಯಾಂ ನಿರ್ವಿಘ್ನವಾಸಾಯ ಭೌಮಾಷ್ಟಮ್ಯಾಂ ವಿಶೇಷತಃ ।
ಸಂಪೂಜ್ಯ ಸಂಸ್ತುವೀತ್ಯೈವಂ ಕಾಶ್ಯಾಂ ಶ್ರೀಕಾಲಭೈರವಂ ॥೧೯॥

ಪರೇತಭೂತವೇತಾಲ ಕರತಾಲಸಮನ್ವಿತಂ ।
ಪ್ರವೃತ್ತಿತಮಹಾನೃತ್ಯಂ ಕಲಯೇ ಕಾಲಭೈರವಂ ॥೨೦॥

ಕಪಾಲಮಾಲಿಕಾಕಂಠಂ ಜ್ವಲತ್ಪಾವಕಲೋಚನಂ ।
ಕಪಾಲಕರಮತ್ಯುಗ್ರಂ ಕಲಯೇ ಕಾಲಭೈರವಂ ॥೨೧॥

ಮಣಿಪಾದುಕಪಾದಾಬ್ಜಂ ಮಹಾಶೂಲಕರಾಂಬುಜಂ ।
ಕಂಥಾಕಂಚುಕ ಸಂಕ್ರಾಂತಂ ಕಲಯೇ ಕಾಲಭೈರವಂ ॥೨೨॥

ವನ್ನೂ ಪಡೆಯುವನು. ಆದರೆ ಕಾಶೀಕ್ಷೇತ್ರದಲ್ಲಿ ಪ್ರತಿತಿಂಗಳಲ್ಲಿಯೂ ಕೃಷ್ಣಾಷ್ಟಮಿಯ ದಿನ ತಪ್ಪದೆ ಶ್ರೀ ಕಾಲಭೈರವನನ್ನು ಸ್ತುತಿಸಿ ಪೂಜಿಸುತ್ತಿರಬೇಕು. ||೧೫-೧೬-೧೭||

ಆ ದಿನದಲ್ಲಿ ಭೈರವದೇವರಿಗೆ, ಹೂಮಾಲೆ, ಗಂಧ, ಆಭರಣ, ಹವಿರ್ನಿವೇದನ, ತಾಂಬೂಲ, ಉದ್ದಿನ ಒಡೆಗಳು ಇವುಗಳನ್ನು ಅರ್ಪಿಸಿ ಆರಾಧಿಸಬೇಕು. ಕಾಶಿಯಲ್ಲಿರುವ ವಿಘ್ನೇಶ್ವರನನ್ನು ಮಂಗಳವಾರದ ಅಷ್ಟಮಿಯದಿನ ವಿಧಿವತ್ತಾಗಿ ಪೂಜಿಸಿ ಸ್ತುತಿಸಬೇಕು. ಕಾಲಭೈರವನ ಸುತ್ತಲೂ ಭೂತ ಭೇತಾಳಾದಿಗಣಗಳು ಕೈಚಪ್ಪಾಳೆ ತಟ್ಟುತ್ತಾ ನಾಟ್ಯವಾಡುತ್ತಿರುವಂತೆ ಭಾವಿಸಿ ಕಾಲಭೈರವನನ್ನು ಪೂಜಿಸಬೇಕು. ||೧೮-೧೯-೨೦||

ಪೂಜಾನಂತರದಲ್ಲಿ ಕಾಲಭೈರವನನ್ನು ಈರೀತಿ ಸ್ತುತಿಸಬೇಕು. ಕಾಲಭೈರವನು ಕಪಾಲಮಾಲಾಭೂಷಿತನು. ಭೈರವನ ನೇತ್ರವು ಅಗ್ನಿಯಂತೆ ಉರಿಯುತಕ್ಕುದು. ಭೈರವನು ಉಗ್ರವಾದ ಆಕಾರದಿಂದ ಕೈಯ್ಯಲ್ಲಿ ಕಪಾಲವನ್ನು ಹಿಡಿದಿರುವವನು. ಭೈರವನ ಕಾಲಿನಲ್ಲಿ ಮಣಿಮಯವಾದ ಪಾದುಕೆಯಿರುವುದು. ಕೈಗಳಲ್ಲಿ ಬಲಿಷ್ಠವಾದ ತ್ರಿಶೂಲವಿರುವುದು. ಬಲಿಷ್ಠವಾದ ಹೊದಿಕೆಯೂ, ವಜ್ರಕವಚವೂ ದೇಹವನ್ನು ಅಲಂಕರಿಸಿರುವುದು. ಇಂತಹ ಮಹಾದೇವನನ್ನು ನಾನು ಸದಾ ಸ್ತುತಿಸುವೆನು. ||೨೧-೨೨||

ದಿಗಂಬರಂಜಪಾ ವರ್ಣಂ ಜರಾಮರಣವರ್ಜಿತಂ ।
ಚಾರುಚಂದ್ರಜಟಾಜೂಟಂ ಕಲಯೇ ಕಾಲಭೈರವಮ್ ॥೭೩॥

ಬಾಲಭಾನುಪ್ರಭಾಕಾರಂ ನೀಲಕೋಮಲಕುಂತಲಂ ।
ಜ್ವಲದ್ದಂಡಕಪಾಲಾಢ್ಯಂ ಕಲಯೇ ಕಾಲಭೈರವಮ್ ॥೭೪॥

ಸುರಾರಿವನದಾವಾಗ್ನಿಂ ಸುರಕೈರವ ಶೀತಗುಂ ।
ಶಿವಾಜ್ಞಾಕಾರಿಣಂ ಸಾಕ್ಷಾತ್ಕಲಯೇ ಕಾಲಭೈರವಮ್ ॥೭೫॥

ಯಸ್ಯಾಜ್ಞಯಾ ಜಗತ್ಸರ್ವಂ ಸ್ಥಾವರಂ ಜಂಗಮಾತ್ಮಕಂ ।
ವರ್ತತೇ ನಿರ್ಭಯಂ ಕಾಶ್ಯಾಂ ಕಲಯೇ ಕಾಲಭೈರವಮ್ ॥೭೬॥

ಯ ಇದಂ ಕಾಲನಾಥಸ್ಯ ಪಠೇದ್ಭಕ್ತ್ಯಾಷ್ಟಕಂ ನರಃ ।
ಸ ಏವ ಲಭತೇ ಕಾಶೀಂ ನಿರ್ವಿಘ್ನೇನ ಶಿವಾಜ್ಞಯಾ ॥೭೭॥

॥ ಶ್ರೀಸ್ಕಂದ ಉವಾಚ ॥

ತತ್ರೈವ ವಸತೇ ಜಂತುಃ ಪೂಜನಾತ್ ಸ್ತವನೇನ ಚ ।
ಇತ್ಯೇವಂ ತೇ ಸಮಾಖ್ಯಾತೋ ಮಾಸಾರ್ಚನವಿಧಿಕ್ರಮಃ ॥೭೮॥

---

ಕಾಲಭೈರವನು ದಿಗಂಬರನು. ದಾಸವಾಳದ ಹೂವಿನಂತೆ ಕೆಂಪುವರ್ಣವುಳ್ಳವನು. ಆವನಿಗೆ ಮುಪ್ಪುಮರಣಗಳಿಲ್ಲ. ಜಟಾಜೂಟದಲ್ಲಿ ಚಂದ್ರಬಿಂಬವು ಪ್ರಕಾಶಿಸುತ್ತಿರುವುದು. ಬಾಲಸೂರ್ಯನಂತೆ ಹೊಳೆಯುವವನು, ನೀಲವರ್ಣದ ತಲೆಗೂದಲುಳ್ಳವನು. ದಂಡ ಮತ್ತು ಕಪಾಲಗಳಿಂದ ಪ್ರಕಾಶಿಸುವವನು. ರಾಕ್ಷಸರೆಂಬ ಕಾಡಿಗೆ ಕಾಡುಕಿಚ್ಚಿನಂತೆಯೂ, ದೇವತೆಗಳೆಂಬ ನೈದಿಲೆಗಳಿಗೆ ಚಂದ್ರನಂತೆಯೂ ಇರತಕ್ಕವನು ಮತ್ತು ಶಿವಾಜ್ಞೆಯನ್ನು ಪರಿಪಾಲಿಸುವವನು. ॥೭೩-೭೪-೭೫॥

ಕಾಲಭೈರವನ ಅಪ್ಪಣೆಯಿಂದಲೇ ಈ ಸ್ಥಾವರಜಂಗಮಾತ್ಮಕವಾದ ಪ್ರಪಂಚವು ಮುಂದುವರಿಯುತ್ತಿರುವುದು. ನಿರ್ಭಯವಾಗಿ ಕಾಶಿಯಲ್ಲಿ ನೆಲಸಿರುವ ಕಾಲಭೈರವನನ್ನು ನಾನು ಸದಾ ಧ್ಯಾನಮಾಡುವೆನು. ಹೀಗೆಂದು ಕಾಲಭೈರವನನ್ನು ಸ್ತುತಿಸುವ ಈ ಕಾಲಭೈರವಾಷ್ಟಕವನ್ನು ಯಾರು ಭಕ್ತಿಯಿಂದ ನಿತ್ಯವೂ ಪಠಿಸುವರೋ ಅವರಿಗೆ ಶಿವಾನುಗ್ರಹವೊದಗಿ ಸಕಲ ವಿಘ್ನಗಳೂ ನಾಶವಾಗುವುವು. ॥೭೬-೭೭॥

ಯಾವಜ್ಜೀವಂ ದ್ವಾದಶಾಬ್ದಂ ತ್ರಿವರ್ಷಂ ವರ್ಷಮೇವ ವಾ ।
ಕಾಶ್ಯಾಮನ್ಯತ್ರ ವಾ ಕ್ಷೇತ್ರೇ ಕೃತ್ವಾ ಶಿವಸಲೋಕಗಃ ॥೨೯॥

ಕಾಶ್ಯಾಂ ಸಾಯುಜ್ಯಮಾಪ್ನೋತಿ ವಿಶ್ವೇಶಕೃಪಯಾ ಮುನೇ ।
ಏವಂ ಕುರ್ವನ್ ಪರಂ ಧರ್ಮಂ ಶಿವಜ್ಞಾನಮವಾಪ್ನುಯಾತ್॥೩೦॥

ಜ್ಞಾನಾದ್ದುಃಖಾಂತಮಾಪ್ನೋತಿ ಕಾಶ್ಯಾಮೇವ ಪ್ರಸಾದತಃ ।
ಶಂಭೋರ್ನ ಚಾನ್ಯತಃ ಪಂಥಾ ವಿನಾ ಶರ್ವಾರ್ಚನಾನ್ಮುನೇ ॥೩೧॥

ವಸಂತೇ ಯಶ್ಶಾಂತೋ ಭಜತಿ ತಮುಮಾಕಾಂತಮುಗಜೇ
ವರೇ ಗ್ರೀಷ್ಮೇ ಔಷ್ಮ್ಯಂ ಭಜತಿ ಭವಭೀತೋ ಹಿ ನಿತರಾಂ ।
ಶಿವೇ ವರ್ಷ್ಯಂ ವರ್ಷಾಸ್ವಪಿ ಭಜತಿ ಮಾಸೇಷು ಶರದಿ
ಕೃತಾಂತಾಂತಂ ಶಂಭುಂ ಭಜತಿ ಯದಿ ಹೇಮಂತಶಿಶಿರೇ ॥೩೨॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಷಡ್ವಿಂಶೋಽಧ್ಯಾಯಃ

---

ಮತ್ತು ಅವನಿಗೆ ಸದಾ ಕಾಶೀವಾಸವು ಲಭಿಸುವುದು, ಅವನಿಂದ ಈಶ್ವರಾರ್ಚನೆಯೂ ಚೆನ್ನಾಗಿ ನಡೆಯುವುದು. ಎಲೈ ಜೈಗೀಷವ್ಯಾದಿಗಳೇ, ಇಲ್ಲಿನವರೆಗೂ ನಿಮಗೆ ಪವಿತ್ರವಾದ ಮಾಸಾರ್ಚನವಿಧಿಯನ್ನು ವಿವರಿಸಿ ಹೇಳಿರುವೆನು. ಇದನ್ನು ಮಾನವನು ಬದುಕಿರುವವರೆಗೂ, ಅಥವಾ ಹನ್ನೆರಡು, ಮೂರು, ಒಂದು, ವರ್ಷಗಳಾದರೂ ಮಾಡಬಹುದು. ಈ ಕ್ರಮದಿಂದ, ಕಾಶಿಯಲ್ಲಾಗಲಿ, ಇತರ ಶಿವಕ್ಷೇತ್ರಗಳಲ್ಲಾಗಲಿ ಶಿವಾರ್ಚನೆಯನ್ನು ನಡೆಸಬಹುದು. ಕಾಶಿಯಲ್ಲಿ ನಡೆಸುವವನಿಗಂತೂ ವಿಶೇಷವಾಗಿ ಶಿವಸಾಯುಜ್ಯವೇ ಲಭಿಸುವುದು. ಮತ್ತು ಶಿವಧರ್ಮಾಚರಣೆಯಿಂದ ಶಿವಜ್ಞಾನವೂ ದೊರಕುವುದು. ||೨೮-೨೯-೩೦||

ಶಿವಜ್ಞಾನಲಾಭದಿಂದ ಸಕಲ ದುಃಖವೂ ಪರಿಹಾರವಾಗುವುದು. ದುಃಖನಿವಾರಣೆಗೆ ಶಿವಾರ್ಚನೆಯನ್ನು ಬಿಟ್ಟರೆ ಮತ್ತಾವ ಉಪಾಯವೂ ದೊರೆಯಲಾರದು. ವಸಂತಋತುವಿನಲ್ಲಿ ಜಿತೇಂದ್ರಿಯನಾಗಿಯೂ, ಗ್ರೀಷ್ಮಋತುವಿನಲ್ಲಿ ಅಗ್ನಿರೂಪಿಯಾದ ಶಿವನನ್ನು ಬೇಗೆಯನ್ನು ತಡೆದುಕೊಂಡೂ, ವರ್ಷಋತುವಿನಲ್ಲಿ ಮಳೆಯ ಏಟನ್ನು ಪಡೆದೂ, ಶರದೃತುವಿನಲ್ಲಿ ಸಾವಧಾನಚಿತ್ತದಿಂದಲೂ, ಹಿಮಂತ ಮತ್ತು ಶಿಶಿರಋತುಗಳಲ್ಲಿ ಚಳಿಗಾಳಿಗಳಿಗೆ ಹೆದರದೆಯೂ, ಯಾರು ಉಮಾಪತಿಯೂ,

ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಮುಖ್ಯಕಾರಣನೂ, ವೃಷ್ಟಿರೂಪಿಯೂ, ಯಮನಿಗೆ ಯಮನೂ ಆಗಿರುವ ಮಹಾದೇವನನ್ನು ಹಿಂದೆ ಹೇಳಿದ ಮಹಾರ್ಚನೆಯ ಕ್ರಮದಲ್ಲಿ ವಿಧಿವತ್ತಾಗಿ ಪೂಜಿಸುವರೋ, ಅವರಿಗೆ ಸಕಲ ಧರ್ಮಸ್ವರೂಪವೂ, ಶಿವಾನುಗ್ರಹವೂ ಲಭಿಸುವುದಲ್ಲದೆ ಅನಾಯಾಸವಾಗಿ ಶಾಶ್ವತವಾದ ಶಿವಸಾಯುಜ್ಯವು ದೊರೆಯುವುದರಲ್ಲಿ ಯಾವ ಸಂದೇಹವೂ ಇಲ್ಲವೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಮಾಸಾರ್ಚನವಿಧಿಯನ್ನು ವಿವರವಾಗಿ ಹೇಳಿದನೆಂಬಲ್ಲಿಗೆ, ||೮೧-೮೩||

ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವಮಾಸಾರ್ಚನವಿಧಿಯನ್ನು ತಿಳಿಸುವ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಸಪ್ತವಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಪುಣ್ಯಪರ್ವಸು ಸರ್ವೇಷು ಗ್ರಹಣೇ ಸೋಮಸೂರ್ಯಯೋಃ ।
ಅಯನೇ ವಿಷುವೇ ಚೈವ ಷಡಶೀತಿಮುಖೇಷು ಚ ॥೧॥

ಯುಗಮನ್ವಾದಿಷು ಮುನೇ ಪೌರ್ಣಮಾಮಾಸು ಸರ್ವದಾ ।
ಸಂಕ್ರಾಂತಿಷು ವ್ಯತೀಪಾತೇ ವೈಧೃತೌ ಚ ವಿಶೇಷತಃ ॥೨॥

ಆಷಾಢೇ ಚೈವ ಶ್ರಾವಣ್ಯಾಂ ಮಾರ್ಗಶೀರ್ಷೇ ಚ ಚೈತ್ರಕೇ ।
ಮಾಘ್ಯಾಂ ಚ ಪೌರ್ಣಮಾಸ್ಯಾಂ ತು ಶಿವಪೂಜಾ ವಿಶಿಷ್ಯತೇ ॥೩॥

---

## ಇಪ್ಪತ್ತೇಳನೆಯ ಅಧ್ಯಾಯ

ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಶಿವಪೂಜೆಗೆ ಪ್ರಶಸ್ತವಾದ ದಿನಗಳನ್ನು ಈರೀತಿಹೇಳಲುಪಕ್ರಮಿಸಿದನು. ಸೂರ್ಯಚಂದ್ರರ ಗ್ರಹಣಕಾಲ, ಅಯನಕಾಲ, (ಕಟಕ, ಮಕರಸಂಕ್ರಮಣದಿನ) ವಿಷುವತ್ಪುಣ್ಯಕಾಲ (ಮೇಷ, ತುಲಾ ಸಂಕ್ರಮಣದಿನ) ಷಡಶೀತಿಪುಣ್ಯಕಾಲ (ಮಿಥುನ, ಕನ್ಯಾ, ಧನುಸ್ಸು, ಮೀನ ಈ ಸಂಕ್ರಮಣ ದಿನಗಳು) ಯುಗಾದಿ, ಮನ್ವಾದಿದಿನಗಳು, ಪೂರ್ಣಿಮಾ, ಮಹಾವ್ಯತಿಪಾತ, ಮತ್ತು ವೈಧೃತಿದಿನಗಳು, ಆಷಾಢ, ಶ್ರಾವಣ, ಮಾರ್ಗಶೀರ್ಷ, ಚೈತ್ರ, ಮಾಘ ಈ ಮಾಸಗಳ ಪೂರ್ಣಿಮಾ ತಿಥಿಗಳು ಮತ್ತು ಇತರ ಪರ್ವದಿನಗಳು ಇವೆಲ್ಲವೂ ಶಿವಪೂಜೆಗೆ ಪ್ರಶಸ್ತವಾದ ದಿನಗಳು. ||೧-೨-೩||

ಅಮಾ ಸೋಮಾನ್ವಿತಾ ಯಾ ಸ್ಯಾತ್ಸರ್ವಮಾಸೇಷು ಸತ್ತಮ ।
ಕಾರ್ತಿಕೇಥ ವಿಶೇಷೇಣ ಪುಷ್ಯಾಷಾಢೇ ಮಹಾಫಲಾ ॥೪॥

ಸ್ನಾನಮಭ್ಯರ್ಚನಂ ಶಂಭೋರ್ವಿಶಿಷ್ಟಂ ಸ್ಯಾತ್ಸದಾ ನೃಣಾಂ ।
ಕೃಷ್ಣಪಕ್ಷಾಷ್ಟಮೀಷ್ವೇವಂ ಭೂತಾಸ್ವಸಿತಪಕ್ಷಯೋಃ ॥೫॥

ಮಾಸಕೇ ಶಿವರಾತ್ರೇ ಚ ಪ್ರಶಸ್ತಾ ಶಿವಪೂಜನೇ ।
ಯಾ ಮಾಘೇ ಕೃಷ್ಣಪಕ್ಷಸ್ಯ ಭೂತಾ ಸೋಮಾನ್ವಿತಾ ಯದಿ ॥೬॥

ಸಾದ್ರಾರ್ಪಾತಾನ್ವಿತಾ ವಾಪಿ ನಿಶಿ ಶರ್ವಪ್ರಿಯಾ ಹಿ ಸಾ ।
ಸ ಯೋಗೋ ದುರ್ಲಭೋ ನೄಣಾಂ ತತ್ರ ಲಿಂಗೋದ್ಭವೋಮುನೇ ॥೭॥

ಏಕೇನ ಬಿಲ್ವಪತ್ರೇಣ ತಸ್ಯಾಂ ಪೂಜಾ ವಿಮುಕ್ತಿಭಾಕ್ ।
ಯಾ ಮಾಘೇ ಶಿವರಾತ್ರೇ ಚ ಮಹತ್ಪೂರ್ವಾ ವಿಶಿಷ್ಯತೇ ॥೮॥

ಗೋಕರ್ಣೇ ಸಾ ವಿಶಿಷ್ಯೇತ ತಥಾ ವೈ ಗಂಧಮಾದನೇ ।
ಶ್ರೀಕಾಲಹಸ್ತೀ ಶೈಲೇ ಚ ಶಿವರಾತ್ರಿರ್ವಿಶಿಷ್ಯತೇ ॥೯॥

---

ಸೋಮವಾರದಿಂದ ಕೂಡಿದ ಅಮಾವಾಸ್ಯಾತಿಥಿಯು ಸರ್ವಮಾಸಗಳಲ್ಲಿಯೂ ಶಿವಪೂಜೆಗೆ ಶ್ರೇಷ್ಠವೆನಿಸಿದೆ. ಅದರಲ್ಲಿಯೂ ಕಾರ್ತಿಕ, ಪುಷ್ಯ, ಆಷಾಢ ಈ ಮಾಸದ ಅಮಾಸೋಮವಾರವು ಪ್ರಶಸ್ತತರವಾದುದು. ಕೃಷ್ಣಾಷ್ಟಮೀ, ಕೃಷ್ಣಚತುರ್ದಶೀ, ಹಾಗೆಯೇ ಮಾಸಶಿವರಾತ್ರಿಯ ದಿನಗಳು ಶಿವಾರ್ಚನೆ, ಶಿವಾಭಿಷೇಕ ಮುಂತಾದುವುಗಳಿಗೆ ಶ್ರೇಷ್ಠವೆನಿಸಿವೆ. ॥೪-೫-೬॥

ಮಾಘ ಕೃಷ್ಣ ಚತುರ್ದಶೀ ತಿಥಿಯಲ್ಲಿ ಸೋಮವಾರ, ಆದ್ರಾನಕ್ಷತ್ರ, ವ್ಯತೀಪಾತ ಇವು ಸೇರುವುದು ಮಹಾಯೋಗವೆನಿಸುವುದು. ಆ ದಿನವು ಪರಶಿವನಿಗೆ ಬಹು ಪ್ರೀತಿಕರವಾದುದು. ಆ ದಿನವೇ ಶಂಕರನು ಶಿವಲಿಂಗರೂಪದಿಂದ ಗೋಚರವಾದುದು. ಅಂದು ಅರ್ಧರಾತ್ರಿ ಕೇವಲ ಒಂದು ಬಿಲ್ವದಳವನ್ನು ಶಿವಲಿಂಗಕ್ಕೆ ಅರ್ಪಿಸುವುದರಿಂದಲೂ ಮಾನವನಿಗೆ ಮುಕ್ತಿ ದೊರಕುವುದು. ಮಾಘಮಾಸದ ಶಿವರಾತ್ರಿ ತಿಥಿಗೆ ಮಹಾಶಿವರಾತ್ರಿಯೆಂದು ಹೆಸರು. ಉಳಿದ ಮಾಸಗಳಲ್ಲಿ ಮಾಸ ಶಿವರಾತ್ರಿ ಮಾತ್ರ ಬರುವುದು. ಮಹಾಶಿವರಾತ್ರಿಯಲ್ಲಿ ಗೋಕರ್ಣ, ಗಂಧಮಾದನ

ವಿಷ್ಣುಬ್ರಹ್ಮಾದಯೋ ದೇವಾ ಪ್ರಾರ್ಥಯಂತಿ ಮುನೀಶ್ವರಾಃ ।
ಕದಾ ಗೋಕರ್ಣಮೋಕ್ಷ್ಯಾಮಃ ಶಿವರಾತ್ರಾ ಶಿವಾರ್ಚಕಾಃ ॥೧೦॥

ಭವಿಷ್ಯಾಮೋ ಬಿಲ್ವಪತ್ರೈರ್ದ್ವಿಜೈರ್ನಾ ಮುಕ್ತಿಮಾಪ್ನುಯುಃ ।
ತತ್ರೈವ ಸಾಗರೇ ಸ್ನಾನಂ ಗೋಕರ್ಣೇಶಸ್ಯ ಪೂಜನಂ ॥೧೧॥

ಶಿವರಾತ್ರಾ ಶಿವಾರ್ಚೈಷಾ ಜನ್ಮನ್ಯೇಕೇನ ಮುಕ್ತಿದಾ ।
ಗೋಕರ್ಣೇ ಚ ಮುನಿಶ್ರೇಷ್ಠ ಶಿವಕ್ಷೇತ್ರೇಷು ಪುಣ್ಯದಾ ॥೧೨॥

ತಸ್ಯಾಮಭ್ಯರ್ಚನವಿಧಿಂ ತವಾಗ್ರೇ ಕಥಯಾಮ್ಯಹಂ ।
ಕಾರ್ತಿಕೇ ಶ್ರಾವಣೇ ಚೈವ ಸೋಮವಾರೇ ವಿಶಿಷ್ಯತೇ ॥೧೩॥

ಕೃಷ್ಣಪಕ್ಷೇಪಿ ಚ ಮುನೇ ಸರ್ವಮಾಸೇಷು ಪುಣ್ಯದಃ ।
ಭಕ್ತ್ಯಾಶಿವಾರ್ಚಕೋ ನಕ್ತಂ ತಸ್ಮಿನ್ನ್ಯಕ್ತಂ ತು ಮುಕ್ತಿದಃ ॥೧೪॥

ಸರ್ವಮಾಸಪ್ರದೋಷೇಪಿ ಪ್ರಶಸ್ತಶ್ಶಿವಪೂಜನೇ ।
ತತ್ರಾಪಿ ದುರ್ಲಭೋ ಜ್ಞೇಯಃ ಮಂದವಾರೇ ಮಹಾಫಲಃ ॥೧೫॥

---

ಕ್ಷೇತ್ರ, ಕಾಲಹಸ್ತಿ, ಶ್ರೀಶೈಲ ಈ ಕ್ಷೇತ್ರಗಳಲ್ಲಿ ಶಿವಾರ್ಚನೆ, ಶಿವದರ್ಶನ ಇವನ್ನು ನಡೆಸುವುದು ವಿಶೇಷ ಪುಣ್ಯಪ್ರದವಾದುದು. ||೭-೮-೯||

ಶಿವರಾತ್ರಿಯ ದಿನ, ಗೋಕರ್ಣಕ್ಕೆ ಹೋಗಿ., ಬಿಲ್ವಪತ್ರಾದಿಗಳಿಂದ ಪೂಜಿಸಿ ಶಿವಾನುಗ್ರಹವನ್ನು ಪಡೆಯಬೇಕೆಂದು ವಿಷ್ಣುಬ್ರಹ್ಮಾದಿಗಳು, ಮುನೀಶ್ವರರು ಸದಾ ತವಕಿಸುವರು. ಏಕೆಂದರೆ ಶಿವರಾತ್ರಿಯದಿನ ಸಾಗರಸ್ನಾನಮಾಡಿ ಗೋಕರ್ಣೇಶ್ವರನನ್ನು ಪೂಜಿಸಿದರೆ ಒಂದೇ ಜನ್ಮದಿಂದ ಮುಕ್ತಿಯು ಲಭಿಸುವುದು. ಶಿವಕ್ಷೇತ್ರಗಳಲ್ಲಿ ಗೋಕರ್ಣವೆಂಬುದು ಅತ್ಯಂತ ಪುಣ್ಯಪ್ರದವಾದುದು. ||೧೦-೧೧-೧೨||

ಆದಿನದಲ್ಲಿ ಶಿವಾರ್ಚನೆಮಾಡುವ ಕ್ರಮವನ್ನು ಮಾತ್ರ ನಿಮಗೆ ಹೇಳುವೆನು. ಕಾರ್ತಿಕ, ಶ್ರಾವಣ, ಈ ಮಾಸಗಳ ಸೋಮವಾರದ ದಿನಗಳಲ್ಲಿಯೂ, ಎಲ್ಲಾ ಮಾಸಗಳ ಕೃಷ್ಣಪಕ್ಷದ ಚತುರ್ದಶಿಯೇ ಮೊದಲಾದ ಶಿವತಿಥಿಗಳಲ್ಲಿಯೂ, ಶಿವಾರ್ಚನೆಮಾಡಿ ನಕ್ತವ್ರತವನ್ನಾಚರಿಸುವುದು ಮುಕ್ತಿಗೆ ಕಾರಣವೆನಿಸುವುದು. ||೧೩-೧೪||

ಪ್ರತಿತಿಂಗಳಿನಲ್ಲಿ ಎರಡುಪಕ್ಷಗಳಲ್ಲಿಯೂ ಬರುವ ಪ್ರದೋಷದ ದಿನಗಳೂ

ದುರ್ಲಭಃ ಕೃಷ್ಣಪಕ್ಷೋತ್ಥಃ ಶಿವಪ್ರಿಯಃ ತನೋ ಮತಃ ।
ತತ್ರೈವಾರ್ಚನಮೀಶಸ್ಯ ಸರ್ವಸಂಪತ್ಪ್ರದಾಯಕಂ ॥೧೬॥

ಸರ್ವತ್ರೈವ ಶಿವಾಗಾರೇ ಚರೇ ವಾ ಸ್ಥಾವರೇಪಿ ವಾ ।
ಲಿಂಗೇಷು ಪೂಜಯಾ ಶಂಭೋಃ ಮುಕ್ತಿಃ ಕರಗತಾ ಭವೇತ್ ॥೧೭॥

ಕಿಂಪುನಸ್ತ್ವವಿಮುಕ್ತೇಥ ತ್ರಿಲೋಚನಸಮೀಪತಃ ।
ತ್ರಿಲೋಚನೇಶ್ವರಂ ಕಾಶ್ಯಾಂ ಮಂದವಾರೇ ಪ್ರದೋಷಕೇ ॥೧೮॥

ಪೂಜ್ಯ ಜನ್ಮಾಯುತೈಃ ಪಾಪೈರ್ಮುಕ್ತೋ ಮುಕ್ತಿಂ ಚ ವಿದಂತಿ ।
ಸ ದ್ವಾದಶಪ್ರದೋಷಾಣಾಂ ಫಲಂ ಲಭ್ಯೇತ ಯತ್ನದಃ ॥೧೯॥

ಮಂದಪ್ರದೋಷಪೂಜಾತೋ ಲಭೇದೇವಂ ಮಹಾಮುನೇ ।
ಏಕಾದಶ್ಯಾಂ ಮಹಾದೇವಂ ಪೂಜ್ಯ ಬಿಲ್ವೈರ್ಮನೋಹರೈಃ ॥೨೦॥

---

ಅದರಲ್ಲಿಯೂ ಶನಿವಾರಬರುವ ಶನಿಪ್ರದೋಷದಿನಗಳು ಶಿವಾರ್ಚನೆಗೆ ಅತ್ಯಂತ ಪ್ರಶಸ್ತ ವಾದವುಗಳು. ಕೃಷ್ಣಪಕ್ಷದಲ್ಲಿ ಶನಿಪ್ರದೋಷ ಬರುವುದೂ, ಅದರಲ್ಲಿ ಶಿವಾರ್ಚನೆಗೆ ಅವಕಾಶದೊರೆಯುವುದೂ ಅತ್ಯಂತ ದುರ್ಲಭ. ಆದಿವಸಗಳಲ್ಲಿ ಶಿವಾಲಯದಲ್ಲಿರುವ ಸ್ಥಿರಲಿಂಗವನ್ನಾಗಲಿ, ಮನೆಯಲ್ಲಿರುವ ನಿತ್ಯಪೂಜೆಯ ಚರಲಿಂಗವನ್ನಾಗಲಿ ಭಕ್ತಿ ಯಿಂದ ಆರಾಧಿಸಿದವರಿಗೆ ಮೋಕ್ಷವು ಹಸ್ತಗತವಾಗುವುದೆಂದು ತಿಳಿಯಬೇಕು. ||೧೬-೧೭||

ಅದರಲ್ಲಿಯೂ ಕಾಶೀಕ್ಷೇತ್ರದಲ್ಲಿ ವಿಶ್ವೇಶ್ವರ (ತ್ರಿಲೋಚನೇಶ್ವರ) ಲಿಂಗವನ್ನು ಶನಿಪ್ರದೋಷದ ದಿನ ಅರ್ಚನೆಮಾಡಿದವರು ಅನೇಕಜನ್ಮಗಳಿಂದ ಸಂಪಾದಿಸಿ ಕೊಂಡುಬಂದ ಪಾಪರಾಶಿಯನ್ನೂ ಕಳೆದುಕೊಳ್ಳುವರು. ಶನಿಪ್ರದೋಷದ ದಿನ ಶಂಕರನನ್ನು ಅರ್ಚಿಸಿದರೆ ವರ್ಷದ ಎಲ್ಲಾ ಪ್ರದೋಷಕಾಲಗಳಲ್ಲಿಯೂ ಶಿವನನ್ನು ಅರ್ಚಿಸಿದ ಫಲವು ಲಭಿಸುವುದು. ಶನಿಪ್ರದೋಷವು ಅಷ್ಟು ಪವಿತ್ರತಮವೆನಿಸಿರು ವುದು. ಏಕಾದಶಿಯದಿನ ಮಹಾದೇವನನ್ನು ಶುಕ್ಲ, ಕೃಷ್ಣಪಕ್ಷಗಳೆಂದು ನೋಡದೆ ಉಪವಾಸವಿದ್ದು ಭಕ್ತಿಯಿಂದ ಆರಾಧಿಸಿ ಆ ತಿಥಿಕಳೆದೊಡನೆ ನಕ್ತಭೋಜನಮಾಡು ವುದು ಅತ್ಯಂತ ಶ್ರೇಯಸ್ಕರ. ||೧೮-೧೯-೨೦||

ಸಿತಾಯಾಮಸಿತಾಯಾಂ ವಾ ರುದ್ರತಿಥ್ಯಾಂ ಮುನೀಶ್ವರ ।
ಉಪೋಷ್ಯ ಶಿವಮಭ್ಯರ್ಚ್ಯ ಕೃಷ್ಣಾಯಾಂ ನಕ್ತಭೋಜನಂ ॥೨೧॥

ಕುರ್ಯಾದೇವಂ ಶಿವೇ ಭಕ್ತೋ ಮಹಾಫಲಜಿಗೀಷಯಾ ।
ವಿಷ್ಣುಬ್ರಹ್ಮಾದಯೋ ದೇವಾ ಏಕಾದಶ್ಯಾಂ ಶಿವಾರ್ಚನಂ ॥೨೨॥

ಕುರ್ವಂತ್ಯುಪೋಷಣಂ ಭಕ್ತ್ಯಾ ರುದ್ರತಿಥ್ಯಾಂ ದ್ವಿಜೋತ್ತಮ ।
ಏಕಾದಶಾನಾಂ ರುದ್ರಾಣಾಂ ಪ್ರೀತ್ಯರ್ಥಂ ಗರುಡಧ್ವಜಃ ॥೨೩॥

ಪಕ್ಷದ್ವಯೇಽಪಿ ಸತತಂ ಕರೋತ್ಯೇಕಾದಶೀ ವ್ರತಂ ।
ರುದ್ರಪ್ರಿಯಕರೀ ಹ್ಯೇಷಾ ಕಾರ್ತಿಕಾಷಾಢಗಾ ಸಿತಾ ॥೨೪॥

ವೈಶಾಖ್ಯಾಂ ಚ ತಥಾಷಾಢ್ಯಾಂ ಚೈತ್ರ್ಯಾಂ ಮಾಘ್ಯಾಂ ಮಹೇಶ್ವರಂ ।
ಮಹಾಸ್ನಾನವಿಧಾನೇನ ಪೌರ್ಣಮ್ಯಾಂ ಸ್ನಾಪಯೇನ್ನರಃ ॥೨೫॥

ಪಂಚಾಮೃತೈಃ ಫಲರಸೈರ್ಮಹಾಪುಣ್ಯಮವಾಪ್ನುಯಾತ್ ।
ನೀಲೋತ್ಪಲದಳೈರ್ಬಿಲ್ವೈಃ ಪೂಜಯನ್ ಕುಸುಮೈರಪಿ ॥೨೬॥

ಸರ್ವಪಾಪವಿನಿರ್ಮುಕ್ತೋ ಹ್ಯಕ್ಷಯ್ಯಾಂ ಲಭತೇ ಗತಿಂ ।
ಯೋ ಮಾಘ್ಯಾಂ ಕುರುತೇ ಭಕ್ತ್ಯಾ ಶಿವಾಯ ಘೃತಕಂಬಲಂ ॥೨೭॥

---

ಹೀಗೆ ಏಕಾದಶೀವ್ರತವನ್ನು ಮಾಡುವ ಈಶ್ವರಭಕ್ತನಿಗೆ ಸಕಲಪಾಪವೂ ನಾಶವಾಗುವುದು. ವಿಷ್ಣು, ಬ್ರಹ್ಮ ಮೊದಲಾದ ದೇವತೆಗಳು ಸಹ ಏಕಾದಶಿಯದಿನ ಉಪವಾಸವಿದ್ದು ಏಕಾದಶರುದ್ರರ ಪ್ರೀತ್ಯರ್ಥವಾಗಿ ಶಿವಾರ್ಚನೆಮಾಡಿ ಆ ತಿಥಿಯನ್ನೆಲ್ಲಾ ಉಪವಾಸದಿಂದ ಕಳೆದು ಅನಂತರ ಭೋಜನಮಾಡುತ್ತಾರೆ. ||೨೧-೨೨-೨೩||

ಪ್ರತಿಪಕ್ಷದ ಏಕಾದಶೀತಿಥಿಗಳೂ ಶಿವಪ್ರೀತಿಕರಗಳೇ. ಆದರೂ ಕಾರ್ತಿಕ ಮತ್ತು ಆಷಾಢಮಾಸಗಳ ಶುದ್ಧ ಏಕಾದಶೀ ತಿಥಿಯು ರುದ್ರಪ್ರೀತಿಕರವಾದುದು. ಹಾಗೆಯೇ ಚೈತ್ರ, ವೈಶಾಖ, ಆಷಾಢ, ಮಾಘ ಈ ಮಾಸಗಳ ಪೂರ್ಣಿಮಾತಿಥಿಯಲ್ಲಿ ಮಹೇಶ್ವರನಿಗೆ ಮಹಾಭಿಷೇಕವನ್ನು ನೆರವೇರಿಸಬೇಕು. ||೨೪-೨೫||

ಆ ತಿಥಿಗಳಲ್ಲಿ ಪಂಚಾಮೃತದ್ರವ್ಯಗಳಿಂದಲೂ, ಹಣ್ಣಿನರಸಗಳಿಂದಲೂ ಪರಶಿವನಿಗೆ ಅಭಿಷೇಕಮಾಡಿದವರು ಸರ್ವಪಾಪಗಳಿಂದಲೂ ಬಿಡುಗಡೆಹೊಂದುವರು.

ಸ ವಂಶಕೋಟಿಸಂಯುಕ್ತೋ ಮೋದತೇ ಶಿವಸನ್ನಿಧೌ ।
ವೈಶಾಖ್ಯಾಂ ಪೌರ್ಣಮಾಸ್ಯಾಂ ತು ದಧಿಕಂಬಳಕೃನ್ನರಃ ॥೨೮॥

ಮಹಾಕೈಲಾಸಸದನೇ ಮದನಾಂತಕರಪ್ರಿಯಃ ।
ಭವೇನ್ನಾವರ್ತತೇ ವಿಪ್ರ ಅಸ್ಮಿನ್ ಲೋಕೇ ಧ್ರುವಂ ನರಃ ॥೨೯॥

ಫಾಲ್ಗುನ್ಯಾಮಥ ಪೌರ್ಣಮ್ಯಾಂ ಮಧುಕಂಬಲದೋ ನರಃ ।
ಶಿವಾಯ ವಿಧಿವದ್ಭಕ್ತ್ಯಾ ಗಾಣಾಪತ್ಯಂ ಲಭೇನ್ನರಃ ॥೩೦॥

ಸಂಕ್ರಾಂತಿಷು ಶಿವಂ ಪೂಜ್ಯ ಕುಸುಮೈರ್ಬಿಲ್ವಪಲ್ಲವೈಃ ।
ಕ್ಷೀರೇಣ ಮಧುನಾ ದಧ್ನಾ ಸಿತಯಾ ಚ ಘೃತೈರಪಿ ॥೩೧॥

ಅಭಿಷಿಂಚೇಚ್ಛಿವಂ ಭಕ್ತ್ಯಾ ತೂರ್ಯಮಂಗಳವಾದನೈಃ ।
ಧೂಪಂ ಚ ಗುಗ್ಗುಲಂ ದಗ್ಧ್ವಾ ಬ್ರಹ್ಮಹತ್ಯಾಯುತಂ ದಹೇತ್॥೩೨॥

ಗಚ್ಛೇಚ್ಛಿವಪುರಂ ದಿವ್ಯಂ ವಿಮಾನೈಃ ಸಾರ್ವಗಾಮಿಕೈಃ ।
ಶಿವಂ ಮಕರಸಂಕ್ರಾಂತೌ ಸ್ನಾಪ್ಯ ಪಂಚಾಮೃತೈಃ ಫಲೈಃ ॥೩೩॥

---

ಮಾಘಮಾಸದಲ್ಲಿ ಪರಶಿವಲಿಂಗಕ್ಕೆ ತುಪ್ಪದ ಕಂಬಳ (ಹೊದಿಕೆ) ವನ್ನು ಅರ್ಪಿಸಿದವರಿಗೆ ವಂಶಪರಂಪರೆಯಾಗಿ ಶಿವಸನ್ನಿಧಿಯು ದೊರಕುವುದು. (ಕಂಬಲವಿಧಾನವು ಹಿಂದಿನ ಅಂಶದಲ್ಲಿ ಉಕ್ತವಾಗಿದೆ). ॥೨೬-೨೭॥

ವೈಶಾಖ ಶುದ್ಧ ಪೂರ್ಣಿಮಾತಿಥಿಯಲ್ಲಿ ಪರಶಿವನಿಗೆ ದಧಿಕಂಬಲಸೇವೆಯನ್ನು ಅರ್ಪಿಸಿದವರಿಗೆ ಮಹಾಕೈಲಾಸವು ದೊರೆಯುವುದಲ್ಲದೆ ಮತ್ತೆ ಭೂಲೋಕದಲ್ಲಿ ಜನ್ಮತಾಳುವ ಕಷ್ಟವೇ ಇರುವುದಿಲ್ಲ. ಅದೇರೀತಿ ಫಾಲ್ಗುಣ ಶುದ್ಧ ಪೂರ್ಣಿಮಾದಿನ ಮಧುಕಂಬಳವನ್ನು ಶಿವನಿಗೆ ಅರ್ಪಿಸುವುದರಿಂದ ಅವನಿಗೆ ಶಿವಗಾಣಾಪತ್ಯವು ಲಭಿಸುವುದು. ॥೨೮-೨೯-೩೦॥

ಸಂಕ್ರಮಣಾದಿಗಳಲ್ಲಿ, ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ ಮುಂತಾದ ಪಂಚಾಮೃತಗಳಿಂದ ಅಭಿಷೇಕಮಾಡಿ, ಧೂಪದೀಪಗಳನ್ನು ಅರ್ಪಿಸಿ ಪೂಜಿಸಿದವರು ದಿವ್ಯವಿಮಾನಾರೂಢರಾಗಿ, ಸರ್ವತ್ರ ಸಂಚರಿಸಿ ಶಿವಪುರವನ್ನು ಹೊಂದುವರು. ॥೩೧-೩೨-೩೩॥

ಮಕರಸಂಕ್ರಮಣದ ದಿನ ಪಂಚಾಮೃತಗಳಿಂದ, ಫಲರಸಗಳಿಂದ, ಮಾಡುವ ಅಭಿಷೇಕದಿಂದಲೂ, ತಿಲಾಕ್ಷತೆಗಳ ತರ್ಪಣಾದಿಗಳಿಂದಲೂ, ಶುಭ್ರವಾದ ವಸ್ತ್ರ

ತಿಲಾಂಜಲಿಶತೈಃ ಪೂಜ್ಯಂ ಸುಧೌತೈಃ ಪಾಂಡುರೈರ್ನರಃ ।
ಬಿಲ್ವಪತ್ರೈಸ್ಸಮಭ್ಯರ್ಚ್ಯ ಕೃಸರಂ ತಿಲಸಂಯುತಂ ॥೩೪॥

ಸಾಜ್ಯಂ ನಿವೇದ್ಯ ಸಗುಡಂ ಕೃತಕೃತ್ಯೋ ಭವೇನ್ನರಃ ।
ಹಂಸಕುಂದೇಂದುಸಂಕಾಶೈರ್ಯಾನೈರ್ಗಚ್ಛೇಚ್ಛಿವಾಗ್ರತಃ ॥೩೫॥

ಷಡಶೀತಿಮುಖೇಷ್ವೀಶಂ ಪೂಜ್ಯ ಭಕ್ತ್ಯಾ ಸಕೃನ್ನರಃ ।
ಬಿಲ್ವಪತ್ರೈಃ ಸಮಭ್ಯರ್ಚ್ಯ ಕ್ಷುದ್ರಪಾಪೈಃ ಪ್ರಮುಚ್ಯತೇ ॥೩೬॥

ಯುಗಾದಿಷು ಮಹಾದೇವಂ ಸಿಚ್ಯ ಪಂಚಾಮೃತೈಃ ಫಲೈಃ ।
ಹವಿರ್ನಿವೇದ್ಯ ದೇವಾಯ ಸಂಪೂಜ್ಯ ಕುಸುಮಾಕ್ಷತೈಃ ॥೩೭॥

ಸರ್ವಪಾಪೈಃ ಪ್ರಮುಚ್ಯೇತ ಭಕ್ತೋ ಮುಕ್ತಿಂ ಚ ವಿಂದತಿ ।
ಮನ್ವಾದಿಷು ವಿರೂಪಾಕ್ಷಂ ಪೂಜ್ಯ ಭಕ್ತ್ಯಾ ಸಕೃನ್ನರಃ ॥೩೮॥

ವಸೇಚ್ಛಿವಪುರೇ ದಿವ್ಯೇ ಸರ್ವಭೋಗಸಮೃದ್ಧಿಮಾನ್ ।
ವ್ಯತೀಪಾತೇ ಚ ಸಂಪೂಜ್ಯ ಜಗನ್ನಾಥಂ ಜ್ಯಂ ಬಿಲ್ವಸಂಯುತಂ ॥೩೯॥

---

ಗಳಿಂದಲೂ, ಕೋಮಲವಾದ ಬಿಲ್ವಪತ್ರೆಗಳಿಂದಲೂ, ತಿಲ ಘೃತ ಗುಡಮಿಶ್ರಿತವಾದ, ಹುಗ್ಗಿಯ ನೈವೇದ್ಯದಿಂದಲೂ, ಮಾನವನು ಕೃತಕೃತ್ಯನೆನಿಸುವನು. ಅವನಿಗೆ ಹಂಸ, ಮಲ್ಲಿಗೆ, ಚಂದ್ರ ಈ ವಸ್ತುಗಳಂತೆ ಶುಭ್ರವಾಗಿರುವ ವಿಮಾನವು ದೊರೆತು ಅದರ ಮೂಲಕ ಕೈಲಾಸವನ್ನು ಸೇರುವನು. ಇದೇರೀತಿ, ಮಿಥುನ, ಕನ್ಯಾ, ಧನುಸ್ಸು, ಮೀನ ಸಂಕ್ರಮಣದಿನಗಳಲ್ಲಿಯೂ ಶಿವನನ್ನು ಪೂಜಿಸುವುದರಿಂದ ಅಲ್ಪಸ್ವಲ್ಪವಾಗಿ ಉಳಿದಿರುವ ಸಕಲ ಪಾಪರಾಶಿಯಿಂದಲೂ ಮುಕ್ತನಾಗುವನು. ಇದರಲ್ಲಿ ಸಂಶಯ ವಿಲ್ಲ. ॥೩೪-೩೫-೩೬॥

ಯುಗಾದಿ ಮತ್ತು ಮನ್ವಾದಿಯ ದಿನಗಳಲ್ಲಿ ಮಹಾದೇವನ ಲಿಂಗಕ್ಕೆ ಪಂಚಾಮೃತಗಳಿಂದ ಅಭಿಷೇಕಮಾಡಿ, ಮಂತ್ರಾಕ್ಷತೆ, ಹೂವು, ಪತ್ರೆ ಇವುಗಳಿಂದ ಅರ್ಚಿಸಿ ಧ್ಯಾನಿಸಿದವರು ಪಾಪಮುಕ್ತರಾಗಿ ಸಾಕ್ಷಾಚ್ಛಿವಲೋಕವನ್ನೇ ಸೇರುವರು. ಮತ್ತು ಅಲ್ಲಿ ನಾನಾವಿಧವಾದ ಸೌಖ್ಯಗಳನ್ನೂ ಅನುಭವಿಸುವರು. ॥೩೭-೩೮-೩೯॥

ಮಾರ್ಗಶೀರ್ಷೇ ವಿಶೇಷೇಣ ಸಫಲಂ ತಸ್ಯ ಜೀವಿತಂ ।
ಅಣಿಮಾದಿಗುಣೈರ್ಯುಕ್ತೈಃ ಶಿವವದ್ವಿಚರೇತ್ಸ್ವಯಂ ॥೪೦॥

ವೈಧೃತೌ ಚ ವಿಶೇಷೇಣ ಸಂಪೂಜ್ಯ ಶಿವಮೇವ ಹಿ ।
ಕ್ಷೀರಾಜ್ಯೈರ್ಬಿಲ್ವಪತ್ರೈಶ್ಚ ನಿವೇದ್ಯ ಚ ಹವಿರ್ಮನೇ ॥೪೧॥

ನಿಶಾಕರಕರಪ್ರಖ್ಯೈರ್ವಿಮಾನೈಃ ಸಾರ್ವಗಾಮಿಕೈಃ ।
ಯಾತ್ಯೇವ ಸನ್ನಿಧಿಂ ಶಂಭೋರ್ಗಣಶ್ರೇಷ್ಠೋಽಮರೇಡಿತಃ ॥೪೨॥

ಸಂಪೂಜ್ಯ ದೇವಂ ವಿಪ್ರೇಂದ್ರ ಯೋ ಲಿಂಗಮುದಗಾಯನೇ ।
ಪುಷ್ಪೈರ್ಧೂಪೈಶ್ಚ ಬಿಲ್ವೈಶ್ಚ ನಿವೇದ್ಯ ಹವಿರುತ್ತಮಂ ॥೪೩॥

ಭೋಜಯಿತ್ವಾ ಮಹಾಶೈವಾನೇಕಂ ವಾ ಶಿವಯೋಗಿನಂ ।
ಪ್ರಯಾತಿ ಶಿವಸಾರೂಪ್ಯಂ ಗಾಣಾಪತ್ಯಂ ಲಭೇನ್ನರಃ ॥೪೪॥

ಸಂಪೂಜಯನ್ನರೋ ಭಕ್ತ್ಯಾ ಯೋ ಲಿಂಗಂ ದಕ್ಷಿಣಾಯನೇ ।
ಘೃತೇನೈವಾಭಿಷಿಚ್ಯೇತ ಬಿಲ್ವೈಃ ಸಂಪೂಜ್ಯ ಯತ್ನತಃ ॥೪೫॥

---

ವ್ಯತೀಪಾತ ಪ್ರವೇಶದ ದಿನ ಆದರಲ್ಲಿಯೂ ಮಾರ್ಗಶಿರ ಮಾಸದಲ್ಲಿ ಶಿವಾರಾಧನೆ ಮಾಡಿ, ಬಿಲ್ವಸಹಿತವಾದ ಆಜ್ಯವನ್ನು ಭಕ್ಷಿಸಿದುದೇ ಆದರೆ, ಅವರಿಗೆ ಶಿವಸಾರೂಪ್ಯವೇ ಲಭಿಸುವುದು. ಅಣಿಮಾದಿ ಅಷ್ಟೈಶ್ವರ್ಯಗಳಿಂದೊಡಗೂಡಿ ಸರ್ವದಾ ಸೌಖ್ಯವನ್ನೇ ಅವರು ಅನುಭವಿಸುವರು. ಇದೇ ರೀತಿ ವೈಧೃತಿಯ ದಿನದಲ್ಲಿಯೂ ಕ್ಷೀರಾದಿಗಳಿಂದಲೂ ಬಿಲ್ವಪತ್ರಾದಿಗಳಿಂದಲೂ ಶಂಕರನನ್ನು ಅರ್ಚಿಸಿದವರಿಗೆ, ಚಂದ್ರಮಂಡಲಸದೃಶವಾದ ಶುಭ್ರವಿಮಾನವು ದೊರೆತು ಆದರಿಂದ ಅವರು ಶಿವಲೋಕವನ್ನು ಸೇರುವರು. ॥೪೦-೪೧-೪೨॥

ಉತ್ತರಾಯಣದಲ್ಲಿ ಬಿಲ್ವಪುಷ್ಪಾದಿಗಳಿಂದಲೂ, ಧೂಪದೀಪಹವಿರ್ನಿವೇದನಾದಿಗಳಿಂದಲೂ ಶಂಕರನನ್ನು ಅರ್ಚಿಸಿ, ಹಾಗೆಯೇ ಶೈವಶ್ರೇಷ್ಠರಾದವರಿಗೆ ಅಥವಾ ಶಿವಯೋಗಿಯೆನಿಸಿದ ಒಬ್ಬನಿಗಾದರೂ ಭೋಜನಾದಿಗಳನ್ನು ನೆರವೇರಿಸಿದುದೇ ಆದರೆ, ಅವನಿಗೆ ಶಿವಸಾರೂಪ್ಯವು ಅನಾಯಾಸವಾಗಿ ಲಭಿಸುವುದು. ಆದರಿಂದ ವನಿಗೆ ಶಿವಗಾಣಾಪತ್ಯವೂ ಒದಗುವುದು. ಅದೇ ರೀತಿ ದಕ್ಷಿಣಾಯನ ಕಾಲ

ಕೃಸರಂ ಯವಸಂ ಯುಕ್ತಂ ನಿವೇದ್ಯ ಶಿವಯೋಗಿನಂ ।
ಭೋಜಯಿತ್ವಾ ಘೃತಾನ್ನೇನ ಸರ್ವಪಾಪೈಃ ಪ್ರಮುಚ್ಯತೇ ॥೪೬॥

ಸರ್ವಾನ್ಕಾಮಾನವಾಪ್ನೋತಿ ಯಾನ್ತ್ಯೆರ್ಯಾತಿ ಶಿವಾಲಯಂ ।
ಅಮಾಸ್ಯಪಿ ಚ ಕಾರ್ತಿಕ್ಯಾಂ ಬಿಲ್ವೈಃ ಸೋಮಾನ್ವಿತಾಸ್ವಪಿ ॥೪೭॥

ಸಂಪೂಜ್ಯ ಚ ಘೃತೈಃ ಸ್ನಾಪ್ಯ ಲಭತೇ ಗತಿಮುತ್ತಮಾಂ ।
ನಕ್ತಭುಕ್ತಾಶನೋ ಭಕ್ತೋ ಮುಕ್ತಿಂ ಯಾತಿ ನ ಸಂಶಯಃ ॥೪೮॥

ದಿವಸೇ ತು ಸಮಭ್ಯರ್ಚ್ಯ ವಾರರ್ಕ್ಷತಿಥಿಷು ಕ್ರಮಾತ್ ।
ಏಕಾಹಮಪಿ ಯೋ ಭಕ್ತ್ಯಾ ಸ ಯುಕ್ತಸ್ಸರ್ವಪಾಪ್ಮಭಿಃ ॥೪೯॥

ಸಂಪೂಜ್ಯ ಚ ಘೃತೈಸ್ಸ್ನಾಪ್ಯ ಲಭತೇ ಗತಿಮುತ್ತಮಾಂ ।
ನಕ್ತಂ ಭಕ್ತಾಶನೋ ಭಕ್ತೋ ಮುಕ್ತಿಂ ಯಾತಿ ನ ಸಂಶಯಃ ॥೫೦॥

ದಲ್ಲಿಯೂ ಕೇವಲ ಘೃತಾಭಿಷೇಕ, ಬಿಲ್ವಾರ್ಚನೆ ಇವುಗಳಿಂದ ಮಹೇಶ್ವರನನ್ನು ಸದಾ ಪೂಜಿಸಬೇಕು. ||೪೩-೪೪-೪೫||

ಮತ್ತು ದಕ್ಷಿಣಾಯನದಲ್ಲಿ ಕೃಸರಾನ್ನ (ಹುಗ್ಗಿ) ವನ್ನು ನಿವೇದಿಸಿ, ತುಪ್ಪ ದಿಂದ ಸಹಿತವಾದ ಅದನ್ನು ಶಿವಯೋಗಿಯೊಬ್ಬನಿಗೆ ಭೋಜನಕ್ಕಾಗಿ ಕೊಟ್ಟವನಿಗೆ ಶಿವಾನುಗ್ರಹವು ದೊರೆತು ಸಕಲ ಇಷ್ಟಾರ್ಥಗಳನ್ನೂ ಪಡೆಯುವನು. ಕೊನೆಗೆ ಅವನಿಗೆ ಶಿವಸಾಮೀಪ್ಯವೂ ದೊರೆಯುವುದು. ಕಾರ್ತಿಕಮಾಸದ ಸೋಮವಾರದ ಅಮಾವಾಸ್ಯೆಯ ದಿನ ಯಾರು ಪರಶಿವನಿಗೆ ಘೃತಾಭಿಷೇಕಾದಿಗಳನ್ನು ಸಮರ್ಪಿಸಿ, ತಾವು ನಕ್ತವ್ರತದಿಂದ ರಾತ್ರಿ ಭೋಜನಮಾಡುವರೋ, ಅಂತಹವರು ಸಂಶಯ ವಿಲ್ಲದೆ ಮುಕ್ತಿಯನ್ನು ಪಡೆಯುವರು. ||೪೬-೪೭-೪೮||

ಅಂತಹ ವಾರ, ತಿಥಿ, ನಕ್ಷತ್ರಗಳಿಂದ ಕೂಡಿಬರುವ ಯೋಗ ದಿನಗಳಲ್ಲಿ ಒಂದು ದಿನವಾದರೂ ಮನುಷ್ಯರು ಭಕ್ತಿಭರಿತರಾಗಿ, ಘೃತಾಭಿಷೇಕಾದಿ ಗಳಿಂದ ಶಿವನನ್ನು ಪೂಜಿಸಿ, ನಕ್ತವ್ರತಾನುಷ್ಠಾನಮಾಡಿದರೆ ನಿಜವಾಗಿಯೂ ಶಾಶ್ವತವಾದ ಮುಕ್ತಿಯನ್ನು ಸಂಪಾದಿಸುವರು. ಇದರಲ್ಲಿ ಸಂಶಯವಿಲ್ಲ. ||೪೯-೫೦||

ಪ್ರಾತಸ್ಸಂಪೂಜ್ಯ ಯಲ್ಲಿಂಗಂ ನೈಶಂ ಪಾಪಂ ವ್ಯಪೋಹತಿ ।
ಸಂಗವೇನ ಗತಾಯಾರ್ಥಂ ಪೂಜ್ಯಲಿಂಗಂ ಸಕೃನ್ನರಃ ॥೫೧॥

ಪಾಪಕಂಚುಕಮುತ್ಸೃಜ್ಯ ಶಿವಲೋಕೇ ಮಹೀಯತೇ ।
ಅಪರಾಹ್ನೇ ಶಿವಂ ಪೂಜ್ಯ ಗರ್ಭಭಾಙ್ನೈವ ಜಾಯತೇ ॥೫೨॥

ಮಧ್ಯಾಹ್ನೇ ಹಯಮೇಧಸ್ಯ ಫಲಂ ಸಂಪೂಜಕೋ ಲಭೇತ್ ।
ಸಾಯಂಕಾಲೇ ಶಿವಂ ಪೂಜ್ಯ ಸರ್ವಪಾಪೈಃ ಪ್ರಮುಚ್ಯತೇ ॥೫೩॥

ನಿಶೀಥೇ ಮನ್ಮಥಾರಾತಿಂ ಪೂಜ್ಯ ಬಿಲ್ವೈರ್ನಪಾಪಭಾಕ್ ।
ಅರುಣೋದಯವೇಲಾಯಾಂ ಪೂಜ್ಯ ದೇವಂ ಋಣೇನ ತು ॥೫೪॥

ಷಟ್ಕಾಲಂ ಪೂಜಯೇಲ್ಲಿಂಗಂ ತ್ರಿಕಾಲಂ ವಾ ದ್ವಿಕಾಲಕಂ ।
ಏಕಕಾಲಂ ಮುನೇ ಭಕ್ತ್ಯಾ ಸ ರುದ್ರೋ ನಾತ್ರ ಸಂಶಯಃ ॥೫೫॥

ಪ್ರಹರೇ ಪ್ರಹರೇ ನಿತ್ಯಂ ಹರಮೇವಂ ಸಮರ್ಚಯೇತ್ ।
ಯತೋ ನಿತ್ಯಂ ಜೀವಿತಂ ಹಿ ನಾಸ್ವಸೇತ್ ಕ್ಷಣಮಾತ್ರ ಹಿ ॥೫೬॥

ಪ್ರಾತಃಕಾಲದ ಶಿವಾರ್ಚನೆಯಿಂದ ರಾತ್ರಿಕೃತವಾದ ಪಾಪವೂ, ಸಂಗವ ಕಾಲದ ಆರಾಧನೆಯಿಂದ ಅನಾದಿಯಾಗಿ ಬಂದಿದ್ದ ಪಾಪಕಂಚುಕವೂ, ಮಧ್ಯಾಹ್ನಾರ್ಚನೆಯಿಂದ ಅಶ್ವಮೇಧಯಾಗದ ಸುಕೃತವೂ, ಅಪರಾಹ್ನಕಾಲದ ಪೂಜೆಯಿಂದ, ಪುನರ್ಜನ್ಮದೊರೆಯದ ಮುಕ್ತಿಯೂ, ಸಾಯಂಕಾಲದ ಅರ್ಚನೆಯಿಂದ ಸರ್ವಪಾಪ ಪರಿತ್ಯಾಗವೂ ಲಭಿಸುವುದು. ||೫೧-೫೨-೫೩||

ಅರ್ಧರಾತ್ರಿಯಲ್ಲಿಯೂ, ಹಾಗೆಯೇ ಅರುಣೋದಯ ಕಾಲದಲ್ಲಿಯೂ ಶಿವ ಲಿಂಗಾರ್ಚನೆಮಾಡಿದವರಿಗೆ ಸಕಲ ಋಣಬಾಧೆಯೂ, ಪಾಪರಾಶಿಯೂ ನಿವಾರಣೆಯಾಗುವುದು. ಯಾವ ಭಕ್ತನು ತನ್ನ ಆರಾಧ್ಯದೇವತೆಯಾದ ಶಂಕರನನ್ನು ಪ್ರತಿ ದಿನವೂ, ಆರುಕಾಲ ಅಥವಾ ಮೂರು, ಎರಡು, ಕೊನೆಗೆ ಒಂದು ಹೊತ್ತಿನಲ್ಲಾದರೂ ತಪ್ಪದೆಪೂಜಿಸುವನೋ, ಅವನು ಕೊನೆಗೆ ರುದ್ರಸ್ವರೂಪಿಯೇ ಆಗುವನು. ಪ್ರತಿ ದಿನವೂ ಮಾನವನು ಯಾವುದಾದರೊಂದು ಕಾಲದಲ್ಲಿ ತಪ್ಪದೆ ಶಿವಾರಾಧನೆ ಮಾಡಲೇಬೇಕು. ಏಕೆಂದರೆ ಮಾನವರ ಜೀವಿತವು ಕ್ಷಣಿಕವಾದುದು. ||೫೪-೫೫-೫೬||

ಯಸ್ಸಪ್ತಮೀ ಪ್ರದೋಷೇಷು ಶಿವಲಿಂಗಂ ಸಮರ್ಚಯೇತ್ ।
ಬಿಲ್ವಪತ್ರೈಶ್ಚ ಕುಸುಮೈಸ್ತಿರ್ಯಗ್ಯೋನಿಂ ನ ಚಾಪ್ನುಯಾತ್ ॥೫೭॥

ಚತುರ್ಥ್ಯಾಂ ಚ ಪ್ರದೋಷೇಷು ಪೂಜಯಿತ್ವೇಂದುದರ್ಶನೇ ।
ಶಿವಲಿಂಗಂ ಬಿಲ್ವಪತ್ರೈರ್ನದುರ್ಗತಿಮವಾಪ್ನುಯಾತ್ ॥೫೮॥

ಸ ಪ್ರದೋಷಸ್ತ್ರಿಧಾ ಪ್ರೋಕ್ತಃ ಶಿವೇನ ಪರಮಾತ್ಮನಾ ।
ಮಾಹೇಶ್ವರಸ್ತ್ರಯೋದಶ್ಯಾಂ ಸಪ್ತಮ್ಯಾಂ ಚ ಮಹಾಮುನೇ ॥೫೯॥

ಸಾರಸ್ವತಸ್ತತೋ ವಿಪ್ರ ಚತುರ್ಥ್ಯಾಂ ಚ ಗಣಾಧಿಪಃ ।
ಸರ್ವೇಷ್ವಪಿ ಪ್ರದೋಷೇಷು ಪೂಜ್ಯ ಏವ ಮಹೇಶ್ವರಃ ॥೬೦॥

ಮಾಹೇಶ್ವರತ್ರಯೋದಶ್ಯಾಂ ಪ್ರದೋಷಃ ಸಾರ್ವಮಾಸಿಕಃ ।
ತಸ್ಮಿನ್ನಭ್ಯರ್ಚನಂ ಶಂಭೋರನಂತಫಲದಂ ಮುನೇ ॥೬೧॥

ಮಂದವಾರಯುತೋ ಯಃ ಸ್ಯಾತ್ಪ್ರದೋಷೋ ರಜನೀಮುಖೇ ।
ತತ್ರಾಪಿ ಕೃಷ್ಣಪಕ್ಷೇ ಚ ಪ್ರಾಪ್ತೋ ದೈವೇನ ಲಭ್ಯತೇ ॥೬೨॥

ಸಪ್ತಮೀತಿಥಿಯ ಪ್ರದೋಷಕಾಲದಲ್ಲಿ ಶಿವಾರ್ಚನೆ ಮಾಡಿದವರಿಗೆ ತಿರ್ಯಗ್ಜಂತುಗಳ ಜನ್ಮವು ಎಂದೂ ಲಭಿಸುವುದಿಲ್ಲ. ಚತುರ್ಥೀದಿನದ ಪ್ರದೋಷಕಾಲದಲ್ಲಿ ಮತ್ತು ಚಂದ್ರೋದಯಕಾಲದಲ್ಲಿ ಶಿವನನ್ನು ಬಿಲ್ವಪತ್ರಾದಿಗಳಿಂದ ಅರ್ಚಿಸಿದವರಿಗೆ ಎಂದೂ ದಾರಿದ್ರ್ಯದುಃಖವು ಸಂಭವಿಸುವುದಿಲ್ಲ. ||೫೭-೫೮||

ಸಪ್ತಮೀ, ಚತುರ್ಥೀ, ತ್ರಯೋದಶೀ ಈ ತಿಥಿಗಳು ಸಾಯಂಕಾಲದಲ್ಲಿ ವ್ಯಾಪ್ತವಾಗಿರುವಾಗ ಪ್ರದೋಷವೆನ್ನುವರು. ಹೀಗೆ ಪ್ರದೋಷವು ಮೂರುದಿನದಲ್ಲಿ ಪ್ರಸಿದ್ಧವಾಗಿರುತ್ತದೆ. ತ್ರಯೋದಶೀಪ್ರದೋಷವು ಮಹೇಶ್ವರನಿಗೂ, ಸಪ್ತಮೀ ಪ್ರದೋಷವು ಸರಸ್ವತಿಗೂ, ಚತುರ್ಥೀಪ್ರದೋಷವು ಗಣಪತಿಗೂ ಶ್ರೇಷ್ಠವಾದುದೆಂದು ಹೇಳಲಾಗಿದೆ. ಆದರೆ ಶಿವಾರ್ಚನೆಗೆ ಈ ಮೂರು ಪ್ರದೋಷಕಾಲಗಳೂ ಅತ್ಯಂತ ಶ್ರೇಷ್ಠವಾದವುಗಳೇ. ||೫೯-೬೦||

ಮಾಹೇಶ್ವರವೆನಿಸಿದ ತ್ರಯೋದಶೀಪ್ರದೋಷವು ಎಲ್ಲಾ ತಿಂಗಳಲ್ಲಿಯೂ ಶ್ರೇಷ್ಠವೆನಿಸುವುದು. ಅದರಲ್ಲಿಯೂ ಕೃಷ್ಣಪಕ್ಷದಲ್ಲಿ ಶನಿವಾರಯುತವಾಗಿ ಬಂದರಂತೂ ಅತ್ಯಂತಶ್ರೇಷ್ಠವೆನಿಸುವುದು. ಆದಿವಸದಲ್ಲಿ ಶಂಕರಾರ್ಚನೆ ಮಾಡಬೇಕೆಂಬ ಬುದ್ಧಿ

ತಸ್ಮಿನ್ ಪ್ರದೋಷೇ ಲಿಂಗಾರ್ಚಾ ದೋಷಾದ್ರಿಭಿದುರಾಭವೇತ್ ।
ಗ್ರಹಣೇ ಸೋಮಸೂರ್ಯಾಣಾಂ ಸ್ನಾನದಾನಾರ್ಚನಂ ವಿಭೋಃ ॥೬೩॥

ಕುರ್ಯಾಜ್ಜಪಂ ಚ ಮಂತ್ರಾಣಾಂ ತಸ್ಮಿನ್ ಕಾಲೇ ಚ ಸಿದ್ಧಯೇ ।
ಸೂರ್ಯಗ್ರಹೇ ಕುರುಕ್ಷೇತ್ರೇ ಸ್ನಾನದಾನಂ ಶಿವಾರ್ಚನಂ ॥೬೪॥

ಪ್ರಶಸ್ಯತೇ ಮುನಿಶ್ರೇಷ್ಠ ಪುಷ್ಕರೇ ತು ಶಶಿಗ್ರಹೇ ।
ಯಮುನಾಗಂಗಯೋಃ ಸಂಧೌ ಗಂಗಾಸಾಗರಸಂಗಮೇ ॥೬೫॥

ಓಂಕಾರೇ ಭೃಗುತುಂದೇ ಚ ತಥೈವಾಮರಕಂಟಕೇ ।
ನರ್ಮದಾಸಾಗರೋಪಾಂತೇ ಗೋಕರ್ಣೇ ಪಶ್ಚಿಮಾಂಬುಧೌ ॥೬೬॥

ಕಾವೇರ್ಯುದಧಿಸಂಗೇ ಚ ತಾಮ್ರಾಸಾಗರಸಂಗಮೇ ।
ಧನುಷ್ಕೋಟೌ ಮುನಿಶ್ರೇಷ್ಠ ಕನ್ಯಾತೀರ್ಥೇ ನಿಮಜ್ಜನಾತ್ ॥೬೭॥

ಸೂರ್ಯೇಂದುಗ್ರಹಣೇ ಪುಣ್ಯೇ ಸ್ನಾನಂ ತೇಷು ಪ್ರಶಸ್ಯತೇ ।
ವಿಧಿಂ ಚ ತೇ ಪ್ರವಕ್ಷ್ಯಾಮಿ ಸೂರ್ಯೇಂದ್ವೋರ್ಗ್ರಹಣೇ ಮುನೇ ॥೬೮॥

---

ದೈವಯೋಗದಿಂದ ಲಭಿಸಬೇಕು. ಆದಿನ ಶಿವಾರಾಧನೆ ನಡೆಸುವುದರಿಂದ ಪಾಪ ಪರ್ವತವೇ ನಿರ್ಮೂಲವಾಗುವುದು. ||೬೧-೬೨-೬೩||

ಸೂರ್ಯಚಂದ್ರರ ಗ್ರಹಣಕಾಲದಲ್ಲಿ ಸ್ನಾನ, ದಾನ, ಶಿವಾರ್ಚನೆ, ಮಂತ್ರಜಪ, ಇವುಗಳನ್ನು ನಡೆಸುವುದರಿಂದ ಸಂಪೂರ್ಣವಾದ ಸಿದ್ಧಿಯು ಲಭಿಸುವುದು. ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣಕಾಲದಲ್ಲಿಯೂ, ಪುಷ್ಕರಕ್ಷೇತ್ರದಲ್ಲಿ ಚಂದ್ರಗ್ರಹಣಕಾಲದಲ್ಲಿಯೂ ಸ್ನಾನ, ದಾನ, ಶಿವಾರ್ಚನೆ ಇವುಗಳಿಂದ ವಿಶೇಷಫಲವು ದೊರೆಯುವುದು. ಗಂಗಾಯಮುನಾ ಸಂಗಮ, ಗಂಗಾಸಾಗರ ಸಂಗಮ, ಓಂಕಾರಕ್ಷೇತ್ರ, ಅಮರಕಂಟಕ, ನರ್ಮದಾಸಾಗರ ಸಂಗಮ, ಗೋಕರ್ಣಕ್ಷೇತ್ರ, ಪಶ್ಚಿಮ ಸಮುದ್ರ, ||೬೪-೬೫-೬೬|| ಕಾವೇರೀನದೀ ಸಮುದ್ರ ಸಂಗಮ, ತಾಮ್ರಪರ್ಣೀ ಸಾಗರ ಸಂಗಮ, ಧನುಷ್ಕೋಟಿ, ಕನ್ಯಾತೀರ್ಥ ಮುಂತಾದ ಕ್ಷೇತ್ರಗಳಲ್ಲಿ ಸೂರ್ಯಚಂದ್ರಗ್ರಹಣ ಕಾಲದಲ್ಲಿ ಸ್ನಾನ ಮಾಡುವುದು ಅತ್ಯಂತ ಪುಣ್ಯಪ್ರದ. ಆ ಸ್ನಾನವಿಧಿಯನ್ನು ನಾನು ವಿವರಿಸಿ ಹೇಳುವೆನು. ನಿತ್ಯಕರ್ಮ, ನೈಮಿತ್ತಿಕ ಕರ್ಮ, ಕಾಮ್ಯಕರ್ಮ ಜಪ, ಹೋಮಸ್ನಾನಾದಿಗಳು ಇವುಗಳಲ್ಲಿ ಯಾವುದನ್ನು ಆಚರಿಸಿದರೂ, ಶಿವಾರ್ಚನೆಯಿಂದಲೇ ಮಹಾ

ನಿತ್ಯನೈಮಿತ್ತಿಕೇ ಕಾಮ್ಯೇ ಜಪಹೋಮಾಂಬುಮಜ್ಜನೇ ।
ಶಿವಾರ್ಚನೇನ ವಿಧಿವನ್ಮಹಾದಾನಮನಂತಕಂ ॥೧೯॥

ಕೂಪಾಚ್ಛತಗುಣಂ ವಾಪ್ಯಾಂ ನದ್ಯಾಂ ಸ್ನಾನಂ ತತೋಽಧಿಕಂ ।
ಸಾಗರೇಽಪಿ ತತೋ ವಿಪ್ರ ನದೀಸಂಗೇ ತತೋಽಧಿಕಂ ॥೨೦॥

ಶಿವಸ್ಯ ಸನ್ನಿಧೌ ಸ್ನಾನಂ ತತೋಽಪಿ ಗುಣವತ್ತರಂ ।
ಆತುರಃ ಕೋಷ್ಣತೋಯೇನ ಸ್ನಾಯಾದ್ಗ್ರಹಣಯೋರ್ದ್ವಯೋಃ ॥೨೧॥

ವೈಷ್ಣವಾನ್ ಸ್ಕಾಂದಗಾಣೇಶಾನ್ ಶೈವಾಂಛಾಕ್ತಾನ್ ಜಪೇನ್ಮನೂನ್ ।
ಮಂತ್ರಸಂಗ್ರಹಣಂ ಕುರ್ಯಾದ್ಗ್ರಹಣೇ ಸೋಮಸೂರ್ಯಯೋಃ ॥೨೨॥

ಏಕಾವೃತ್ತ್ಯಾದಿ ಮಂತ್ರಾಣಾಂ ಲಕ್ಷಾವೃತ್ತಿಫಲಂ ಲಭೇತ್ ।
ಪಿತೄನ್ ಸಂತರ್ಪಯೇಚ್ಛ್ರಾದ್ಧೈರ್ನಕ್ತೇಽಪಿ ಚ ಮುನೀಶ್ವರಃ ॥೨೩॥

ಸರ್ವಂ ಗಂಗಾಸಮಂ ತೋಯಂ ಸರ್ವೇ ಶಿವಸಮಾ ದ್ವಿಜಾಃ ।
ಸರ್ವಂ ಮೇರುಸಮಂ ದಾನಂ ಗ್ರಹಣೇ ಸೋಮಸೂರ್ಯಯೋಃ ॥೨೪॥

ದಾನವು ವಿಶೇಷ ಫಲವು ಪೂರ್ಣವಾಗಿ ದೊರೆಯಬೇಕು. ಶಿವಾರ್ಚನೆಯಿಂದಲೇ ಮಹಾದಾನವು ವಿಶೇಷ ಫಲವನ್ನು ಕೊಡುವ ಶಕ್ತಿಯುಳ್ಳದ್ದಾಗುವುದು. ||೧೭-೧೮-೧೯||

ಸ್ನಾನದ ವಿಷಯದಲ್ಲಿ ಬಾವಿಗಿಂತ ಕಲ್ಯಾಣಿ ಶ್ರೇಷ್ಠವಾದುದು. ಅದಕ್ಕಿಂತ ನದೀಸ್ನಾನ, ಅದಕ್ಕಿಂತಲೂ ಸಾಗರಸ್ನಾನ ಉತ್ತಮವಾದವುಗಳು. ಇವುಗಳಿಗಿಂತಲೂ ನದೀಸಂಗಮವು ಶ್ರೇಷ್ಠವಾದುದು. ನದೀಸಂಗಮಕ್ಕಿಂತಲೂ ಶಿವಸನ್ನಿಧಿಯು ಅತ್ಯಂತ ಪುಣ್ಯಪ್ರದವಾದುದು. ರೋಗಿಯಾದವನು ಶಿವಸನ್ನಿಧಿಯಲ್ಲಿ ಸೂರ್ಯಚಂದ್ರಗ್ರಹಣ ಕಾಲದಲ್ಲಿ ಬಿಸಿನೀರಿನಲ್ಲಾದರೂ ಸ್ನಾನಮಾಡಬಹುದು. ಗ್ರಹಣಕಾಲದಲ್ಲಿ ವಿಷ್ಣು, ಕುಮಾರಸ್ವಾಮಿ, ಗಣಪತಿ, ಶಿವ, ಶಕ್ತಿ ಮುಂತಾದ ದೇವತಾಪ್ರಧಾನವಾದ ಮಂತ್ರಗಳನ್ನು ಉಪದೇಶ ಹೊಂದಬೇಕು. ಅದರಿಂದ ಮಂತ್ರಫಲವು ಸಿದ್ಧಿಸುವುದು. ||೨೦-೨೧||

ಆ ಗ್ರಹಣಕಾಲದಲ್ಲಿ ಮಂತ್ರವನ್ನು ಒಂದು ಸಾರಿ ಉಚ್ಚರಿಸಿದರೂ ಲಕ್ಷಸಾರಿ ಜಪಿಸಿದಷ್ಟು ಸುಕೃತವು ಲಭಿಸುವುದು. ಆದಿನ ರಾತ್ರಿಯ ಹೊತ್ತಿನಲ್ಲಾದರೂ

ಮಂತ್ರಸಿದ್ಧಿಕರಂ ಸ್ಥಾನಂ ನದ್ಯಾಂ ಪರ್ವತಮಸ್ತಕೇ ।
ವಿಪಿನೇ ಚ ಶಿವಾಗಾರೇ ದೇವಬ್ರಾಹ್ಮಣಸನ್ನಿಧೌ ॥೭೫॥

ಬಿಲ್ವಮೂಲೇ ಬಿಲ್ವಪತ್ರೈರ್ಗ್ರಹಣೇ ಲಿಂಗಮರ್ಚಯೇತ್ ।
ತತ್ರ ಸಂಪೂಜ್ಯ ಯಲ್ಲಭ್ಯೇತ್ಫಲಂ ತಲ್ಲಕ್ಷಹಾಯನಂ ॥೭೬॥

ರುದ್ರೇಣ ಚೈವ ಗಾಯತ್ರ್ಯಾ ತಥಾ ಪಂಚಾಕ್ಷರಾಣಿ ಚ ।
ರೋಗಾರ್ತಾನಾಯುಷೋ ವೃದ್ಧ್ಯೈ ಹೋಮಯೇಚ್ಚ ಗಲೂಷಿಭಿಃ(?) ॥೭೭॥

ಸಹಸ್ರಂ ಪರಮಂ ಶ್ರೇಷ್ಠಂ ಶತಾಷ್ಟೋತ್ತರಮೇವ ವಾ ।
ನದೀತೋಯೇನ ಸಂಪೂರ್ಣಂ ಘಟಂ ಸಂಸ್ಪೃಶ್ಯ ಶೋಭನಂ ॥೭೮॥

ರುದ್ರಾವೃತ್ತಿಜಲೇ ಸ್ನಾತ್ವಾ ರೋಗೈಃ ಪಾಪೈಃ ಪ್ರಮುಚ್ಯತೇ ।
ಮಂತ್ರಾನ್ ಪಂಚಾಕ್ಷರಂ ವಾಪಿ ಗಾಯತ್ರೀಂ ವೇದಮಾತರಂ ॥೭೯॥

ಯಾವದ್ಗ್ರಹಣಮೋಕ್ಷಂ ತು ತಾವನ್ನದ್ಯಾಂ ಸಮಾಹಿತಃ ।
ಜಪೇತ್ಸಮುದ್ರಗಾಮಿನ್ಯಾಂ ಪುರಶ್ಚರ್ಯಾಫಲಂ ಲಭೇತ್ ॥೮೦॥

ಶ್ರಾದ್ಧಗಳನ್ನು ನಡೆಸಿ ಪಿತೃಗಳನ್ನು ತೃಪ್ತಿಪಡಿಸಬೇಕು. ಗ್ರಹಣಕಾಲದಲ್ಲಿ ಎಲ್ಲ ನೀರೂ ಗಂಗಾಸದೃಶವಾಗುವುದು. ದ್ವಿಜರೆಲ್ಲರೂ ಶಂಕರನಿಗೆ ಸಮರೆನಿಸುವರು. ಅಲ್ಪವಸ್ತುವಿನ ದಾನವೂ ಮೇರುಪರ್ವತದ ದಾನದಂತಾಗುವುದು. ||೭೩-೭೪||

ನದೀದಡ, ಪರ್ವತಶಿಖರ, ಅರಣ್ಯಪ್ರದೇಶ, ಶಿವಾಲಯ, ದೇವಬ್ರಾಹ್ಮಣ ಸನ್ನಿಧಿ, ಬಿಲ್ವಮೂಲ, ಬಿಲ್ವಪತ್ರಸಮೀಪ ಈ ಸ್ಥಳಗಳಲ್ಲಿ ಗ್ರಹಣಕಾಲದಲ್ಲಿ ಮಂತ್ರವನ್ನು ಪುರಶ್ಚರಣೆಮಾಡಬೇಕು. ಆ ದಿನದಲ್ಲಿ ಮಂತ್ರಪುರಶ್ಚರಣೆ ಮಾಡಿದರೆ ಅದು ಲಕ್ಷವರ್ಷಪರ್ಯಂತ ಫಲಕೊಡುವುದು. ರೋಗನಿವಾರಣೆಗೂ, ಆಯುರ್ವೃದ್ಧಿಗೂ, ಪೀಡಾಪರಿಹಾರಕ್ಕೂ ಗ್ರಹಣಕಾಲದಲ್ಲಿ ರುದ್ರಗಾಯತ್ರೀ, ಶಿವಪಂಚಾಕ್ಷರೀ ಮಂತ್ರ ಇವುಗಳಿಂದ ಅಮೃತಬಳ್ಳಿಯ ಹೋಮಮಾಡಬೇಕು. ||೭೫-೭೬-೭೭||

ನದೀನೀರಿನಿಂದ ತುಂಬಿದ ಕಲಶವನ್ನು ರುದ್ರಮಂತ್ರಗಳಿಂದ ಅಭಿಮಂತ್ರಿಸಿ, ಸಾವಿರ ಅಥವಾ ನೂರೆಂಟು ಸಂಖ್ಯೆಗಳಿಂದ ಹೋಮಮಾಡಿ ಅನಂತರ ರುದ್ರಾವೃತ್ತಿ ಪೂರ್ವಕವಾಗಿ ಆ ಕಲಶೋದಕದಿಂದ ಸ್ನಾನಮಾಡಬೇಕು. ಮತ್ತು ಗ್ರಹಣಸ್ಪರ್ಶದಿಂದ ಮೋಕ್ಷಪರ್ಯಂತವಾಗಿ ಗಾಯತ್ರೀಮಂತ್ರವನ್ನು ಸಮುದ್ರಗಾಮಿನಿಯಾದ

ಚರೇ ವಾ ಸ್ಥಾವರೇ ವಾಪಿ ತುಂಗೇ ಲಿಂಗೇ ಶಿವಾರ್ಚಕಃ ।
ಗ್ರಹಣೇ ಸೋಮಸೂರ್ಯಾಣಾಂ ಯೋ ಮಹಾಸ್ನಾನಕಾರಕಃ ॥೪೧॥

ಪಂಚಾಮೃತೈಃ ಪಂಚಗವ್ಯೈಸ್ತಥಾ ಫಲರಸೈರಪಿ ।
ಘೃತಾಭ್ಯಂಗಘೃತಸ್ನಾನಂ ಗ್ರಹಣೇತೀವ ಪುಣ್ಯದಂ ॥೪೨॥

ಶಿವಸಂತೋಷದಂ ವಿಪ್ರ ಗಾಣಾಪತ್ಯಪ್ರದಂ ಪರಂ ।
ತೌರ್ಯತ್ರಿಕಂ ಧೂಪದೀಪಂ ಪುಷ್ಪಗಂಧಾನುಲೇಪನಂ ॥೪೩॥

ಬಿಲ್ವಮಾಲಾರ್ಪಣಂ ಶಂಭೋಃ ಪುಣ್ಯಂ ನೀರಾಜನಂ ವಿಭೋಃ ।
ಕುರ್ಯಾದ್ಯೋ ಗ್ರಹಣೇ ವಿಪ್ರ ಸರ್ವಾನ್ ಕಾಮಾನವಾಪ್ನುಯಾತ್॥೪೪॥

॥ ಶ್ರೀ ಸ್ಕಂದ ಉವಾಚ ॥

ಕಶ್ಚಿತ್ಪೂಜಯತೇ ಭಕ್ತ್ಯಾ ಕಶ್ಚಿತ್ಪೂಜಾಂ ಪ್ರಪಶ್ಯತಿ ।
ತಯೋಃ ಸಮಫಲಂ ಜ್ಞೇಯಂ ಗ್ರಹಣೇ ಲಿಂಗದರ್ಶನಾತ್ ॥೪೫॥

ನದಿಯಲ್ಲಿ ನಿಂತು ಪುರಶ್ಚರಣೆ ಮಾಡಿದರೆ ವಿಶೇಷ ಸಿದ್ಧಿಯನ್ನು ಪಡೆಯಬಹುದು. ॥೩೮-೩೯-೪೦॥

ಗ್ರಹಣಕಾಲಗಳಲ್ಲಿ ಚರಲಿಂಗಕ್ಕಾಗಲಿ ಸ್ಥಿರಲಿಂಗಕ್ಕಾಗಲಿ ಪಂಚಾಮೃತಗಳಿಂದಲೂ ಪಂಚಗವ್ಯಗಳಿಂದಲೂ, ಫಲರಸಗಳಿಂದಲೂ, ಅದರಲ್ಲಿಯೂ ತುಪ್ಪದ ಧಾರೆಯಿಂದ ಮಹಾಭಿಷೇಕವೆಸಗುವುದು ವಿಶೇಷ ಪುಣ್ಯಪ್ರದವಾದುದು. ಶಿವಾರ್ಚಕನು ತಪ್ಪದೆ ಗ್ರಹಣಕಾಲಗಳಲ್ಲಿ ಅಭಿಷೇಕಪೂರ್ವಕವಾಗಿ ಶಿವನನ್ನು ಆರಾಧಿಸಬೇಕು. ॥೪೧-೪೨॥

ಗ್ರಹಣಕಾಲದಲ್ಲಿ ಶಿವನನ್ನು ಸಂತೋಷಪಡಿಸುವುದರಿಂದ ಶಿವಗಾಣಾಪತ್ಯವು ಲಭಿಸುವುದು. ಶಂಭುವಿಗೆ ಧೂಪ, ದೀಪ, ಪುಷ್ಪ, ಗಂಧ, ಬಿಲ್ವಮಾಲೆ, ತುತ್ತೂರಿಯಧ್ವನಿ ಇವುಗಳನ್ನು ಸಮರ್ಪಿಸಿ ಗ್ರಹಣಕಾಲದಲ್ಲಿ ಭಕ್ತಿಯಿಂದ ಯಾವನು ಮಹಾಮಂಗಳಾರತಿಯನ್ನು ಬೆಳಗುವನೋ ಅವನು ಸಕಲವಿಧವಾದ ಇಷ್ಟಾರ್ಥಗಳನ್ನೂ ಪಡೆಯುವನು. ॥೪೩-೪೪॥

ಗ್ರಹಣಕಾಲದಲ್ಲಿ ಶಿವಲಿಂಗವನ್ನು ಪೂಜಿಸಿದವನಿಗೂ, ಪೂಜಿತವಾದ ಶಿವಲಿಂಗವನ್ನು ದರ್ಶನಮಾಡಿದವನಿಗೂ ಸಮನಾದ ಪುಣ್ಯವು ಲಭಿಸುವುದು. ಆ

ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ।
ಸಹಸ್ರವಾರ್ಷಿಕೀಂ ಪೂಜಾಂ ಗ್ರಹಣೇ ಪೂಜಕೋ ಲಭೇತ್ ॥೮೬॥

ಸಂಕ್ರಾಂತಿಷು ಕ್ರಾಂತಿರುಜಂ ನ ಲಭೇತ್
ಪಾತೇಷ್ವಥಾಭ್ಯರ್ಚ್ಯ ನ ಪತೇನ್ನಿರಯೇ ಕದಾಚಿತ್ ।
ನೈವಾಧೃತಿಂ ಸ ಲಭೇದ್ದ್ವಿಜ ವೈಧೃತೀಷು
ಮುಕ್ತಿಃ ಕರಗ್ರಹಣಕೃದ್ಗ್ರಹಣೇ ಶಿವಂ ಹಿ ॥೮೭॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ನಿತ್ಯನೈಮಿತ್ತಿಕ ಶಿವರಾತ್ರಿ ಪ್ರದೋಷ ಏಕಾದಶೀ ದ್ವಾದಶಸಂಕ್ರಮಣಗ್ರಹಣಕಾಲ ಪೂಜಾವಿವರಣಂ ನಾಮ ಸಪ್ತತ್ರಿಂಶೋಽಧ್ಯಾಯಃ

---

ಸಮಯದಲ್ಲಿ ಮಾಡಿದ ಪೂಜಾಫಲದಿಂದ ಬ್ರಹ್ಮಹತ್ಯೆಯೇ ಮೊದಲಾದ ಮಹಾ ಪಾಪಗಳೂ ಪರಿಹಾರವಾಗುವುವು. ಆ ಒಂದು ಸಮಯದಲ್ಲಿ ಮಾಡಿದ ಅರ್ಚನೆಯು ಸಹಸ್ರವರ್ಷ ಶಿವಾರ್ಚನೆಯ ಫಲವನ್ನು ಒದಗಿಸಿಕೊಡುವುದು. ಇದರಲ್ಲಿ ಸಂಶಯವಿಲ್ಲ. ಸಂಕ್ರಮಣ ಕಾಲದಲ್ಲಿ ಶಿವಾರ್ಚನೆಮಾಡುವುದರಿಂದ ಸಮಸ್ತ ರೋಗಾದ್ಯುಪದ್ರವಗಳು ಪರಿಹಾರವಾಗುತ್ತವೆ. ಮಹಾಪಾತವೆನಿಸಿದ ವ್ಯತೀಪಾತದಲ್ಲಿ ಶಿವಾರ್ಚನೆಮಾಡುವುದರಿಂದ ನರಕಪಾತವು ಸಂಭವಿಸುವುದಿಲ್ಲ. ವೈಧೃತೀ ಸಮಯದ ಶಿವಾರ್ಚನೆಯಿಂದ ಧೈರ್ಯ ನಾಶವಾಗುವುದಿಲ್ಲ. ಗ್ರಹಣಕಾಲದಲ್ಲಿ ಶಿವಾರಾಧನೆ ನಡೆಸುವುದರಿಂದ ಸಾಕ್ಷಾನ್ಮುಕ್ತಿಯೇ ಕರಗತವಾಗುವುದು ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಸಿದನು. ||೮೫-೮೬-೮೭||

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಅಷ್ಟಾವಿಂಶೋಽಧ್ಯಾಯಃ

|| ಮುನಿರುವಾಚ ||

ರಹಸ್ಯಮನ್ಯದ್ವದ ಮೇ ಸ್ವಾಮಿನ್ ಶಂಭುತನೂಭವ ।
ವ್ರತೇಷು ಕೇಷು ಚೀರ್ಣೇಷು ಪ್ರೀತೋ ಭವತಿ ಶಂಕರಃ ॥೧॥

ಸಹೈಭಿರ್ಮುನಿಭಿಶ್ಚೈವ ಗಣೈಃ ಸುರಗಣೈರಪಿ ।
ಶ್ರವಣೇನ ಧೃತಂ ಮೇದ್ಯ ಮನಶ್ಶಿವಕಥಾಮೃತಂ ॥೨॥

ಇತ್ಥಂ ಜೈಗೀಷವಾಕ್ಯೇನ ನಂದಿತಾತ್ಮಾ ಹರಾತ್ಮಜಃ ।
ಪ್ರಾಹ ತಂ ತಾರಕಾರಾತಿಃ ಶಿವಪ್ರೀತಿಕರಂ ವ್ರತಂ ॥೩॥

## ಇಪ್ಪತ್ತೆಂಟನೆಯ ಅಧ್ಯಾಯ

ಸ್ವಾಮಿಯೇ, ಯಾವ ವ್ರತಾಚರಣೆಯಿಂದ ಪರಶಿವನ ಅನುಗ್ರಹವು ಸುಲಭವಾಗಿ ದೊರೆಯುವುದು ಎಂಬ ಈ ರಹಸ್ಯವನ್ನು ಪರಶಿವಪುತ್ರನಾದ ನೀನು ಇಲ್ಲಿ ನೆರೆದಿರುವ ದೇವತೆಗಳ ಮತ್ತು ಮುನಿಗಳ ಮನಶ್ಶಾಂತಿಗಾಗಿಯೂ, ಲೋಕಕಲ್ಯಾಣಕ್ಕಾಗಿಯೂ ನಮಗೆ ಉಪದೇಶಿಸು. ಶಿವಕಥಾಮೃತರೂಪವಾದ ಇದನ್ನು ಕೇಳುವುದರಿಂದಲೇ ನಮಗೆ ಆನಂದವಾಗುವುದು. ಎಂದು ಜೈಗೀಷವ್ಯಮಹಾಮುನಿಯು ಕುಮಾರಸ್ವಾಮಿಯನ್ನು ಪ್ರಾರ್ಥಿಸಿಕೊಳ್ಳಲು, ||೧-೩||

|| ಸೂತ ಉವಾಚ ||

ಶೃಣುಷ್ವ ಮುನಿಶಾರ್ದೂಲ ತ್ರಿಪುರಾರಿಪ್ರಿಯವ್ರತಂ ।
ಪ್ರತ್ಯೇಕಂ ಸಾವಧಾನೇನ ಗಣ್ಯೈಶ್ಚ ಮುನಿಭಿಸ್ಸರ್ವೈಃ ॥೪॥

|| ಶ್ರೀ ಸ್ಕಂದ ಉವಾಚ ||

ಕೈಲಾಸೇ ಶಂಕರೇಣೈವ ಪ್ರೋಕ್ತಾನಿ ಪ್ರೀತಿದಾನಿ ತು ।
ಗಿರಿಜಾಯೈ ವಿಶೇಷೇಣ ಮಯಾ ತತ್ರ ಶ್ರುತಾನಿ ಹಿ ॥೫॥

ಕೈಲಾಸಶೈಲಮಂಚಸ್ಥಾ ಪಾರ್ವತೀ ಪೃಚ್ಛತೀಶ್ವರಂ ।
ಪ್ರಾಂಜಲಿರ್ವಿನಯೋಪೇತಾ ತ್ರಿಕಾಲಜ್ಞಾ ತ್ರಿಲೋಚನಂ ॥೬॥

|| ಪಾರ್ವತ್ಯುವಾಚ ||

ದೇವದೇವ ಮಹಾದೇವ ತ್ರಿಕಾಲಜ್ಞ ತ್ರಿಲೋಚನ ।
ಕಿಂ ತವ ಪ್ರೀತಿಕೃಚ್ಛಂಭೋ ವ್ರತಂ ಸರ್ವಾಘನಾಶನಂ ॥೭॥

---

ಆಗ ಕುಮಾರಸ್ವಾಮಿಯು ಜೈಗೀಷವ್ಯನ ಪ್ರಾರ್ಥನೆಗೆ ಸಂತೋಷಪಟ್ಟು ಶಿವಪ್ರೀತಿಕರವಾದ ವ್ರತವನ್ನು ವಿವರಿಸಲಾರಂಭಿಸಿದನು. ಶೌನಕಾದಿಮಹಾಮುನಿಗಳೇ, ಅದನ್ನೇ ನಿಮಗೆ ಈಗ ತಿಳಿಯಹೇಳುವೆನು ಎಂದು ಸೂತಮಹರ್ಷಿಗಳು ಕುಮಾರೋಕ್ತಿಯನ್ನು ಅನುವಾದಮಾಡತೊಡಗಿದರು. ||೩-೪||

ಜೈಗೀಷವ್ಯಾದಿಗಳೇ, ತ್ರಿಪುರನಾಶಕನಾದ ಪರಶಿವನಿಗೆ ಪ್ರಿಯವೆನಿಸಿದ ಉತ್ತಮವ್ರತವಿಧಾನವನ್ನು ನಿಮಗೆಲ್ಲರಿಗೂ ತಿಳಿಯುವಂತೆ ಹೇಳುವೆನು. ಸಾವಧಾನದಿಂದ ಲಾಲಿಸಿರಿ. ಹಿಂದೆ ಸಾಕ್ಷಾತ್ಪರಶಿವನೇ ಪಾರ್ವತಿಗೆ ವಿಶೇಷರೀತಿಯಿಂದ ಹೇಳಿದ್ದನ್ನು ನಾನು ಅಲ್ಲಿಯೇ ಇದ್ದು ಕೇಳಿರುವೆನು. ಒಂದು ದಿನ ಕೈಲಾಸಗಿರಿಯಲ್ಲಿ ಎತ್ತರವಾದ ಆಸನದಲ್ಲಿ ಪರಶಿವನೊಡನೆ ಕುಳಿತಿದ್ದ ಪಾರ್ವತಿಯು ಪರಶಿವನನ್ನು ನೋಡುತ್ತಾ, ವಿನಯಾವನತಳಾಗಿ ಕೈಜೋಡಿಸಿಕೊಂಡು ತ್ರಿಲೋಚನನ್ನು ಈರೀತಿ ಪ್ರಾರ್ಥಿಸಿಕೊಂಡಳು. ||೫-೬||

"ಮಹಾದೇವನೇ, ದೇವದೇವನೇ, ಭೂತಭವಿಷ್ಯದ್ವರ್ತಮಾನ ವಿಷಯಗಳನ್ನು ಅರಿತವನೇ, ನಿನಗೆ ಅತ್ಯಂತಪ್ರೀತಿಕರವಾಗಿಯೂ, ಪಾಪನಾಶಕವಾಗಿಯೂ,

ಪುಮರ್ಥದಾಯಕಂ ಶರ್ವ ಸರ್ವೇಷಾಂ ಕಥಯಸ್ವ ಮೇ ।
ತಸ್ಯಾಸ್ತದ್ವದನಾಂಭೋಜಂ ಪೀತ್ವಾ ಲೋಚನಷಟ್ಪದೈಃ ॥೮॥

ಪ್ರಾಹ ದೇವೀಂ ವಿರೂಪಾಕ್ಷಃ ಪ್ರತ್ಯಕ್ಷಮುಪದತ್ವ್ರತಂ ॥೯॥
ಶೃಣು ಪದ್ಮಪಲಾಶಾಕ್ಷಿ ವ್ರತಂ ಮೇ ಪ್ರೀತಿದಾಯಕಂ ।

॥ ಶ್ರೀ ಶಿವ ಉವಾಚ ॥

ಸಾಧು ಸಾಧು ಮಹಾಪ್ರಾಜ್ಞೇ ಸರ್ವಲೋಕೋಪಕಾರಕೇ ॥೧೦॥
ಯನ್ನ ಕಸ್ಯಚಿದಾಖ್ಯಾತಂ ತದದ್ಯ ಕಥಯಾಮಿ ತೇ ।

ಸರ್ವಕಾಮಪ್ರದಂ ದಿವ್ಯಂ ಸರ್ವರೋಗನಿವಾರಕಂ ॥೧೧॥
ಬ್ರಹ್ಮವಿಷ್ಣ್ವಾದಿಭಿರ್ದೇವೈಃ ಕೃತಮೇತನ್ಮಹಾವ್ರತಂ ।

ನರೋ ವಾ ಯದಿ ವಾ ನಾರೀ ದ್ವಿಜೋ ವಾಪ್ಯಂತ್ಯಜೋಽಥವಾ ॥೧೨॥

ಕೃತ್ವಾ ವ್ರತಮಿದಂ ದಿವ್ಯಂ ಮಮ ಲೋಕಂ ಸ ವಿಂದತಿ ।
ಸರ್ವೇಷ್ವಪಿ ಚ ಮಾಸೇಷು ಪ್ರಶಸ್ತಂ ಸರ್ವಕಾಮದಂ ॥೧೩॥

---

ಪುರುಷಾರ್ಥಪ್ರದವಾಗಿಯೂ ಇರುವ ಉತ್ತಮೋತ್ತಮ ವ್ರತವೊಂದನ್ನು ನನಗೆ ತಿಳಿಸುವವನಾಗು,'' ಎಂದು ಪ್ರಾರ್ಥಿಸುತ್ತಿರಲು, ಶಂಕರನು ದೇವಿಯ ಮುಖಕಮಲವನ್ನು ಆನಂದದಿಂದ ನೋಡುತ್ತಾ ಪ್ರೀತಿಯಿಂದ ದೇವಿಯೊಡನೆ ಹೀಗೆಂದನು. ||೭-೮-೯||

ಪದ್ಮಪತ್ರದಂತೆ ವಿಶಾಲವಾದ ನೇತ್ರವುಳ್ಳವಳೇ, ಸರ್ವಲೋಕೋಪಕಾರಕಳಾದ ಮಹಾಪ್ರಾಜ್ಞೆಯೇ, ಇಲ್ಲಿನವರೆಗೂ ಯಾರಿಗೂ ಹೇಳದಿದ್ದ ವ್ರತವಿಧಾನವನ್ನು ನಿನಗೆ ಈಗ ಹೇಳುವೆನು. ನಾನು ಹೇಳುವವ್ರತವು ಸರ್ವಕಾಮಪ್ರದವಾದುದು. ಸಕಲರೋಗನಾಶಕವಾದದ್ದು. ಬ್ರಹ್ಮ, ವಿಷ್ಣು ಮೊದಲಾದ ದೇವಶ್ರೇಷ್ಠರಿಂದ ಆಚರಿತವಾದದ್ದು. ಗಂಡಸಾಗಲಿ, ಹೆಂಗಸಾಗಲಿ, ಬ್ರಾಹ್ಮಣಸಾಗಲಿ, ಚಂಡಾಲನಾಗಲಿ ಈ ವ್ರತವನ್ನು ಸಂಶಯವಿಲ್ಲದೆ ಮಾಡಬಹುದು. ||೧೦-೧೧-೧೨||

ಈ ವ್ರತವನ್ನು ಮಾಡಿದವರಿಗೆ ಶಿವಲೋಕವು ಪ್ರಾಪ್ತವಾಗುವುದು. ಎಲ್ಲ ಮಾಸಗಳಲ್ಲಿಯೂ ಈ ವ್ರತವು ಉತ್ತಮವೆನಿಸಿದೆ. ಇದಕ್ಕೆ ಸೋಮವ್ರತವೆಂದು

ವಯಂ ಸೋಮವ್ರತೇನೇತಿ ಸ್ತುತಂ ವೇದೈರ್ಮಹೇಶ್ವರಿ ।
ಸೋಮವಾರವ್ರತಂ ದಿವ್ಯಂ ದ್ವಿಜಾನಾಮೇವ ಕೇವಲಂ ॥೧೪॥

ನರಾಣಾಮಥ ನಾರೀಣಾಂ ಸೌಭಾಗ್ಯಾರೋಗ್ಯವರ್ಧನಂ ।
ಶ್ರಾವಣೇ ಕಾರ್ತಿಕೇ ವಾಪಿ ಗೃಹೀತನಿಯಮೋ ವ್ರತೀ ॥೧೫॥

ಪೂಜಯೇನ್ಮಾಂ ಮಹಾದೇವಿ ಸೋಽಚಿರಾನ್ಮುಕ್ತಿಭಾಗ್ಭವೇತ್ ॥೧೬॥

॥ ದೇವ್ಯುವಾಚ ॥

ಕಥಂ ಸೋಮವ್ರತಂ ಕಾರ್ಯಂ ಕೋ ವಿಧಿಃ ಪೂಜನಂ ಕಥಂ ।
ಕಸ್ಮಿನ್ ಕಾಲೇ ಚ ಕರ್ತವ್ಯಂ ಸರ್ವಂ ವಿಸ್ತರತೋ ವದ ॥೧೭॥

ಶ್ರಾವಣೇಽಸ್ಮಿನ್ ವರೇ ಮಾಸಿ ತ್ವತ್ಪಿತುರ್ಮೌಲಿಸಂಸ್ಥಿತಂ ।
ಕೇದಾರೇಶಮಹಾಲಿಂಗಂ ಸನ್ನಿಧೌ ನಿಯಮಾದ್ವ್ರತೀ ॥೧೮॥

ಸಂಕಲ್ಪ್ಯ ವತ್ಸರಂ ವಾಪಿ ತ್ರೀಣಿ ದ್ವಾದಶ ವಾಂಬಿಕೇ ।
ಸಂಕಲ್ಪ್ಯ ಬ್ರಾಹ್ಮಣೈಸ್ಸಾರ್ಧಂ ವ್ರತಮೇತತ್ಸಮಾಚರೇತ್ ॥೧೯॥

---

ಹೆಸರು. ವೇದದಲ್ಲಿಯೂ ಈ ವ್ರತವು ಶಿವಪ್ರೀತಿಕರವಾದುದೆಂದು ಉಕ್ತವಾಗಿದೆ. ಆದರೆ ಈ ವ್ರತವನ್ನು ದ್ವಿಜರೆನಿಸಿದವರು ಮಾತ್ರ ಮಾಡಬೇಕು. ॥೧೩-೧೪॥

ಸ್ತ್ರೀಪುರುಷರೆಲ್ಲರಿಗೂ, ಸೌಭಾಗ್ಯವನ್ನೂ ಆರೋಗ್ಯವನ್ನೂ ಹೆಚ್ಚಿಸತಕ್ಕದು ಈ ವ್ರತವು. ಶ್ರಾವಣ ಅಥವಾ ಕಾರ್ತಿಕಮಾಸದಲ್ಲಿ ಈ ವ್ರತವನ್ನು ಆಚರಿಸಿದವರಿಗೆ ಜಾಗ್ರತೆಯಾಗಿ ಮೋಕ್ಷವು ಲಭಿಸುವುದು. ಎಂದು ಶಂಕರನು ಹೇಳುತ್ತಿರುವಂತೆಯೇ ದೇವಿಯು ಪತಿಯನ್ನು ಕುರಿತು, ಸ್ವಾಮಿ, ಇದನ್ನು ಮಾಡುವ ಕ್ರಮವೆಂತು? ಇದರ ವಿಧಾನ ಹೇಗೆ? ಪೂಜಾಕ್ರಮವು ಯಾವರೀತಿ? ಈ ವ್ರತಕ್ಕೆ ಕಾಲವಾವುದು? ದಯೆಯಿಟ್ಟು ವಿಸ್ತಾರವಾಗಿ ಇದನ್ನು ಹೇಳಬೇಕು,' ಎಂದು ಕೇಳಿಕೊಳ್ಳಲು, ಶಂಕರನು ಮತ್ತೆ ಹೀಗೆಂದನು. ॥೧೫-೧೬-೧೭॥

ದೇವಿಯೇ ಕೇಳು. ನಿನ್ನ ತಂದೆಯಾದ ಹಿಮಗಿರಿಯ ಶಿಖರದಲ್ಲಿರುವ ಕೇದಾರೇಶ್ವರಸ್ವಾಮಿಯ ಸನ್ನಿಧಿಯಲ್ಲಿ ಕುಳಿತು, ಶ್ರಾವಣಮಾಸದಲ್ಲಿ ನಿಯಮದಿಂದ ಸಂಕಲ್ಪಮಾಡಬೇಕು. ಹನ್ನೆರಡುವರ್ಷ, ಮೂರುವರ್ಷ, ಅಥವಾ ಒಂದು ವರ್ಷ

ಅಸ್ಯ ಕೇದಾರನಾಥಸ್ಯ ಶ್ರಾವಣೇ ಸೋಮವಾಸರೇ ।
ಪೂಜಾ ಕಾರ್ಯಾ ವಿಶೇಷೇಣ ಸಾಧನೈರ್ವಿವಿಧೈಃ ಶುಭೈಃ ॥೨೦॥

ಸೋಮವಾರವ್ರತಂ ಕಾರ್ಯಂ ಪ್ರಯತ್ನೇನ ಯಥಾವಿಧಿ ।
ಬ್ರಾಹ್ಮಣೈರೇವ ನಿಯಮಾದಾಜನ್ಮಾಂತಂ ಮಹೇಶ್ವರಿ ॥೨೧॥

ಶಕ್ತೇನೋಪೋಷಣಂ ಕಾರ್ಯಮನ್ಯಥಾ ನಿಶಿ ಭೋಜನಂ ।
ಉಪವಾಸೀ ಪೂಜಯೇನ್ಮಾಂ ರಾತ್ರೌ ಯಾಮಚತುಷ್ಟಯಂ ॥೨೨॥

ಪರೇದ್ಯುರ್ಮಾಂ ಸಮಭ್ಯರ್ಚ್ಯ ನಿವೇದ್ಯಾಶ್ನೀತ ಭಾವತಃ ।
ಸರ್ವೇಷ್ವಪಿ ಚ ಮಾಸೇಷು ಸೋಮವಾರಃ ಪ್ರಶಸ್ಯತೇ ॥೨೩॥

ಕೃಷ್ಣಪಕ್ಷೇ ವಿಶೇಷೇಣ ತಸ್ಯ ನೋದ್ಯಾಪನಂ ಶಿವೇ ।
ನಕ್ತಭುಗ್ಯದಿ ಭಕ್ತಸ್ಯ ಕ್ಷಾರವರ್ಜ್ಯಾನ್ನಭುಗ್ಭವೇತ್ ॥೨೪॥

ಯನ್ನಿವೇದಿತಮೀಶಾಯ ತದಶ್ನೀಯಾದ್ಯಥಾವಿಧಿ ।
ಮಧುಮಾಂಸಂ ವರ್ಜಯೀತ ನಕ್ತಾಶೀ ಸರ್ವದಾ ಶಿವೇ ॥೨೫॥

---

ಈ ವ್ರತವನ್ನು ಆಚರಿಸುತ್ತೇನೆಂದು ಮೊದಲು ಪ್ರತಿಜ್ಞೆಮಾಡಬೇಕು. ಅನಂತರ ಬ್ರಾಹ್ಮಣರೊಡಗೂಡಿ ವ್ರತಾರಂಭ ಮಾಡಬೇಕು. ಶ್ರಾವಣ ಸೋಮವಾರದಲ್ಲಿ ಕೇದಾರೇಶ್ವರನನ್ನು ಪೂಜಿಸುವುದು ವಿಶೇಷ ಶ್ರೇಯಸ್ಕರ. ||೧೮-೧೯-೨೦||

ಬ್ರಾಹ್ಮಣರು ಈ ವ್ರತವನ್ನು ಜನ್ಮಾವಧಿ ನಿಯಮದಿಂದ ಮಾಡಬಹುದು. ಈ ವ್ರತಾಚರಣೆಯಲ್ಲಿ ಶಕ್ತನಾಗಿರುವವನು ಪೂರ್ತಿ ಉಪವಾಸಮಾಡಬೇಕು. ಅಶಕ್ತನಾದವನು ರಾತ್ರಿ ಭೋಜನಮಾಡಬಹುದು. ಸೋಮವಾರವೆಲ್ಲಾ ಉಪವಾಸ ದಿಂದಿದ್ದು, ನಾಲ್ಕು ರಾತ್ರಿಯ ಯಾಮಗಳಲ್ಲಿಯೂ ನನ್ನನ್ನು ಅರ್ಚಿಸಿ, ಮಾರನೆಯ ದಿನವೂ ಪ್ರಾತಃಕಾಲ ನನ್ನನ್ನಾರಾಧಿಸಿ ಅನಂತರ ನೈವೇದ್ಯಾನ್ನವನ್ನು ಭುಂಜಿಸ ಬೇಕು. ಈ ಸೋಮವಾರ ವ್ರತವನ್ನು ಎಲ್ಲ ತಿಂಗಳಿನಲ್ಲಿಯೂ ಆಚರಿಸಬಹುದು. ಸೋಮವಾರವೇ ಇದಕ್ಕೆ ಮುಖ್ಯ ದಿನ. ||೨೧-೨೨-೨೩||

ಈ ವ್ರತದ ಉದ್ಯಾಪನೆಯನ್ನು ಮಾತ್ರ ಕೃಷ್ಣಪಕ್ಷದಲ್ಲಿ ಮಾಡಬಾರದು. ಅಶಕ್ತನಾಗಿ ರಾತ್ರಿ ಊಟಮಾಡುವುದಾದರೆ, ಕಾರ, ಉಪ್ಪು ಇವುಗಳನ್ನು ಮಾತ್ರ ಭುಂಜಿಸಬಾರದು. ಈಶ್ವರನಿಗೆ ನಿವೇದಿಸಿದ ಪದಾರ್ಥವನ್ನೇ ತಿನ್ನಬೇಕು. ಮದ್ಯ,

ವತ್ಸರೇ ವತ್ಸರಾಂಶೇ ವಾ ದ್ವಾದಶಾಬ್ದೇ ತ್ರಿಹಾಯನೇ ।
ನಕ್ತಾಶನೋದ್ಯಮಂ ಕುರ್ಯಾದುಪವಾಸೀ ನ ಸಂಜ್ವರೇತ್ ॥೨೬॥

ಅನ್ಯೇಷ್ವಪಿ ಮಹಾದೇವಿ ಶಿವಕ್ಷೇತ್ರೇಷ್ವಥಾರಭೇತ್ ।
ಅವಿಮುಕ್ತೇ ತು ನಿಯತಂ ನಿತ್ಯಂ ನಕ್ತಾಶನೀ ಭವೇತ್ ॥೨೭॥

ಸೋಮವಾರೇಷು ವಾ ದೇವಿ ಭೂತಾಂಬಾಮಷ್ಟಮೀಷು ವಾ ।
ಪರ್ವಸ್ವಪಿ ವಿಶೇಷೇಣ ಸೋಮಮಾಮಾಸ್ವಪಿ ಶಂಕರಿ ॥೨೮॥

ಮುಹೂರ್ತೇ ನಂದಿನಂ ನಕ್ತಂ ತತ್ರ ಸಂಪೂಜ್ಯ ಹವ್ಯಭುಕ್ ।
ಕಾರ್ತಿಕೇ ಪ್ರಾರಭೇದ್ವಾಪಿ ಅರುಣಾಚಲಸನ್ನಿಧೌ ॥೨೯॥

ಸೋಮವಾರವ್ರತಂ ದೇವಿ ಸಂಕಲ್ಪ್ಯೈವ ಹಿ ಪೂರ್ವವತ್ ॥೩೦॥

॥ ಈಶ್ವರ ಉವಾಚ ॥

ಅತ್ರೇತಿಹಾಸಂ ವಕ್ಷ್ಯಾಮಿ ಶೃಣು ಶೈಲಸುತೇನಘೇ ।
ಚಾಕ್ಷುಷಸ್ಯಾಂತರೇ ದೇವಿ ದಕ್ಷೋ ಮೇಧಾಯ ದೀಕ್ಷಿತಃ ॥೩೦॥

---

ಮಾಂಸಗಳನ್ನು ಸರ್ವಥಾ ತ್ಯಾಗಮಾಡಬೇಕು. ಒಂದು ವರ್ಷ ಅಥವಾ ಹನ್ನೆರಡು ವರ್ಷ ಅಥವಾ ಮೂರುವರ್ಷ ಈ ಕಾಲಗಳಲ್ಲಿ ವ್ರತವನ್ನು ಮಾಡುವವನು ನಕ್ತ ವ್ರತವನ್ನು ನಡೆಸಬಹುದು. ಉಪವಾಸ ಮಾಡುವ ಶಕ್ತಿಯುಳ್ಳವನು ಎಂದೂ ಉಪವಾಸವನ್ನು ನಿಲ್ಲಿಸಬಾರದು. ॥೨೪-೨೫-೨೬॥

ಕೇದಾರಕ್ಷೇತ್ರವನ್ನು ಬಿಟ್ಟು ಮತ್ತಾವ ಶಿವಕ್ಷೇತ್ರದಲ್ಲಾದರೂ ಈ ವ್ರತವನ್ನು ಆರಂಭಿಸಬಹುದು. ಕಾಶಿಯಲ್ಲಿ ಮಾತ್ರ ರಾತ್ರಿವ್ರತವನ್ನು ತಪ್ಪದೆ ನಡೆಸಬೇಕು. ಸೋಮವಾರ, ಚತುರ್ದಶೀ, ಅಷ್ಟಮೀ, ಪರ್ವದಿನಗಳು ವಿಶೇಷವಾಗಿ ಸೋಮವಾರ ಯುತವಾದ ಅಮಾವಾಸ್ಯೆ, ಈ ದಿನಗಳಲ್ಲಿ ಆ ವ್ರತವನ್ನು ಆರಂಭಿಸಬೇಕು. ರಾತ್ರಿಯ ಮೊದಲು ಯಾಮದಲ್ಲಿ ನಂದಿಯನ್ನು ಪೂಜಿಸಬೇಕು. ಅರುಣಾಚಲ ಕ್ಷೇತ್ರದಲ್ಲಿ ಕಾರ್ತಿಕಮಾಸದಿಂದ ಈ ವ್ರತವನ್ನು ಆರಂಭಿಸುವುದು ಶ್ರೇಯಸ್ಕರ ವೆನಿಸುವುದು. ॥೨೭-೨೮-೨೯-೩೦॥

ಪರ್ವತರಾಜಪುತ್ರಿಯೇ, ಈ ವ್ರತವಿಷಯವಾಗಿ ಹಿಂದೆ ನಡೆದ ಒಂದು ಇತಿಹಾಸವನ್ನು ಹೇಳುವೆನು ಕೇಳು. ಹಿಂದೆ ಚಾಕ್ಷುಷಮನ್ವಂತರದಲ್ಲಿ ದಕ್ಷಬ್ರಹ್ಮನು

ಸರ್ವೇ ಸುರಾಸುರೈರ್ದೇವಿ ಬ್ರಹ್ಮವಿಷ್ಣ್ವಾದಿಭಿರ್ದ್ವಿಜೈಃ ।
ಮಾಮನಾದೃತ್ಯ ತ್ವಾಂ ಚಾಪಿ ಯಜ್ಞವಿಘ್ನಮಥಾಲಭೇತ್ ॥೩೨॥

ಸುರಾದ್ಯಾ ವೀರಭದ್ರೇಣ ಶಿಕ್ಷಿತಾ ದೀಕ್ಷಿತೋಽಪಿ ಹಿ ।
ಚಂದ್ರೋಽಮೃತಮಯಶ್ಚಾಯಂ ನಿಷ್ಪೀಡ್ಯ ಕರಪಂಕಜೈಃ ॥೩೩॥

ಸೋಮೋ ಹೀನಾಮೃತೋ ಗೌರಿ ರೋಹಿಣೀ ಮಾಂ ಯಜತ್ತದಾ ।
ಕೇದಾರೇ ಸೋಮನಾಥಾಖ್ಯಂ ಲಿಂಗಂ ಸಂಸ್ಥಾಪ್ಯ ಪೂಜಯೇತ್ ॥೩೪॥

ಸ ಪುನರ್ದಕ್ಷಶಾಪೇನ ಪೀಡಿತೋ ಮಾಮತೂತುಷತ್ ।
ಸೋಮವಾರೇಷ್ವೇವಮೀಶೇ ಸೋಮೋ ಯಕ್ಷ್ಮರುಜಾರ್ದಿತಃ ॥೩೫॥

॥ ಸೋಮ ಉವಾಚ ॥

ಬಲೀವರ್ದಮಾವರ್ದಯನ್ಮಾರ್ದವೇನ
ಕ್ರುಧಾ ತ್ರೈಪುರಂ ನಿರ್ದಹನ್ಮೂರ್ಧ್ವತೇಜಾಃ ।

---

ಬ್ರಹ್ಮವಿಷ್ಣ್ವಾದಿ ಸಕಲ ದೇವತೆಗಳೊಡನೆಯೂ, ರಾಕ್ಷಸರೊಡನೆಯೂ ಯಾಗ ಮಾಡಿ, ಆ ಸಮಯದಲ್ಲಿ ನನ್ನನ್ನು ಅವಹೇಳನ ಮಾಡಿದನಷ್ಟೆ. ಆದರಿಂದ ಕುಪಿತನಾಗಿ ನಾನು ವೀರಭದ್ರನನ್ನು ಕಳುಹಿಸಿ ಅವರೆಲ್ಲರಿಗೂ ತಕ್ಕ ಶಿಕ್ಷೆಮಾಡಿಸಿದೆ ನಲ್ಲವೆ! ಆ ಗಲಭೆಯಲ್ಲಿ ಅಮೃತಮಯನಾದ ಚಂದ್ರನು ವೀರಭದ್ರನ ಕೈಗೆ ಸಿಕ್ಕಿದನು. ವೀರಭದ್ರನು ಅವನನ್ನು ಕೈಯಿಂದ ಹಿಂಡಿ ಸಿಪ್ಪೆಯನ್ನಾಗಿ ಮಾಡಿಬಿಟ್ಟನು. ॥೩೧-೩೨-೩೩॥

ಚಂದ್ರನು ಹಾಗೆ ಅಮೃತಹೀನನಾದುದನ್ನು ನೋಡಿ ಅವನ ಪತ್ನೀ ರೋಹಿಣೀದೇವಿಯು ಕೇದಾರಕ್ಷೇತ್ರಕ್ಕೆ ಹೋಗಿ ಅಲ್ಲಿ ಕೇದಾರನಾಥೇಶ್ವರವೆಂಬ ಲಿಂಗವನ್ನು ಪ್ರತಿಷ್ಠಿಸಿ, ವಿಧವಿಧವಾಗಿ ಪೂಜಿಸಿ ನನ್ನನ್ನು ತೃಪ್ತಿಪಡಿಸಿದಳು. ಅದೇರೀತಿ ದಕ್ಷಶಾಪದಿಂದ ಪೀಡಿತನಾದ ಚಂದ್ರನೂ ಸಹ ಕ್ಷಯರೋಗಪೀಡಿತನಾಗಿ, ಸೋಮವಾರದ ದಿನ ನನ್ನನ್ನು ಬಹಳವಾಗಿ ಪೂಜಿಸಿದನು. ಮತ್ತು ಹೀಗೆ ಸ್ತುತಿಸಿದನು. ॥೩೪-೩೫॥

ಮಹೇಶ್ವರನು ಮೃದುವಾದ ಬಲೀವರ್ದ (ವೃಷಭದ)ದ ಮೇಲೆ ಕುಳಿತಿರುವವನಾದರೂ, ಕೋಪದಿಂದಲೂ, ತನ್ನ ತೇಜೋವಿಶೇಷದಿಂದಲೂ ತ್ರಿಪುರಾಸುರರನ್ನು

ಇನಾಕ್ಷ್ಣೈವ ಹಾರ್ದಂ ತಮೋ ನಾಶಯನ್
ಲೋಕಜಾಲಂ ಸುಶೋಕಂ ಧುನೀತೇ ಪುನೀತೇ ಮಹೇಶಃ ॥೩೬॥

ತತಸ್ತುಷ್ಟೋಽಸ್ಮ್ಯಹಂ ದೇವಿ ತಸ್ಯ ಸ್ತುತ್ಯಾ ಚ ಭಕ್ತಿತಃ ।
ಸೋಮವಾರವ್ರತಸ್ಯಾಸ್ಯ ಪ್ರಭಾವೇನ ಗಿರೀಂದ್ರಜೇ ॥೩೭॥

ತೇನೋಕ್ತಂ ಯದಿ ತುಷ್ಟೋಽಸಿ ತಿಷ್ಠಾತ್ರಸ್ಥೋ ನಿರಂತರಂ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ॥೩೮॥

ತಾವನ್ಮತ್ಸ್ಥಾಪಿತೇ ಲಿಂಗೇ ಉಮಯಾ ಸಹ ತಿಷ್ಠ ಭೋ ।
ರೋಹಿಣ್ಯಾಶ್ಚ ಪತಿಶ್ಚೈವಂ ಪ್ರಾರ್ಥಯಿತ್ವಾ ಚ ಮಾಂ ಶಿವೇ ॥೩೯॥

ತತಶ್ಶುದ್ಧಶರೀರೋಽಸೌ ಗಗನಸ್ಥೋ ವಿರಾಜಿತೇ ।
ಮಮೋತ್ತಮಾಂಗೇ ದೇವೇಶಿ ಸ್ಥಾನಂ ದತ್ತಂ ವಿಶೇಷತಃ ॥೪೦॥

ದೇವಾನ್ ಪ್ರೀಣಾತಿ ಸೋಽದ್ಯಾಪಿ ಸೋಮಧಾಮಪ್ರಧಾನತಃ ।
ಪ್ರಥಮಾಂ ಪಿಬತೇ ವಹ್ನಿ ರ್ದ್ವಿತೀಯಾಂ ಭಾಸ್ಕರಃ ಶಿವೇ ॥೪೧॥

---

ಪುರಸಹಿತವಾಗಿ ನಾಶಗೊಳಿಸಿದನು. ಮತ್ತು ಸೂರ್ಯರೂಪವಾದ ತನ್ನ ಕಣ್ಣಿನ ಕಾಂತಿಯನ್ನು ಲೋಕಕ್ಕೆಲ್ಲ ಬೀರುತ್ತಾ, ಲೋಕದ ಕತ್ತಲೆಯನ್ನೆಲ್ಲಾ ಹೋಗಲಾಡಿಸುತ್ತಿರುವನು. ಮತ್ತು ತನ್ನ ಭಕ್ತರ ಶೋಕವನ್ನೆಲ್ಲಾ ಪರಿಹರಿಸುತ್ತಿರುವನು. ॥೩೬॥

ಎಂದು ಸ್ತುತಿಸಿದ ಚಂದ್ರನಿಗೆ ನಾನು ಪ್ರಸನ್ನನಾದೆನು. ಅವನು ಮಾಡಿದ ಸೋಮವ್ರತದಿಂದ ನನಗೆ ಆಗ ತೃಪ್ತಿಯೊದಗಿತು. ಅದೇ ಸಮಯದಲ್ಲಿ ರೋಹಿಣೀಚಂದ್ರರು ನನ್ನನ್ನು ಕುರಿತು "ಸ್ವಾಮಿ, ನಮ್ಮ ಮೇಲೆ ನೀನು ಅನುಗ್ರಹವಿಟ್ಟಿರುವುದಾದರೆ ಸೂರ್ಯಚಂದ್ರಭೂಮಿಗಳು ಲೋಕದಲ್ಲಿ ಇರುವವರೆಗೂ ನಾವು ಪ್ರತಿಷ್ಠೆ ಮಾಡಿರುವ ಈ ಶಿವಲಿಂಗದಲ್ಲಿ ನಿನ್ನ ಸಾನ್ನಿಧ್ಯವನ್ನು ನಿಲ್ಲಿಸು. ಸದಾ ಇಲ್ಲಿ ನೀನು ಉಮಾದೇವಿಯೊಡನೆ ಕೂಡಿರಬೇಕು" ಎಂದು ಪ್ರಾರ್ಥಿಸಿದರು. ॥೩೭-೩೮-೩೯॥

ಹಾಗೆಯೇ ಆಗಲೆಂದು ನಾನು ವರವಿತ್ತು, ಚಂದ್ರನ ಅಮೃತಹೀನತೆಯನ್ನು ಹೋಗಲಾಡಿಸಿದೆನು. ಕೂಡಲೇ ಚಂದ್ರನು ಅಂತರಿಕ್ಷದಲ್ಲಿ ಶುದ್ಧಶರೀರಿಯಾಗಿ ಹೊಳೆಯತೊಡಗಿದನು. ಆಗಲೇ ನಾನು ಚಂದ್ರನಿಗೆ ನನ್ನ ಶಿರಸ್ಸಿನಲ್ಲಿ ಸ್ಥಾನವನ್ನಿತ್ತೆನು. ಆ ಚಂದ್ರನು ಈಗಲೂ ಅಮೃತಭಾಗವನ್ನು ಸಕಲ ದೇವತೆಗಳಿಗೂ

ತೃತೀಯಾಮಥ ದೇವೇಂದ್ರಶ್ಚತುರ್ಥೀಂ ಮರುತೋಽಖಿಲಾಃ ।
ವಸವಃ ಪಂಚಮೀಂ ತಸ್ಯ ಕಲಾಂ ಷಷ್ಠೀಂ ತು ವಾಸವಃ ॥೪೨॥

ಆದಿತ್ಯಾಃ ಸಪ್ತಮೀಂ ದೇವಿ ರುದ್ರಾಸ್ತಸ್ಯಾಷ್ಟಮೀಂ ಕಲಾಂ ।
ನವಮೀಂ ಋಭವೋ ದೇವಿ ದಶಮೀಂ ಯಕ್ಷಗುಹ್ಯಕಾಃ ॥೪೩॥

ಏಕಾದಶೀಂ ಶಿವೇ ಸಾಧ್ಯಾ ದ್ವಾದಶೀಂ ವಿಷ್ಣುರೇವ ಹಿ ।
ಬ್ರಹ್ಮಾ ತ್ರಯೋದಶೀಂ ತಸ್ಯಾಂ ಚತುರ್ದಶ್ಯಾಂ ತು ನಿಋುತಿಃ॥೪೪॥

ಅಮಾವಾಸ್ಯಾಸು ಪಿತರಃ ಕಲಾಂ ತಸ್ಯ ಪಿಬಂತಿ ಹಿ ।
ಸೋಮಾಮೃತಮಯೋ ದೇವಿ ದೇವಾನಾಂ ಭೋಜನಂ ಶಶೀ ॥೪೫॥

ಕಲಾಭಿಃ ಪೋಷಯೇದ್ದೇವಾನೋಷಧೀನಾಂ ಗಣಂ ಶಿವೇ ।
ಸೋಮವಲ್ಲೀಷು ನಿತರಾಂ ಯಜ್ಞಾರ್ಥಂ ಸೋಮ ಆಹಿತಃ ॥೪೬॥

ಸೋಮೇನಾದಿತ್ಯಾಬಲಿನಃ ಸೋಮೇನ ಸವಿತಾ ಮಹೀ ।
ಸರ್ವೇಷಾಮಥ ಋಕ್ಷಾಣಾಂ ಮಧ್ಯೇ ವೈ ಸೋಮ ಆಸ್ಥಿತಃ ॥೪೭॥

---

ಕೊಡುತ್ತಾ ಪ್ರಕಾಶಿಸುತ್ತಿರುವನು. ಮೊದಲನೆಯ ಅಮೃತಕಲೆಯನ್ನು ಅಗ್ನಿಯೂ, ಎರಡನೆಯ ಕಲೆಯನ್ನು ಸೂರ್ಯನೂ ತೆಗೆದುಕೊಳ್ಳುವರು. ॥೪೦-೪೧॥

ಮೂರನೆಯ ಕಲೆಯನ್ನು ಇಂದ್ರನೂ, ನಾಲ್ಕನೆಯ ಕಲೆಯನ್ನು ಮರುದ್ಗಣಗಳೂ ಹಾಗೆಯೇ ಕ್ರಮವಾಗಿ ವಸುಗಳೂ, ವಾಸವನೂ, ಆದಿತ್ಯರೂ, ರುದ್ರರೂ, ಋಭುದೇವತೆಗಳೂ, ಯಕ್ಷಗುಹ್ಯಕರೂ, ಸಾಧ್ಯರೂ, ವಿಷ್ಣುವೂ, ಬ್ರಹ್ಮನೂ, ನಿಋುತಿಯೂ, ಐದರಿಂದ ಹದಿನಾಲ್ಕರವರೆಗೂ ಇರುವ ಕಲೆಗಳನ್ನು ಅನುಭವಿಸುವರು. ಅಮಾವಾಸ್ಯೆಯ ದಿನ ಚಂದ್ರನ ಹದಿನೈದನೆಯ ಕಲೆಯನ್ನು ಪಿತೃದೇವತೆಗಳೂ ಪೂರ್ಣವಾಗಿ ಅನುಭವಿಸುವರು. ॥೪೨-೪೩-೪೪-೪೫॥

ಚಂದ್ರನು ಅಂದಿನಿಂದ ಸಕಲ ವನಸ್ಪತಿಗಳನ್ನೂ, ದೇವತೆಗಳನ್ನೂ ತನ್ನ ಕಲಾಪ್ರಸಾರದಿಂದ ಕಾಪಾಡುತ್ತ ಬಂದಿರುವನು. ವಿಶೇಷವಾಗಿ ಚಂದ್ರನು ಸೋಮಲತೆಗಳಲ್ಲಿ ತನ್ನ ಕಲೆಯನ್ನು ನಿಲ್ಲಿಸಿರುವನು. ಆದರಿಂದಲೇ ಅದು ಯಜ್ಞಕ್ಕೆ ಮುಖ್ಯ ಸಾಧಕವಾಗಿರುವುದು. ಸೋಮರಸದ ಪಾನದಿಂದಲೇ ಆದಿತ್ಯರೂ, ಪ್ರಸಿದ್ಧ ಸೂರ್ಯನೂ, ಭೂಮಿಯೂ, ಉಳಿದ ಸಕಲ ದೇವತೆಗಳೂ, ನಕ್ಷತ್ರಾದಿಗಳೂ

ಇತ್ಯೇಷಾ ಬಹ್ವೃಚಾನಾಂ ಹಿ ಶ್ರುತಿರಾಹ ಮಹೇಶ್ವರಿ ।
ಸರ್ವೇಷಾಂ ಜನಿತಾ ಸೋಮಃ ಶಕ್ರವಿಷ್ಣ್ವನಿಲಾತ್ಮನಾಂ ॥೪೮॥

ತಸ್ಮಾತ್ತದಾವಿಷ್ಟತಯಾ ಸೋಮವಲ್ಲೀಭಿರೇವ ಹಿ ।
ಪ್ರವರ್ತಯಂತಿ ಯಜ್ಞಾಂಶ್ಚ ಸೌಮ್ಯಾ ಯೇ ಬ್ರಾಹ್ಮಣಾಶ್ಶಿವೇ ॥೪೯॥

ಸೋಮಪಾ ಬ್ರಾಹ್ಮಣಾಃ ಸರ್ವೇ ಮಮೈವ ತನವ (ಯಾಃ) ಶಿವೇ ।
ಬ್ರಾಹ್ಮಣಾನಾಮಯಂ ರಾಜಾ ಸೋಮಸ್ಸಾಕ್ಷಾನ್ಮಮಾಂತಕೇ ॥೫೦॥

ತವೇಷ ಸದನಂ ದೇವಿ ಅಗ್ನಿರ್ಮೇ ವದನಂ ಶಿವೇ ।
ತಸ್ಮಾದಗ್ನಿಶ್ಚ ಸೋಮಶ್ಚ ಜಗಚ್ಚಕ್ರಪ್ರವರ್ತಕೌ ॥೫೧॥

ಅಗ್ನೀಷೋಮಮಯಂ ಸರ್ವಂ ಜಗದೇತಚ್ಚರಾಚರಂ ।
ತಸ್ಮಾದ್ಯಜ್ಞೇಷು ಸರ್ವೇಷು ಅಗ್ನೀಷೋಮಪಶುಃ ಸ್ಮೃತಃ ॥೫೨॥

---

ಬಲಗೊಂಡಿರುವರೆಂದು ಋಗ್ವೇದವು ಸಾರುತ್ತಿರುವುದು. ಅಂದಿನಿಂದ ಚಂದ್ರನು ಸಕಲ ನಕ್ಷತ್ರಗಳ ಮಧ್ಯಭಾಗದಲ್ಲಿ ಸ್ಥಾಪಿತನಾಗಿರುವನು ॥೪೬-೪೭॥

ಸೋಮರಸದಿಂದಲೇ ಇಂದ್ರನೂ, ವಿಷ್ಣುವೂ ವಾಯುವೂ ಜನಿಸಿರುವರು. ಹೀಗೆ ಸೋಮಲತೆಯಿಂದ ಸಕಲ ದೇವತೆಗಳೂ ಜನಿಸಿರುವುದರಿಂದ ಸಾತ್ವಿಕರಾದ ಬ್ರಾಹ್ಮಣರು ಸೋಮಲತೆಯಿಂದ ಸೋಮಯಾಗವನ್ನು ನೆರವೇರಿಸುವರು. ಯಾವ ಬ್ರಾಹ್ಮಣರು ಯಾಗದಲ್ಲಿ ಸೋಮಪಾನಮಾಡುವರೋ ಅವರು ನನ್ನ ಪುತ್ರರಿಗೆ ಸಮಾನರಾದವರು. ಅವರು ನನಗೆ ಶರೀರಪ್ರಾಯರು. ನನ್ನ ಅಂಶದಿಂದಿರುವ ಸೋಮಲತೆಯನ್ನು ಆದ್ದರಿಂದಲೇ ಬ್ರಾಹ್ಮಣರು ತಮಗೆ ರಾಜನೆಂದು ಹೇಳುವರು. ॥೪೮-೪೯-೫೦॥

ದೇವಿಯೇ, ಈ ಸೋಮದೇವತೆಯು ನಿನ್ನ ದೇಹವು. ಅಗ್ನಿಯು ನನ್ನ ವದನ, ಇವೆರಡರಿಂದಲೇ ಈ ಜಗತ್ತು ಉತ್ಪತ್ತಿಯಾಗಿ ಮುಂದುವರಿಯುತ್ತಿರುವುದು. ಈ ಚರಾಚರಾತ್ಮಕವಾದ ಜಗತ್ತು ಅಗ್ನೀಷೋಮಾತ್ಮಕವೆಂದು ಸಾರುತ್ತಿರುವರು. ಇದೇ ಉದ್ದೇಶದಿಂದಲೇ ಅಗ್ನೀಷೋಮಾತ್ಮಕವಾದ ಪಶುವು ಯಜ್ಞದಲ್ಲಿ ವಿಹಿತವಾಗಿದೆ. ಅಗ್ನೀಷೋಮಾತ್ಮಕವಾದ ಪಶುವಿನಿಂದಲೇ ನಾನು ಯಾಗದಲ್ಲಿ ತೃಪ್ತಿ ಹೊಂದುವೆನು. ॥೫೧-೫೨॥

ತಸ್ಮಾದ್ವ್ರತಮಿದಂ ದೇವಿ ಸೋಮವಾರಂ ಮಮೇಶ್ವರಂ ।
ಬ್ರಾಹ್ಮಣೈಸ್ಸೋಮಪೈರೇವ ಕಾರ್ಯಂ ನಕ್ತಾಶನಾತ್ಮನಾ ॥೫೩॥

ಶಿವಕ್ಷೇತ್ರೇ ಗೃಹೇವಾಪಿ ಅವಿಮುಕ್ತೇ ಚ ನೈತ್ಯಕಂ ।
ಶ್ರಾವಣೇ ಕಾರ್ತಿಕೇ ವಾಪಿ ನಕ್ತಭೋಜನಮಾಚರೇತ್ ॥೫೪॥

ಬ್ರಾಹ್ಮಣಾನಾಂ ವಿಧಿಶ್ಚಾಯಂ ಸೋಮಪಾನಾಂ ವಿಶೇಷತಃ ।
ಬೃಹಜ್ಜಾಬಾಲಕಥಿತೋ ವಿಧಿರೇಷ ಸನಾತನಃ ॥೫೫॥

ಪ್ರಶಸ್ತಂ ಮಮ ದೇವೇಶಿ ಸೋಮವಾರೇಷು ಸರ್ವತಃ ।
ವರ್ಣಾನಾಮಾಶ್ರಮಾಣಾಂ ಚ ಭಕ್ತಾನಾಂ ನಿಯತಾತ್ಮನಾಂ ॥೫೭॥

ಶಕ್ತೋಽಪ್ಯುಪೋಷಣಾಹೀನಶ್ಚಿರಂ ವಿಷ್ಠಾಸು ತಿಷ್ಠತಿ ।
ಯೋ ಸೋಮವಾಸರೇ ಸ್ವೇಚ್ಛಂ ದಿವಾ ಕುರ್ವಂತಿ ಭೋಜನಂ॥೫೮॥

---

ಸೋಮದೇವತಾತ್ಮಕವಾದ ಈ ಸೋಮವಾರವ್ರತವು ನನಗೆ ಬಹುಪ್ರಿಯ ವಾದುದು. ಸೋಮಪಾನಮಾಡುವ ಬ್ರಾಹ್ಮಣರಿಂದಲೂ ಈ ವ್ರತವು ನಡೆಸಲ್ಪಡ ಬೇಕು. ಇದನ್ನು ಶಿವಕ್ಷೇತ್ರಗಳಲ್ಲಾಗಲಿ, ಮನೆಯಲ್ಲಾಗಲಿ, ಕಾಶೀಕ್ಷೇತ್ರದಲ್ಲಾಗಲಿ, ನಿತ್ಯವಾಗಿ ನಡೆಸಬಹುದು. ಶ್ರಾವಣ, ಕಾರ್ತಿಕ ಸೋಮವಾರಗಳಲ್ಲಿ ಮಾತ್ರ ನಕ್ತ ವ್ರತದಿಂದಲೇ ಈ ವ್ರತವನ್ನು ಮಾಡಬೇಕು. ॥೫೩-೫೪॥

ಈ ವ್ರತವನ್ನು ಬ್ರಾಹ್ಮಣರು, ಆದರಲ್ಲಿಯೂ ಸೋಮಯಾಗ ಮಾಡಿದವರೂ ತಪ್ಪದೆ ನಡಸಲೇಬೇಕು. ಹೀಗೆಂದು ಬೃಹಜ್ಜಾಬಾಲೋಪನಿಷತ್ತಿನಲ್ಲಿ ಅನಾದಿ ಯಾದ ಧರ್ಮವಾಗಿ ಉಕ್ತವಾಗಿದೆ. ಅಲ್ಲದೆ, ವಿಧವೆಯರು, ಪತ್ನೀಹೀನರು, ವಾನ ಪ್ರಸ್ಥಾಶ್ರಮಿಗಳು, ಬ್ರಹ್ಮಚಾರಿಗಳು, ಯತಿಗಳು ಇವರು ರಾತ್ರಿ ನಾಲ್ಕು ಯಾಮ ಗಳಲ್ಲಿಯೂ ಉಪವಾಸವಿದ್ದು ಈ ವ್ರತವನ್ನು ಮಾಡಬೇಕು. ಅದು ಅತ್ಯುತ್ತಮ ವಾದ ಮಾರ್ಗವೆನಿಸುವುದು. ಅಲ್ಲದೆ ಯಾವ ವರ್ಣದವರಾಗಲಿ, ಯಾವ ಆಶ್ರಮ ದವರಾಗಲಿ ನನ್ನ ಭಕ್ತರೆನಿಸಿದವರಿಗೆ ಈ ಸೋಮವಾರ ವ್ರತವು ಅತ್ಯಂತ ಪವಿತ್ರ ವ್ರತವೆನಿಸಿರುವುದು. ॥೫೫-೫೬-೫೭॥

ಉಪವಾಸಮಾಡುವಷ್ಟು ಶಕ್ತಿಯಿದ್ದರೂ ಉಪವಾಸಮಾಡದೆ ಈ ವ್ರತಾಚರಣೆ ಯಲ್ಲಿ ವಿಮುಖರಾದವರು ನರಕದಲ್ಲಿ ಅಮೇಧ್ಯರಾಶಿಯಲ್ಲಿ ಬೀಳುವರು. ಸೋಮ

ತಾನ್ಪಾತಯಂತಿ ನರಕೇ ಕ್ರೂರಾಸ್ತೇ ಯಮಕಿಂಕರಾಃ ।
ತದಾ ಪ್ರಭೃತಿ ಯೇ ಕೇಚಿದ್ವ್ರತಂ ಕುರ್ವಂತಿ ಮಾನವಾಃ ॥೫೯॥

ತೇಽಪಿ ಮತ್ಪದಮಾಯಾಂತಿ ವಿಮಲಾಂಗಾಂಶ್ಚ ಸೋಮವತ್ ।
ನ ವಾರವ್ರತಮೇತದ್ಧಿ ಶ್ರುತ್ಯುಕ್ತಂ ವಿಧಿನಾ ಚರೇತ್ ॥೬೦॥

ಅಥ ಕಿಂ ಬಹುನೋಕ್ತೇನ ವಿಧಾನಂ ತಸ್ಯ ಕೀರ್ತಯೇ ॥೬೧॥

॥ ಶ್ರೀ ಸ್ಕಂದ ಉವಾಚ ॥

ಏವಂ ಜಗಾದ ಗಿರಿಜಾಂ ಪ್ರತಿ ಚಂದ್ರಮೌಳಿಃ ।
ಸೋಮವ್ರತಸ್ಯ ಮಹಿಮಾಮಸಮಾಂ ದ್ವಿಜಾನಾಂ ।
ಭಕ್ತ್ಯೋಽಪಿ ನಕ್ತಹಿತಭಕ್ತವಿಶಿಷ್ಟಭುಕ್ ಸ್ಯಾ ।
ಲ್ಲಿಂಗಾರ್ಚನಸ್ತವನದರ್ಶನತೋಽತ್ರ ಮುಕ್ತಃ ॥೬೨॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಸೋಮವಾರವ್ರತಪ್ರಭಾವ
ವರ್ಣನಂ ನಾಮ ಅಷ್ಟಾವಿಂಶೋಽಧ್ಯಾಯಃ

---

ವಾರದ ದಿನಗಳಲ್ಲಿ ಈ ವ್ರತವನ್ನಾಚರಿಸದೆ, ದಿವಾ ಭೋಜನದಿಂದ ಜೀವಿಸು ವವರಿಗೆ ಯಮಭಟರು ಕ್ರೂರರೀತಿಯಿಂದ ನರಕದಲ್ಲಿ ಶಿಕ್ಷೆವಿಧಿಸುವರು. ಯಾರು ಭಕ್ತಿಯಿಂದ ಈ ನನ್ನ ವ್ರತವನ್ನು ನಡೆಸಿಕೊಂಡು ಹೋಗುವರೋ, ಅವರು ಪವಿತ್ರಾತ್ಮರೆನಿಸಿ ನನ್ನ ಸಾಮೀಪ್ಯವನ್ನು ಹೊಂದುವರು. ಇದಕ್ಕೆ ಸಮವಾದ ವಾರವ್ರತವು ಯಾವ ಶ್ರುತಿಯಲ್ಲಿಯೂ ಉಕ್ತವಾಗಿಲ್ಲ. ಆದ್ದರಿಂದಲೇ ಇದನ್ನು ತಪ್ಪದೆ ಆಚರಿಸಬೇಕು. ಇದರ ವಿಧಾನವನ್ನು ಎಷ್ಟೆಂದು ಹೇಳಲಿ. ॥೫೮-೫೯-೬೦-೬೧॥

ಎಂದು ಪರಶಿವನು ಪಾರ್ವತಿಗೆ ಸೋಮವಾರ ವ್ರತದ ಅಪಾರ ಮಹಿಮೆ ಯನ್ನು ಸಕಲ ದ್ವಿಜರಿಗೂ ಸುಲಭವಾಗಿ ತಿಳಿಯುವಂತೆ ವಿವರಿಸಿ ಹೇಳಿದನು. ಜೈಗೀಷವ್ಯಮಹರ್ಷಿಯೇ, ಹೀಗಿರುವಾಗ ಈಶ್ವರಭಕ್ತನೆನಿಸಿದವನು, ಸೋಮವಾರ ದಲ್ಲಿ ನಕ್ತಭೋಜನದಿಂದ ಈಶ್ವರಾರ್ಚನ, ಈಶ್ವರಸ್ತುತಿ, ಈಶ್ವರಧ್ಯಾನ ಇವು ಗಳನ್ನು ನಡೆಸಿದುದೇ ಆದರೆ ಆತನು ಕೈವಲ್ಯವನ್ನು ಹೊಂದುವುದರಲ್ಲಿ ಸ್ವಲ್ಪವೂ

ಅನುಮಾನವಿಲ್ಲ. ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಶಿವೋಕ್ತಿ ಯನ್ನು ಉಪದೇಶಿಸಿದನು. ||೬೨||

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಏಕೋನತ್ರಿಂಶೋಽಧ್ಯಾಯಃ

॥ ಶ್ರೀ ಶಿವ ಉವಾಚ ॥

ಯಸ್ಮಿನ್ ಕಸ್ಮಿಂಶ್ಚ ಮಾಸೇಷು ಶುಕ್ಲೇ ಸೋಮಸ್ಯ ವಾಸರೇ ।
ಶೌಚಂ ವಿಧಾಯ ನದ್ಯಾಂ ವೈ ಸ್ನಾಯಾದ್ಯುಷಸಿ ಸತ್ತಮೇ ॥೧॥

ಸ್ವಧರ್ಮವಿಹಿತಂ ಕರ್ಮ ಕೃತ್ವಾ ಸ್ಥಾನೇ ಮನೋರಮೇ ।
ಸುಸಮೇ ಭೂಭವೇ ರಮ್ಯೇ ನ್ಯಸೇತ್ಕುಂಭಂ ಮನೋರಮಂ ॥೨॥

ಚೂತಪಲ್ಲವವಿನ್ಯಸ್ತಂ ಚಂದನೇನ ಮನೋರಮಂ ।
ಶ್ವೇತವಸ್ತ್ರಪರೀಧಾನಃ ಸರ್ವಾಲಂಕಾರಭೂಷಿತಃ ॥೩॥

---

## ಇಪ್ಪತ್ತೊಂಬತ್ತನೆಯ ಅಧ್ಯಾಯ

ಪರಮೇಶ್ವರನು ಪಾರ್ವತಿಗೆ ಸೋಮವಾರ ವ್ರತವಿಧಾನವನ್ನು ವಿವರವಾಗಿ ಹೇಳಿದುದನ್ನು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ವಿವರಿಸತೊಡಗಿದನು:-- ಎಲೌ ದೇವಿಯೇ, ಯಾವ ತಿಂಗಳಿನಲ್ಲಿಯಾದರೂ ಈ ವ್ರತವನ್ನು ಆರಂಭಿಸಬಹುದು. ಆದರೆ ಶುಕ್ಲಪಕ್ಷದ ಸೋಮವಾರ ಉಷಃಕಾಲದಲ್ಲಿ ಶೌಚಾದಿಗಳನ್ನು ನೆರವೇರಿಸಿಕೊಂಡು ನದಿಯಲ್ಲಿ ಸ್ನಾನಮಾಡಿ, ತನ್ನ ಕರ್ಮಾನುಷ್ಠಾನಗಳನ್ನು ಮುಗಿಸಿಕೊಂಡು ಸಮತಲವಾದ ಮತ್ತು ಶುಚಿಯಾಗಿರುವ ಮನೋಹರವಾದ ಭೂಮಿಯಮೇಲೆ ಒಂದು ಕಲಶವನ್ನು ಸ್ಥಾಪಿಸಬೇಕು. ॥೧-೨॥

ಅದನ್ನು ಮಾವಿನ ಚಿಗುರು, ಚಂದನ ಇವುಗಳಿಂದ ಅಲಂಕರಿಸಬೇಕು. ತಾನು ಶ್ವೇತವಸ್ತ್ರಧಾರಿಯಾಗಿ, ಸರ್ವಾಲಂಕಾರಭೂಷಿತನಾಗಿ ಆ ಕಲಶವನ್ನು

ಆದೌ ಪಾತ್ರಂ ಚ ವಿನ್ಯಸ್ಯ ಆಧಾರಸಹಿತಂ ಶಿವಂ ।
ಅಷ್ಟೌ ವಿಶ್ವೇಶ್ವರಾ ದೇವಾ ಸೋಮನಾಥಂ ಸ ಶಕ್ತಿಕಂ ॥೪॥

ವಾಸಸಾ ಸಹಿತಂ ತತ್ರ ಶ್ವೇತಪುಷ್ಪೈಃ ಪ್ರಪೂಜಯೇತ್ ।
ಲಿಂಗಂ ತುಂಗಂ ಚ ವಿನ್ಯಸ್ಯ ಪಂಚಗವ್ಯೇನ ಸೇಚಯೇತ್ ॥೫॥

ಶಿವೇ ಫಲರಸೈಶ್ಚೈವ ಗಂಧಪುಷ್ಪಾಂಬುಸೇಚನೈಃ ।
ಗಂಧಾಕ್ಷತಾದಿಭಿಃ ಪೂಜ್ಯ ರುದ್ರೇಣಾವರ್ತಿತೋಽಂಬಿಕೇ ॥೬॥

ವಿವಿಧೈರ್ಭಕ್ಷ್ಯಭೋಜ್ಯೈಶ್ಚ ಫಲೈರ್ನೈವೇದ್ಯಮಾಚರೇತ್ ।
ಧೂಪದೀಪಾದಿಕಂ ದತ್ವಾ ನೀರಾಜನಪುರಸ್ಸರಂ ॥೭॥

ಸ್ತೋತ್ರೈಸ್ಸ್ತುವೀತ ದೇವೇಶಂ ಸೋಮವಾರೇ ವಿಶೇಷತಃ ॥೮॥

ಸೋಮಾಲಂಕೃತಮಸ್ತಕಾಯ ವಿಭವೇ ನಾಮಾದಿಸಾಮಸ್ತುತಿ ।
ಪ್ರಖ್ಯಾತಾಯ ಉಮಾಧವಾಯ ಮಹತೇ ಭೂಮಾಯ ದೇವಾಯ ತೇ ।

---

ಪೀಠದ ಮೇಲಿಟ್ಟು ಅದರಲ್ಲಿ ಪರಶಿವನನ್ನೂ ಅವನ ಅಷ್ಟಮೂರ್ತಿಗಳನ್ನೂ, ವಿಶ್ವೇಶ್ವರನನ್ನೂ ಆವಾಹನೆಮಾಡಬೇಕು. ಶುಭ್ರವಸ್ತ್ರವನ್ನು ಅದಕ್ಕೆ ಹೊದಿಸಿ ಬಿಳಿಯ ಹೂವುಗಳಿಂದ ಅದನ್ನು ಪೂಜಿಸಬೇಕು. ಉನ್ನತವಾದ ಶಿವಲಿಂಗವನ್ನು ತಂದು ಅದರ ಮುಂಭಾಗದಲ್ಲಿರಿಸಿಕೊಂಡು ಪಂಚಗವ್ಯದಿಂದ ಅಭಿಷೇಕಮಾಡಬೇಕು. ||೩-೪-೫||

ಹಾಗೆಯೇ ಫಲರಸ, ಗಂಧ, ಪುಷ್ಪಗಳಿಂದ ಕೂಡಿದ ನೀರು ಇವುಗಳಿಂದ ವಿಧಿವತ್ತಾಗಿ ರುದ್ರಾಭಿಷೇಕಮಾಡಿ, ಅನಂತರ ವಸ್ತ್ರಭೂಷಣಾದಿಗಳಿಂದಲೂ, ಗಂಧ ಪುಷ್ಪಾಕ್ಷತಾದಿಗಳಿಂದಲೂ ಅರ್ಚಿಸಿ ನಾನಾವಿಧವಾದ ಭಕ್ಷ್ಯ, ಭೋಜ್ಯ, ಫಲ ಇವುಗಳನ್ನು ನಿವೇದಿಸಬೇಕು. ಹಾಗೆಯೇ ಧೂಪ, ದೀಪ, ನೀರಾಜನಾದಿಗಳಿಂದ ಪೂಜೆಯನ್ನು ಮುಗಿಸಿ ಆಗಲೇ ಈರೀತಿ ಶಂಕರನನ್ನು ಸ್ತುತಿಸಬೇಕು. ||೬-೭-೮||

"ಮಹಾದೇವನೇ, ನೀನು ಚಂದ್ರಕಲೆಯಿಂದ ಅಲಂಕೃತನಾದವನು. ನೀನು ಸರ್ವವ್ಯಾಪಿಯು, ಸಾಮವೇ ಮೊದಲಾದ ಸಕಲ ವೇದದಿಂದಲೂ ಸ್ತುತಿಸಲ್ಪಡುವವನು. ಮಹಾಮಹಿಮಾಶಾಲಿಯಾಗಿ ಪಾರ್ವತೀಪತಿಯೆನಿಸಿಕೊಂಡಿರುವೆ. ಮನ್ಮಥನನ್ನು ಸಂಪೂರ್ಣವಾಗಿ ಸುಟ್ಟು ಧ್ವಂಸಮಾಡಿರುವೆ. ರುದ್ರಹೋಮದಿಂದ

ಕಾಮಾಂಗಾಖಿಲದಾಹಕಾಯ ಭಗವನ್ ಹೋಮಪ್ರಿಯಾಯಾದರಾತ್ ।
ವಾಮಾರ್ಧಾಕೃತಯೇ ಶಿವಾಯ ಜಗತಾಂ ಪಿತ್ರೇ ನಮಶ್ಶಂಭವೇ ॥೯॥

ಸ್ತುವೀತ್ಯೈವಂ ಮಹಾದೇವಂ ಸೋಮವಾರೇಷು ಪೂಜಕಃ ।
ಉಪೋಷ್ಯ ವಾ ನಕ್ತಭುಕ್ ಭವೇ ಭಕ್ತೋ ದೃಢವ್ರತಃ ॥೧೦॥

ಏವಂ ಕೃತೇ ತು ಪ್ರಥಮೇ ಸೋಮವಾರೇ ಗದೋಜ್ಝಿತಃ ।
ಆರೋಗ್ಯಮತುಲಂ ಪ್ರಾಪ್ಯ ಶಿವಲೋಕೇ ಮಹೀಯತೇ ॥೧೧॥

ದ್ವಿತೀಯೇ ಸೋಮವಾರೇ ತು ಕರಂಜಂ ದಂತಧಾವನಂ ।
ದೇವಂ ಸಂಪೂಜಯೇದ್ರಾತ್ರೌ ಗಂಧಪುಷ್ಪೈರ್ಮನೋರಮೈಃ ॥೧೨॥

ಶತಪತ್ರೈರ್ಬಿಲ್ವಪತ್ರೈರ್ನಕ್ತಾಶೀ ಮುಕ್ತಿಭಾಗ್ಭವೇತ್ ।
ಸ ಗೋಲಕ್ಷಫಲಂ ಪ್ರಾಪ್ಯ ಶಿವಲೋಕೇ ಮಹೀಯತೇ ॥೧೩॥

---

ನೀನು ಪ್ರೀತಿಗೊಳ್ಳುವೆ. ನಿನ್ನ ಅರ್ಧಭಾಗದಲ್ಲಿ ಪಾರ್ವತಿಯು ನೆಲಸಿರುವಳು. ಸಕಲ ಲೋಕಕ್ಕೂ ರಕ್ಷಕನಾಗಿ ಭಕ್ತರಿಗೆ ಸುಖಪ್ರದನಾಗಿರುವ ನಿನಗೆ ಶತಶಃ ನಮಸ್ಕಾರವು." ॥೯॥

ಹೀಗೆ ಸ್ತೋತ್ರಮಾಡಿ ಪ್ರತಿ ಸೋಮವಾರಗಳಲ್ಲಿಯೂ ಹಗಲುಪವಾಸದಿಂದಿದ್ದು ರಾತ್ರಿ ಭೋಜನಮಾಡಿ ವ್ರತವನ್ನು ಮುಗಿಸಬೇಕು. ಇದು ಮೊದಲನೆಯ ಸೋಮವಾರದ ದಿನದ ವ್ರತವಿಧಾನ. ಇದರಿಂದ ಭಕ್ತನು ಸಮಸ್ತ ವ್ಯಾಧಿಗಳಿಂದಲೂ ಮುಕ್ತನಾಗಿ, ಸಂಪೂರ್ಣವಾದ ಆರೋಗ್ಯವನ್ನು ಪಡೆದು ಶಿವಲೋಕವನ್ನು ಸೇರುವನು. ॥೧೦-೧೧॥

ಎರಡನೆಯ ಸೋಮವಾರದ ದಿನ ಹೊಂಗೆಯ ಮರದ ಕಡ್ಡಿಯಿಂದ ಹಲ್ಲನ್ನುಜ್ಜಿಕೊಂಡು ನಿಯಮದಿಂದಿದ್ದು ರಾತ್ರಿಯಲ್ಲಿ ಶಂಕರನನ್ನು ಗಂಧಪುಷ್ಪಾದಿಗಳಿಂದಲೂ, ಕಮಲ, ಬಿಲ್ವಪತ್ರೆ ಮುಂತಾದವುಗಳಿಂದಲೂ ಪೂಜಿಸಿ ನಕ್ತಭೋಜನ ಮಾಡಬೇಕು. ಇದರಿಂದ ವ್ರತಮಾಡಿದವರಿಗೆ ಲಕ್ಷಗೋದಾನಗಳ ಫಲವು ದೊರೆಯುವುದು ಮತ್ತು ಶಿವಲೋಕವಾಸವು ಲಭಿಸುವುದು. ॥೧೨-೧೩॥

ತೃತೀಯೇ ಸೋಮವಾರೇ ತು ವಟಜಂ ದಂತಧಾವನಂ ।
ಸಾಯಂಕಾಲೇ ಬಿಲ್ವಪತ್ರೈಃ ಜಾಜೀಭಿಃ ಪೂಜಯೇಚ್ಛಿವಂ ॥೧೪॥

ನೈವೇದ್ಯಂ ದಾಪಯೇದನ್ನಂ ತದಶ್ನೀಯಾದ್ಯಥಾವಿಧಿ ।
ಏವಂ ಕೃತೇ ತೃತೀಯೇ ತು ಕನ್ಯಾದಾನಾಯುತಂ ಲಭೇತ್ ॥೧೫॥

ಚತುರ್ಥೇ ಸೋಮವಾರೇ ತು ಅಪಾಮಾರ್ಗಸಮುದ್ಭವಂ ।
ರುದ್ರೇಣ ಪೂಜಯೇದ್ರಾತ್ರೌ ಬಿಲ್ವೈರ್ಮಲ್ಲೀಸುಮೈಶ್ಶಿವಂ ॥೧೬॥

ಸ್ವಾದ್ವನ್ನಂ ಶರ್ಕರಾಕ್ಷೀರಂ ನಿವೇದ್ಯಾಶ್ನೀತ ಸದ್ವಿಜೈಃ ।
ಯಜ್ಞಾಯುತಫಲಂ ಪ್ರಾಪ್ಯ ಶಿವಲೋಕೇ ಮಹೀಯತೇ ॥೧೭॥

ಪಂಚಮೇ ಸೋಮವಾರೇ ತು ಅಶ್ವತ್ಥಂ ದಂತಧಾವನಂ ।
ಶಿವಂ ಸಂಪೂಜಯೇದ್ರಾತ್ರೌ ಬಿಲ್ವೈಃ ಪದ್ಮೈರ್ಮಹೇಶ್ವರಿ ॥೧೮॥

---

ಮೂರನೆಯ ಸೋಮವಾರವೂ ಆಲದ ಮರದ ಕಡ್ಡಿಯಿಂದ ದಂತಧಾವನ ಮಾಡಿಕೊಂಡು, ಸಾಯಂಕಾಲದಲ್ಲಿ ವಿಶೇಷವಾಗಿ ಬಿಲ್ವಪತ್ರೆ, ಜಾಜೀಪುಷ್ಪ ಇವುಗಳಿಂದ ಪರಶಿವನನ್ನು ಪೂಜಿಸಿ, ನೈವೇದ್ಯಾದಿಗಳಿಂದ ಪೂಜೆಯನ್ನು ಸಾಂಗಗೊಳಿಸಿ, ನಕ್ತಭೋಜನ ಮಾಡಿದವರಿಗೆ ಹತ್ತುಸಾವಿರ ಕನ್ಯಾದಾನದ ಫಲವು ದೊರೆಯುವುದು. ||೧೪-೧೫||

ನಾಲ್ಕನೆಯ ಸೋಮವಾರವೂ ಪ್ರಾತಃಕಾಲ ಉತ್ತರಣೆಯ ಕಡ್ಡಿಯಿಂದ ದಂತಧಾವನ ಮಾಡಿಕೊಂಡು, ರಾತ್ರಿ ರುದ್ರನನ್ನು ರುದ್ರಾಭಿಷೇಕದಿಂದಲೂ ವಿಶೇಷವಾಗಿ ಬಿಲ್ವ ಮತ್ತು ಮಲ್ಲಿಗೆ ಹೂವುಗಳಿಂದಲೂ ಅರ್ಚಿಸಿ, ಸಕ್ಕರೆ ಹಾಲು ಇವುಗಳಿಂದ ಕೂಡಿದ ಶಾಲ್ಯನ್ನವನ್ನು ನಿವೇದಿಸಿ ತಾನು ರಾತ್ರಿ ಭೋಜನ ಮಾಡಿದುದಾದರೆ ಹತ್ತುಸಾವಿರ ಯಜ್ಞಾಚರಣೆಯ ಫಲವನ್ನು ಪಡೆದು ಶಿವಲೋಕವನ್ನು ಸೇರಬಹುದು. ||೧೬-೧೭||

ಐದನೆಯ ಸೋಮವಾರ, ಅರಳೀ ಕಾಷ್ಠದಿಂದ ದಂತಧಾವನಮಾಡಿಕೊಂಡು, ರಾತ್ರಿ ಅಭಿಷೇಕಾನಂತರ ಬಿಲ್ವ ಮತ್ತು ಕಮಲದಿಂದ ಶಂಕರನನ್ನು ಅರ್ಚಿಸಿ, ದಧ್ಯನ್ನವನ್ನು ನಿವೇದಿಸಿ ನಕ್ತಭೋಜನಮಾಡುವುದರಿಂದ ಬ್ರಹ್ಮಹತ್ಯಾ ದೋಷವು

ದಧಿಭಕ್ತಂ ಶಿವೇ ದತ್ವಾ ಬ್ರಹ್ಮಹಾಪಿ ವಿಮುಚ್ಯತೇ ।
ಸೋಮವಾರೇ ತು ಷಷ್ಠೇ ವೈ ದಂತಧಾವನಮಾರ್ಜುನಂ ॥೧೯॥
ಶಿವಂ ಸಂಪೂಜಯೇದ್ರಾತ್ರೌ ಮಂದಾರೈರ್ಬಿಲ್ವಪಲ್ಲವೈಃ ।
ನೈವೇದ್ಯಂ ಚ ಶಿವೇ ದದ್ಯಾತ್ಫಲಪಾಯಸಮಂಡಕಂ ॥೨೦॥

ಸ ಷಡಧ್ವಾಯುತಫಲಂ ಪ್ರಾಪ್ಯ ಮಲ್ಲೋಕಮಾವ್ರಜೇತ್ ।
ಸಪ್ತಮೇ ಸೋಮವಾರೇ ತು ಪ್ಲಕ್ಷಜಂ ದಂತಧಾವನಂ ॥೨೧॥

ಶ್ರೀಕಂಠಂ ಪೂಜಯೇದ್ರಾತ್ರೌ ಶ್ರೀಪತ್ರೈಃ ಕರವೀರಕೈಃ ।
ವಿವಿಧೈರ್ಭಕ್ಷ್ಯಭೋಜ್ಯೈಶ್ಚ ನಾರಿಕೇಲಫಲೈರಪಿ ॥೨೨॥

ನೈವೇದ್ಯಂ ಚ ತತೋ ದತ್ವಾ ದೀಪಧೂಪಪುರಸ್ಸರಂ ।
ಸಪ್ತಸಾಗರದಾನಸ್ಯ ಫಲಂ ಲಬ್ಧ್ವಾ ಮಮಾಂತಿಗಃ ॥೨೩॥

ಅಷ್ಟಮೇ ಸೋಮವಾರೇ ತು ಅಷ್ಟಮೂರ್ತಿಂ ಯಜೇಚ್ಛಿವಂ ।
ಪಂಚಾಮೃತೈಃ ಫಲರಸೈರ್ಗಂಧಪುಷ್ಪಕುಶಾಂಬುಭಿಃ ॥೨೪॥

---

ನಿವಾರಣೆಯಾಗುವುದು. ಹಾಗೆಯೇ ಆರನೆಯ ಸೋಮವಾರವು ಅರ್ಜುನದಿಂದ (ಮತ್ತೀಮರದ ಕಡ್ಡಿ) ದಂತಧಾವನಮಾಡಿಕೊಂಡು, ರಾತ್ರಿ ವಿಶೇಷವಾಗಿ ಬಿಲ್ವ, ಮತ್ತು ಮಂದಾರಪುಷ್ಪ ಇವುಗಳಿಂದ ಸ್ವಾಮಿಯನ್ನರ್ಚಿಸಿ, ಪಾಯಸ, ಹಣ್ಣು ಇವುಗಳನ್ನು ನಿವೇದಿಸಿ ನಕ್ತವ್ರತ ಮಾಡುವುದರಿಂದ ಹತ್ತುಸಾವಿರ ಷಡಧ್ವಯಾಗಗಳ ಫಲವೂ, ಶಿವಲೋಕವೂ ಪ್ರಾಪ್ತಿಯಾಗುವುದು. ||೧೮-೧೯-೨೦||

ಅದೇ ರೀತಿ ಏಳನೆಯ ಸೋಮವಾರವೂ ಬಸರಿಯ ಮರದ ಕಡ್ಡಿಯಿಂದ ದಂತಧಾವನಮಾಡಿಕೊಂಡು, ರಾತ್ರಿ ಬಿಲ್ವ, ಕಣಿಗಲುಹೂವು, ಇವುಗಳಿಂದ ಶ್ರೀಕಂಠನನ್ನು ಅರ್ಚಿಸಿ, ತೆಂಗಿನಕಾಯಿ ವಿಧವಿಧವಾದ ಭಕ್ಷ್ಯಭೋಜ್ಯಗಳು ಇವುಗಳಿಂದ ಸ್ವಾಮಿಯನ್ನು ತೃಪ್ತಿಗೊಳಿಸಿ, ದೀಪಧೂಪಾದಿಗಳಿಂದ ವ್ರತವನ್ನು ಸಾಂಗಗೊಳಿಸಿದರೆ ಏಳು ಮಹಾಸಮುದ್ರಗಳ ದಾನದ ಫಲವನ್ನು ಪಡೆದು ನನ್ನ ಸನ್ನಿಧಿಗೆ ಬಂದು ಸೇರುವನು. ||೨೧-೨೨-೨೩||

ಎಂಟನೆಯ ಸೋಮವಾರ ಅಷ್ಟಮೂರ್ತಿಸ್ವರೂಪನಾದ ಮಹಾದೇವನನ್ನು ರಾತ್ರಿಯವೇಳೆ ಪಂಚಾಮೃತದ್ರವ್ಯಗಳು, ಫಲರಸಗಳು ಗಂಧೋದಕ, ಕುಶೋದಕ,

ಸುಗಂಧಿಪುಷ್ಪೈರ್ಬಿಲ್ವೈಶ್ಚ ಯಕ್ಷಕರ್ದಮಲೇಪನೈಃ ।
ಮಧ್ವನ್ನಂ ಪಾಯಸಾಪೂಪಂ ಕದಲೀಫಲಸಂಯುತಂ ॥೨೫॥

ನಿವೇದ್ಯಾಶ್ನೀತ ತದ್ರಾತ್ರೌ ಭವಭಕ್ತಿರ್ಜಿತೇಂದ್ರಿಯಃ ।
ಗಜಾನಾಂ ಚ ಶತೇ ದತ್ತೇ ಲಕ್ಷಂ ಚ ರಥವಾಜಿನಾಂ ॥೨೬॥

ಸೂರ್ಯಗ್ರಹೇ ಕುರುಕ್ಷೇತ್ರೇ ಯತ್ಪುಣ್ಯಂ ಸ್ಯಾನ್ಮಹೇಶ್ವರಿ ।
ತತ್ಪುಣ್ಯಂ ಕೋಟಿಗುಣಿತಂ ಸೋಮವಾರಾರ್ಚಕೋ ಲಭೇತ್ ॥೨೭॥

ನವಮೇ ಸೋಮವಾರೇ ತು ಕುಟಜಂ ದಂತಧಾವನಂ ।
ಬಿಲ್ವಪುನ್ನಾಗಕಾದಂಬೈಃ ಪೂಜಯೇನ್ನಾಂ ಮಹೇಶ್ವರಂ ॥೨೮॥

ಸಾಯಂ ಘೃತಾನ್ನನೈವೇದ್ಯಂ ಧೂಪದೀಪಮನೋಹರಂ ।
ಪೌಂಡರೀಕಾಯುತಫಲಂ ಪ್ರಾಪ್ಯ ವಿಷ್ಣುಕ್ಷಯೇ ವಸೇತ್ ॥೨೯॥

ತೇನೋದಿತಂ ಶಿವಜ್ಞಾನಂ ಲಬ್ಧ್ವಾಮಲ್ಲೋಕಮಾವ್ರಜೇತ್ ।
ದಶಮೇ ಸೋಮವಾರೇ ತು ಬಿಲ್ವಜಂ ದಂತಧಾವನಂ ॥೩೦॥

---

ಪುಷ್ಪೋದಕ, ಇವೇ ಮೊದಲಾದ ಜಲಧಾರೆಗಳಿಂದ ಅಭಿಷೇಕಿಸಿ, ಸುಗಂಧಯುತವಾದ ಪುಷ್ಪಗಳಿಂದಲೂ, ಬಿಲ್ವಪತ್ರೆಗಳಿಂದಲೂ ಪೂಜಿಸಿ, ಪವಿತ್ರವಾದ ಧೂಪವನ್ನಾಘ್ರಾಪಿಸಿ, ಜೇನುತುಪ್ಪ, ಅನ್ನ, ಪಾಯಸ, ಒಬ್ಬಟ್ಟು, ಬಾಳೆಯಹಣ್ಣು ಇವುಗಳನ್ನರ್ಪಿಸಿ, ರಾತ್ರಿ ತಾನೂ ಭೋಜನಮಾಡಬೇಕು. ಇದರಿಂದ ನೂರಾರು ಆನೆಗಳನ್ನೂ, ಲಕ್ಷಾಂತರ ರಥ, ಕುದುರೆಗಳನ್ನೂ, ಸೂರ್ಯಗ್ರಹಣ ಕಾಲದಲ್ಲಿ ಕುರುಕ್ಷೇತ್ರದಲ್ಲಿ ದಾನಮಾಡುವುದರಿಂದ ಎಷ್ಟು ಪುಣ್ಯವು ಲಭಿಸುವುದೋ ಅದಕ್ಕೆ ಕೋಟಿಪಾಲು ಅಧಿಕವಾಗಿ ಪುಣ್ಯರಾಶಿಯು ಕೈಸೇರುವುದು. ||೨೪-೨೫-೨೬-೨೭||

ಒಂಬತ್ತನೆಯ ಸೋಮವಾರ, ಕುಟಜ (ಕೊಡಸಿಗೆಮರ) ವೃಕ್ಷದ ಕಡ್ಡಿಯಿಂದ ಹಲ್ಲುಜ್ಜಿಕೊಂಡು, ರಾತ್ರಿ ವಿಶೇಷವಾಗಿ, ಬಿಲ್ವಪತ್ರೆ, ಸುರಗಿ, ಕದಂಬಪುಷ್ಪ ಇವುಗಳಿಂದ ಪೂಜಿಸಿ, ತುಪ್ಪಾನ್ನವನ್ನು ನಿವೇದಿಸಿ, ನೀರಾಜನಾದಿಗಳಿಂದ ಪೂಜೆಯನ್ನು ಮುಗಿಸಿ, ನಕ್ತಭೋಜನ ಮಾಡಿದವರಿಗೆ ಹತ್ತುಸಾವಿರ ಪೌಂಡರೀಕಯಾಗಗಳ ಫಲವು ಲಭಿಸುವುದು. ಮತ್ತು ಅವನಿಗೆ ವಿಷ್ಣುಲೋಕವಾಸವು ಲಭಿಸಿ,

ಮಹಾದೇವಂ ಬಿಲ್ವಪತ್ರೈರ್ಯಜೇನ್ನೀಲೋತ್ಪಲೈಸ್ತಥಾ ।
ನೈವೇದ್ಯಂ ವಟಿಕಾಪೂಪಂ ಸ್ವಾದ್ವನ್ನಂ ವಿನಿವೇದಯೇತ್ ॥೩೦॥

ವಾಜಪೇಯಾಯುತಂ ಪ್ರಾಪ್ಯ ಬ್ರಹ್ಮಲೋಕೇ ಮಹೀಯತೇ ।
ಬ್ರಹ್ಮಣಾ ಪೂಜಿತಸ್ತತ್ರ ಜ್ಞಾನಂ ಲಬ್ಧ್ವಾ ತದಂತಿಕೇ ॥೩೨॥

ತೇನೈವ ಮುಚ್ಯತೇ ದೇವಿ ಸೋಽಪಿ ಮಯ್ಯೇವ ಲೀಯತೇ ।
ಏಕಾದಶೇ ಸೋಮವಾರೇ ಕಾಷ್ಠಮೌದುಂಬರಂ ಭವೇತ್ ॥೩೩॥

ಪಾರ್ವತೀಶಂ ದೂರ್ವಯಾಽರ್ಚ್ಯ ಬಿಲ್ವೈಶ್ಚೈವಾಥ ಚಂಪಕೈಃ ।
ಕೃಸರಂ ಭಕ್ಷ್ಯಭೋಜ್ಯಾದಿ ನಿವೇದ್ಯಾಶ್ನೀತ ಶಾಂಭವೈಃ ॥೩೪॥

ರಾಜಸೂಯಾದಿದಶಕಂ ಪ್ರಾಪ್ಯ ಮಲ್ಲೋಕಮಾವಸೇತ್ ।
ದ್ವಾದಶೇ ಸೋಮವಾರೇ ತು ಶಿಗ್ರುಜಂ ದಂತಧಾವನಂ ॥೩೫॥

---

ವಿಷ್ಣುವಿನಿಂದ ಶಿವಜ್ಞಾನವನ್ನು ಪಡೆದು ಅನಂತರ ನನ್ನ ಲೋಕಕ್ಕೆ ಬಂದು ಸೇರುವನು. ॥೨೮-೨೯-೩೦॥

ಹತ್ತನೆಯ ಸೋಮವಾರ ಬಿಲ್ವದ ಕಡ್ಡಿಯಿಂದ ಹಲ್ಲನ್ನುಜ್ಜಿ, ರಾತ್ರಿ ಮಹೇಶ್ವರನನ್ನು ಬಿಲ್ವಪತ್ರಾದಿಗಳಿಂದಲೂ, ನೀಲೋತ್ಪಲಗಳಿಂದಲೂ ಪೂಜಿಸಿ, ಒಡೆ, ಕಡಬು, ಸ್ವಾದ್ವನ್ನಗಳನ್ನು ನಿವೇದಿಸಿ, ನಕ್ತಭೋಜನ ಮಾಡಿದವರಿಗೆ ಹತ್ತುಸಾವಿರ ವಾಜಪೇಯ ಯಾಗದ ಫಲವು ದೊರೆತು ಬ್ರಹ್ಮಲೋಕವು ಲಭಿಸುವುದು. ಅಲ್ಲಿಯೂ ಅವರು ಬ್ರಹ್ಮನಿಂದ ಸತ್ಕೃತರಾಗಿ ಶಿವಜ್ಞಾನವನ್ನು ಪಡೆದು, ಅಲ್ಲಿಂದ ನನ್ನ ಸಾಯುಜ್ಯವನ್ನು ಪಡೆಯುವನೆಂಬುದರಲ್ಲಿ ಸಂಶಯವಿಲ್ಲ. ॥೩೧-೩೨-೩೩॥

ಹನ್ನೊಂದನೆಯ ಸೋಮವಾರದ ದಿನ ಅತ್ತೀಮರದ ಕಾಷ್ಠದಿಂದ ದಂತಧಾವನಮಾಡಿಕೊಂಡು, ರಾತ್ರಿ ಪಾರ್ವತೀಶನನ್ನು ಹುಲ್ಲುಗರಿಕೆ ಮತ್ತು ಬಿಲ್ವಪತ್ರೆ, ಸಂಪಿಗೆಹೂವು ಇವುಗಳಿಂದರ್ಚಿಸಿ, ಚಿಗುಳಿಯೇ ಮೊದಲಾದ ಭಕ್ಷ್ಯಭೋಜ್ಯಾದಿಗಳೆಲ್ಲವುಗಳನ್ನು ನಿವೇದಿಸಿ, ಶಾಂಭವರೊಡನೆ ತಾನೂ ನಕ್ತಭೋಜನ ಮಾಡಬೇಕು. ಇದರಿಂದ ಹತ್ತು ರಾಜಸೂಯಯಾಗಗಳ ಫಲವು ದೊರೆತು, ನನ್ನ ಲೋಕವಾಸವು ಅವರಿಗೆ ಲಭಿಸುವುದು. ॥೩೪-೩೫॥

ಶಿಗ್ರುಪುಷ್ಪೈರುಗ್ರಪೂಜಾಂ ಕುರ್ಯಾತ್ತ್ಸಾಯಂ ತು ಬಿಲ್ವಕೈಃ ।
ಮುದ್ಗಾನ್ನಂ ಸಘೃತಂ ಭಕ್ಷ್ಯಂ ನಿವೇದ್ಯಾಶ್ನೀತ ಶಾಂಭವೈಃ ॥೩೬॥

ದ್ವಾದಶಾಬ್ದಫಲಂ ಪ್ರಾಪ್ಯ ಶಿವಲೋಕೇ ಮಹೀಯತೇ ।
ಮಾಸಾಬ್ದಸಂಖ್ಯಯಾ ಕುರ್ಯಾತ್ಸೋಮವಾರವ್ರತಂ ಶಿವೇ ॥೩೭॥

ನಕ್ತಾಶನೀ ಭವೇದ್ವರ್ಷಂ ತ್ರಿವರ್ಷಂ ದ್ವಾದಶಾಬ್ದಕಂ ।
ಶಿವಕ್ಷೇತ್ರೇಷು ಪುಣ್ಯೇಷು ಅವಿಮುಕ್ತೇ ಚ ನೈತ್ಯಕಂ ॥೩೮॥

ಕುರ್ಯಾದುದ್ಯಾಪನಂ ಚಾಂತೇ ಪುನಃ ಪುನರ್ಯಥಾ ಭವೇತ್ ।
ಆಜನ್ಮಗ್ರಹಣೇ ದೇವಿ ನೈವೋದ್ಯಾಪನಮಾಚರೇತ್ ॥೩೯॥

॥ ಪಾರ್ವತ್ಯುವಾಚ ॥

ಕೀದೃಶಂ ತದ್ವ್ರತಂ ದೇವ ವಿಧಾನಂ ತಸ್ಯ ಕೀದೃಶಂ ।
ಕಥಂ ಕಾರ್ಯಂ ತದಾ ಗ್ರಾಹ್ಯಂ ಕಿಂ ದಾನಂ ಕಥಮರ್ಚನಂ ॥೪೦॥

---

ಹನ್ನೆರಡನೆಯ ಸೋಮವಾರ ನುಗ್ಗಿಯ ಕಡ್ಡಿಯಿಂದ ದಂತಧಾವನಮಾಡಿಕೊಂಡು, ರಾತ್ರಿ ನುಗ್ಗಿಹೂವು, ಬಿಲ್ವಪತ್ರೆಇವುಗಳಿಂದ ಶಂಕರನನ್ನು ಪೂಜಿಸಿ, ಹುಗ್ಗಿ, ತುಪ್ಪದ ಭಕ್ಷ್ಯಗಳು ಇವುಗಳನ್ನು ನಿವೇದಿಸಿ ಶಾಂಭವರೊಡನೆ ತಾನೂ ನಕ್ತಭೋಜನ ಮಾಡಿದರೆ ಹನ್ನೆರಡುವರ್ಷ ಯಜ್ಞವನ್ನು ಆಚರಿಸಿದುದರ ಫಲವು ಲಭಿಸಿ, ಶಿವಲೋಕ ಪ್ರಾಪ್ತಿಯಾಗುವುದು: ಹೀಗೆ ಹನ್ನೆರಡು ಸೋಮವಾರವೂ ವ್ರತವನ್ನು ಆಚರಿಸಿ ಇದೇರೀತಿ ಹನ್ನೆರಡುವರ್ಷಪರ್ಯಂತ ಈ ವ್ರತವನ್ನು ಮುಂದು ವರಿಸಬಹುದು. ॥೩೬-೩೭॥

ಅಥವಾ ಇದೇ ನಕ್ತವ್ರತವನ್ನು ಒಂದುವರ್ಷ, ಮೂರುವರ್ಷ, ಹನ್ನೆರಡು ವರ್ಷ ಈ ಸಂಖ್ಯೆಯಲ್ಲಿ ಬೇಕಾದರೂ ನಡೆಸಬಹುದು. ಶಿವಕ್ಷೇತ್ರಗಳು, ಅಥವಾ ಕಾಶೀಕ್ಷೇತ್ರ ಇವು ಈ ವ್ರತಕ್ಕೆ ಶ್ರೇಷ್ಠವಾದ ಸ್ಥಳಗಳು. ಹೀಗೆ ಮಾಡಿದನಂತರ ವ್ರತಸಾಂಗತಾಫಲಸಿದ್ಧಿಗಾಗಿ ಉದ್ಯಾಪನೆಯನ್ನು ನಡೆಸಬೇಕು. ಮರಣಪರ್ಯಂತವೂ ಮಾಡುವುದಾಗಿ ನಿಶ್ಚಯಮಾಡಿದರೆ ಉದ್ಯಾಪನೆಯು ಅನವಶ್ಯಕ, ಎಂದು ಮಹಾದೇವನು ಹೇಳಲು, ಆಗ ಪಾರ್ವತಿಯು ತನ್ನ ಪ್ರಿಯವಲ್ಲಭನನ್ನು ಕುರಿತು ‘ ಸ್ವಾಮಿ ಆ ಉದ್ಯಾಪನೆಯೆಂದರೇನು ? ಅದರ ಕ್ರಮವೆಂತು ? ಯಾವಾಗ ಅದನ್ನು ನಡೆಸ

॥ ಶ್ರೀ ಮಹಾದೇವ ಉವಾಚ ॥

ಉದ್ಯಾಪನವಿಧಾನಂ ಚ ವಿಸ್ತರೇಣ ವದಸ್ವ ಮೇ ॥೪೦॥

ಮಾಘೇ ಮಾಸ್ಯಷ್ಟಮೀ ಶುಕ್ಲೇ ಶಿವೇಂದುದಿನಸಂಯುತೇ ।
ತದಾ ಗ್ರಾಹ್ಯಂ ವ್ರತಮಿದಂ ಅನೇನ ವಿಧಿನಾ ಶುಭಂ ॥೪೨॥

ಪ್ರಾತಶ್ಶುಕ್ಲತಿಲೈಸ್ಸ್ನಾಯಾದಾಚಾರ್ಯಸಹಿತೋ ವ್ರತೀ ।
ಪೂರ್ವಾಹ್ಣೇ ವಿಧಿವತ್ಕುರ್ಯಾದುಮಾಶಂಕರಪೂಜನಂ ॥೪೩॥

ತತಃ ಪುಷ್ಪಾಂಜಲಿಂ ದತ್ವಾ ಪ್ರಣಮ್ಯ ಚ ಪುನಃ ಪುನಃ ।
ವಿಧಿನಾನೇನ ಗೃಹ್ಣೀಯಾದ್ವ್ರತಂ ಸಂಕಲ್ಪಪೂರ್ವಕಂ ॥೪೪॥

ಗೃಹ್ಣಾಮಿ ಭವರೋಗಾರ್ತಃ ಸೋಮವಾರವ್ರತೌಷಧಂ ।
ವ್ರತೇನಾನೇನ ಸುಪ್ರೀತೋ ಭವೇತಾಂ ಪಾರ್ವತೀಶ್ವರೌ ॥೪೫॥

---

ಬೇಕು. ಆಗ ನಡೆಸಬೇಕಾದ ದಾನವಾವುದು ? ಇದನ್ನೆಲ್ಲಾ ನನಗೆ ವಿಸ್ತಾರವಾಗಿ ತಿಳಿಸಬೇಕು ' ಎಂದು ಪ್ರಾರ್ಥಿಸಿದಳು. ॥೩೮-೩೯-೪೦॥

ಆಗ ಮಹಾದೇವನು ದೇವಿಗೆ ಆವ್ರತೋದ್ಯಾಪನವಿಧಿಯನ್ನು ವಿಧಿವತ್ತಾಗಿ ಹೀಗೆ ವಿವರಿಸಿದನು. ಮಾಘಮಾಸದ ಶುಕ್ಲಾಷ್ಟಮಿಯು ಸೋಮವಾರದಲ್ಲಿ ಬಂದಾಗ ಈ ಉದ್ಯಾಪನೆಯನ್ನು ನೆರವೇರಿಸುವುದು ಶ್ರೇಯಸ್ಕರ. ಉದ್ಯಾಪನೆಯ ದಿನ ಪ್ರಾತಃ ಕಾಲ ಬಿಳಿಯ ಎಳ್ಳಿನ ಎಣ್ಣೆಯಿಂದ ತಾನೂ ಆಚಾರ್ಯನೂ ಸ್ನಾನಮಾಡಬೇಕು. ಅನಂತರ ಆದಿನ ಪೂರ್ವಾಹ್ಣದಲ್ಲಿ ವಿಧಿವತ್ತಾಗಿ ಶಿವಾರಾಧನೆಯನ್ನು ನಡೆಸಬೇಕು. ॥೪೧-೪೨-೪೩॥

ಕೊನೆಯದಾಗಿ ಮಂತ್ರಪುಷ್ಪವನ್ನು ಸಮರ್ಪಿಸಿ, ಪದೇ ಪದೇ ಶಿವನಿಗೆ ನಮಸ್ಕರಿಸಿ, ಆಗಲೇ ಸಂಕಲ್ಪಪೂರ್ವಕವಾಗಿ ವ್ರತೋದ್ಯಾಪನೆಗೆ ಮನಸ್ಸುಮಾಡ ಬೇಕು. ' ಸಂಸಾರವೆಂಬ ರೋಗದಿಂದ ಪೀಡಿತನಾದ ನಾನು ಸೋಮವಾರವ್ರತವೆಂಬ ಔಷಧವನ್ನು ಸೇವಿಸಿ ಮುಕ್ತನಾಗುವೆನು. ಮತ್ತು ನಾನು ಮಾಡುವ ಈ ವ್ರತದಿಂದ ಪಾರ್ವತೀಪರಶಿವರು ತೃಪ್ತರಾಗಲಿ ' ಎಂದು ಪ್ರಾರ್ಥಿಸಬೇಕು. ॥೪೪-೪೫॥

ವಿಸರ್ಜನಂ ತತಃ ಕುರ್ಯಾದಾಚಾರ್ಯಂ ವರಯೇತ್ತತಃ ।
ಅಹಃಶೇಷಂ ತತೋ ನೀತ್ವಾ ಪುರಾಣಶ್ರವಣಾದಿಭಿಃ ॥೪೬॥

ಶಯಾನೋ ದರ್ಭಕೂರ್ಚೇಷು ಅಭುಕ್ತಬ್ರಹ್ಮಚರ್ಯವಾನ್ ।
ಅನೇನ ವಿಧಿನಾ ದೇವಿ ಮದ್ದಿನೇ ವಾಸರೇ ಶುಭೇ ॥೪೭॥

ವ್ರತೀ ಕುರ್ವನ್ನವಾಪ್ನೋತಿ ಮದ್ಭಾವಂ ನಾತ್ರ ಸಂಶಯಃ ।
ತಸ್ಮಿನ್ ದಿನೇ ಕೃತಂ ಕಿಂಚಿದ್ಧೋಮಂ ದಾನಂ ಶಿವಾರ್ಚನಂ ॥೪೮॥

ವ್ರತಂ ವಾ ಪ್ರೀತಿದಂ ಸ್ಕಂದಮುಮಯಾ ಸಹಿತಸ್ಯ ಮೇ ।
ಅತಃ ಸೋಮಾಖ್ಯಯಾ ವಾರಃ ಪ್ರಶಸ್ತೋಯಂ ಮಮಪ್ರಿಯಃ॥೪೯॥

ಏವಂ ಸಮಾಷ್ಟಕಂ ಕುರ್ಯಾದ್ವ್ರತಸ್ಯೋದ್ಯಾಪನಂ ಭವೇತ್ ।
ಮಾಘಾದ್ಯಪಂಚಕಂ ಕುರ್ಯಾಚ್ಛುಕ್ಲಪಕ್ಷೇ ವಿಶೇಷತಃ ॥೫೦॥

ಶಿವರ್ಕ್ಷತಿಥಿಯೋಗಾನಾಮೇಕ್ಯೈಕೇನಾಪಿ ಸಂಯುತೇ ।
ಸೋಮವಾರೇ ವಿಧಾತವ್ಯಂ ಚಂದ್ರತಾರಾಬಲಾನ್ವಿತೇ ॥೫೧॥

ಅನಂತರ ವಿಸರ್ಜನೆಮಾಡಿ ಆಚಾರ್ಯಪೂಜೆಯಿಂದ ವ್ರತವನ್ನು ಸಾಂಗಗೊಳಿಸಬೇಕು. ಹೀಗೆ ಆ ಹಗಲೆಲ್ಲಾ ಶಿವಪುರಾಣದ ಕಥೆಗಳನ್ನು ಕೇಳುತ್ತಾ, ಕಾಲಕಳೆದು ರಾತ್ರಿ ದರ್ಭಾಸನದಮೇಲೆ ಮಲಗಿ, ಬ್ರಹ್ಮಚರ್ಯೆಯಿಂದಲೂ, ಉಪವಾಸದಿಂದಲೂ ನಿದ್ರಿಸಬೇಕು. ||೪೬-೪೭||

ಆದಿನದಲ್ಲಿ ನನ್ನನ್ನುದ್ದೇಶಿಸಿ ಮಾಡುವ ಎಲ್ಲಾ ಹೋಮ, ದಾನ, ಶಿವಾರ್ಚನೆ, ಶಿವವ್ರತ, ಇವೆಲ್ಲವೂ ನನಗೆ ಪ್ರೀತಿಯನ್ನುಂಟುಮಾಡತಕ್ಕವುಗಳೇ. ಈ ಸೋಮವಾರವ್ರತವು ಉಮಾಸ್ಕಂದಸಮೇತನಾದ ನನಗೆ ವಿಶೇಷಪ್ರೀತಿಯನ್ನುಂಟುಮಾಡತಕ್ಕದು. ಇದರ ಆಚರಣೆಯಿಂದ ಮಾನವನು ನನ್ನ ಸಾರೂಪ್ಯವನ್ನೇ ಪಡೆಯುವನು. ಈರೀತಿ ಎಂಟುವರ್ಷ ಮಾಘಮಾಸದಲ್ಲಿ ವ್ರತಮಾಡಿದ ಮೇಲೆ ಈ ವ್ರತಕ್ಕೆ ಉದ್ಯಾಪನೆ ಸಲ್ಲುವುದು. ಈ ಉದ್ಯಾಪನೆಯನ್ನು ಮಾಘಾದಿಯಾದ ಐದುತಿಂಗಳಿನಲ್ಲಿಯೇ ಶುಕ್ಲಪಕ್ಷದಲ್ಲಿಯೇ ನಡೆಸಬೇಕು. ||೪೮-೪೯-೫೦||

ಸೋಮವಾರದ ದಿನ ಶಿವತಿಥಿಗಳಾದ ಅಷ್ಟಮೀ ಚತುರ್ದಶೀತಿಥಿಗಳಾಗಲಿ, ಶಿವನಕ್ಷತ್ರವಾದ ಆರ್ದ್ರಾ, ಕೃತ್ತಿಕೆಗಳಾಗಲಿ ಸೇರಿದ ದಿನ, ಚಂದ್ರಬಲ, ಮತ್ತು

ವಿಧಾಯ ರದನೋಲ್ಲೇಖಂ ಪ್ರಾತಃಸ್ನಾನಾದ್ವಿಧಾನತಃ ।
ಆಚಾರ್ಯಂ ವರಯೇದೇಕಂ ಶಿವಭಕ್ತಂ ಜಿತೇಂದ್ರಿಯಃ ॥೫೨॥

ಪುರಾಣಸ್ಮೃತಿಶಾಸ್ತ್ರಜ್ಞಂ ನಿಗಮಾಗಮವೇದಿನಂ ।
ಉಪೋಷ್ಯ ಸೋಮವಾರೇ ಚ ಸಾಯಂ ಸಂಧ್ಯಾಮುಪಾಸ್ಯ ಚ॥೫೩॥

ಶಿವಾಲಯೇ ನದೀತೀರೇ ಶುಚೌ ದೇಶೇ ಗೃಹೇ ವ್ರತೀ ।
ಅಷ್ಟಾಂಗುಲೋಚ್ಛ್ರಿತಾಂ ವೇದಿಂ ವಿತಸ್ತಿದ್ವಯವಿಸ್ತೃತಾಂ ॥೫೪॥

ತಸ್ಯಾಂ ಷೋಡಶಪತ್ರಂ ಚ ತಂಡುಲೈಃ ಪರಿಪೂರಿತಂ ।
ಪುಷ್ಪಮಂಡಪಿಕಾಂ ಕೃತ್ವಾ ಪತಾಕಾದ್ಯೈರಲಂಕೃತಾಂ ॥೫೫॥

ವಿತಾನೈರ್ವಿವಿಧೈಶ್ಚಿತ್ರೈಃ ಫಲರಾಜಿವಿರಾಜಿತಾಂ ।
ಏವಂ ಪ್ರಕಲ್ಪಯೇದ್ವೇದಿಂ ಚತುರಸ್ರಾಂ ಸಮಾಂ ತಥಾ ॥೫೬॥

---

ತಾರಾಬಲಗಳಿಂದ ಕೂಡಿರುವಂತಹ ಹಿಂದೆ ಹೇಳಿದ ದಿನಗಳಲ್ಲಿ ಉದ್ಯಾಪನೆಯನ್ನು ಮಾಡಬೇಕು. ಈ ವಾರ, ನಕ್ಷತ್ರ, ತಿಥಿಗಳಲ್ಲಿ ಯಾವ ಒಂದೆರಡಾದರೂ ಸೇರಿರಬೇಕು. ಅಂತಹದಿನದಲ್ಲಿ ವಿಧಿವತ್ತಾಗಿ ದಂತಧಾವನಪುರಸ್ಸರವಾಗಿ ಸ್ನಾನಮಾಡಿ, ಅನಂತರ ವೇದಶಾಸ್ತ್ರಗಳಲ್ಲಿ ನಿಪುಣನಾಗಿ, ಶಿವಭಕ್ತಿಭರಿತನೂ, ಜಿತೇಂದ್ರಿಯನೂ, ಶಾಂತಸ್ವಭಾವದವನೂ ಆಗಿರುವ ದ್ವಿಜಶ್ರೇಷ್ಠನನ್ನು ಆಚಾರ್ಯನಾಗುವಂತೆ ಪ್ರಾರ್ಥಿಸಿಕೊಳ್ಳಬೇಕು. ಆದಿನ ಉಪವಾಸವಿದ್ದು ಸಾಯಂಸಂಧ್ಯಾವಂದನೆಮಾಡಿಕೊಂಡು, ಶಿವಾಲಯದಲ್ಲಿಯೋ ಅಥವಾ ನದೀತೀರದಲ್ಲಿಯೋ ಶುಚಿಯಾಗಿರುವ ಪ್ರದೇಶದಲ್ಲಿ ವ್ರತವನ್ನು ಆರಂಭಿಸಬೇಕು. ॥೫೧-೫೨-೫೩॥

ವ್ರತವನ್ನು ನಡೆಸುವ ಸ್ಥಳದಲ್ಲಿ ಎಂಟು ಅಂಗುಲ ಎತ್ತರವಾಗಿಯೂ ಎರಡು ಮೊಳ ಅಗಲವಾಗಿಯೂ ಇರುವ ಒಂದು ವೇದಿಕೆಯನ್ನು ನಿರ್ಮಿಸಬೇಕು. ಅದರಲ್ಲಿ ಹದಿನಾರುದಳಗಳನ್ನು ರಚಿಸಿ ಅದರಮೇಲೆ ಅಕ್ಕಿಯನ್ನು ಹರಡಬೇಕು. ಹೂವಿನಿಂದ ಮಂಟಪವನ್ನು ರಚಿಸಿ, ಅದಕ್ಕೆ ಧ್ವಜಗಳೇಮೊದಲಾದುವುಗಳನ್ನು ಸುತ್ತಲೂ ನೆಡಿಸಿ, ಮೇಲ್ಕಟ್ಟು, ಪುಷ್ಪಮಾಲೆಗಳು ಇವುಗಳಿಂದ ಅಲಂಕಾರಮಾಡಿ, ಅಲ್ಲಲ್ಲಿ ಫಲವಸ್ತುಗಳನ್ನು ಕಟ್ಟಿ ಅದನ್ನು ಮನೋಹರವಾದದ್ದನ್ನಾಗಿ ಕಲ್ಪಿಸಬೇಕು. ಆ ವೇದಿಕೆಯು ಚಚ್ಚೌಕವಾಗಿ ಎತ್ತರತಗ್ಗುಗಳಿಲ್ಲದೆ ಒಂದೇ ಮಟ್ಟದಲ್ಲಿರಬೇಕು. ॥೫೪-೫೫-೫೬॥

ಆಚಾರ್ಯೇಣ ಸಮಂ ಕುರ್ಯಾನ್ಮದಾರಾಧನಮುತ್ತಮಂ ।
ಪದ್ಮಮಧ್ಯೇ ನವೀನಂ ಚ ಧಾತುಜಂ ಸ್ಥಾಪಯೇದ್ಘಟಂ ॥೫೭॥

ವಾಸಸಾ ಸಂವೃತೇ ದೇವಿ ಫಲಪಲ್ಲವಚಕ್ರಕಂ ।
ಸಮಂತಾತ್ಕುಂಭಕೈರಷ್ಟೈಃ ಪಲ್ಲವಾಂಬುಪ್ರಪೂರಿತೈಃ ॥೫೮॥

ಗಣೇಶಂ ಮಾತೃಕಾಂ ಚೈವ ದುರ್ಗಾಂ ಕ್ಷೇತ್ರಪತಿಂ ಹರಿಂ ।
ಬ್ರಹ್ಮಾಣಮಥ ಸಾವಿತ್ರೀಂ ಇಂದ್ರಮೈರಾವತಸ್ಥಿತಂ ॥೫೯॥

ಪಂಚಾಮೃತೋದಕೈಃ ಸ್ನಾಪ್ಯ ಗಂಧಪುಷ್ಪಾಕ್ಷತೈರ್ಜಲೈಃ ।
ಗೃಹೀತೈರ್ಮಧ್ಯಮೇ ಕುಂಭೇ ಧ್ಯಾಯೇನ್ಮದ್ರೂಪಮೀಶ್ವರಂ ॥೬೦॥

ಸಾಂಬಂ ಚಂದ್ರಕಲಾಜೂಟಂ ತ್ರ್ಯಂಬಕಂ ನೀಲಕಂಧರಂ ।
ವರದಾಭಯಹಸ್ತಂ ಚ ಗಂಧಪುಷ್ಪಾಂಬರಾವೃತಂ ॥೬೧॥

ತ್ವಯಾ ಚ ಸ್ಕಂದಗಣಪನಂದಿಭೃಂಗೀಶಸೇವಿತಂ ।
ಧ್ಯಾತ್ವಾವಾಹ್ಯಾಥ ಸಂಪೂಜ್ಯ ಶುದ್ಧಪಂಚಾಕ್ಷರೇಣ ಹಿ ॥೬೨॥

ಆಚಾರ್ಯನೊಡಗೂಡಿ ಶಿವಾರಾಧನೆಗೆ ಪ್ರಾರಂಭಿಸಬೇಕು. ಹಿಂದೆ ಹೇಳಿದಂತೆ ಏರ್ಪಡಿಸಿದ ಷೋಡಶದಳ ಕಮಲ ಮಧ್ಯದಲ್ಲಿ ಹೊಸದಾದ ಲೋಹದಿಂದ ನಿರ್ಮಿತವಾದ ಕಲಶವೊಂದನ್ನು ವಸ್ತ್ರದಿಂದಲೂ, ಫಲ ಪಲ್ಲವಗಳಿಂದಲೂ ಅಲಂಕರಿಸಿ ಸ್ಥಾಪಿಸಬೇಕು. ಅದರ ಸುತ್ತಲೂ ಕ್ರಮವಾಗಿ ಅದೇರೀತಿ ಇರುವ ಎಂಟು ಕಲಶಗಳನ್ನು ಕ್ರಮವಾಗಿ ಇರಿಸಬೇಕು. ॥೫೭-೫೮॥

ಆ ಎಂಟು ಕಲಶಗಳಲ್ಲಿ ಕ್ರಮವಾಗಿ, ಗಣಪತಿ, ಮಾತೃಕಾದೇವತೆಗಳು, ದುರ್ಗಾ, ಕ್ಷೇತ್ರಪತಿ, ಹರಿ, ಬ್ರಹ್ಮ, ಸಾವಿತ್ರಿ ಐರಾವತೋಪರಿಸ್ಥನಾದ ಇಂದ್ರ, ಈ ದೇವತೆಗಳನ್ನು ಆವಾಹಿಸಬೇಕು. ಮಧ್ಯಭಾಗದ ಕಲಶದಲ್ಲಿ ಪರಮೇಶ್ವರನನ್ನು ಆವಾಹನೆಮಾಡಬೇಕು. ಈ ಕಲಶಗಳನ್ನೆಲ್ಲಾ, ಪಂಚಾಮೃತಗಳಿಂದಲೂ, ಗಂಧ ಪುಷ್ಪಾಕ್ಷತಾದಿಗಳಿಂದಲೂ ಪ್ರೋಕ್ಷಣಮಾಡಬೇಕು. ॥೫೯-೬೦॥

ಪಾರ್ವತಿಯೊಡಗೂಡಿ, ಚಂದ್ರಕಲಾಧರನಾಗಿ, ಮೂರುಕಣ್ಣುಗಳಿಂದಲೂ, ನೀಲಕಂಠದಿಂದಲೂ ಕೂಡಿರುವ ನನ್ನ ಸ್ವರೂಪವನ್ನು ಈ ರೀತಿ ಅರಿಯಬೇಕು. ವರದ ಮತ್ತು ಅಭಯ ಹಸ್ತಗಳಿಂದಲೂ, ಗಂಧಮಾಲ್ಯಾಭರಣಾದಿಗಳಿಂದಲೂ,

ತತ್ರ ದ್ವೇದಾದಿಮಂತ್ರೈಶ್ಚ ಪೂರ್ವಾದಿಷು ದಲೇಷ್ವಥ ।
ಮೂರ್ತಯೋಷ್ಟೌ ಮದೀಯಾಶ್ಚ ಪೂಜನೀಯಾಃ ಕ್ರಮೇಣ ॥೬೩॥

ಅನಂತಾಯ ನಮಃ ಸೂಕ್ಷ್ಮಶಿವಾಯಾಥ ತ್ರಿಮೂರ್ತಯೇ ।
ಶ್ರೀಕಂಠಾಯ ಶಿಖಂಡಾಯ ಚಂದ್ರಚೂಡಾಯ ಶೂಲಿನೇ ॥೬೪॥

ಪೂರ್ವಾದಿಕ್ರಮಯೋಗೇನ ತನವಃ ಪೂಜಯೇನ್ಮಮ ।
ತದ್ಬಹಿರ್ಲೋಕಪಾಲಾಂಶ್ಚ ಪೂಜಯೇನ್ಮೂಲಮಂತ್ರತಃ ॥೬೫॥

ವಿಷ್ಟರಾದ್ಯುಪಚಾರೈಶ್ಚ ಗಂಧಪುಷ್ಪಾಕ್ಷತೈರ್ಯಜೇತ್ ।
ಬಿಲ್ವಪತ್ರಾಕ್ಷತೈಃ ಪುಷ್ಪೈಃ ಧೂಪದೀಪೈಸ್ಸಮರ್ಚಯೇತ್ ॥೬೬॥

ಮನೋರಥಾ ವಿಧಾತವ್ಯಾ ಪೂಜಾ ವಿತ್ತಾನುಸಾರತಃ ।
ತತೋ ವೇದ್ಯಾಮಧೋಭೂಮೌ ಸರ್ವತೋ ಭದ್ರಮಂಡಲೇ ॥೬೭॥

ಬ್ರಹ್ಮಾದ್ಯಾ ದೇವತಾಸ್ಸರ್ವಾಃ ಕ್ರಮೇಣೈವ ಸಮರ್ಚಯೇತ್ ।
ನೈವೇದ್ಯಾನಿ ಸುಹೃದ್ಯಾನಿ ತಾಂಬೂಲಾನಿ ಚ ಕಲ್ಪಯೇತ್ ॥೬೮॥

ಪಾರ್ವತೀ, ಸ್ಕಂದ, ಗಣಪ, ನಂದಿ, ಭೃಂಗಿ, ಇವರಿಂದಲೂ ಪರಿವೃತನಾಗಿರುವ ನನ್ನನ್ನು ಶಿವಪಂಚಾಕ್ಷರಮಂತ್ರದಿಂದ ಆವಾಹಿಸಬೇಕು. ಉಳಿದ ಎಂಟು ದೇವತೆಗಳನ್ನು ಆಯಾ ದೇವತೆಗಳ ವೇದ ಮಂತ್ರಗಳಿಂದ ಕ್ರಮವಾಗಿ ಕಲಶಗಳಲ್ಲಿ ಆವಾಹನೆ ಮಾಡಬೇಕು. ॥೬೧-೬೨-೬೩॥

ಪ್ರಧಾನಕಲಶದಲ್ಲಿ ಆವಾಹಿತನಾದ ನನ್ನ (ಶಿವನ) ಸುತ್ತಲೂ ಪೂರ್ವಾದಿಯಾಗಿ, ಅನಂತ, ಸೂಕ್ಷ್ಮರೂಪಿ, ಶಿವ, ತ್ರಿಮೂರ್ತಿ, ಶ್ರೀಕಂಠ, ಶಿಖಂಡ, ಚಂದ್ರಚೂಡ, ಶೂಲಿ, ಮುಂತಾದ ಎಂಟು ನಾಮಗಳಿಂದ ನನ್ನ ಎಂಟು ಮೂರ್ತಿಗಳನ್ನು ಆವಾಹಿಸಬೇಕು. ಅದರ ಸುತ್ತಲೂ, ದಿಕ್ಪಾಲಕರನ್ನು ಮೂಲಮಂತ್ರದಿಂದ ಕ್ರಮವಾಗಿ ಪೂಜಿಸಬೇಕು. ॥೬೪-೬೫॥

ಅನಂತರ ಆಸನಾದಿ ಷೋಡಶೋಪಚಾರಗಳಿಂದಲೂ, ಬಿಲ್ವಪತ್ರಾಕ್ಷತಾದಿಗಳಿಂದಲೂ, ಧೂಪದೀಪಾದಿಗಳಿಂದಲೂ ಪೂಜಿಸಿ, ತನ್ನ ಇಷ್ಟಾರ್ಥವನ್ನು ಪ್ರಾರ್ಥಿಸಿಕೊಳ್ಳಬೇಕು. ತನ್ನ ಶಕ್ತಿಯನ್ನನುಸರಿಸಿ ಪೂಜಾದ್ರವ್ಯಗಳನ್ನು ಸಂಪಾದಿಸಿಕೊಳ್ಳಬೇಕು. ಅನಂತರ ವೇದಿಕೆಯ ಅಧೋಭಾಗದಲ್ಲಿ ಸರ್ವತೋಭದ್ರಮಂಡಲದ ಮೇಲೆ

ರಾತ್ರೌ ಜಾಗರಣಂ ಕುರ್ಯಾದ್ಗೀತಮಂಗಲವಾದನೈಃ ।
ಪುರಾಣೈರಿತಿಹಾಸೈಶ್ಚ ರಾತ್ರಿಶೇಷಂ ನಯೇದ್ವ್ರತೀ ॥೬೯॥

ಅಪರೇದ್ಯುಃ ಕೃತಸ್ನಾತಃ ಪ್ರಾತಸ್ಸಂಧ್ಯಾಮುಪಾಸ್ಯ ಚ ।
ಪುನರ್ವೇದ್ಯಾಂ ಶಿವಂ ದೇವಾನ್ ಪೂಜಯೇದುಪಚಾರಕೈಃ ॥೭೦॥

ಹವನಾರ್ಥೇ ವಿಧಾತವ್ಯಂ ಕುಂಡಂ ವಾ ಸ್ಥಂಡಿಲಂ ಶಿವೇ ।
ಸ್ವಗೃಹ್ಯೋಕ್ತವಿಧಾನೇನ ಉಪಲೇಪನಪೂರ್ವಕಂ ॥೭೧॥

ಅನಾಜ್ಞಾತಾ ಹವಿರ್ಹುತ್ವಾ ಮಹಾವ್ಯಾಹೃತಯಸ್ತಥಾ ।
ಹೋತವ್ಯಾಃ ಸಪ್ಪೃತಾಶ್ಚೈವ ಪಾಯಸಾದಿತಿಲೈಸ್ಸಹ ॥೭೨॥

ತ್ವಂ ಸೋಮಾಸೀತಿ ಮಂತ್ರೇಣ ಹುನೇದಷ್ಟಾಹುತೀಶ್ಶತಂ ।
ತತಸ್ಸ್ವಿಷ್ಟಕೃತಂ ಹುತ್ವಾ ಹೋಮಶೇಷಂ ಸಮಾಪಯೇತ್ ॥೭೩॥

---

ಹಿಂದೆ ಆವಾಹನೆಮಾಡಿ ಬ್ರಹ್ಮಾದಿ ಎಂಟು ದೇವತೆಗಳನ್ನೂ, ಮನೋಹರವಾದ ನೈವೇದ್ಯಾದಿಗಳಿಂದ ಅರ್ಚಿಸಬೇಕು. ||೬೬-೬೭-೬೮||

ರಾತ್ರಿಯೆಲ್ಲಾ ಈ ರೀತಿ ಅರ್ಚಿಸಿ ಜಾಗರಣೆಮಾಡಬೇಕು. ಸಂಗೀತ, ಮಂಗಳ ವಾದ್ಯಗಳು, ಪುರಾಣೇತಿಹಾಸಗಳು ಇವುಗಳನ್ನು ಕೇಳುತ್ತಾ ರಾತ್ರಿಯನ್ನು ಕಳೆಯ ಬೇಕು. ಮಾರನೆಯದಿನ ಪ್ರಾತಃಕಾಲದಲ್ಲಿ ಸ್ನಾನ, ಸಂಧ್ಯಾವಂದನಾದಿಗಳನ್ನು ಮುಗಿಸಿಕೊಂಡು, ಮತ್ತೆ ವೇದಿಕೆಯಲ್ಲಿ ಆವಾಹಿತವಾಗಿರುವ ಕಲಶಗಳನ್ನು ಷೋಡ ಶೋಪಚಾರಗಳಿಂದ ಪೂಜಿಸಬೇಕು. ||೬೯-೭೦||

ಹಾಗೆಯೇ ಹೋಮಕುಂಡವನ್ನಾಗಲಿ, ಸ್ಥಂಡಿಲವನ್ನಾಗಲಿ ಕಲ್ಪಿಸಿಕೊಂಡು ಸ್ವಗೃಹ್ಯೋಕ್ತಾನುಸಾರವಾಗಿ ಅಗ್ನಿ ಸ್ಥಾಪನೆಮಾಡಿಕೊಳ್ಳಬೇಕು. ಉಪಲೇಪನಾದಿ ಯಾಗಿ ಹವಿರಾಜ್ಯಸಂಸ್ಕಾರ ಪರ್ಯಂತವಾಗಿ ನಡೆಸಿ, ಅನಾಜ್ಞಾತಗಳಾದ ದೋಷ ಪರಿ ಹಾರಕ್ಕಾಗಿ, ಅನಾಜ್ಞಾತವೆಂಬ ಮಂತ್ರದಿಂದಲೂ, ಮಹಾವ್ಯಾಹೃತಿಯಿಂದಲೂ ಆಜ್ಯ ಹೋಮಮಾಡಬೇಕು. ಅನಂತರ ಪಾಯಸ, ಆಜ್ಯ, ತಿಲ, ಈ ದ್ರವ್ಯಗಳಿಂದ "ತ್ವಂ ಸೋಮಾಸಿ" ಎಂಬ ಮಂತ್ರದಿಂದ ನೂರೆಂಟು ಪ್ರಧಾನ ಹೋಮಗಳನ್ನು ಮಾಡಬೇಕು. ಆದಾದಮೇಲೆ ಹೋಮ ಸಾದ್ಗುಣ್ಯಾರ್ಥವಾಗಿ ಸ್ವಿಷ್ಟಕೃದಾದಿಗಳಿಂದ ಹೋಮ ಪರಿಸಮಾಪ್ತಿ ಮಾಡಬೇಕು. ||೭೧-೭೨-೭೩||

ತತೋ ಹೋಮಾವಸಾನೇ ಚ ಗಾಮೇಕಾಂ ಧವಲಾಂ ಶುಭಾಂ ।
ಪಯಸ್ವಿನೀಮರೋಗಾಂ ಚ ಸವತ್ಸಾಂ ಕಾಂಸ್ಯದೋಹನಾಂ ॥೭೪॥

ದದ್ಯಾದ್ವ್ರತಸಮೃದ್ಧ್ಯರ್ಥಮಾಚಾರ್ಯಾಯ ಸದಕ್ಷಿಣಾಂ ।
ವಸ್ತ್ರೈರಾಭರಣೈರನ್ಯೈರಾಚಾರ್ಯಂ ಪರಿತೋಷಯೇತ್ ॥೭೫॥

ತತಷ್ಷೋಡಶಸಂಖ್ಯಾಕಾನ್ ಬ್ರಾಹ್ಮಣಾನ್ ಭೋಜಯೇದಥ ।
ತಾನ್ ಭಕ್ತ್ಯಾ ಪೂಜಯೇದ್ವಿಪ್ರಾಂಛಾಂಭವಾನ್ನಾಮಭಿಃ ಕ್ರಮಾತ್ ॥೭೬॥

ಸೋಮೇಶ್ವರಸ್ತಥೇಶಾನಃ ಶಂಕರೋ ಗಿರಿಜಾಧವಃ ।
ಮಹೇಶಸ್ಸರ್ವಭೂತೇಶಃ ಶಂಕರಸ್ತ್ರಿಪುರಾಂತಕಃ ॥೭೭॥

ಶಿವಃ ಪಶುಪತಿಶ್ಶಂಭುಸ್ತ್ರ್ಯಂಬಕಶ್ಚಂದ್ರಶೇಖರಃ ।
ಗಂಗಾಧರೋ ಮಹಾದೇವೋ ವಾಮದೇವ ಇತಿ ಕ್ರಮಾತ್ ॥೭೮॥

ಉಪಚಾರಾನ್ ಸಮರ್ಪ್ಯಾಥ ದದ್ಯಾತ್ಕುಂಭಾನ್ ಸದಕ್ಷಿಣಾನ್ ।
ವಸ್ತ್ರೈರಾಭರಣೈರನ್ಯೈರಾಚಾರ್ಯಂ ಪರಿತೋಷಯೇತ್ ॥೭೯॥

ಅನಂತರ ವ್ರತಸಾದ್ಗುಣ್ಯಾರ್ಥವಾಗಿ ಬೆಳ್ಳಗೂ, ರೋಗವಿಲ್ಲದೆಯೂ, ಹಾಲು ಕೊಡುವಂತೆಯೂ, ಕರುವುಳ್ಳದ್ದಾಗಿಯೂ ಇರುವ ಒಂದು ಗೋವನ್ನೂ, ಅದರ ಹಾಲನ್ನು ಕುಡಿಯುವುದಕ್ಕೆ ಒಂದು ಕಂಚಿನ ಪಾತ್ರೆಯನ್ನೂ, ಸದಕ್ಷಿಣವಾಗಿ ಆಚಾರ್ಯನಿಗೆ ದಾನವಾಗಿ ಸಮರ್ಪಿಸಬೇಕು. ವಿಧವಿಧವಾದ ವಸ್ತ್ರಾಭರಣಗಳಿಂದ ಆಚಾರ್ಯನನ್ನು ಸಂತುಷ್ಟಿಗೊಳಿಸಬೇಕು. ಹಾಗೆಯೇ ಹದಿನಾರು ಜನ ಶೈವ ಬ್ರಾಹ್ಮಣರನ್ನು ಶಿವನಾಮಗಳಿಂದರ್ಚಿಸಿ ಮೃಷ್ಟಾನ್ನ ಭೋಜನಗಳಿಂದ ಅವರನ್ನು ತೃಪ್ತಿಪಡಿಸಬೇಕು. ॥೭೪-೭೫-೭೬॥

ಆ ಹದಿನಾರು ಜನ ಶೈವಬ್ರಾಹ್ಮಣರನ್ನೂ ಕ್ರಮವಾಗಿ, ಸೋಮೇಶ್ವರ, ಈಶಾನ, ಶಂಕರ, ಗಿರಿಜಾಪತಿ, ಮಹೇಶ್ವರ, ಸರ್ವಭೂತೇಶ್ವರ, ಶಂಕರ, ತ್ರಿಪುರಾಂತಕ, ಶಿವ, ಪಶುಪತಿ, ಶಂಭು, ತ್ರ್ಯಂಬಕ, ಚಂದ್ರಶೇಖರ, ಗಂಗಾಧರ, ಮಹಾದೇವ, ವಾಮದೇವ ಎಂಬ ಹದಿನಾರು ಶಿವನಾಮಗಳಿಂದ ಪೂಜಿಸಿ, ಸರ್ವೋಪಚಾರಗಳಿಂದಲೂ ಅವರನ್ನು ಉಪಚರಿಸಿ ಅವರಿಗೆ ಕಲಶ, ವಸ್ತ್ರ, ಆಭರಣಾದಿಗಳನ್ನು ಕೊಟ್ಟು ತೃಪ್ತಿಪಡಿಸಬೇಕು. ॥೭೭-೭೮-೭೯॥

ತಥೈವ ಪೂಜಯೇದನ್ಯಾನ್ ದೀನಾನಾಥಾಂಶ್ಚ ತೋಷಯೇತ್ ।
ವ್ರತಂ ಮಮಾಸ್ತು ಸಂಪೂರ್ಣಮಿತ್ಯುಕ್ತ್ವಾ ತಾನ್ ಕ್ಷಮಾಪಯೇತ್ ॥೮೦॥

ವಿಸರ್ಜ್ಯ ಬ್ರಾಹ್ಮಣಾನ್ ಸರ್ವಾನ್ ಶಿಷ್ಟೈರಿಷ್ಟೈಸ್ಸಮನ್ವಿತಃ ।
ಭುಂಜೀಯಾದ್ವ್ರತಶೇಷಂ ತು ಆಚಾರ್ಯಸಹಿತೋ ವ್ರತೀ ॥೮೧॥

ಏವಂ ಕೃತೇ ಮಹಾಪುಣ್ಯೇ ವ್ರತಸ್ಯೋದ್ಯಾಪನಂ ವಿಧೌ ।
ನಾರೀ ವಾ ಪುರುಷೋ ವಾಪಿ ಮಹೇಶಸ್ಯ ಪರಂ ಲಭೇತ್ ॥೮೨॥

ಅಪುತ್ರೋ ಲಭತೇ ಪುತ್ರಂ ನಿರ್ಧನೋ ಧನಮಾಪ್ನುಯಾತ್ ।
ಪೃಥಿವ್ಯಾಂ ಯಾನಿ ತೀರ್ಥಾನಿ ವ್ರತಾನ್ಯನ್ಯಾನಿ ಯಾನಿ ಚ ॥೮೩॥

ಸೋಮವಾರವ್ರತಸ್ಯಾಸ್ಯ ಕಲಾಂ ನಾರ್ಹಂತಿ ಷೋಡಶೀಂ ॥೮೪॥

ಅದೇರೀತಿ, ದೀನರಿಗೂ, ಅನಾಥರಿಗೂ, ದಕ್ಷಿಣೆ ತಾಂಬೂಲಗಳಿಂದಲೂ, ಊಟ ಉಪಚಾರಗಳಿಂದಲೂ ತೃಪ್ತಿಯನ್ನುಂಟುಮಾಡಿ, ನನ್ನಿಂದ ಆಚರಿತವಾದ ವ್ರತವು ಸಂಪೂರ್ಣಫಲಪ್ರದವಾಗಲಿ ಎಂದು ಕೇಳುತ್ತಾ ಅವರ ಅನುಮತಿಯನ್ನು ಪಡೆದು ಆ ಬ್ರಾಹ್ಮಣರನ್ನೆಲ್ಲಾ ಸಂತೋಷದಿಂದ ಅವರವರ ಮನೆಗೆ ಕಳುಹಿಸಿ, ಅನಂತರ ಆಚಾರ್ಯಸಹಿತನಾಗಿ ತಾನು ಶಿವನೈವೇದ್ಯಶೇಷವನ್ನು ಸಂತೋಷದಿಂದ ಭುಂಜಿಸಬೇಕು. ||೮೦-೮೧||

ಈರೀತಿಯಾಗಿ ಮಹಾಪುಣ್ಯಪ್ರದವಾದ ಸೋಮವಾರವ್ರತೋದ್ಯಾಪನೆಯನ್ನು ಹೆಂಗಸರಾಗಲಿ, ಪುರುಷರಾಗಲಿ ಭಕ್ತಿಯಿಂದ ನಡೆಸಬಹುದು. ಅದರಿಂದ ಅವರಿಗೆ ಶಿವಪದವು ದೊರೆಯುವುದು. ಅದೂ ಅಲ್ಲದೆ, ಐಹಿಕವಾಗಿ ಪುತ್ರಾಪೇಕ್ಷಿಗಳಿಗೆ ಪುತ್ರಸಮೃದ್ಧಿಯೂ, ಧನಾಪೇಕ್ಷಿಗಳಾದವರಿಗೆ ಧನಸಮೃದ್ಧಿಯೂ ಅನಾಯಾಸವಾಗಿ ಲಭಿಸುವುದು. ಪ್ರಪಂಚದಲ್ಲಿ ಎಷ್ಟು ವ್ರತಗಳಿವೆಯೋ, ಎಷ್ಟು ತೀರ್ಥಗಳಿವೆಯೋ, ಅವುಗಳೆಲ್ಲವೂ ಈ ಸೋಮವಾರವ್ರತದ ಹದಿನಾರನೆಯ ಒಂದು ಭಾಗದಷ್ಟು ಮಹಿಮೆಯನ್ನು ಕೂಡ ಹೊಂದುವುದಿಲ್ಲ. ಈ ವ್ರತವು ಅಷ್ಟು ಮಹಿಮಾಪೂರ್ಣವಾದುದು. ||೮೨-೮೩-೮೪||

॥ ಶ್ರೀ ಈಶ್ವರ ಉವಾಚ ॥

ಶಿವೇ ನಾತಃ ಪ್ರಾತಃ ಕಮಲಮುಖಿಮಾತಸ್ತ್ರಿಜಗತಾಂ
ಜಗತ್ಕ್ರಾಂತಂ ಭ್ರಾಂತಂ ಮಮ ಭಜನವೈಧುರ್ಯವಶತಃ ।
ಕುತಸ್ಸೌಖ್ಯಂ ಸಖ್ಯಂ ಲಭತಿ ಚ ಫಲಂ ಪ್ರೇತ್ಯ ಸುಖದಂ
ನ ಜಾನೇಸ್ಮಾಜ್ಞಾನ್ಯೈಃ ಸುರವರನರೈಸ್ಸೇವಿತಪದಂ ॥೬೫॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಸೋಮವಾರ ವ್ರತೋದ್ಯಾಪನವಿಧಿ ನಿರೂಪಣಂ ನಾಮ ಏಕೋನತ್ರಿಂಶೋಽಧ್ಯಾಯಃ

---

ಎಲೌ ದೇವಿಯೇ, ಜಗನ್ಮಾತೆಯೇ, ಕಮಲಮುಖಿಯೇ, ನನ್ನ ಭಜನೆಯಲ್ಲಿ ಯಾರು ಉದಾಸೀನರಾಗಿರುವರೋ, ಅಥವಾ ಭ್ರಾಂತರಾಗಿ ಯಾರು ನಾನಾದೇವತೆಗಳನ್ನು ಆರಾಧಿಸುವರೋ, ಅಂತಹವರಿಗೆ ಸೌಖ್ಯವು ಹೇಗೆತಾನೇ ಲಭಿಸೀತು? ದೇವತೆಗಳಿಂದಲೂ ಮಾನವರಿಂದಲೂ ಸೇವಿಸಲ್ಪಡುವ ಮಹಾದೇವನನ್ನು (ನನ್ನನ್ನು) ಆರಾಧಿಸದವರಿಗೆ ಭುಕ್ತಿಮುಕ್ತಿಪ್ರದರಾದವರು ಯಾರು ಎಂಬುದನ್ನು ನಾನು ತಿಳಿಯಲಾರೆ ಎಂದು ಪರಮೇಶ್ವರನು ಕೊನೆಯಲ್ಲಿ ಪಾರ್ವತಿಗೆ ಹೇಳಿದನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ನಿರೂಪಿಸಿದನು. ॥೬೫॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಸೋಮವಾರ ವ್ರತೋದ್ಯಾಪನಾವಿಧಿಯನ್ನು ತಿಳಿಸುವ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

## ಏಕಾದಶಾಂಶೇ

## ತ್ರಿಂಶೋಽಧ್ಯಾಯಃ

॥ ಶ್ರೀ ಪಾರ್ವತ್ಯುವಾಚ ॥

ಪುನರನ್ಯದ್ವ್ರತಂ ಕಿಂ ತೇ ಪ್ರಿಯ ಶಂಕರ ಮೇ ವದ ।
ಯೇನ ಚೀರ್ಣೇನ ಜಗತಾಂ ಮುಕ್ತಿಸ್ಸಾಧಾರಣೀ ಭವೇತ್ ॥೧॥

॥ ಈಶ್ವರ ಉವಾಚ ॥

ಪ್ರದೋಷೋ ಮೇ ಪ್ರಿಯಕರಸ್ತ್ರಯೋದಶ್ಯಾಂ ಮಹೇಶ್ವರಿ ।
ಸರ್ವಮಾಸೇಷು ಸರ್ವೇಷಾಂ ಭುಕ್ತಿಮುಕ್ತಿಪ್ರದೋ ಮಮ ॥೨॥

ಕಿಂ ಪುನರ್ಮಂದವಾರೇಣ ಸಂಯುಕ್ತಃ ಕೃಷ್ಣಪಕ್ಷಗಃ ।
ತತ್ರೋಪವಾಸಃ ಪೂಜಾ ಚ ಸಾಯಂ ಮುಕ್ತಿಪ್ರದಾ ಮಮ ॥೩॥

## ಮೂವತ್ತನೆಯ ಅಧ್ಯಾಯ

ಸೋಮವಾರವ್ರತದ ವಿಷಯವನ್ನೆಲ್ಲಾ ತಿಳಿದುಕೊಂಡ ಪಾರ್ವತಿಯು ಮತ್ತೆ ಪತಿಯನ್ನು ಕುರಿತು "ಸ್ವಾಮಿ, ಇದಲ್ಲದೆ ನಿನ್ನ ಭಕ್ತರಿಗೆ ಅನಾಯಾಸವಾಗಿ ಮುಕ್ತಿಯನ್ನು ದೊರಕಿಸುವ ಮತ್ತಾವುದಾದರೂ ವ್ರತವಿರುವುದೆ? ಇದ್ದರೆ ದಯೆಯಿಟ್ಟು ಅದನ್ನೂ ನನಗೆ ಉಪದೇಶಿಸಬೇಕು" ಎಂದು ಪ್ರಾರ್ಥಿಸಲು ಆಗ ಪರಶಿವನು ಇಂತೆಂದನು :—"ಮಹೇಶ್ವರಿ, ಲೋಕದಲ್ಲಿ ಪ್ರತಿ ತಿಂಗಳಿನಲ್ಲಿಯೂ ಉಭಯ ಪಕ್ಷದ ತ್ರಯೋದಶೀ ದಿವಸ ಬರುವ ಪ್ರದೋಷವು ನನ್ನ ಆರಾಧನೆಗೆ ಅತ್ಯಂತ ಪ್ರಶಸ್ತವಾದುದು. ಆದರಲ್ಲಿಯೂ ಕೃಷ್ಣಪಕ್ಷ ತ್ರಯೋದಶಿಯು ಶನಿವಾರದ

ತದ್ವಿಧಾನಂ ತಚ್ಚ ಶಿವೇ ಮಹಾತ್ಮ್ಯಂ ವಿಶೇಷತಃ ।
ಶೃಣು ತ್ವಂ ಸಾವಧಾನೇನ ಚೇತಸಾ ಜಗದೀಶ್ವರಿ ॥೪॥

ಪಕ್ಷದ್ವಯೇ ತ್ರಯೋದಶ್ಯಾಂ ನಿರಾಹಾರೋ ಭವೇಚ್ಛಿವೇ ।
ಪ್ರದೋಷವ್ಯಾಪಿ ಸಾಯಂ ಯದ್ಘಟಿಕಾತ್ರಯಭಾಗ್ಯದಿ ॥೫॥

ತತ್ರ ಮೇ ಪೂಜನಂ ಶಸ್ತಮವ್ಯಾಪ್ತೌ ಚೋತ್ತರೇ ಭವೇತ್ ।
ನದ್ಯಾಂ ವಾ ದೇವಖಾತೇ ವಾ ಸ್ನಾನಂ ತತ್ರ ಸಮಾಚರೇತ್ ॥೬॥

ಶುಕ್ಲಾಂಬರಧರೋ ಭೂತ್ವಾ ವಾಗ್ಯತೋ ನಿಯಮಾನ್ವಿತಂ ।
ಭಸ್ಮತ್ರಿಪುಂಡ್ರರುದ್ರಾಕ್ಷಪರಿಮಂಡಿತವಿಗ್ರಹಃ ॥೭॥

ಕೃತಸಂಧ್ಯಾಜಪವಿಧಿಃ ಶಿವಪೂಜಾಂ ಸಮಾರಭೇತ್ ।
ದೇವಸ್ಯ ಪುರತಃ ಸಮ್ಯಗುಪಲಿಪ್ಯ ನವಾಂಭಸಾ ॥೮॥

---

ದಿನ ಬಂದದ್ದೇ ಆದರೆ, ಅಂದಿಗೆ ಶನಿಪ್ರದೋಷವೆಂದು ಹೆಸರು ಬರುವುದು. ಆದಿನ ನನ್ನ ಪ್ರೀತಿಗಾಗಿ, ಉಪವಾಸ, ಸಾಯಂಕಾಲದ ಪೂಜೆ ಇವನ್ನು ನಡೆಸುವವರಿಗೆ ಸಾಕ್ಷಾತ್ತಾಗಿ ಮೋಕ್ಷವೇ ಲಭಿಸುವುದು. ॥೧-೨-೩॥

ಆದರ ವಿಧಾನವನ್ನೂ, ಮಹಿಮೆಯನ್ನೂ ಈಗ ನಿನಗೆ ತಿಳಿಸುವೆನು. ಸಾವಧಾನದಿಂದ ಕೇಳು. ಎರಡು ಪಕ್ಷಗಳಲ್ಲಿಯೂ ತ್ರಯೋದಶೀ ತಿಥಿಯು ಮೂರು ಗಳಿಗೆಯಿಂದ ಪ್ರದೋಷಕಾಲದಲ್ಲಿ ವ್ಯಾಪ್ತವಾಗಿದ್ದರೆ ಆದಿನವೇ ಮಹಾಪ್ರದೋಷ ವೆನಿಸುವುದು. ಆ ದಿವಸ ನಿರಾಹಾರದಿಂದಿದ್ದು ನನ್ನನ್ನು ಪೂಜಿಸುವುದು ಒಳ್ಳೆಯದು. ॥೪-೫॥

ಪೂರ್ವದಿನದಲ್ಲಿ ತ್ರಯೋದಶೀ ವ್ಯಾಪ್ತಿ ಪ್ರದೋಷಕಾಲಕ್ಕಿಲ್ಲದಿದ್ದರೆ ಪರದಿನದಲ್ಲಿ ನಡೆಸಬೇಕು. ಆದಿನ ನದಿಯಲ್ಲಾಗಲಿ, ಕೆರೆಯಲ್ಲಾಗಲಿ ಸ್ನಾನಮಾಡಿ ಶುಭ್ರವಾದ ಮಡಿಬಟ್ಟೆಯನ್ನುಟ್ಟು ಮೌನದಿಂದಿದ್ದು, ಭಸ್ಮತ್ರಿಪುಂಡ್ರದಿಂದಲೂ, ರುದ್ರಾಕ್ಷಮಾಲೆಯಿಂದಲೂ ಅಲಂಕೃತನಾಗಿ, ಸಂಧ್ಯಾವಂದನ, ಜಪ ಇತ್ಯಾದಿಗಳನ್ನು ಮುಗಿಸಿಕೊಂಡು, ಈಶ್ವರಾರಾಧನೆಗೆ ಆರಂಭಿಸಬೇಕು. ॥೬-೭-೮॥

ವಿಧಾಯ ಮಂಡಪಂ ರಮ್ಯಂ ಪುಷ್ಪಮಾಲಾವಿರಾಜಿತಂ ।
ವಿತಾನಾದ್ಯೈರಲಂಕೃತ್ಯ ಫಲಮೂಲನವಾಂಕುರೈಃ ॥೯॥

ವಿಚಿತ್ರಂ ಪದ್ಮಮಾಲಿಖ್ಯ ಪಂಚವರ್ಣಕಸಂಯುತಂ ।
ತತ್ರ ಪೀಠೇ ಚತುಷ್ಪಾದೇ ಸ್ವೋದ್ಧೃತೇ ಸ್ಥಾಪಯೇಚ್ಛಿವಂ ॥೧೦॥

ತತ್ರೋಪವಿಶ್ಯ ಸುಶುಭೇ ಚಾಸನೇ ವ್ಯಗ್ರಮಾನಸಃ ।
ಪಾದ್ಯಾರ್ಘ್ಯಾಚಮನಾದೀನಿ ಸಪುಷ್ಪಾಣಿ ಚ ವಿನ್ಯಸೇತ್ ॥೧೧॥

ಸಮ್ಯಕ್ಸಂಪಾದಿತಾಶೇಷಪೂಜೋಪಕರಣಶ್ಶುಚಿಃ ।
ಆಗಮೋಕ್ತೇನ ವಿಧಿನಾ ಪೀಠಮಾಮಂತ್ರಯೇತ್ಸುಧೀಃ ॥೧೨॥

ತತಃ ಕೃತ್ವಾತ್ಮಶುದ್ಧಿಂ ಚ ಭೂತಶುದ್ಧಿಮನುಕ್ರಮಾತ್ ।
ಪ್ರಾಣಾಯಾಮತ್ರಯಂ ಕುರ್ಯಾದ್ದ್ವಿಜವರ್ಣೈಃ ಸ ಬಿಂದುಕೈಃ ॥೧೩॥

ಮಾತೃಕಾಂ ನ್ಯಸ್ಯ ವಿಧಿವದ್ಧ್ಯಾತ್ವಾ ತಾಂ ದೇವತಾಂ ಪರಾಂ ।
ಸಮಾಪ್ಯ ಮಾತೃಕಾಂ ಭೂಯೋ ಧ್ಯಾತ್ವಾ ದೇವಂ ಪರಂಶಿವಂ ॥೧೪॥

---

ದೇವರ ಪೂಜೆಗೆ ನೆಲವನ್ನು ಸಾರಿಸಿ ಸ್ಥಳಶುದ್ಧಿಮಾಡಿಕೊಂಡು, ಅಲ್ಲಿ ದಿವ್ಯ ಮಂಟಪವೊಂದನ್ನು ರಚಿಸಬೇಕು. ಅದನ್ನು ಪುಷ್ಪಮಾಲಾದಿಗಳಿಂದಲೂ, ಮೇಲ್ಕಟ್ಟು ತೋರಣಗಳಿಂದಲೂ, ಫಲವಸ್ತುಗಳಿಂದಲೂ, ಕೋಮಲವಾದ ತಳಿರುಗಳಿಂದಲೂ ಅಲಂಕರಿಸಬೇಕು. ಆ ಮಂಟಪಮಧ್ಯದಲ್ಲಿ ಪಂಚವರ್ಣಗಳಿಂದ ಕಮಲವನ್ನು ಬರೆದು ಅದರ ಮೇಲೆ ಶಿವಲಿಂಗವನ್ನು ಸ್ಥಾಪಿಸಿ ಆರಾಧಿಸಬೇಕು. ||೯-೧೦||

ಮಂಗಳಕರವಾದ ದಿವ್ಯಪೀಠದಲ್ಲಿ ತಾನು ಕುಳಿತು, ಪಾದ್ಯ, ಅರ್ಘ್ಯ, ಆಚಮನೀಯ ಇವೇ ಮುಂತಾದ ಉಪಚಾರಗಳಿಗೆ ಬೇಕಾದ ಸಕಲ ಸಂಭಾರ ಗಳನ್ನೂ ಒದಗಿಸಿಕೊಂಡು, ಶುಚೀಭೂತನಾಗಿ ಆಗಮೋಕ್ತವಾದ ರೀತಿಯಿಂದ ಪೀಠಪೂಜೆಯನ್ನು ನೆರವೇರಿಸಬೇಕು. ||೧೧-೧೨||

ಅನಂತರ ಅಂಗನ್ಯಾಸಪೂರ್ವಕವಾದ ಮಂತ್ರಪಠನಗಳಿಂದ ಆತ್ಮಶುದ್ಧಿ ಭೂತ ಶುದ್ಧಿಯನ್ನು ನೆರವೇರಿಸಿ, ಮೂರು ಪ್ರಾಣಾಯಾಮಗಳಿಂದ ಸಂಕಲ್ಪಮಾಡಿಕೊಂಡು ಮಾತೃಕಾಧ್ಯಾನಮಾಡಬೇಕು. ಭಕ್ತಿಯಿಂದ ಮಾತೃಕಾಧ್ಯಾನವು ಮುಗಿದ ಮೇಲೆ ಪರಶಿವನನ್ನು ಧ್ಯಾನಿಸಬೇಕು. ||೧೩-೧೪||

ವಾಮಭಾಗೇ ಗುರುಂ ನತ್ವಾ ದಕ್ಷಿಣೇ ಗಣಪಂ ಯಜೇತ್ ।
ಅಂಸೋರುಯುಗ್ಮೇ ಧರ್ಮಾದೀನ್ನ್ಯಸೇನ್ನಾಭೌ ಚ ಪಾರ್ಶ್ವಯೋಃ ॥೧೫॥

ಅಧರ್ಮಾದೀನನಂತಾದೀನ್ ಹೃದಿ ಪೀಠೇ ಚ ವಿನ್ಯಸೇತ್ ।
ಆಧಾರಶಕ್ತಿಮಾರಭ್ಯ ಜ್ಞಾನಾತ್ಮಾನಮನುಕ್ರಮಾತ್ ॥೧೬॥

ಉಕ್ತಕ್ರಮೇಣ ವಿನ್ಯಸ್ಯ ಹೃತ್ಪದ್ಮೇ ಸಾಧು ಭಾವಿತೇ ।
ನವಶಕ್ತಿಮಯೇ ರಮ್ಯೇ ಧ್ಯಾಯೇದ್ದೇವಮುಮಾಪತಿಂ ॥೧೭॥

ಚಂದ್ರಕೋಟಿಪ್ರತೀಕಾಶಂ ಸೋಮಚೂಡಂ ತ್ರಿಲೋಚನಂ ।
ಆಪಿಂಗಲಜಟಾಜೂಟರತ್ನಮೌಳಿವಿರಾಜಿತಂ ॥೧೮॥

ನೀಲಗ್ರೀವಮುದಾರಾಂಗಂ ನಾಗಹಾರೋಪಶೋಭಿತಂ ।
ವರದಾಭಯಹಸ್ತಂ ಚ ಹರಿಣಂ ಚ ಪರಶ್ವಧಂ ॥೧೯॥

ದಧಾನಂ ನಾಗವಲಯಂ ಕೇಯೂರಾಂಗದಮೌಕ್ತಿಕಂ ।
ವ್ಯಾಘ್ರಚರ್ಮಪರೀಧಾನಂ ರತ್ನಸಿಂಹಾಸನಸ್ಥಿತಂ ॥೨೦॥

---

ಪೀಠದ ಎಡಭಾಗದಲ್ಲಿ ಗುರುವನ್ನೂ, ಬಲಭಾಗದಲ್ಲಿ ಗಣಪತಿಯನ್ನೂ ಸ್ಕಂದಭಾಗದಲ್ಲಿ, ತೊಡೆಗಳಲ್ಲಿ ಧರ್ಮಾಧಿದೇವತೆಗಳನ್ನೂ ನಾಭಿ ಮತ್ತು ಪಾರ್ಶ್ವ ಭಾಗಗಳಲ್ಲಿ ಅಧರ್ಮಾದಿಗಳನ್ನೂ, ಅನಂತನನ್ನೂ ಧ್ಯಾನಿಸಿ ಆವಾಹಿಸಬೇಕು. ಆಧಾರಶಕ್ತಿದೇವತೆಯಿಂದ ಹಿಡಿದು ಜ್ಞಾನಾತ್ಮನಾದ ಪರಮಾತ್ಮಪರ್ಯಂತವಾಗಿ ಆ ದೇವತಾಪೀಠದಲ್ಲಿಯೂ, ತನ್ನ ಹೃದಯಕಮಲದಲ್ಲಿಯೂ ಸಕಲ ದೇವತೆಗಳನ್ನೂ ಹೃದಯದಲ್ಲಿ ಅಡಗಿಸಿಕೊಳ್ಳಬೇಕು. ಅನಂತರ ನವಶಕ್ತ್ಯಾತ್ಮಕವಾದ ದಿವ್ಯಪೀಠದಲ್ಲಿ ಉಮಾಪತಿಯಾದ ಪರಶಿವನನ್ನು ಧ್ಯಾನಿಸಿ ಆವಾಹಿಸಬೇಕು. ॥೧೫-೧೬-೧೭॥

ಕೋಟಿ ಚಂದ್ರರಂತೆ ಪ್ರಕಾಶಿಸುವವನೂ, ಚಂದ್ರಶೇಖರನೂ, ಲೋಚನ ತ್ರಯವಿಶಿಷ್ಟನೂ, ಪಿಂಗಲವರ್ಣದ ಜಟಾಭಾರದಿಂದಲೂ, ರತ್ನಮಯವಾದ ಕಿರೀಟ ದಿಂದಲೂ ಶೋಭಿಸುವವನೂ, ವರದಹಸ್ತ, ಅಭಯಹಸ್ತಗಳಿಂದ ವಿರಾಜಿಸು ವವನೂ, ಜಿಂಕೆ, ಪರಶು ಮುಂತಾದುವುಗಳನ್ನು ಕೈಯ್ಯಲ್ಲಿ ಧರಿಸಿರುವವನೂ, ನಾಗಾಭರಣವನ್ನು ಕೈಬಳೆಯನ್ನಾಗಿ ಮಾಡಿಕೊಂಡಿರುವವನೂ ಆದ ಪರಶಿವನು ತೋಳುಬಳೆ, ಬೆರಳುಂಗುರ, ವ್ಯಾಘ್ರಚರ್ಮ ಇವುಗಳಿಂದಲಂಕೃತನಾಗಿ ಸದಾ ರತ್ನ

ಧ್ಯಾತ್ವಾ ತದ್ವಾಮಭಾಗೇ ತ್ವಾಂ ಚಿಂತಯೇದ್ಗಿರಿಕನ್ಯಕಾಂ ।
ಭಾಸ್ವಜ್ಜಪಾಪ್ರಸೂನಾಭಮುದಯಾರ್ಕಸಮಪ್ರಭಾಂ ॥೨೧॥

ವಿದ್ಯುತ್ಪುಂಜನಿಭಾಂ ತನ್ವೀಂ ಮನೋನಯನನಂದಿನೀಂ ।
ಬಾಲೇಂದುಶೇಖರಾಂ ಸ್ನಿಗ್ಧಾಂ ನೀಲಕುಂಚಿತಕುಂತಲಾಂ ॥೨೨॥

ಭೃಂಗಸಂಘಾತರುಚಿರನೀಲಾಲಕವಿರಾಜಿತಾಂ ।
ಮಣಿಕುಂಡಲವಿದ್ಯೋತ ಮುಖಮಂಡಲವಿಭ್ರಮಾಂ ॥೨೩॥

ನವಕುಂಕುಮಪಂಕಾಂಕಕಪೋಲತಲದರ್ಪಣಾಂ ।
ಮಧುರಸ್ಮಿತವಿಭ್ರಾಜದರುಣಾಧರಪಲ್ಲವಾಂ ॥೨೪॥

ಕಂಬುಕಂಠೀಂ ಶಿವಾಮುದ್ಯತ್ಕುಚಪಂಕಜಕುಡ್ಮಲಾಂ ।
ಪಾಶಾಂಕುಶಾಭಯವರೈರ್ವಿಲಸತ್ಕರಪಲ್ಲವಾಂ ॥೨೫॥

---

ಸಿಂಹಾಸನದ ಮೇಲೆ ಮಂಡಿಸಿರುವನೆಂದು ಮನಸಾ ಭಾವಿಸಿ ಧ್ಯಾನಿಸಬೇಕು. ||೧೮-೧೯-೨೦||

ಪರಮೇಶ್ವರನ ಎಡಭಾಗದಲ್ಲಿ ಅಂಬಿಕೆಯು, ದಾಸವಾಳದ ಹೂವಿನಂತೆ ಶೋಭಿಸುತ್ತಾ, ಉದಯಕಾಲದ ಸೂರ್ಯನಂತೆ ಕಂಗೊಳಿಸುತ್ತಾ, ಮಿಂಚಿನ ರಾಶಿಯಂತೆ ಸ್ಫುರಿಸುತ್ತಾ, ಆಹ್ಲಾದಕರಳಾಗಿರುವಳೆಂದು ಮನಸಾ ಧ್ಯಾನಿಸಬೇಕು. ದೇವಿಯ ಶಿರೋಭಾಗದಲ್ಲಿ ಬಾಲಚಂದ್ರನೂ, ಕಪ್ಪಾದ ಮುಂಗುರುಳೂ ಶೋಭಿಸುವುವೆಂದು ಭಾವಿಸಬೇಕು. ||೨೧-೨೨||

ದೇವಿಯ ಕಪ್ಪುಮುಂಗುರುಳು ದುಂಬಿಗಳರಾಶಿಯಿಂದ ವಿರಾಜಿತವಾಗಿರುವುದು. ರತ್ನಮಯವಾದ ಕುಂಡಲಗಳಿಂದ ಮುಖಮಂಡಲವು ಪ್ರಕಾಶಿಸುತ್ತಿರುವುದು. ಕುಂಕುಮಕೇಸರಿಯ ಪಂಕದಿಂದ ಕಪೋಲಭಾಗವು ಕನ್ನಡಿಯಂತೆ ವಿರಾಜಿಸುತ್ತಿರುವುದು. ಮುಗುಳ್ನಗೆಯ ಬಿಳುಪಾದ ಕಾಂತಿಯಿಂದ ದೇವಿಯ ಕೆಂಪುತುಟಿಯು ಶೋಭಿಸುತ್ತಿರುವುದು. ||೨೩-೨೪||

ದೇವಿಯ ಕಂಠಭಾಗವು ಶಂಖದಂತೆ ಹೊಳೆಯುತ್ತಿರುವುದು. ಸ್ತನವು ಕಮಲದ ಮೊಗ್ಗಿನಂತೆ ದುಂಡಾಗಿರುವುದು. ನಾಲ್ಕು ಕೈಗಳಲ್ಲಿಯೂ ಕ್ರಮವಾದ ಪಾಶ, ಅಂಕುಶ, ಅಭಯಮುದ್ರೆ, ವರದಮುದ್ರೆಗಳು ವಿರಾಜಿಸುತ್ತಿರುವುವು.

ಅನೇಕರತ್ನವಿಲಸತ್ಕಂಕಣಾಂಗದಮುದ್ರಿಕಾಂ ।
ತ್ರಿವಲೀವಲಯಾಂ ಹೃದ್ಯಾಂ ರತ್ನಕಾಂಚೀಗುಣಾನ್ವಿತಾಂ ॥೨೬॥

ರತ್ನಮಾಲ್ಯಾಂಬರಧರಾಂ ದಿವ್ಯಚಂದನಚರ್ಚಿತಾಂ ।
ದಿಕ್ಪಾಲವನಿತಾಮೌಲಿಸನ್ನತಾಂಘ್ರಿಸರೋರುಹಾಂ ॥೨೭॥

ರತ್ನಸಿಂಹಾಸನಾರೂಢಾಂ ಮಂದಸ್ಮಿತಮುಖಾಂಬುಜಾಂ ।
ಏವಂ ಧ್ಯಾತ್ವಾ ಮಹಾದೇವಂ ಮಾಂ ದೇವೀಂ ತ್ವಾಂ ಮನೋರಮಾಂ॥೨೮॥

ನ್ಯಾಸಕ್ರಮೇಣ ಸಂಪೂಜ್ಯ ದೇವಂ ಗಂಧಾದಿಭಿಃ ಕ್ರಮಾತ್ ।
ಪಂಚಭಿರ್ಬ್ರಹ್ಮಭಿಃ ಕುರ್ಯಾತ್ಪ್ರೋಕ್ತಸ್ಥಾನೇಷು ವಾ ಹೃದಿ ॥೨೯॥

ಪೃಥಕ್ಪುಷ್ಪಾಂಜಲಿಂ ದೇಹೇ ಮೂಲೇನ ಚ ಹೃದಿ ತ್ರಿಧಾ ।
ಪುನಸ್ಸ್ವಯಂ ಶಿವೋ ಭೂತ್ವಾ ಮೂಲಮಂತ್ರೇಣ ಸಾಧಕಃ ॥೩೦॥

ಕೈಬೆರಳುಗಳಲ್ಲಿ ನಾನಾರತ್ನಮಯವಾದ ಬಳೆಗಳೂ ಮುದ್ರೆಯುಂಗುರಗಳೂ ಪ್ರಕಾಶಿಸುವುವು. ತ್ರಿವಳಿಗಳ ಪ್ರದೇಶವು ರತ್ನಮಯವಾದ ಒಡ್ಯಾಣದಿಂದ ಹೊಳೆಯುತ್ತಿರುವುದು. ರತ್ನಮಯವಾದ ವಸ್ತ್ರಾಭರಣಗಳಿಂದಲೂ, ದಿವ್ಯಚಂದನದಿಂದಲೂ, ದೇವಿಯ ದೇಹವು ಮನೋಹರವಾಗಿರುವುದು. ಸಮಸ್ತ ದಿಕ್ಪಾಲಕರ ಪತ್ನಿಯರಿಂದಲೂ ನಮಸ್ಕೃತವಾದ ಪಾದಕಮಲವುಳ್ಳವಳು ಪಾರ್ವತಿಯು. ಇಂತಹ ಪಾರ್ವತಿಯು ರತ್ನಸಿಂಹಾಸನದ ಮೇಲೆ ಮಂಡಿಸಿ, ಮುಗುಳ್ನಗೆಯಿಂದ ಕೂಡಿದ ಮುಖವುಳ್ಳವಳಾಗಿ ಸ್ವಾಮಿಯ ವಾಮಭಾಗದಲ್ಲಿ ಸ್ಫುರಿಸುತ್ತಿರುವಳು. ಎಂಬ ಭಾವನೆಯಿಂದ ಮಹಾದೇವಿಯನ್ನು ಮನಸಾ ಧ್ಯಾನಿಸಬೇಕು. ಈ ರೀತಿ ನನ್ನನ್ನೂ (ಪರಶಿವನನ್ನೂ) ನಿನ್ನನ್ನೂ (ಪಾರ್ವತಿಯನ್ನೂ) ಮನಸ್ಸಿನಲ್ಲಿ ಅನುಸಂಧಾನ ಮಾಡಿ ಮುಂದಿನ ಪೂಜೆಯನ್ನು ಆರಂಭಿಸಬೇಕು. ॥೨೫-೨೬-೨೭-೨೮॥

ಅನಂತರ ಅಂಗನ್ಯಾಸಪೂರ್ವಕವಾಗಿ ಪೂಜೆಯನ್ನು ಆರಂಭಿಸಿ, ಗಂಧಾದ್ಯುಪಚಾರಗಳಿಂದ ಪೂಜಿಸಿ, ಸದ್ಯೋಜಾತಾದಿ ಪಂಚಬ್ರಹ್ಮಾನುವಾಕಗಳಿಂದ ಹೃದಯಕಮಲದಲ್ಲಿಯೂ, ದೇವತಾಪೀಠದ ಮೇಲೆಯೂ, ಪುಷ್ಪಾಂಜಲಿಯನ್ನು ಸಮರ್ಪಿಸಬೇಕು. ಅನಂತರ ಶಿವಮೂಲಮಂತ್ರಪುರಶ್ಚರಣೆಯಿಂದ 'ಶಿವೋಹಂ' ಎಂಬ ಭಾವನೆಯನ್ನು ಸಾಧಿಸಿಕೊಳ್ಳಬೇಕು. ॥೨೯-೩೦॥

ತತಸ್ಸಂಪೂಜಯೇದ್ದೇವಂ ಬಾಹ್ಯಪೀಠೇ ಪುನಃ ಕ್ರಮಾತ್ ।
ಸಂಕಲ್ಪಂ ಚ ವದೇತ್ತತ್ರ ಪೂಜಾರಂಭೇ ಸಮಾಹಿತಃ ॥೩೧॥

ಕೃತಾಂಜಲಿಪುಟೋ ಭೂತ್ವಾ ಪ್ರಾರ್ಥಯೇದಿಂದುಶೇಖರಂ ।
ಋಣಪಾತಕದೌರ್ಭಾಗ್ಯದಾರಿದ್ರ್ಯವಿನಿವೃತ್ತಯೇ ॥೩೨॥

ಅಶೇಷಾಘವಿನಾಶಾಯ ಪ್ರಸೀದ ಮಮ ಶಂಕರ ।
ದುಃಖಶೋಕಾಗ್ನಿಸಂತಪ್ತಂ ಸಂಸಾರಭಯಪೀಡಿತಂ ॥೩೩॥

ಬಹುರೋಗಾಕುಲಂ ದೀನಂ ಪಾಹಿ ಮಾಂ ವೃಷವಾಹನ ।
ಆಗಚ್ಛ ದೇವದೇವೇಶ ಮಹಾದೇವಾಭಯಂಕರ ॥೩೪॥

ಗೃಹಾಣ ಸಹ ಪಾರ್ವತ್ಯಾ ತವ ಪೂಜಾಂ ಮಯಾ ಕೃತಾಂ ।
ಇತಿ ಸಂಕಲ್ಪ್ಯ ವಿಧಿವದ್ಬಾಹ್ಯಪೂಜಾಂ ಸಮಾಚರೇತ್ ॥೩೫॥

ಗುರುಂ ಗಣಪತಿಂ ಚೈವ ಯಜೇತ್ಸವ್ಯಾಪಸವ್ಯಯೋಃ ।
ಕ್ಷೇತ್ರೇಶಮೀಶಕೋಣೇ ಚ ಬಲೌ ಕಾತ್ಯಾಯನೀಂ ಯಜೇತ್ ॥೩೬॥

ಅನಂತರ ಹೊರಭಾಗದಲ್ಲಿ ನಿರ್ಮಿತವಾಗಿರುವ ಪೀಠದಲ್ಲಿ ಸಂಕಲ್ಪಪೂರ್ವಕವಾಗಿ ಪೂಜೆಗೆ ಆರಂಭಿಸಬೇಕು. ಋಣತ್ರಯಗಳೂ, ಮಹಾಪಾಪರಾಶಿಯೂ, ಬಡತನವೂ, ದುರದೃಷ್ಟವೂ ನಾಶವಾಗಬೇಕೆಂದು ಸಂಕಲ್ಪಿಸಿ ಪೂಜಾರಂಭಮಾಡಬೇಕು. ॥೩೧-೩೨॥

ಮಹಾದೇವನೇ, ನನ್ನ ಸಮಸ್ತ ಪಾಪರಾಶಿಯೂ ನಾಶವಾಗುವಂತೆ ಅನುಗ್ರಹಿಸು. ಶೋಕಮೋಹವೆಂಬ ಅಗ್ನಿಯಿಂದ ದಗ್ಧನಾಗಿಯೂ, ಸಂಸಾರಭಯದಿಂದ ಪೀಡಿತನಾಗಿಯೂ, ರೋಗಾದಿಗಳಿಂದ ವ್ಯಾಕುಲನಾಗಿಯೂ ಇರುವ ನನ್ನನ್ನು ವೃಷಭವಾಹನನೇ, ಪಾಲಿಸು. ಮಹಾದೇವನೇ, ಅಭಯಪ್ರದಾತನೇ, ದೇವದೇವನೇ, ಪಾರ್ವತಿಯೊಡಗೂಡಿ ಈಗ ನಾನು ಸಲ್ಲಿಸುವ ಪೂಜೆಯನ್ನು ಸ್ವೀಕರಿಸಿ ನನ್ನನ್ನು ಉದ್ಧರಿಸು. ಎಂದು ಮೊದಲು ಪ್ರಾರ್ಥಿಸಿಕೊಳ್ಳಬೇಕು. ॥೩೩-೩೪-೩೫॥

ಎರಡು ಪಕ್ಕಗಳಲ್ಲಿಯೂ, ಗುರು (ಗುಹ) ಗಣಪತಿಯರನ್ನೂ, ಈಶಾನ್ಯಕೋಣದಲ್ಲಿ ಕ್ಷೇತ್ರಪಾಲಕನನ್ನೂ, ಬಲಿಪೀಠದಲ್ಲಿ ಕಾತ್ಯಾಯನಿಯನ್ನೂ, ಆಗ್ನೇ

ಧರ್ಮಂ ಜ್ಞಾನಂ ಚ ವೈರಾಗ್ಯಂ ಐಶ್ವರ್ಯಂ ಚ ನಮೋಂತಕೈಃ ।
ಸರ್ವೈರಗ್ನ್ಯಾದಿ ಕೋಣೇಷು ಪಾದಪೀಠೇಷ್ವನುಕ್ರಮಾತ್ ॥೩೭॥

ಅಧ್ಯಾಂ ಚ ಬಿಂದುವರ್ಗಾದ್ಯಾಮಧರ್ಮಾದೀಂಸ್ತು ಪೂಜಯೇತ್ ।
ಮಾತೃರೂಪಾಂ ಚತುರ್ದಿಕ್ಷು ಮಧ್ಯೇಽನಂತಂ ಸ ತಾರಕಂ ॥೩೮॥

ಸತ್ವಾದೀಂಸ್ತ್ರಿಗುಣಾಂಸ್ತಂತುರೂಪಾನ್ ಪೀಠೇಷು ವಿನ್ಯಸೇತ್ ।
ಅಥ ಊರ್ಧ್ವಚ್ಛದೇ ಮಾಯಾವಿದ್ಯಾಲಕ್ಷ್ಮ್ಯೌ ಶಿವೇನಚ ॥೩೯॥

ತದಂತೇ ಚಾಂಬುಜಂ ಭೂಯಃ ಸಕಲಂ ಮಂಡಲತ್ರಯಂ ।
ಪತ್ರಕೇಸರಕಿಂಜಲ್ಕವ್ಯಾಪ್ತಂ ತಾರಾಕ್ಷರೈಃ ಕ್ರಮಾತ್ ॥೪೦॥

ಪದ್ಮತ್ರಯಂ ಸಮಭ್ಯರ್ಚ್ಯ ಮಧ್ಯೇ ಮಂಡಲಮಾದರಾತ್ ।
ವಾಮಾಂ ಜ್ಯೇಷ್ಠಾಂ ಚ ರೌದ್ರೀಂ ಚ ಭಾಗಾದ್ಯೈರ್ದಿಕ್ಷು ಪೂಜಯೇತ್॥೪೧॥

ವಾಮಾದ್ಯಾ ನವಶಕ್ತೀಶ್ಚ ನವಾಕ್ಷರಯುತಾಂ ಯಜೇತ್ ।
ಹೃದಿಬೀಜತ್ರಯಾದ್ಯೇನ ಪೀಠಮಂತ್ರೇಣ ಚಾರ್ಚಯೇತ್ ॥೪೨॥

---

ಯಾದಿ ಕೋಣಗಳಲ್ಲಿ ಕ್ರಮವಾಗಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಈ ದೇವತೆಗಳನ್ನು ನಮಶ್ಯಬ್ದಾಂತವಾಗಿ ಉಚ್ಚರಿಸುತ್ತಾ ಪಾದಪೀಠದಲ್ಲಿ ಆವಾಹಿಸ ಬೇಕು. ॥೩೬-೩೭॥

ಬಿಂದು ಸಹಿತವಾದ ವರ್ಗಾದ್ಯಕ್ಷರಗಳನ್ನುಚ್ಚರಿಸುತ್ತಾ ಅಧರ್ಮವೇ ಮೊದ ಲಾದ ಪೀಠದೇವತೆಗಳನ್ನು ಆವಾಹಿಸಬೇಕು. ಪೀಠದ ನಾಲ್ಕು ದಿಕ್ಕುಗಳಲ್ಲಿಯೂ ಮಾತೃದೇವತೆಗಳನ್ನೂ, ಮಧ್ಯಭಾಗದಲ್ಲಿ ಪ್ರಣವಸಹಿತವಾಗಿ ಅನಂತನನ್ನೂ ಸ್ಥಾಪಿಸಬೇಕು. ಸತ್ವರಜಸ್ತಮೋರೂಪಗಳಾದ ತಂತುತ್ರಯಗಳನ್ನೂ ಪೀಠಕ್ಕೆ ಸುತ್ತಬೇಕು. ಅಧೋಭಾಗದಲ್ಲಿ ಮಾಯಾದೇವತೆಯನ್ನೂ ಊರ್ಧ್ವಭಾಗದಲ್ಲಿ ಅವಿದ್ಯಾಲಕ್ಷ್ಮಿಯನ್ನೂ ಆವಾಹಿಸಬೇಕು. ಅದರ ಮೇಲೆ ಮಂಡಲತ್ರಯಾತ್ಮಕವಾದ ಪತ್ರ, ಕೇಸರ, ಪರಾಗ ಇವುಗಳಿಂದ ತುಂಬಿ ಪ್ರಣವಾಕ್ಷರಗಳಿಂದ ಕೂಡಿದ ದಿವ್ಯಪೀಠದಲ್ಲಿ ಪರಮೇಶ್ವರನನ್ನು ಪೂಜಿಸಬೇಕು. ॥೩೮-೩೯-೪೦॥

ಆರೀತಿ ಮೂರು ಕಮಲಗಳನ್ನು ನಿರೂಪಿಸಿ ಅದರಲ್ಲಿ ಮಂಡಲಾಕಾರದಲ್ಲಿ ಸ್ವಾಮಿಯನ್ನು ಪೂಜಿಸಬೇಕು. ವಾಮಾ, ಜ್ಯೇಷ್ಠಾ, ರೌದ್ರೀ, ವಾಮಾದಿಯಾದ

ಆವೃತ್ತಿ ಪ್ರಥಮಾಂಗೈಶ್ಚ ಪಂಚಭಿರ್ಮೂರ್ತಿಶಕ್ತಿಭಿಃ ।
ತ್ರಿಂಶದ್ಭಿರ್ಮೂರ್ತಿಭಿಶ್ಚಾನ್ಯಾ ವಿಧಿದ್ವಯಸಮನ್ವಿತೈಃ ॥೪೩॥

ಅನಂತಾದ್ಯಾ ಸದಾ ಬಹ್ವ್ಯೋ ಮಾತೃಭಿಶ್ಚ ವೃಷಾದಿಭಿಃ ।
ಸಿದ್ಧಿಭಿಶ್ಚಾಣಿಮಾದ್ಯಾಭಿರಿಂದ್ರಾದ್ಯೈಶ್ಚ ಶಿವೇ ಸುರೈಃ ॥೪೪॥

ವೃಷಭಃ ಕ್ಷೇತ್ರಚಂಡೇಶೌ ದುರ್ಗಾಂ ಚ ಸ್ಕಂದನಂದಿನೌ ।
ಗಣೇಶಃ ಕ್ಷೇತ್ರಪಶ್ಚೈವ ಸ್ವಸ್ವಲಕ್ಷಣಲಕ್ಷಿತಾಃ ॥೪೫॥

ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ ।
ಈಶಿತ್ವಂ ಚ ವಶಿತ್ವಂ ಚ ಪ್ರಾಪ್ತಿಃ ಪ್ರಾಕಾಮ್ಯಮೇವ ಚ ॥೪೬॥

ಅಷ್ಟೈಶ್ವರ್ಯಾಣಿ ಚೋಕ್ತಾನಿ ತೇಜೋ ರೂಪಾಣಿ ಕೇವಲಂ ।
ಪಂಚಭಿರ್ಬ್ರಹ್ಮಭಿಃಪೂರ್ವಂ ಹೃಲ್ಲೇಖಾದ್ಯಾಭಿರಪ್ಯನು ॥೪೭॥

ಅಂಗೈರುಮಾದ್ಯೈರಿಂದ್ರಾದ್ಯೈಃ ಪೂಜೋಕ್ತಾ ಮುನಿಭಿಶ್ಶಿವೇ ।
ಉಮಾ ಚಂಡೇಶ್ವರಾದೀಂಶ್ಚ ಪೂಜಯೇದುತ್ತರಾದಿತಃ ॥೪೮॥

ನವಶಕ್ತಿಗಳು ಇವನ್ನು ನಾಲ್ಕುದಿಕ್ಕುಗಳಲ್ಲಿಯೂಕ್ರಮವಾಗಿ ಪೂಜಿಸಬೇಕು. ಈ ನವ ಶಕ್ತಿಗಳ ಆದ್ಯಕ್ಷರಗಳನ್ನು ಬರೆದು ಆವಾಹಿಸಬೇಕು. ಮಧ್ಯಭಾಗದಲ್ಲಿ ಪ್ರಣವಪುರ ಸ್ಸರವಾಗಿ ಸದ್ಯೋಜಾತಾದಿ ಪಂಚಶಿವಶಕ್ತಿಯ ಮೂಲಮಂತ್ರಗಳನ್ನು ಪಠಿಸುತ್ತಾ ಮುಂದೆ ಹೇಳುವಂತೆ ಮೂವತ್ತು ಮೂರ್ತಿಗಳನ್ನೂ ವಿಧಿವತ್ತಾಗಿ ಆರಾಧಿಸಬೇಕು. ||೪೧-೪೨-೪೩||

ಅನಂತ, ಕೂರ್ಮ, ದಿಗ್ಗಜಗಳೂ, ಬ್ರಾಹ್ಮ್ಯಾದಿ ಸಪ್ತಮಾತೃಕೆಗಳೂ, ವೃಷಭಾದಿ ವಾಹನಗಳೂ, ಅಣಿಮಾದಿ ಅಷ್ಟಸಿದ್ಧಿಗಳೂ, ಇಂದ್ರಾದಿ ಅಷ್ಟದಿಕ್ಪಾಲಕರೂ, ವೃಷಭ, ಕ್ಷೇತ್ರಪಾಲಕ, ಚಂಡೀಶ್ವರ, ದುರ್ಗಾ, ಸ್ಕಂದ, ನಂದೀ, ಗಣಪತಿ, ಇವರನ್ನೂ ಆಯಾ ಮೂರ್ತಿಲಕ್ಷಣವನ್ನನುಸರಿಸಿ ಧ್ಯಾನಿಸಿ ಪೂಜಿಸಬೇಕು. ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಈಶಿತ್ವ, ವಶಿತ್ವ, ಪ್ರಾಪ್ತಿ, ಪ್ರಾಕಾಮ್ಯ ಈ ಎಂಟೂ ಅಷ್ಟೈಶ್ವರ್ಯಗಳು. ಇವನ್ನು ತೇಜೋರೂಪಗಳೆಂದು ಭಾವಿಸಬೇಕು. ||೪೪-೪೫-೪೬||

ಸದ್ಯೋಜಾತಾದಿ ಪಂಚಬ್ರಹ್ಮಾನುವಾಕಗಳಿಂದ, ಮಧ್ಯಭಾಗದಲ್ಲಿ ಪಂಚ ಬ್ರಹ್ಮರನ್ನೂ, ಹಾಗೆಯೇ, ಉಮಾದಿಯಾದ ಅಂಗದೇವತೆಗಳನ್ನೂ ಪೂಜಾಕಾಲ

ಏವಮಾವರಣೋಪೇತಂ ತೇಜೋರೂಪಂ ಸದಾ ಶಿವಂ ।
ಉಮಯಾ ಸಹಿತಂ ದೇವಮುಪಚಾರೈಃ ಪ್ರಪೂಜಯೇತ್ ॥೪೯॥

ಸುಪ್ರತಿಷ್ಠಿತಶಂಖಸ್ಥ ತೀರ್ಥೈಃ ಪಂಚಾಮೃತೈರಪಿ ।
ಪಂಚಗವ್ಯೈಃ ಫಲರಸೈಃ ಕುಶಗಂಧಾಂಬುಹೇಮಜೈಃ ॥೫೦॥

ಅಭಿಷಿಚ್ಯ ಮಹಾದೇವಮುಪಚಾರೈಃ ಸಮಾಹಿತಃ ।
ಕಲ್ಪಯೇದ್ವಿವಿಧೈರ್ಮಂತ್ರೈರಾಸನಾದ್ಯುಪಚಾರಕಾನ್ ॥೫೧॥

ಆಸನಂ ಕಲ್ಪಯೇದ್ಧೈಮಂ ಸ್ವಾಗತಂ ವಿಹಿತಾಂಜಲಿಃ ।
ಅರ್ಘ್ಯಮಷ್ಟಗುಣೋಪೇತಂ ಪಾದ್ಯಂ ಶುದ್ಧೋದಕೇನ ತು ॥೫೨॥

ತೇನೈವಾಚಮನಂ ದದ್ಯಾನ್ಮಧುಪರ್ಕಂ ಮಧೂತ್ತರಂ ।
ಪುನರಾಚಮನಂ ದತ್ವಾ ಸ್ನಾನಂ ಮಂತ್ರೈಃ ಪ್ರಕಲ್ಪಯೇತ್ ॥೫೩॥

ಉಪವೀತಂ ತಥಾವಾಸೋ ಭೂಷಣಾನಿ ನಿವೇದಯೇತ್ ।
ಗಂಧಮಷ್ಟಾಂಗಸಂಯುಕ್ತಂ ಭಸ್ಮನಾಪಿ ನಿವೇದಯೇತ್ ॥೫೪॥

---

ದಲ್ಲಿ ಆವಾಹನೆಮಾಡಬೇಕು. ಉತ್ತರಾದಿಯಾಗಿ ಉಮಾ, ಚಂಡೇಶ್ವರಾದಿಗಳನ್ನು ಪೂಜಿಸಬೇಕು. ॥೪೭-೪೮॥

ಹೀಗೆ ಆವರಣದೇವತೆಗಳನ್ನು ಆರಾಧಿಸಿ ಅನಂತರ ತೇಜೋರೂಪಿಯೂ, ಉಮಾಪತಿಯೂ ಆದ ಮಹಾದೇವನಿಗೆ, ಶಂಖೋದಕದಿಂದಲೂ, ಪಂಚಗವ್ಯ ಪಂಚಾಮೃತಗಳಿಂದಲೂ, ಕುಶೋದಕ, ಗಂಧೋದಕ, ಸುವರ್ಣೋದಕಗಳಿಂದಲೂ ಅಭಿಷೇಕಮಾಡಬೇಕು. ॥೪೯-೫೦॥

ಅನಂತರ ಮಂತ್ರಪೂರ್ವಕವಾಗಿ ಆಸನಾದ್ಯುಪಚಾರಗಳನ್ನು ನೆರವೇರಿಸಬೇಕು. ಆಸನಾರ್ಥವಾಗಿ ಸುವರ್ಣಮಯವಾದ ಪೀಠವೊಂದನ್ನು ಕಲ್ಪಿಸಬೇಕು. ಅಷ್ಟವಿಧವಾದ ವಸ್ತುಗಳಿಂದ ಕೂಡಿದ ಅಷ್ಟಾರ್ಘ್ಯವನ್ನು ಅರ್ಪಿಸಬೇಕು. ಶುದ್ಧೋದಕದಿಂದ ಪಾದ್ಯವನ್ನೂ ಆಚಮನೀಯವನ್ನೂ ಕಲ್ಪಿಸಬೇಕು. ಮಧುಮಯವಾದ ಮಧುಪರ್ಕವನ್ನೂ ಅರ್ಪಿಸಿ ಅನಂತರ ಮಂತ್ರಸ್ನಾನವಮಾಡಿಸಬೇಕು. ॥೫೧-೫೨-೫೩॥

ಅನಂತರ, ವಸ್ತ್ರ, ಯಜ್ಞೋಪವೀತ, ಆಭರಣಗಳು, ಅಷ್ಟಾಂಗಯುಕ್ತವಾದ

ತತಸ್ತಿಲಾಕ್ಷತೈರ್ಯುಕ್ತಾ ಧೌತಾ ಧವಳತಂಡುಲಾಃ ।
ಪುಷ್ಪಾಣಿ ಬಿಲ್ವಮಂದಾರಕಲ್ಹಾರಸರಸೀರುಹಂ ॥೫೫॥

ಧತ್ತೂರಂ ಕರ್ಣಿಕಾರಂ ಚ ದ್ರೋಣಾರ್ಕಕುಶಮಲ್ಲಿಕಾಂ ।
ತುಲಸೀ ಮಾಧವೀ ಚಂಪಾಕಾಶಾಪಾಮಾರ್ಗದೂರ್ವಕಾಃ ॥೫೬॥

ಬೃಹತೀ ಕುಟಜಾದೀನಿ ಯಥಾ ಲಬ್ಧಾನಿ ಪೂಜಯೇತ್ ।
ನಿವೇದಯೇತ್ಸುಗಂಧೀನಿ ಮಾಲ್ಯಾನಿ ವಿವಿಧಾನಿ ಚ ॥೫೭॥

ಧೂಪಂ ಕಾಲಾಗರುಂ ದೇವಿ ದೀಪಂ ಚ ಘೃತಸಂಯುತಂ ।
ಅಥ ಪಾಯಸನೈವೇದ್ಯಂ ಸಘೃತಂ ಸೋಪದಂಶಕಂ ॥೫೮॥

ಮೋದಕಾಪೂಪಸಂಯುಕ್ತಂ ಶರ್ಕರಾಘೃತಪಾಚಿತಂ ।
ಮಧುನೋಕ್ತಂ ದಧಿಯುಕ್ತಂ ಜಲತಾಂಬೂಲಸಂಯುತಂ ॥೫೯॥

ಪಾಯಸೇನೈವ ಹವಿಷಾ ಜುಹುಯಾಜ್ಜಾದವೇದಸಿ ।
ಪ್ರತಿಷ್ಠಾಪ್ಯ ಹುತಾಶಂ ಚ ಭವಾದ್ಯೈರಷ್ಟನಾಮಭಿಃ ॥೬೦॥

---

ಗಂಧ, ಭಸ್ಮ, ಶುಭ್ರವಾದ ಅಕ್ಕಿಯಿಂದಕೂಡಿದ ತಿಲಾಕ್ಷತೆ, ಬಿಲ್ವಪತ್ರೆ, ಮಂದಾರ, ಕಲ್ಹಾರ, ಕಮಲ ಮುಂತಾದ ಪುಷ್ಪಗಳು ಇವುಗಳನ್ನು ಸಮರ್ಪಣೆಮಾಡಬೇಕು. ||೫೪-೫೫||

ದತ್ತೂರಿ, ಕಂಚುವಾಳ, ತುಂಬೆ, ಎಕ್ಕ, ದರ್ಭೆ, ಮಲ್ಲಿಗೆ, ತುಲಸೀ, ಮಾಧವೀ, ಸಂಪಿಗೆ, ಕಾಶಪುಷ್ಪ, ಉತ್ತರಾಣೀ, ಗರಿಕೆ, ಬೃಹತೀ. ಕೊಡಸಿಗೆ ಮುಂತಾದ ಸುಂದರವಾದ ಪುಷ್ಪಗಳನ್ನೆಲ್ಲಾ ಸಮರ್ಪಿಸಬೇಕು. ಸುಗಂಧಮಯ ವಾಗಿರುವ ಪುಷ್ಪಗಳ ಮಾಲಿಕೆಗಳನ್ನು ಅರ್ಪಿಸಬೇಕು. ||೫೬-೫೭||

ಧೂಪ, ಅಗುರು, ಘೃತದೀಪ ಇವುಗಳಿಂದ ಉಪಚರಿಸಿ, ಅನಂತರ ಪಾಯಸ, ತುಪ್ಪ, ಉಪ್ಪಿನಕಾಯಿ, ಕಡುಬು, ಒಬ್ಬಟ್ಟು, ಮುಂತಾದ ಪಾಕವಿಶೇಷಗಳನ್ನೂ, ಹಾಗೆಯೇ ಸಕ್ಕರೆ, ತುಪ್ಪ ಇವುಗಳಿಂದ ಪಕ್ವವಾದ ಭಕ್ಷ್ಯಾದಿಗಳನ್ನೂ, ಜೇನು ತುಪ್ಪ, ಮೊಸರು, ಶುದ್ಧೋದಕ, ತಾಂಬೂಲ, ಇವುಗಳನ್ನೂ ನಿವೇದಿಸಬೇಕು. ಅನಂತರ ಚರ್ವಾಜ್ಯಪಾಯಸಗಳನ್ನು ಈಶ್ವರಪ್ರೀತಿಗಾಗಿ ಅಗ್ನಿಯಲ್ಲಿ ಹೋಮ

ತತಸ್ಸ್ವಿಷ್ಟಕೃದಂತೇ ಹಿ ನೀರಾಜನಮಥಾಚರೇತ್ ।
ಛತ್ರಂ ಚ ಚಾಮರಂ ದಿವ್ಯದರ್ಪಣಂ ವ್ಯಜನಂ ತಥಾ ॥೬೦॥

ತೌರ್ಯತ್ರಿಕಂ ನೃತ್ತಗೀತಂ ದದ್ಯಾದ್ಭಕ್ತ್ಯಾಥ ಶಂಭವೇ ।
ಸಮರ್ಚಯಿತ್ವಾ ವಿಧಿವನ್ಮಂತ್ರೈರ್ವೈದಿಕ ತಾಂತ್ರಿಕೈಃ ॥೬೨॥

ಯದ್ಯಶಕ್ತಃ ಸ್ವಯಂ ನಿಸ್ಸ್ವೋ ಯಥಾವಿಭವಮರ್ಚಯೇತ್ ।
ಭಕ್ತ್ಯಾ ಪುಷ್ಪೇಣ ದತ್ತೇನ ಪ್ರದೋಷೇ ತುಷ್ಯತೇ ಶಿವಃ ॥೬೩॥

ಅಥಾಂಗಭೂತಾಂ ಸಕಲಾಂ ಗಣೇಶಾದೀನ್ ಪ್ರಪೂಜಯೇತ್ ।
ಋಗ್ಯಜುಸ್ಸಾಮಯಜುಷೋರ್ಥರ್ವಸ್ತುತಾಭಿಃ ಪೂಜಯೇತ್ಸವಾಂ ॥೬೪॥

ಪ್ರದಕ್ಷಿಣನಮಸ್ಕಾರೈರ್ನರ್ತನೈಶ್ಚ ಪ್ರಸಾದಯೇತ್ ।
ಸ್ತುವೀತೈವಂ ವಿರೂಪಾಕ್ಷಂ ಪ್ರದೋಷೇಷು ಮಹೇಶ್ವರಿ ॥೬೫॥

ಮಾಡಬೇಕು. ಆಗ "ಭವಾಯ ದೇವಾಯ" ಎಂಬಿವೇ ಮೊದಲಾದ ಎಂಟು ಶಿವನಾಮಮಂತ್ರಗಳನ್ನು ಉಪಯೋಗಿಸಬೇಕು. ॥೫೮-೫೯-೬೦॥

ಸ್ವಿಷ್ಟಕೃತ್ತನ್ನು ಹೋಮಮಾಡಿದ ಅನಂತರ ಮಹಾದೇವನಿಗೆ ಮಹಾ ಮಂಗಳಾರತಿ ಮಾಡಿ, ಹಾಗೆಯೇ, ಛತ್ರಿ, ಚಾಮರ, ದರ್ಪಣ, ವ್ಯಜನ, ತುತ್ತೂರಿ, ನಾಟ್ಯ, ಗಾನ ಮುಂತಾದ ಉಪಚಾರಗಳಿಂದ ಸ್ವಾಮಿಯನ್ನು ಸೇವಿಸಬೇಕು. ಹಾಗೆಯೇ, ವೈದಿಕರಿಂದ ವೇದವನ್ನೂ, ತಾಂತ್ರಿಕರಿಂದ ಪುರಾಣೇತಿಹಾಸಗಳನ್ನೂ ಪಾರಾಯಣ ಮಾಡಿಸಬೇಕು. ॥೬೧-೬೨॥

ಒಂದುವೇಳೆ ವ್ರತಮಾಡುವವನು ದರಿದ್ರನಾಗಿದ್ದರೆ, ತನ್ನ ಶಕ್ತಿಯಿದ್ದಷ್ಟು ಉಪಚಾರಗಳಿಂದ ಪರಶಿವನನ್ನು ಆರಾಧಿಸಬಹುದು. ಭಕ್ತಿಯಿಂದ ಪ್ರದೋಷಕಾಲ ದಲ್ಲಿ ಒಂದು ಹೂವನ್ನು ಸಮರ್ಪಿಸಿದರೂ ಪರಶಿವನು (ನಾನು) ತೃಪ್ತನಾಗುವನು. ಶಿವಪೂಜಾನಂತರ ಅಂಗದೇವತೆಗಳೆನಿಸಿದ ಗಣಪತ್ಯಾದಿ ಸಕಲ ದೇವತೆಗಳಿಗೂ ಪೂಜೆ ಯನ್ನು ಸಲ್ಲಿಸಿ ಋಕ್ಕು, ಯಜುಸ್ಸು, ಸಾಮ ಮುಂತಾದ ವೇದವಾಕ್ಯಗಳಿಂದ ಶಂಕರ ನನ್ನು ಸ್ತುತಿಸಬೇಕು. ಪ್ರದಕ್ಷಿಣನಮಸ್ಕಾರ, ನರ್ತನಾದಿಗಳು ಇವುಗಳಿಂದ ಪ್ರದೋಷ ಕಾಲದಲ್ಲಿ ಪರಶಿವನನ್ನು ಭಕ್ತಿಯಿಂದ ಆರಾಧಿಸಬೇಕು. ಮತ್ತು ಹೀಗೆ ಸ್ತುತಿಸ ಬೇಕು. ॥೬೩-೬೪-೬೫॥

ಜಯ ಜಯ ವಿಶ್ವವಿಧಾನ ದಕ್ಷ ಶಿಕ್ಷ
ಜಯ ಜಯ ಸರ್ವಸುರಾಧಿನಾಥ ।
ಜಯ ಜಯ ಚಾರುಶಶಾಂಕಫಾಲವಮೌಲೇ
ಜಯ ಜಯ ಕಾಲ ಕಲಾವಿಹೀನ ದೇಹ ॥೬೬॥

ಜಯ ಜಯ ಕಾಮಹರಾಂತಕಾರೇ
ಜಯ ಜಯ ಸಾಮಗಣಾದಿಗಣ್ಯಮೂರ್ತೇ ।
ಜಯ ಜಯ ಪುಣ್ಯಫಲಪ್ರದೋರು ವಿಶ್ವಮೂರ್ತೇ
ಜಯ ಜಯ ಸೋಮಗಭಸ್ತಿವಹ್ನಿದೃಷ್ಟೇ ॥೬೭॥

ಜಯ ಜಯ ನೀಲಗಲಪ್ರಸೀದ ಶಂಭೋ
ಜಯ ಜಯ ದುರಿತಾಂಧಕಾಸುರಾರೇ ।
ಜಯ ಜಯ ವಿಷ್ಣುಹರಾಜದುರ್ಗ್ಯಮೂರ್ತೇ
ಜಯ ಜಯ ಜಹ್ನುಜಟೋರುಶೋಭಿವಮೌಲೇ ॥೬೮॥

---

"ಪ್ರಪಂಚರಚನೆಯಲ್ಲಿ ತೊಡಗಿದವರಿಗೂ ಶಿಕ್ಷಕನಾಗಿರುವ ದೇವಾಧಿದೇವನೇ ನಿನಗೆ ಜಯವಾಗಲಿ. ಚಂದ್ರಶೇಖರನೂ. ಕಾಲಾತೀತನೂ, ನಿರ್ಗುಣನೂ. ಮನ್ಮಥ ನಾಶಕನೂ, ಅಂತಕಾಂತಕನೂ ಆದ ಮಹಾದೇವನೇ ನಿನಗೆ ಮಂಗಳವು. ಸಾಮ ವಾಕ್ಯಗಳಿಂದಲೂ, ನಿಖಿಲ ಗಣದೇವತೆಗಳಿಂದಲೂ ಸ್ತುತನಾಗಿ, ಪುಣ್ಯಫಲವನ್ನು ಅನುಗ್ರಹಿಸುವ, ಚಂದ್ರಸೂರ್ಯಾಗ್ನಿಗಳಿಂದ ನೇತ್ರಗಳನ್ನು ಕಲ್ಪಿಸಿಕೊಂಡಿರುವ ಪರ ಶಿವನೇ ನಿನಗೆ ಜಯಕಾರವು. ನೀವು ಸರ್ವೋತ್ಕೃಷ್ಟನಾಗಿರು. ॥೬೬-೬೭॥

ನೀಲಕಂಠನೂ, ಪಾಪನಾಶಕನೂ, ಅಂಧಕಾಸುರಸೂದನನೂ ಆದ ಮಹಾ ದೇವನೇ, ನೀನು ವಿಷ್ಣು, ಹರ, ಬ್ರಹ್ಮ ಈ ತ್ರಿಮೂರ್ತಿಗಳಿಗೂ ಸುಲಭವಾಗಿ ದೊರೆಯುವವನಲ್ಲ. ಜಹ್ನುಮಹರ್ಷಿಯಿಂದ ಹೊರಗೆ ಬಂದ ಗಂಗಾನದಿಯನ್ನೇ ಶಿರೋಭಾಗದಲ್ಲಿಟ್ಟು, ವಿಷದಿಂದ ಕಪ್ಪಾದ ಕಂಠಪ್ರದೇಶದಿಂದ ಶೋಭಿಸುವ ಸ್ವಾಮಿಯೇ, ನಿನಗೆ ಜಯವಿರಲಿ. ಬ್ರಹ್ಮನಿಂದಲೂ, ವಿಷ್ಣುವಿನಿಂದಲೂ ಪೂಜಿತ ನಾಗಿ ಭಕ್ತರ ಸಮಸ್ತ ಪಾಪರಾಶಿಯನ್ನೂ ನಿರ್ಮೂಲಗೊಳಿಸುವ ಮಹಾದೇವನೇ, ನೀನು ನಿನ್ನ ಭಕ್ತರಿಗೆ ಸಕಲ ಇಷ್ಟಾರ್ಥಗಳನ್ನೂ ಕರುಣಿಸುವೆಯಲ್ಲವೆ, ವಿಶ್ವಪತಿಯೇ, ಗಜಚರ್ಮಾಂಬರಧಾರಿಯೇ, ನನ್ನನ್ನು ಕರುಣಿಸಿ, ಅನಾಥನಾದ ನನ್ನ ಸಕಲ ಪಾಪ

ಜಯ ಜಯ ಗರನೀಲ ಚಾರುಕಂಠ
ಜಯ ಜಯ ಪಂಕಜಾಸನಾಬ್ಜನೇತ್ರಪೂಜ್ಯ ।
ಜಯ ಜಯ ಪಾತಕಸಂತತಿಪ್ರಣಾಶಹೇತೋ
ಜಯ ಜಯ ಕಾಮಿತಸರ್ವದಸ್ತ್ವಮೀಶ ॥೬೯॥

ಜಯ ಜಯ ವಿಶ್ವಪತೇ ಪ್ರಸೀದ ಮಾಂ
ಜಯ ಜಯ ಸಾಮಜಚರ್ಮವಸ್ತ್ರ ಶಂಭೋ ।
ಜಯ ಜಯ ಮಾಮನಾಥಮೀಶ ಪಾಹಿ
ಅನೃಣಂ ಮಾಂ ಕುರು ದೇವ ಮಾನುಷಾದಿಮಾರ್ಗೇ ॥೭೦॥

ಆಢ್ಯೋ ವಾಥ ದರಿದ್ರೋ ವಾ ಸ್ತುವೀತ್ಯೈವಂ ಮಹೇಶ್ವರಂ ।
ತಸ್ಯ ಯಚ್ಚಿಂತಿತಂ ಕಾಮಂ ಪ್ರಯಚ್ಛತಿ ಮಹೇಶ್ವರಃ ॥೭೧॥

ನ ತಸ್ಯ ಪಾತಕಭಯಂ ನ ದಾರಿದ್ರ್ಯಗದಾದ್ಭಯಂ ।
ಭಿಷಕ್ಪತಿಪದಾಬ್ಜಂ ಯಃ ಪ್ರಪನ್ನೋ ಯಾತಿ ಸದ್ಗತಿಂ ॥೭೨॥

ಏವಮಾರಾಧಯೇದ್ದೇವಂ ಪ್ರದೋಷೇ ಲಿಂಗರೂಪಿಣಂ ।
ಬ್ರಾಹ್ಮಣಾಂಛಾಂಭವಾಂಶ್ಚೈವ ಭೋಜಯೇದ್ದ್ವಾದಶಾವರಾನ್ ॥೭೩॥

---

ರಾಶಿಯನ್ನೂ ನಿರ್ಮೂಲಗೊಳಿಸು. ಮನುಷ್ಯರಿಗೆ ಸಾಮಾನ್ಯವಾಗಿರುವ ದೇವರ್ಷಿ ಪಿತೃಋಣಗಳನ್ನೂ ನನಗೆ ಪರಿಹರಿಸು. ನಿನಗೆ ಜಯವಾಗಲಿ. ॥೬೮-೬೯-೭೦॥

ಶ್ರೀಮಂತನಾಗಲಿ, ದರಿದ್ರನಾಗಲಿ ಈ ಸ್ತೋತ್ರದಿಂದ ಯಾವನು ಪರಶಿವನನ್ನು ಸ್ತುತಿಸುವನೋ ಅವನ ಇಷ್ಟಾರ್ಥವೆಲ್ಲವೂ ಶಿವಾನುಗ್ರಹದಿಂದ ಸುಲಭವಾಗಿ ನೆರವೇರುವುದು. ಪಾಪಭಯವಾಗಲಿ, ಋಣರೋಗಾದಿಗಳ ಭೀತಿಯಾಗಲಿ ಅವನಿಗೆ ತಟ್ಟಲಾರದು. ಇದರಿಂದ ಅವನಿಗೆ ವೈದ್ಯಶ್ರೇಷ್ಠನಾದ ಶಿವನ ಪಾದಾರವಿಂದದ ಸಾನ್ನಿಧ್ಯವೇ ದೊರಕುವುದು. ॥೭೧-೭೨॥

ಹೀಗೆ ಶಿವಲಿಂಗರೂಪಿಯಾದ ಪರಶಿವನನ್ನು ಪ್ರದೋಷಕಾಲದಲ್ಲಿ ಅರ್ಚಿಸಿ, ಅನಂತರ ಶಿವಭಕ್ತಿಯುತರಾದ ಹನ್ನೆರಡು ಸಂಖ್ಯೆಗೆ ಕಮ್ಮಿಯಿಲ್ಲದ ಬ್ರಾಹ್ಮಣರಿಗೆ ಭೋಜನಮಾಡಿಸಿ, ದಕ್ಷಿಣೆ ತಾಂಬೂಲಾದಿಗಳಿಂದ ಅವರನ್ನು ತೃಪ್ತಿಗೊಳಿಸಬೇಕು. ಈ ರೀತಿ ನಡೆಸುವ ಶಿವಾರಾಧನೆಯು ಭಕ್ತರ ಸರ್ವಾಭೀಷ್ಟವನ್ನೂ ಸಲ್ಲಿಸುವುದಲ್ಲದೆ,

ದಕ್ಷಿಣಾಭಿಶ್ಚ ತಾಂಬೂಲೈರ್ಗಂಧಪುಷ್ಪಾಕ್ಷತಾದಿಭಿಃ ।
ಶಿವಪೂಜೇಯಮಾಖ್ಯಾತಾ ಸರ್ವಾಭೀಷ್ಟಫಲಪ್ರದಾ ॥೭೪॥

ಸರ್ವಪಾಪಕ್ಷಯಕರೀ ಋಣದಾರಿದ್ರ್ಯನಾಶಿನೀ ॥೭೫॥

॥ ಈಶ್ವರ ಉವಾಚ ॥

ಕೈಲಾಸೇ ತ್ರಿಜಗಜ್ಜನಿತ್ರಿ ಸುಮಹಾನೃತ್ತಾದರಸ್ತೇಗ್ರತೋ
ಭ್ರಾಜತ್ಪನ್ನಗ ಮೌಲಿರತ್ನ ಸುಮಹಾಮಾಲಾಲಸದ್ವಕ್ಷಸಂ ।
ನಂದಿಸ್ಕಂದಗಣೇಶ್ವರೋದ್ಧತಮಹಾತೌರ್ಯತ್ರಿಕಾಣಾಂ ಸ್ವನೈಃ
ಕೈಲಾಸೇಶ್ವರಪೂಜಯಾ ತ್ರಿಭುವನಂ ವಿಸ್ಮಾಪಯನ್ನಾಸ್ಥಿತಃ ॥೭೬॥

ಪ್ರದೋಷೇಷು ಶೇಷಾಹಿಭೂಷಾವಿಶೇಷಂ
ವಿಷಂ ಧಾರಯಂತಂ ಸುಪೂಷೋರುನೇತ್ರಂ ।
ಸದೋಷಾಕರಾಕಾರಯೋಷಾರ್ಧಗಾತ್ರಂ
ಪ್ರದೋಷೇಣ ಸಂಪೂಜಯಂತೋ ಯೇ ತದಾ ಭಸ್ಮಭೂಷಾಃ॥೭೭॥

---

ಅವರ ಸರ್ವಪಾಪಗಳನ್ನೂ ನಾಶಗೊಳಿಸಿ, ದಾರಿದ್ರ್ಯ, ಸಾಲ ಇವೇ ಮೊದಲಾದ ಮಾನವರ ಈತಿಬಾಧೆಗಳನ್ನು ನಿರ್ಮೂಲಗೊಳಿಸುವುದು. ॥೭೩-೭೪-೭೫॥

ಈ ವ್ರತಾಚರಣೆಯಿಂದ ಪುಣ್ಯಶಾಲಿಯಾದವನು ತ್ರಿಜಗಜ್ಜನನಿಯಾದ ನಿನ್ನೆದುರಿನಲ್ಲಿ ಆನಂದದಿಂದ ನರ್ತನಮಾಡುತ್ತಾ, ಸರ್ಪಮಾಲಾಭರಣನೂ, ದಿವ್ಯ ಮಾಲಾಧಾರಿಯೂ ಆಗಿ ಸರ್ವದಾ ಸ್ಕಂದ, ಗಣಪತಿ, ನಂದೀಶ್ವರ ಇವರುಗಳಿಂದ ನಡೆಸುವ ತುತ್ತೂರಿಯ ಧ್ವನಿಯಿಂದ ಆನಂದಪಡುತ್ತಿರುವ ನನ್ನ ಸಮೀಪದಲ್ಲಿದ್ದು ಕೈಲಾಸೇಶ್ವರನನ್ನು ಪೂಜಿಸುತ್ತಾ ಜಗದಾಶ್ಚರ್ಯಕರನಾಗಿ ಸಂತೋಷದಿಂದ ನೆಲಸುವನು. ॥೭೬॥

ಪ್ರದೋಷಕಾಲದಲ್ಲಿ ಭಸ್ಮಧಾರಿಗಳಾಗಿ ನನ್ನ ಭಕ್ತರು ಸರ್ಪಮಾಲಾಭರಣನೂ, ಸೂರ್ಯನೇತ್ರನೂ, ವಿಷಧಾರಿಯೂ, ಉಮಾರ್ಧದೇಹಿಯೂ, ಚಂದ್ರಶೇಖರನೂ ಆದ ನನ್ನನ್ನು ಭಕ್ತಿಯಿಂದ ಪೂಜಿಸುವವರು ನಿಜವಾಗಿಯೂ ಧನ್ಯರೆನಿಸಿ ನನ್ನ ಲೋಕವನ್ನು ಸೇರುವರು. ॥೭೭॥

ಪ್ರದೋಷಪೂಜಾರಹಿತಾ ಸದೋಷಾ
ದುಃಶೇಷಜಾತಜನುಷಾ ವರಮಾನುಷಾಸ್ತೇ ।
ವಿದ್ರಾವಕಾ ಭುವಿ ಭವಂತಿ ಸುಸೌಖ್ಯಸಖ್ಯ
ನಿದ್ರಾನಿತಂದ್ರಿತ ಮನಸ್ತನವೋ ದರಿದ್ರಾಃ ॥೭೮॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ತ್ರಯೋದಶೀ ಪ್ರದೋಷಪೂಜಾ ಮಹಿಮಾನುವರ್ಣನಂ ನಾಮ ತ್ರಿಂಶೋಽಧ್ಯಾಯಃ

---

ಮಾನವರಲ್ಲಿ ಯಾರು ಪ್ರದೋಷಪೂಜೆಯಲ್ಲಿ ಅನಾಸಕ್ತರೆನಿಸುವರೋ ಅವರು ನಿಜವಾಗಿಯೂ ದುರ್ವಂಶದಲ್ಲಿ ದುಷ್ಟರಿಂದ ಜನಿಸಿದವರೆಂದು ತಿಳಿಯಬೇಕು. ಅಂತಹವರು ಭೂಲೋಕದ ಯಾವ ಸೌಖ್ಯವನ್ನೂ ಪಡೆಯದೆ ಹೃದಯವಿದ್ರಾವಕಗಳಾದ ನಾನಾದುಃಖಗಳನ್ನು ಎದುರಿಸಿ ಕೊನೆಗೆ ನರಕಯಾತನೆಯನ್ನೂ ಅನುಭವಿಸುವರು ಎಂದು ಮಹೇಶ್ವರನು ಪಾರ್ವತಿಗೆ ಪ್ರದೋಷಾರಾಧನೆಯ ಫಲವನ್ನು ವಿವರವಾಗಿ ತಿಳಿಯಪಡಿಸಿದನು. ॥೭೮॥

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ತ್ರಯೋದಶೀ ಪ್ರದೋಷ ಪೂಜಾಮಹಿಮೆಯನ್ನು ವಿವರಿಸುವ ಮೂವತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀ ಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಏಕತ್ರಿಂಶೋಽಧ್ಯಾಯಃ

|| ಶ್ರೀ ಮಹಾದೇವ ಉವಾಚ ||

ತ್ರಯೋದಶೀಪ್ರದೋಷೇಷು ಮಂದವಾರೇಣ ಸಂಯುತಃ ।
ಪ್ರದೋಷೋ ಮೇ ಮಹಾಪ್ರೀತಿದಾಯಕೋ ಲೋಕನಾರ್ಚನೇ॥೧॥

ಶನಿಪ್ರದೋಷೇ ಸಂಪ್ರಾಪ್ತೇ ಶುಕ್ಲೇ ಕೃಷ್ಣೇ ಯಥಾ ಶಿವೇ ।
ಪಕ್ಷದ್ವಯೇ ತ್ರಯೋದಶ್ಯಾಂ ನಿರಾಹಾರೋ ಭವೇದಥ ॥೨॥

ಬ್ರಹ್ಮಚಾರೀ ಗೃಹೀ ಭಿಕ್ಷುರ್ವನೀ ಚ ನರನಾರ್ಯಪಿ ।
ನಿತ್ಯಂ ನೈಮಿತ್ತಿಕಂ ಕಾಮ್ಯಮಿತಿ ತ್ರೇಧಾಸ್ಯ ಸಂಸ್ಥಿತಿಃ ॥೩॥

---

## ಮೂವತ್ತೊಂದನೆಯ ಅಧ್ಯಾಯ

ಮಹಾದೇವನು ಪಾರ್ವತಿಗೆ ಪ್ರತಿಪಕ್ಷದಲ್ಲಿಯೂ ಬರುವ ತ್ರಯೋದಶೀ ವ್ರತಮಹಿಮೆಯನ್ನು ತಿಳಿಸಿ ಮತ್ತೆ ವಿಶೇಷವಾಗಿ ಲಭಿಸುವ ಶನಿಪ್ರದೋಷಮಹಿಮೆಯನ್ನು ಉಪದೇಶಿಸತೊಡಗಿದನು. "ಲೋಕನಾಯಕಿಯೇ, ಶನಿವಾರಸಹಿತವಾಗಿ ಬರುವ ತ್ರಯೋದಶೀ ಪ್ರದೋಷವನ್ನು ಶನಿಪ್ರದೋಷವೆನ್ನುವರು. ಆ ದಿನವು ನನಗೆ ಅತ್ಯಂತ ಪ್ರೀತಿದಾಯಕವಾದುದು. ಶುಕ್ಲ ಅಥವಾ ಕೃಷ್ಣಪಕ್ಷಗಳಲ್ಲಿ ಎಲ್ಲಿಯಾದರೂ ಶನಿವಾರಯುತವಾದ ತ್ರಯೋದಶೀಪ್ರದೋಷವು ಬಂದದ್ದೇ ಆದರೆ ಆದಿನ ವ್ರತ ಮಾಡುವವನು ನಿರಾಹಾರದಿಂದಿರಬೇಕು. ಆ ದಿನ ನನ್ನ ದರ್ಶನ ಮತ್ತು ಅರ್ಚನೆಗೆ ಪ್ರಶಸ್ತವಾದುದು. ||೧-೨||

ಈ ವ್ರತವನ್ನು, ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ, ಸ್ತ್ರೀ ಪುರುಷರು ಇವರಲ್ಲಿ ಯಾರು ಬೇಕಾದರೂ ಆಚರಿಸಬಹುದು. ಈ ವ್ರತವು, ನಿತ್ಯ,

ಯೋ ಯಥಾ ಕಾಮಯೋದ್ವಾಪಿ ದ್ವಾದಶಾಬ್ದಂ ಸಮಾಚರೇತ್ ।
ಉದ್ಯಾಪನಂ ಚಾಸ್ಯ ಶಿವೇ ಸೋಮವಾರಸಮೋ ವಿಧಿಃ ॥೪॥

ಕಾಲೋ ಹಿ ಮಾಘಮಾಸೋಽಸ್ಯ ಶ್ರಾವಣೇ ವಾ ಮಹೇಶ್ವರಿ ।
ಶನಿಪ್ರದೋಷಯೋಗೇನ ಯದಾ ಸಂಪದ್ಯತೇ ತದಾ ॥೫॥

ಕುರ್ಯಾದುದ್ಯಾಪನಂ ಚಾಸ್ಯ ಆಜನ್ಮೀ ನೈವಮಾಚರೇತ್ ।
ವಿಧಿಮಸ್ಯ ಪ್ರವಕ್ಷ್ಯಾಮಿ ಪೂಜಾಯಾಂ ಶೃಣು ಶೈಲಜೇ ॥೬॥

ನದ್ಯಾದೌ ಚ ಸರಸ್ಯಾತ್ವಾ ಶುಕ್ಲವಾಸಾ ಜಿತೇಂದ್ರಿಯಃ ।
ಪ್ರಕ್ಷಾಳ್ಯ ಪಾದಾವಾಚಮ್ಯ ಯತವಾಕ್ಶುದ್ಧಮಾನಸಃ ॥೭॥

ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮನೋದ್ಧೂಲ್ಯ ವಿಗ್ರಹಂ ।
ತ್ರಿಯಾಯುಷತ್ರಿಪುಂಡ್ರಾಂಕೋ ರುದ್ರಾಕ್ಷೋರು ಸರಾವೃತಃ ॥೮॥

ಘಟೀತ್ರಯಾವಶೇಷೇಣ ನಿತ್ಯಕರ್ಮಸಮಾಪ್ಯ ಚ ।
ಲಿಂಗಸ್ಯ ಪಾರ್ಶ್ವಮಾಗತ್ಯ ಕುರ್ಯಾತ್ಸಂಕಲ್ಪಪೂರ್ವಕಂ ॥೯॥

ನೈಮಿತ್ತಿಕ, ಕಾಮ್ಯವೆಂದು ಮೂರುವಿಧವಾಗಿರುವುದು. ಯಾವ ಉದ್ದೇಶದಿಂದಲಾದರೂ ಈ ವ್ರತವನ್ನು ಹನ್ನೆರಡುವರ್ಷ ಪರ್ಯಂತ ನಡೆಸಿ, ಅನಂತರ ಉದ್ಯಾಪನೆ ಮಾಡಬೇಕು. ಈ ವ್ರತ ಮತ್ತು ಉದ್ಯಾಪನೆಯ ವಿಧಿಯೆಲ್ಲವೂ ಸೋಮವಾರ ವ್ರತದಂತೆಯೇ ತಿಳಿಯಬೇಕು. ॥೩-೪॥

ಉದ್ಯಾಪನೆಗೆ ಮಾತ್ರ ಶ್ರಾವಣ, ಮಾಘ ಈ ಎರಡು ತಿಂಗಳುಗಳಲ್ಲಿ ಶನಿಪ್ರದೋಷವು ಬಂದಾಗ ಮಾತ್ರ ಪ್ರಶಸ್ತಕಾಲವೆಂದು ಭಾವಿಸಬೇಕು. ಜನ್ಮಪರ್ಯಂತ ವ್ರತಮಾಡುವವರಿಗೆ ಉದ್ಯಾಪನೆಯು ಅವಶ್ಯಕತೆಯಿಲ್ಲ. ಈ ಪೂಜಾವಿಧಿಯನ್ನು ವಿವರಿಸಿ ಹೇಳುವೆನು ಕೇಳು. ॥೫-೬॥

ನದ್ಯಾದಿ ಜಲಾಶಯದಲ್ಲಿ ಸ್ನಾನಮಾಡಿ, ಶುದ್ಧವಸ್ತ್ರಧಾರಿಯಾಗಿ ಜಿತೇಂದ್ರಿಯನಾಗಿ, ಕೈಕಾಲುಗಳನ್ನು ತೊಳೆದು ನಿರ್ಮಲಮನಸ್ಸಿನಿಂದ 'ಅಗ್ನಿರಿತಿ ಭಸ್ಮ' ಇತ್ಯಾದಿ ಮಂತ್ರಗಳಿಂದ ದೇಹಕ್ಕೆ ಭಸ್ಮಲೇಪನಮಾಡಿ, 'ತ್ರಿಯಾಯುಷಂ' ಎಂಬ ಮಂತ್ರದಿಂದ ಭಸ್ಮತ್ರಿಪುಂಡ್ರವನ್ನೂ ರುದ್ರಾಕ್ಷಮಾಲೆಯನ್ನೂ ಧರಿಸಿಕೊಂಡು ಪ್ರದೋಷಕಾಲಕ್ಕೆ ಮೂರುಗಳಿಗೆ ಮುಂಚೆ ನಿತ್ಯಕರ್ಮವನ್ನೆಲ್ಲಾ ಮುಗಿಸಿಕೊಂಡು

ಸಂಪಾದ್ಯ ಪೂಜಾಸಂಭಾರಂ ಕಾಲಲಬ್ಧಂ ಚ ಯಚ್ಛಿವೇ ।
ತ್ರಯೋದಶ್ಯಾಂ ದಿವಾ ಸ್ಥಿತ್ವಾ ನಿರಾಹಾರೋ ಮಹೇಶ್ವರ ॥೧೦॥

ನಕ್ತಂ ಭೋಕ್ಷ್ಯಾಮಿ ದೇವೇಶ ತ್ರಾಹಿ ಮಾಂ ಕೃಪಯಾ ಹರ ।
ಸರ್ವಪಾಪಕ್ಷಯಕರೋ ಋಣದಾರಿದ್ರ್ಯನಾಶಕಃ ॥೧೧॥

ದುರ್ಲಭಶ್ಶನಿವಾರೇಣ ಯುಕ್ತೋ ಮುಕ್ತಿಪ್ರದೋ ನೃಣಾಂ ।
ಪ್ರದೋಷೋ ದುರ್ಲಭತರಸ್ತತ್ರ ಪೂಜಾಪಿ ದುರ್ಲಭಾ ॥೧೨॥

॥ ದೇವ್ಯುವಾಚ ॥

ಭಗವನ್ ಕೇನ ವಿಧಿನಾ ಸಮಭ್ಯರ್ಚ್ಯ ಮಹೇಶ್ವರಂ ।
ಪ್ರದೋಷೇ ಚಾಸ್ತದೋಷೇ ಚ ಶನಿಯುಕ್ತೇ ಶಿವಾರ್ಚಕಃ ॥೧೩॥

ಸರ್ವಪಾಪವಿನಿರ್ಮುಕ್ತಃ ಸರ್ವಾನ್ಕಾಮಾನವಾಪ್ನುಯಾತ್ . ॥೧೪॥

---

ಶಿವಲಿಂಗದ ಸಮೀಪಕ್ಕೆ ಹೋಗಿ ಅಲ್ಲಿ ಸಂಕಲ್ಪಮಾಡಿ ಕುಳಿತುಕೊಳ್ಳಬೇಕು. ॥೭-೮-೯॥

ಆಯಾ ಕಾಲದಲ್ಲಿ ಶಿವಾರ್ಚನೆಗೆ ಲಭಿಸಿದ ಪೂಜಾಸಾಮಗ್ರಿಗಳಿಂದ ಕೂಡಿ, ಪರಶಿವನೆದುರಿಗೆ " ಸ್ವಾಮಿ, ಈ ತ್ರಯೋದಶೀ ತಿಥಿಯಲ್ಲಿ ನಾನು ನಿರಾಹಾರದಿಂದಿದ್ದು ನಿನ್ನನ್ನು ಪ್ರದೋಷಕಾಲದಲ್ಲಿ ಆರಾಧಿಸಿ ನಕ್ತಭೋಜನಮಾಡುತ್ತೇನೆ. ಪರಶಿವನೇ, ನೀನು ಸರ್ವಪಾಪನಾಶಕನು. ಶನಿವಾರಯುತವಾದ ಈ ಶನಿಪ್ರದೋಷವು ಅತ್ಯಂತ ದುರ್ಲಭವಾದದ್ದು. ಹಾಗೆಯೇ ಮುಕ್ತಿಪ್ರದವೂ ಎನಿಸಿದೆ. ಇಂತಹ ಕಾಲದಲ್ಲಿ ಪೂಜೆ ಸಲ್ಲಿಸುವ ಭಾಗ್ಯವೂ ಸುಲಭವಾಗಿ ದೊರೆಯತಕ್ಕುದಲ್ಲ, ಎಂದು ಸಂಕಲ್ಪ ಮಾಡಬೇಕು. ॥೧೦-೧೧-೧೨॥

ಎಂದು ಮಹೇಶ್ವರನು ಹೇಳಿದೊಡನೆಯೇ ಪಾರ್ವತಿಯು ಮತ್ತೆ ಪ್ರಶ್ನೆ ಮಾಡುತ್ತಾ " ಮಹಾಮಹಿಮನೇ, ಶನಿವಾರ ಪ್ರದೋಷಕಾಲದಲ್ಲಿ ಯಾವರೀತಿ ಮಹೇಶ್ವರನಾದ ನಿನ್ನನ್ನು ಅರ್ಚಿಸಬೇಕು ? ಯಾವರೀತಿ ನಿನ್ನನ್ನು ಪೂಜಿಸುವುದರಿಂದ ಭಕ್ತನಿಗೆ ಸಕಲೇಷ್ಟಾರ್ಥಗಳೂ ಒದಗಿ ಪಾಪನಿರ್ಮುಕ್ತನಾಗುವನು ? " ಎನ್ನಲು ಪರಶಿವ ನುಶನಿಪ್ರದೋಷವ್ರತವಿಧಿಯನ್ನು ಈ ರೀತಿ ವಿವರಿಸಿದನು. ॥೧೩-೧೪॥

॥ ಶ್ರೀ ಶಿವ ಉವಾಚ ॥

ಸಾಯಂ ಸಂಧ್ಯಾ ಪ್ರದೋಷೇ ತು ತ್ರಯೋದಶ್ಯಾಂ ಶನೇರ್ದಿನೇ ।
ಲಬ್ಧಶ್ಚೇಚ್ಛುಕ್ಲಕೃಷ್ಣೇ ವಾ ಶಿವಂ ದೃಷ್ಟ್ವಾ ಮಹಾಫಲಂ ॥೧೫॥

ಸ್ಥಾವರೇ ಜಂಗಮೇ ವಾಪಿ ಲಿಂಗೇ ತುಂಗೇ ಮಹೇಶ್ವರಿ ।
ಉದಯೇ ದ್ವಾದಶೀ ಕಿಂಚಿತ್ಪ್ರದೋಷೇಥ ತ್ರಯೋದಶೀ ॥೧೬॥

ಶಿವಾರ್ಚನೇನ ಯತ್ಪುಣ್ಯಂ ತತ್ಪುಣ್ಯಂ ನಾನ್ಯಧರ್ಮತಃ ।
ವೇದವಾದೈರ್ನ ಯೋಗೈರ್ವಾ ಯಾಗೈರ್ವಾ ಕಿಂ ತಪಸ್ಯಯಾ ॥೧೭॥

ಶನಿಪ್ರದೋಷೇ ಲಿಂಗಾರ್ಚಾ ಏಕಬಿಲ್ವಪ್ರಪೂಜನಾತ್ ।
ಶನಿಪ್ರದೋಷಂ ಸಂಪ್ರಾಪ್ಯ ಪ್ರಾತಃ ಕೃತ್ಯಂ ಸಮಾಪ್ಯ ಚ ॥೧೮॥

ಸ್ನಾತ್ವಾ ನದ್ಯಾಂ ತಟಾಕೇ ವಾ ಧೌತವಾಸಾ ಜಿತೇಂದ್ರಿಯಃ ।
ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಭಸ್ಮರುದ್ರಾಕ್ಷಭೂಷಣಃ ॥೧೯॥

---

ಶುಕ್ಲ ಅಥವಾ ಕೃಷ್ಣಪಕ್ಷದ ತ್ರಯೋದಶಿಯ ದಿನ ಶನಿವಾರವು ಬಂದರೆ, ಆ ಪ್ರದೋಷವನ್ನು ಶನಿಪ್ರದೋಷವೆನ್ನುವರು. ಆ ಸಮಯದಲ್ಲಿ ಶಿವದರ್ಶನ ಮಾಡುವುದರಿಂದ ಮಹಾಫಲವು ಲಭಿಸುವುದು. ಸೂರ್ಯೋದಯಕಾಲದಲ್ಲಿ ದ್ವಾದಶೀ ತಿಥಿಯಿದ್ದು, ಪ್ರದೋಷಕಾಲದಲ್ಲಿ ತ್ರಯೋದಶೀ ಸಂಬಂಧವಿದ್ದರೆ ಆ ದಿನ ಶಿವಪೂಜೆ ಮಾಡುವುದು, ವಿಶೇಷ ಪುಣ್ಯಪ್ರದವೆನಿಸುವುದು. ಆ ದಿನ ಸ್ಥಿರಲಿಂಗವನ್ನಾಗಲಿ, ಜಂಗಮ (ಚರ) ಲಿಂಗವನ್ನಾಗಲಿ ಶಿವರೂಪವೆಂದು ಭಾವಿಸಿ ಪೂಜಿಸಬಹುದು. ॥೧೫-೧೬॥

ಅಂಥ ದಿವಸ ಮಾಡಿದ ಶಿವಾರ್ಚನೆಯಿಂದ ಯಾವ ಸುಕೃತವು ಲಭಿಸುವುದೋ, ತತ್ಸದೃಶವಾದ ಪುಣ್ಯವು ವೇದಾಂತಶ್ರವಣದಿಂದಲೂ, ಯೋಗಾಭ್ಯಾಸದಿಂದಲೂ, ಯಾಗಾನುಷ್ಠಾನದಿಂದಲೂ, ಉಗ್ರವಾದ ತಪಶ್ಚರ್ಯೆಯಿಂದಲೂ, ಲಭಿಸಲಾರದು. ಶನಿಪ್ರದೋಷದ ದಿನ ಶಿವಲಿಂಗಕ್ಕೆ ಒಂದು ಬಿಲ್ವವನ್ನು ಸಮರ್ಪಿಸಿದರೂ ವಿಶೇಷ ಫಲವುಂಟು. ॥೧೭-೧೮॥

ಶನಿಪ್ರದೋಷದ ದಿನ ಪ್ರಾತಃಕಾಲ ನದಿಯಲ್ಲಾಗಲಿ, ಕೆರೆಯಲ್ಲಾಗಲಿ, ಸ್ನಾನಮಾಡಿ ಶುಭ್ರವಸ್ತ್ರವನ್ನು ಧರಿಸಿ ಜಿತೇಂದ್ರಿಯನಾಗಿದ್ದು ಸಾಯಂಕಾಲದಲ್ಲಿ

ಶಿವಾಗಾರಂ ಪ್ರವಿಶ್ಯಾಥ ವಿತಾನಸಮಲಂಕೃತಂ ।
ಪುಷ್ಪಮಾಲಾವೃತಂ ಚಾರು ತೌರ್ಯತ್ರಿಕನಿನಾದಿತಂ ॥೨೦॥

ಉಪವಿಶ್ಯಾಸನೇ ಶುದ್ಧೇ ಪ್ರಾಣಾನಾಯಮ್ಯ ವಾಗ್ಯತಃ ।
ಭೂತಿಶುದ್ಧಿಂ ತತಃ ಕೃತ್ವಾ ಮಾತೃಕಾಕ್ಷರಪೂರ್ವಕಂ ॥೨೦॥

ಮಂತ್ರನ್ಯಾಸಂ ತತಃ ಕೃತ್ವಾ ಶಿವಪೀಠಂ ಸಮರ್ಚಯೇತ್ ।
ಆಧಾರಶಕ್ತಿಪೂಜಾಂ ಚ ಕುರ್ಯಾದಾಗಮಮಂತ್ರತಃ ॥೨೨॥

ಉಮಾಮಹೇಶ್ವರಂ ಲಿಂಗೇ ಸ್ಥಾಪ್ಯ ಪೀಠೇ ಮನೋರಮೇ ।
ಪಂಚಬ್ರಹ್ಮವಿಧಾನೇನ ದೇವಂ ಧ್ಯಾಯೇದ್ವಿಚಕ್ಷಣಃ ॥೨೩॥

ಮೂಲಮಂತ್ರಾತ್ಮಕಂ ದೇವಮಂಬಿಕಾಸಹಿತಂ ಶಿವಂ ।
ಧ್ಯಾತ್ವಾ ಚಾವಾಹಯೇದ್ದೇವಪದ್ಮಸ್ಥಂ ಪದ್ಮಸನ್ನಿಭಂ ॥೨೪॥

ಚತುರ್ಭುಜಂ ಪ್ರಸನ್ನಾಸ್ಯಂ ವರದಾಭಯಪಾಣಿನಂ ।
ಅಕ್ಷಮಾಲಾವೃತಕರಂ ಚಂದ್ರರೇಖಾವಿಭೂಷಿತಂ ॥೨೫॥

---

ಸಾಯಂಸಂಧ್ಯಾವಂದನೆಯನ್ನು ನೆರವೇರಿಸಿ ಶಿವಾಲಯವನ್ನು ಪ್ರವೇಶಿಸಬೇಕು. ಆ ಶಿವಾಗಾರವನ್ನು ಮಂಟಪಗಳಿಂದಲೂ, ಪುಷ್ಪಮಾಲೆಗಳಿಂದಲೂ ಅಲಂಕರಿಸಿರಬೇಕು. ॥೧೯-೨೦॥

ಶುದ್ಧವಾದ ಆಸನದಲ್ಲಿ ಕುಳಿತು ಪ್ರಾಣಾಯಾಮಮಾಡಿ, ಮೌನದಿಂದ ಭೂತಶುದ್ಧಿಮಾಡಿಕೊಂಡು, ಮಾತೃಕಾಕ್ಷರಗಳನ್ನು ಬರೆದು ಮಂತ್ರನ್ಯಾಸದಿಂದ ಶಿವಪೀಠವನ್ನು ಆರಾಧಿಸಬೇಕು. ಆಗಮಮಂತ್ರದಿಂದ ಆಧಾರಶಕ್ತ್ಯಾದಿ ಸಕಲ ದೇವತೆಗಳನ್ನೂ ಪೂಜಿಸಬೇಕು. ॥೨೧-೨೨॥

ಉಮಾಮಹೇಶ್ವರನನ್ನು ಮನೋಹರವಾದ ಪೀಠದಲ್ಲಿ ಆವಾಹನೆಮಾಡಿ, ಪಂಚಬ್ರಹ್ಮವಿಧಾನದಿಂದ ಪರಮಾತ್ಮನನ್ನು ಧ್ಯಾನಮಾಡಬೇಕು. ಮೂಲಮಂತ್ರದಿಂದ ಪಾರ್ವತೀಸಹಿತನಾದ ಪರಶಿವನನ್ನು ಪದ್ಮಮಂಡಲದ ಮೇಲೆ ಆವಾಹಿಸಬೇಕು. ೨೩-೨೪॥

ನಾಲ್ಕು ಭುಜಗಳಿಂದ ಕೂಡಿ ಪದ್ಮಸದೃಶನಾಗಿ ಪ್ರಸನ್ನವದನನಾಗಿ ವರದ ಮತ್ತು ಅಭಯ ಮುದ್ರೆಗಳಿಂದ ಕೂಡಿದ ಪಾಣಿಪದ್ಮಗಳುಳ್ಳವನಾಗಿರುವ ಮಹಾ

ನೀಲಕಂಠಂ ತ್ರಿನೇತ್ರಂ ಮಾಂ ತ್ವಾಂ ಚ ಮದ್ವಾಮಪಾರ್ಶ್ವಗಾಂ ।
ಸೋಮಧಾಮಾನನಾಂ ಚಾರುಚಂಚಚ್ಚಂದ್ರಕಲಾಧರಾಂ ॥೨೬॥

ಪ್ರಸನ್ನಾಸ್ಯಾಂ ಸುದಂತೀಂ ಚ ತಾಟಂಕಪರಿಮಂಡಿತಾಂ ।
ಸರ್ವಾಭರಣಶೋಭಾಢ್ಯಾಂ ವಾಸಃ ಸ್ರಗ್ಗಂಧಭೂಷಿತಾಂ ॥೨೭॥

ಏವಂ ಧ್ಯಾತ್ವಾರ್ಚಯೇದ್ದೇವಂ ಶ್ರದ್ಧಯಾ ಪರಮೇಶ್ವರಂ ।
ಅತ್ರಾಗಚ್ಛ ಮಹಾದೇವ ಪಾರ್ವತ್ಯಾ ಸಹ ಶಂಕರ ॥೨೮॥

ಗೃಹಾಣ ಮತ್ಕೃತಾಂ ಪೂಜಾಮಾಸನಂ ಪರಮಂ ಶುಭಂ ।
ಭವಾಯೇತಿ ಶಿವೇ ಪಾದ್ಯಂ ವಾಮಾಯೇತಿ ತಥಾಚಮಂ ॥೨೯॥

ಅರ್ಘ್ಯಂ ಸದ್ಯೋತಿಮಂತ್ರೇಣ ಸಪುಷ್ಪಂ ವಿನಿವೇದಯೇತ್ ।
ಅಘೋರೇಣ ಶಿವೇ ಸ್ನಾನಂ ವಸ್ತ್ರಂ ತತ್ಪುರುಷೇಣ ಹಿ ॥೩೦॥

ದೇವನನ್ನು ನೀಲಕಂಠನೆಂದೂ, ತ್ರಿನೇತ್ರನೆಂದೂ ಉಮಾಸಹಿತನಾಗಿರುವನೆಂದೂ ಧ್ಯಾನಿಸಬೇಕು. ಪ್ರಸನ್ನವಾದ ಮುಖದಿಂದಲೂ, ಶುಭ್ರವಾದ ದಂತಪಂಕ್ತಿಯಿಂದಲೂ, ಅಮೂಲ್ಯವಾದ ಓಲೆಯಿಂದಲೂ, ಸರ್ವಾಭರಣಗಳಿಂದ ಅಲಂಕೃತಳಾಗಿಯೂ, ದಿವ್ಯಗಂಧಮಾಲ್ಯಾಲಂಕೃತಳಾಗಿಯೂ ಇರುವ ಪಾರ್ವತಿಯನ್ನೂ (ನಿನ್ನನ್ನೂ) ಮನಃಪೂರ್ವಕವಾಗಿ ಧ್ಯಾನಮಾಡಬೇಕು. ॥೨೫-೨೬-೨೭॥

ಈ ರೀತಿ ಮೊದಲು ಉಮಾಮಹೇಶ್ವರರೂಪಿಯಾದ ನನ್ನನ್ನು ಧ್ಯಾನಿಸಿ, "ಮಹಾದೇವನೇ, ಪಾರ್ವತೀಸಹಿತನಾಗಿ ಈಗ ನಾನು ಕಲ್ಪಿಸಿರುವ ದಿವ್ಯಾಸನದಲ್ಲಿ ಮಂಡಿಸಿ, ನಾನು ಅರ್ಪಿಸುವ ಪೂಜೆಯನ್ನು ದಯೆಯಿಂದ ಸ್ವೀಕರಿಸು" ಎಂದು ಪ್ರಾರ್ಥಿಸಿ ಆಸನವನ್ನು ಸಮರ್ಪಿಸಬೇಕು. ಭವಾಯನಮಃ ಎಂದು ಹೇಳುತ್ತಾ ಪಾದ್ಯವನ್ನೂ, ವಾಮದೇವಾಯ ನಮಃ ಎಂದು ಆಚಮನೀಯವನ್ನೂ, 'ಸದ್ಯೋಜಾತಂಪ್ರಪದ್ಯಾಮಿ' ಎಂಬ ಮಂತ್ರದಿಂದ ಪುಷ್ಪಸಹಿತವಾದ ಅರ್ಘ್ಯವನ್ನೂ, 'ಅಘೋರೇಭ್ಯಃ' ಎಂಬ ಮಂತ್ರದಿಂದ ಸ್ನಾನವನ್ನೂ, 'ತತ್ಪುರುಷಾಯ ವಿದ್ಮಹೇ' ಎಂಬ ಮಂತ್ರದಿಂದ ವಸ್ತ್ರವನ್ನೂ ಸಮರ್ಪಿಸಬೇಕು. ॥೨೮-೨೯-೩೦॥

ಈಶಾನೇತಿ ಚ ಮಂತ್ರೇಣ ಉಪವೀತಂ ಪ್ರಕಲ್ಪಯೇತ್ ।
ಯಜ್ಞೋಪವೀತಂ ಮಂತ್ರೇಣ ದದ್ಯಾದುತ್ತರವಾಸಸಂ ॥೩೧॥

ಗಂಧಮಾಲ್ಯಾಕ್ಷತಾನ್ ದದ್ಯಾನ್ನಮಸ್ಸೋಮಾಯ ಮಂತ್ರತಃ ।
ತ್ರಿಯಂಬಕೇತಿಮಂತ್ರೇಣ ಬಿಲ್ವಪುಷ್ಪಾಣಿ ಚಾರ್ಪಯೇತ್ ॥೩೨॥

ಇಮಾ ರುದ್ರೇತಿ ಮಂತ್ರೇಣ ಅಕ್ಷತಾಂಶ್ಚ ಸಮರ್ಪಯೇತ್ ।
ಮಾನಸ್ತೋಕೇತಿ ಧೂಪಂ ಚ ದೀಪಮಾತೇಪಿತೇತಿ ಚ ॥೩೩॥

ಯಚ್ಛಂಚಯೋಶ್ಚ ಮಂತ್ರೇಣ ನೈವೇದ್ಯಂ ದಾಪಯೇಚ್ಛಿವೇ ।
ಪರಿಣೇತೇ ಪರೀವಾರಾನ್ ಪೂಜಯೇನ್ನೇ ಯತವ್ರತಃ ॥೩೪॥

ಬ್ರಹ್ಮಾಣಂ ಭಾಸ್ಕರಂ ವಿಷ್ಣುಂ ಜಯಂ ವಿಜಯಮೇವ ಚ ।
ದುರ್ಗಾಂ ಗಣಪತಿಂ ಚೈವ ಯಜೇತ್ಪ್ರಾಚ್ಯಾದಿಯೋಗತಃ ॥೩೫॥

ನಂದೀಶಂ ಕ್ಷೇತ್ರಪಾಲಂ ಚ ಚಂಡೀಶಂ ಭೈರವಂ ತಥಾ ।
ಕೈಲಾಸಾದೀನಥಾದ್ರೀಂಶ್ಚ ಕಪಾಲಂ ಶೂಲಮೇವ ಚ ॥೩೬॥

'ಈಶಾನಸ್ಸರ್ವವಿದ್ಯಾನಾಂ' ಎಂಬ ಮಂತ್ರದಿಂದ ಉಪವೀತವನ್ನೂ ಯಜ್ಞೋಪವೀತಮಂತ್ರದಿಂದ ಜನಿವಾರವನ್ನೂ, 'ನಮಃ ಸೋಮಾಯಚ' ಎಂಬ ಮಂತ್ರದಿಂದ ಗಂಧಮಾಲ್ಯ ಅಕ್ಷತೆಗಳನ್ನೂ 'ತ್ರ್ಯಂಬಕಂ ಯಜಾಮಹೆ' ಎಂಬ ಮಂತ್ರದಿಂದ ಬಿಲ್ವಪತ್ರೆಗಳನ್ನೂ ಸ್ವಾಮಿಗೆ ಅರ್ಪಿಸಬೇಕು. ॥೩೧-೩೨॥

ಅಕ್ಷತೆಯನ್ನು 'ಇಮಾರುದ್ರಾಯ' ಎಂಬ ಮಂತ್ರಗಳಿಂದಲೂ, ಧೂಪವನ್ನು 'ಮಾನಸ್ತೋಕೇ' ಎಂಬ ಮಂತ್ರದಿಂದಲೂ ದೀಪವನ್ನು 'ಆತೇಪಿತರ್ಮರುತಾಂ' ಎಂಬ ಮಂತ್ರದಿಂದಲೂ, ನೈವೇದ್ಯವನ್ನು 'ಯಚ್ಛಂ ಚ ಯೋಶ್ಚ' ಎಂಬ ಮಂತ್ರದಿಂದಲೂ, ನೀರಾಜನಾದ್ಯುಪಚಾರಗಳನ್ನು "ಪರಿಣೇತೇ ಪುನಃ" ಎಂಬ ಮಂತ್ರದಿಂದಲೂ ನಿಯಮವ್ರತವುಳ್ಳವನಾಗಿ ಅರ್ಪಿಸಬೇಕು. ಪೂರ್ವಾದಿಯಾಗಿ ಬ್ರಹ್ಮ, ಸೂರ್ಯ, ವಿಷ್ಣು, ಜಯ, ವಿಜಯ, ದುರ್ಗಾ, ಗಣಪತಿ ಮುಂತಾದ ಸಾದ್ಗುಣ್ಯ ದೇವತೆಗಳನ್ನೂ ಕ್ರಮವಾಗಿ ಆರಾಧಿಸಬೇಕು. ॥೩೩-೩೪-೩೫॥

ಹಾಗೆಯೇ ನಂದೀಶ್ವರ, ಕ್ಷೇತ್ರಪಾಲ, ಚಂಡೀಶ್ವರ, ಭೈರವ, ಕೈಲಾಸವೇ ಮೊದಲಾದ ಪರ್ವತಗಳು, ಕಪಾಲ, ಶೂಲ ಮುಂತಾದುವುಗಳನ್ನು ಆವಾಹಿಸಿ

ಅಥ ಸಂಪೂಜ್ಯ ವಿಧಿವನ್ಮದಗ್ರೇ ವೃಷಭೇಶ್ವರಂ।
ಸ್ತುಹಿ ಶ್ರುತೇತಿ ಮಂತ್ರೇಣ ವೃಷಂ ಮೇ ಧರ್ಮರೂಪಿಣಂ ॥೩೭॥

ಮೀಢುಷ್ಟಮೇತಿ ಚ ಸ್ಕಂದಂ ಗಣಾನಾಂತ್ವಾ ಗಣಾಧಿಪಂ।
ಸರ್ವೋಪಚಾರೈರ್ದೇವಸ್ಯ ದೇವ್ಯಾ ಸಹ ಸಮರ್ಚನಂ ॥೩೮॥

ಪರಿವಾರಾಂಸ್ತಮಭ್ಯರ್ಚ್ಯ ತತ್ತನ್ಮಂತ್ರೈರ್ವಿಶೇಷತಃ।
ಮಹಾನೈವೇದ್ಯಮೀಶಾಯ ದೇವಸ್ಯತ್ವೇತಿ ಮಂತ್ರತಃ ॥೩೯॥

ಪ್ರಣಾಮಪ್ರಕ್ರಮಂ ಚೈವ ನೀರಾಜನಪುರಸ್ಸರಂ।
ಛತ್ರಚಾಮರದಾನಂ ಚ ಘಂಟಾತೂರ್ಯತ್ರಿಕಂ ಶಿವೇ ॥೪೦॥

ದದ್ಯಾತ್ಪ್ರಸಾದಯೇದ್ದೇವಂ ಕ್ಷಮ್ಯತಾಮಿತಿ ಸತ್ತಮೇ।
ಹೋಮಂ ಚ ವಾಗ್ಯತಃ ಕುರ್ಯಾತ್ಪ್ರತಿಷ್ಠಾಪ್ಯ ಹುತಾಶನಂ ॥೪೧॥

ಅಷ್ಟೋತ್ತರಸಮಿದ್ಭಿಶ್ಚ ಬೈಲ್ವಾಜ್ಯಚರುಣಾ ಶತಂ।
ಶತರುದ್ರೇಣ ಜುಹುಯಾದ್ಯಾಸ್ತೇಷ್ಪತ್ಯಪಿ ಸ್ವಿಷ್ಟಕೃತ್ ॥೪೨॥

---

ಪೂಜಿಸಬೇಕು. ಮತ್ತು ಶಿವಲಿಂಗದ ಎದುರಿನಲ್ಲಿ ವೃಷಭೇಶ್ವರನನ್ನು ಅಂದರೆ ಧರ್ಮಸ್ವರೂಪಿಯಾದ ಬಸವನನ್ನು 'ಸ್ತುಹಿಶ್ರುತಂ' ಎಂಬ ಮಂತ್ರದಿಂದ ಆವಾಹಿಸಬೇಕು. 'ಮೀಢುಷ್ಟಮ' ಎಂಬ ಮಂತ್ರದಿಂದ ಸ್ಕಂದಸ್ವಾಮಿಯನ್ನೂ 'ಗಣಾನಾಂತ್ವಾ' ಎಂಬ ಮಂತ್ರದಿಂದ ಗಣಪತಿಯನ್ನೂ ಆವಾಹಿಸಿ ಅವರೊಡನೆ ಉಮಾಪತಿಯಾದ ಶಂಕರನನ್ನು ಸರ್ವೋಪಚಾರಗಳಿಂದಲೂ ಪೂಜಿಸಬೇಕು. ॥೩೬-೩೭-೩೮॥

ಪರಿವಾರದೇವತೆಗಳನ್ನು ಆಯಾ ಮಂತ್ರಗಳಿಂದಲೇ ಪೂಜಿಸಿ, ಮಹಾನೈವೇದ್ಯವನ್ನು 'ದೇವಸ್ಯತ್ವಾಪ್ರಸವೇ' ಎಂಬ ಮಂತ್ರದಿಂದ ಸಮರ್ಪಿಸಿ, ನೀರಾಜನವನ್ನು ಬೆಳಗಿ, ಪ್ರದಕ್ಷಿಣ ನಮಸ್ಕಾರಗಳನ್ನು ಸ್ವಾಮಿಗೆ ಮಾಡಬೇಕು. ಅನಂತರ ಛತ್ರಿ, ಚಾಮರ, ಗಂಟೆ, ತುತ್ತೂರಿ ಇವುಗಳಿಂದ ಉಪಚಾರಗಳನ್ನು ಸಲ್ಲಿಸಬೇಕು. ॥೩೯-೪೦॥

ಹಾಗೆಯೇ ತಮ್ಮ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿ ಪೂಜೆಯನ್ನು ಸಮಾಪ್ತಿಗೊಳಿಸಿ, ವಿಧಿವತ್ತಾಗಿ ಹೋಮಮಾಡಬೇಕು. ಅಗ್ನಿಪ್ರತಿಷ್ಠಾಪ

ತತಸ್ಸ್ತುವೀತ ದೇವೇಶಂ ಶಂಕರಂ ಶಶಿಶೇಖರಂ ।
ಭವಾಯ ಭವನಾಶಾಯ ಮಹಾದೇವಾಯ ಧೀಮಹಿ ॥೪೩॥

ಭದ್ರಾಯ ನೀಲಕಂಠಾಯ ಶರ್ವಾಯ ಶಶಿಮೌಲಿನೇ ।
ಉಗ್ರಾಯೋಗ್ರಾಘನಾಶಾಯ ಭೀಮಾಯ ಭಯನಾಶಿನೇ ॥೪೪॥

ಈಶಾನಾಯ ನಮಸ್ತುಭ್ಯಂ ಪಶೂನಾಂ ಪತಯೇ ನಮಃ ।
ಯಥಾ ಸಮಸ್ತಾಭಯದಃ ಪಶೂನಾಂ ಪಾಶಮೋಚಕಃ ॥೪೫॥

ತಥಾ ವ್ರತೇನ ಮೇ ತುಷ್ಟಃ ಋಣದೌರ್ಭಾಗ್ಯನಾಶಕಃ ।
ನಮೋಗೌರ್ಯೈ ಮಹಾದೇವ್ಯೈ ಭವಾನ್ಯೈತೇ ಶಿವೇ ನಮಃ ॥೪೬॥

ಶಿವಪ್ರಿಯಾಯೈ ಶರ್ವಾಣ್ಯೈ ಸೃಷ್ಟಿಸ್ಥಿತ್ಯಂತಹೇತವೇ ।
ನಮೋಸ್ತ್ವಾರ್ತಿವಿನಾಶಿನ್ಯೈ ತುಭ್ಯಂ ಸರ್ವಭಯಾಪಹೇ ॥೪೭॥

---

ನಾನಂತರ, ಬಿಲ್ವ, ತುಪ್ಪ, ಚರು ಈ ಹೋಮದ್ರವ್ಯಗಳಿಂದ ರುದ್ರಮಂತ್ರೋಚ್ಚಾರಣ ಪೂರ್ವಕವಾಗಿ ನೂರೆಂಟು ಪ್ರಧಾನಹೋಮಮಾಡಬೇಕು. 'ವಾಸ್ತೋಷ್ಪತೇ' ಎಂಬ ಮಂತ್ರದಿಂದ ಅಂಗದೇವತೆಗಳಿಗೂ ಹೋಮವನ್ನು ಸಲ್ಲಿಸಿ ಸ್ವಿಷ್ಟಕೃತ್ ಹೋಮಾನಂತರ ಪ್ರಾಯಶ್ಚಿತ್ತ ಹೋಮಗಳನ್ನು ಮಾಡಬೇಕು. ॥೪೧-೪೨॥

ಅನಂತರ ಈರೀತಿ ಉಮಾಮಹೇಶ್ವರನನ್ನು ಪ್ರಾರ್ಥಿಸಬೇಕು. ದೇವ ದೇವನೂ, ಭಕ್ತರಿಗೆ ಸುಖಕರನೂ, ಚಂದ್ರಶೇಖರನೂ ಆದ ಮಹಾದೇವನಿಗೆ ನಮಸ್ಕಾರ. ಸಂಸಾರರೂಪದಿಂದ ತೋರುವವನೂ, ಅದೇ ಸಂಸಾರದುಃಖವನ್ನು ನಾಶಗೊಳಿಸುವವನೂ ಆದ ಶಂಕರನಿಗೆ ವಂದನೆ. ಮಂಗಳಸ್ವರೂಪನೂ, ನೀಲ ಕಂಠನೂ, ಸುಖರೂಪಿಯೂ, ಚಂದ್ರಶೇಖರನೂ ಆದ ಶಿವನಿಗೆ ಪ್ರಣಾಮಗಳು. ಉಗ್ರರೂಪದಿಂದಿದ್ದು, ಭಯಂಕರವಾದ ಪಾಪರಾಶಿಯನ್ನು ನಿರ್ಮೂಲಗೊಳಿಸುವ ಭೀಮರೂಪಿಯಾದ ಈಶಾನನಿಗೆ ವಂದನೆಗಳು. ಮಹಾದೇವನು ಅಜ್ಞಾನಿಗಳಾದ ಪಶುಗಳಿಗೆಲ್ಲಾ ಪತಿಯೆನಿಸಿರುವವನು. ಸಮಸ್ತರಿಗೂ ಅಭಯಪ್ರದನು. ಅಜ್ಞಾನಿ ಗಳಿಗೂ ಭವಬಂಧನವನ್ನು ತಪ್ಪಿಸುವವನು. ॥೪೩-೪೪-೪೫॥

ಮಹೇಶನೇ, ಈಗ ನಾನು ಆಚರಿಸಿರುವ ವ್ರತದಿಂದ ನೀನು ಸಂತುಷ್ಟನಾಗಿ ನನ್ನ ಋಣತ್ರಯಗಳನ್ನೂ ದಾರಿದ್ರ್ಯವನ್ನೂ ಹೋಗಲಾಡಿಸು. ಮಹಾದೇವಿಯಾದ

ತುಭ್ಯಮಾನಂದರೂಪಿಣ್ಯೈ ನಮಃ ಕಮಲಲೋಚನೇ ।
ವಿದ್ಯಾಯೈ ವೇದಮಾತ್ರೇ ಚ ವೇದಶಕ್ತಿಸ್ವರೂಪಿಣಿ ॥೪೮॥

ಅಂಬಿಕೇ ತೇ ನಮೋ ನಿತ್ಯಂ ಮಮಾಸ್ತು ವರದಶ್ಶಿವಃ ।
ಇತ್ಯುಪಸ್ಥಾಯ ತಾಂ ದೇವೀಂ ಪುನಃ ಕುರ್ಯಾತ್ಪ್ರದಕ್ಷಿಣಂ ॥೪೯॥

ಕೃತ್ವಾ ಸವ್ಯಾಪಸವ್ಯೇನ ಪ್ರದಕ್ಷಿಣವಿಧಾನತಃ ।
ಶತಮಷ್ಟೋತ್ತರಂ ತ್ವಾಂ ಚ ಪ್ರಣಮ್ಯ ಚ ಪುನಃ ಪುನಃ ॥೫೦॥

ಸವ್ಯಾಪಸವ್ಯಮಾರ್ಗೇಣ ಸೋಮಸೂತ್ರಂ ನ ಲಂಘಯೇತ್ ।
ಶನೈಃ ಶನೈಃ ಕ್ರಮಾತ್ಕುರ್ಯಾತ್ತ್ವರಾಲಸ್ಯಾದಿವರ್ಜಿತಃ ॥೫೧॥

ದೇವಂ ಸಂಮುಖತಃ ಕೃತ್ವಾ ಬ್ರಾಹ್ಮಣಾಂಶ್ಚ ವಿಶೇಷತಃ ।
ಪ್ರದಕ್ಷಿಣಂ ಕ್ರಮಾತ್ಕುರ್ಯಾದ್ವೃಷೇಣ ಸಹಿತಂ ಶಿವಂ ॥೫೨॥

---

ಗೌರೀದೇವಿಯೇ. ಭವಾನಿಯೇ, ನಿನಗೆ ನಮಸ್ಕಾರ. ಭಕ್ತರಿಗೆ ವರವನ್ನು ಕರುಣಿಸುವವಳು ನೀನು. ಸುಖಪ್ರದಳು ನೀನು. ದೇವಿಯೇ, ಪ್ರಪಂಚದ ಸೃಷ್ಟಿಸ್ಥಿತಿಲಯಗಳಿಗೆ ಕಾರಣಭೂತಳೂ ನೀನೇ. ಸರ್ವಭಯನಾಶಕಳಾಗಿ ಸಮಸ್ತ ಪೀಡಾಪರಿಹಾರಕಳಾದ ನಿನ್ನನ್ನೇ ನಾವು ಸದಾ ಧ್ಯಾನಿಸುವೆವು. ॥೪೬-೪೭॥

ಆನಂದರೂಪಿಣಿಯೂ, ಕಮಲನೇತ್ರೆಯೂ ಆಗಿರುವ ದೇವಿಯೇ, ನೀನು ವಿದ್ಯಾಸ್ವರೂಪಳು, ವೇದರಕ್ಷಕಳು, ವೇದಶಕ್ತಿಸ್ವರೂಪಿಣಿಯು, ಜಗನ್ಮಾತೆಯೇ ಇಂತಹ ನಿನಗೆ ನಾನು ನಿತ್ಯವೂ ವಂದಿಸುವೆನು. ಶಂಕರನು ನಿನ್ನ ಪ್ರೇರಣೆಯಿಂದ ನನಗೆ ವರಪ್ರದನಾಗಲಿ ಎಂದು ಉಮಾಮಹೇಶ್ವರನನ್ನು ಧ್ಯಾನಿಸಿ, ಪ್ರಾರ್ಥಿಸಿ, ಪ್ರದಕ್ಷಿಣಕ್ರಮವಾಗಿ ಪಾರ್ವತೀಪರಶಿವರನ್ನು ಸುತ್ತುತ್ತಾ ನೂರೆಂಟುಬಾರಿ ನಮಸ್ಕಾರ ಮಾಡಬೇಕು. ॥೪೮-೪೯-೫೦॥

ಎಡಭಾಗದಿಂದ ಹೊರಟು ಬಲಭಾಗಕ್ಕೆ ನಿಧಾನವಾಗಿ ಆತುರ ಜುಗುಪ್ಸೆ ಇವುಗಳನ್ನು ಬಿಟ್ಟು, ಧಾರಾಪಾತ್ರಾದಿಗಳನ್ನು ದಾಟದಂತೆ ದೇವರಿಗೆ ಪ್ರದಕ್ಷಿಣಾದಿಗಳನ್ನು ಸಲ್ಲಿಸಬೇಕು. ಅದೇರೀತಿ ಸ್ವಾಮಿಯ ಎದುರಿನಲ್ಲಿರುವ ಮಂತ್ರಬ್ರಾಹ್ಮಣರನ್ನೂ, ವೃಷಭವನ್ನೂ ಸೇರಿಸಿಕೊಂಡು ಪ್ರದಕ್ಷಿಣ ನಮಸ್ಕಾರಮಾಡಬೇಕು. ॥೫೧-೫೨॥

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ್ಯಾತ್ಪದೇಪದೇ ॥೫೩॥

ಏವಂ ಪ್ರದಕ್ಷಿಣಂ ಕೃತ್ವಾ ನಮಸ್ಕೃತ್ಯ ಪುನಃ ಪುನಃ ।
ಗಣಯಿತ್ವಾಪದಂ ಭೂಯೋ ತತ್ಕೋಟಿಗುಣಿತಂ ಭವೇತ್ ॥೫೪॥

ಅಂಗಪ್ರದಕ್ಷಿಣಾದ್ದೇವಿ ತತಃ ಕೋಟಿಗುಣೋತ್ತರಾ ।
ಪ್ರತಿಪ್ರದಕ್ಷಿಣಂ ಕೃತ್ವಾ ಸಾಷ್ಟಾಂಗಂ ಪ್ರಣಮೇತ್ಸುಧಿ ॥೫೫॥

ಶಿವಸ್ಯಾಗ್ರೇ ಸಮೇ ದೇಶೇ ಭೂಮಿಸಂಲಗ್ನಮಸ್ತಕಃ ।
ಬ್ರುವೀತು ವಿಧಿವದ್ದದ್ಯಾದರ್ಘ್ಯಮಷ್ಟಾಂಗಸಂಯುತಂ ॥೫೬॥

ಗೋಕ್ಷೀರಂ ಚ ಕುಶಾಗ್ರಾಣಿ ಘೃತಂ ದಧಿ ಚ ತಂಡುಲಾನ್ ।
ಸಿದ್ಧಾರ್ಥಕಾಸ್ತಥಾ ದೂರ್ವಾಃ ಗಂಧಪುಷ್ಪಾಕ್ಷತಾಸ್ತಥಾ ॥೫೭॥

ಅರ್ಘ್ಯೇಷ್ಟಾಂಗ ಇತಿ ಪ್ರೋಕ್ತಃ ತದಭಾವೇ ಸುಮ್ಯೋದಕಂ ।
ಪಂಚಾಮೃತಂ ಪಂಚಗವ್ಯಂ ಗಂಧಪುಷ್ಪಕುಶೋದಕಂ ॥೫೮॥

ಆ ಪ್ರದಕ್ಷಿಣೆಯಿಂದ ಜನ್ಮಾಂತರಗಳಲ್ಲಿ ಮಾಡಿರುವ ಸಮಸ್ತ ಪಾಪಗಳೂ ನಾಶಹೊಂದುತ್ತವೆ ಎಂಬ ಭಾವನೆಯಿಂದ ನಮಸ್ಕರಿಸಿ, ಪ್ರದಕ್ಷಿಣೆ ಮಾಡಬೇಕು. ಹೆಜ್ಜೆಗೊಂದು ಸಾರಿ ನಮಸ್ಕರಿಸಿ ಪ್ರದಕ್ಷಿಣೆ ಮಾಡುವುದರಿಂದ ವಿಶೇಷ ಫಲವುಂಟು. ಅದಕ್ಕಿಂತಲೂ ಅವಯವಗಳಿಂದ ಉರುಳುತ್ತಾ ಪ್ರದಕ್ಷಿಣೆಮಾಡುವುದರಿಂದ ಮತ್ತೂ ವಿಶೇಷ ಫಲವು ದೊರೆಯುವುದು. ಪ್ರತಿಪ್ರದಕ್ಷಿಣೆಗೂ ಒಂದುಸಾರಿ ಸಾಷ್ಟಾಂಗ ನಮಸ್ಕಾರವೆಸಿಸಬೇಕು. ॥೫೩-೫೪-೫೫॥

ಈಶ್ವರನ ಮುಂದೆ ತನ್ನ ತಲೆಯು ನೆಲವನ್ನು ಮುಟ್ಟುವವರೆಗೂ ತಲೆಬಗ್ಗಿ ನಮಸ್ಕರಿಸಬೇಕು. ಅನಂತರ, ಹಸುವಿನಹಾಲು, ದರ್ಭಾಗ್ರ, ತುಪ್ಪ, ಮೊಸರು, ಅಕ್ಕಿ, ಸಿದ್ಧಾರ್ಥಕ (ಬಿಳೀಸಾಸವೆ) ಹುಲ್ಲುಗರಿಕೆ, ಗಂಧ, ಪುಷ್ಪ, ಅಕ್ಷತೆ ಈ ಎಂಟು ವಸ್ತುಗಳಿಂದ ಕೂಡಿ ಜಲವನ್ನು ಪರಶಿವನಿಗೆ ಅರ್ಘ್ಯವನ್ನಾಗಿ ಅರ್ಪಿಸಬೇಕು. ಆ ವಸ್ತುಗಳು ದೊರೆಯದಿದ್ದರೆ ಪುಷ್ಪೋದಕವನ್ನೇ ಅರ್ಘ್ಯವನ್ನಾಗಿ ಕೊಡಬಹುದು. ಪಂಚಾಮೃತ, ಪಂಚಗವ್ಯ, ಗಂಧ, ಪುಷ್ಪ, ದರ್ಭೆ, ಇವುಗಳಿಂದ ಮಿಶ್ರಿತವಾದ ಜಲ

ಫಲಜಾಲರಸಂ ಚಾಪಿ ಘೃತಾಭ್ಯಂಗಂ ತು ಕಾರಯೇತ್ ।
ಭಯರೋಗಾದಿದಾರಿದ್ರ್ಯಪಾಪಂ ಕ್ಷುದಪಮೃತ್ಯವಃ ॥೫೯॥

ಋಣಂ ಶೋಕಂ ಮನಸ್ತಾಪಂ ನಶ್ಯಂತು ಮಮ ಸರ್ವದಾ ।
ಮಂತ್ರೇಣಾನೇನ ದತ್ವಾರ್ಘ್ಯಂ ತ್ರಿವಾರಂ ಪ್ರಾರ್ಥಯೇಚ್ಛಿವಂ ॥೬೦॥

ಪ್ರಸೀದ ದೇವದೇವೇಶ ಪ್ರಸೀದ ಪರಮೇಶ್ವರ ।
ಪ್ರಸೀದ ಸೋಮಸರ್ವಜ್ಞ ಪ್ರಸೀದ ಕರುಣಾಕರ ॥೬೧॥

ಏವಂ ಸಂಪ್ರಾರ್ಥ್ಯ ದೇವೇಶಮುಮಾಂ ಚಾಪಿ ತತೋ ವ್ರತೀ ।
ಶನಿಪ್ರದೋಷಯೋಗೇ ಮೇ ವ್ರತಂ ಸಂಪೂರ್ಣತಾಮಿಯಾತ್ ॥೬೨॥

ಪ್ರಸಾದಂ ಕುರು ದೇವೇಶ ಯೇನ ಮುಚ್ಯೇ ಋಣಾರ್ಣವಾತ್ ।
ಜನ್ಮಾಂತರಸಹಸ್ರೇಷು ಯದೃಣಂ ಚ ಕೃತಂ ಮಯಾ ॥೬೩॥

ಫಲೋದಕ, ಘೃತಧಾರೆ ಮುಂತಾದುವುಗಳನ್ನೂ ಅರ್ಘ್ಯರೂಪವಾಗಿ ಅರ್ಪಿಸಬಹುದು. ॥೫೭-೫೮-೫೯॥

ಅರ್ಘ್ಯಕೊಡುವಾಗ "ಮಹೇಶ್ವರನೇ, ನನಗೆ ಒದಗಿರುವ ಭಯ, ರೋಗ, ದಾರಿದ್ರ್ಯ, ಪಾಪ, ಹಸಿವು, ಅಪಮೃತ್ಯು, ಋಣಬಾಧೆ, ದುಃಖ, ಮನಸ್ಸಿನ ತಾಪ ಇವೆಲ್ಲವೂ ನಾಶವಾಗುವಂತೆ ಅನುಗ್ರಹಿಸು" ಎಂದು ಪ್ರಾರ್ಥಿಸುತ್ತಾ ಈ ಮಂತ್ರವನ್ನೇ ಉಚ್ಚರಿಸುತ್ತಾ ಮೂರು ವೇಳೆ ಅರ್ಘ್ಯಪ್ರದಾನ ಮಾಡಬೇಕು. ॥೫೯-೬೦॥

ಅನಂತರ ವ್ರತಮಾಡುವವನು "ದೇವದೇವನೇ, ಪರಶಿವನೇ, ಉಮಾಸಹಿತನಾಗಿದ್ದು ಸರ್ವಜ್ಞನೆನಿಸಿಕೊಂಡಿರುವ ದಯಾಸಮುದ್ರನೇ, ನಮ್ಮಲ್ಲಿ ಪ್ರಸನ್ನನಾಗು. ನನ್ನನ್ನು ಉದ್ಧರಿಸು." ಎಂದು ಪ್ರಾರ್ಥಿಸಬೇಕು. ಈರೀತಿ ಆದ್ಯಂತವಾಗಿ ಶನಿಪ್ರದೋಷವ್ರತವನ್ನು ಆಚರಿಸಿದರೆ ಆಗ ಆ ವ್ರತಪೂರ್ತಿಮಾಡಿದ ಫಲವು ಲಭಿಸುವುದು. ॥೬೧-೬೨॥

ಕೊನೆಯಲ್ಲಿ "ದೇವದೇವನೇ, ಜನ್ಮಸಹಸ್ರಗಳಿಂದ ಕೂಡಿಬಂದಿರುವ, ದೇವಋಣ, ಪಿತೃಋಣ, ಋಷಿಋಣ, ಮಾನುಷಋಣಗಳೆಂಬ ನಾಲ್ಕುವಿಧಗಳಾದ ಋಣಗಳನ್ನೂ ಪರಿಹರಿಸಿ ನನ್ನನ್ನು ಉದ್ಧರಿಸು. ಇದರಿಂದ ನಾನು ಋಣನಿರ್ಮುಕ್ತನಾಗುವಂತೆ ಮಾಡು. ನಾನು ಧನಾಢ್ಯನಾಗುವಂತೆ ವರಕೊಡು." ಈ ರೀತಿ ಪುನಃ

ದೈವಂ ಪಿತ್ರ್ಯಂ ಮಾನುಷಾರ್ಷಂ ಮುಚ್ಯೇ ಋಣಾಚತುಷ್ಟಯಾತ್ ।
ಅನೃಣೋಽಹಂ ಭವಿಷ್ಯಾಮಿ ಧನಾಢ್ಯೋಽಹಂ ಭವಾನಿ ಚ ॥೬೪॥

ಇತ್ಥಂ ಸಂಪ್ರಾರ್ಥ್ಯ ದೇವೇಶಮಾಚಾರ್ಯಂ ಪೂಜಯೇಚ್ಛಿವೇ ।
ಹೋಮಶೇಷಂ ದಾಪಯೇಚ್ಚ ಗಾಂ ಚ ದದ್ಯಾತ್ಪಯಸ್ವಿನೀಂ ॥೬೫॥

ಆರೋಗಾಂ ಚ ಸವತ್ಸಾಂ ಚ ಕಾಂಸ್ಯದೋಹೇನ ಸಂಯುತಾಂ ।
ಅಣುಮಾತ್ರಪ್ರದಾನೇನ ಪ್ರದೋಷೇಥ ಶನೇರ್ದಿನೇ ॥೬೬॥

ಇಹಾಮುತ್ರಾಕ್ಷಯಂ ಪುಣ್ಯಂ ಭೋಗಾನಾಪ್ನೋತಿ ಶಾಶ್ವತಾನ್ ।
ತತೋ ವೃಷಭಮಭ್ಯರ್ಚ್ಯ ಗಂಧಪುಷ್ಪಾಕ್ಷತಾದಿಭಿಃ ॥೬೭॥

ಧೂಪದೀಪೌ ಚ ನೈವೇದ್ಯಂ ತಾಂಬೂಲಂ ಶ್ವೇತವಸ್ತ್ರಕಂ ।
ವೃಷಾಯ ಧರ್ಮರೂಪಾಯ ಶಿವಾಯ ಶಿವಮೂರ್ತಯೇ ॥೬೮॥

ಇತ್ಯರ್ಘ್ಯಂ ಪ್ರಾರ್ಥ್ಯ ದತ್ವಾ ತು ಪ್ರಾರ್ಥಯೇತ್ತಂ ಯತವ್ರತಃ ।
ಅಂಡಂ ಸ್ಪೃಷ್ಟ್ವಾ ಜಪೇನ್ಮಂತ್ರಮಿಮಂ ತಸ್ಯ ವೃಷಸ್ಯ ಚ ॥೬೯॥

---

ಪ್ರಾರ್ಥಿಸಿ ಆಚಾರ್ಯಪೂಜೆಯನ್ನು ನೆರವೇರಿಸಬೇಕು. ಆದಾದನಂತರ ಹೋಮಶೇಷ ವನ್ನು ಮುಗಿಸಿ ಒಂದು ಗೋದಾನಮಾಡಬೇಕು. ಆ ಗೋವು ಹಾಲುಕೊಡತಕ್ಕ ದ್ದಾಗಿಯೂ, ರೋಗರುಜಿನಗಳಿಲ್ಲದೆ ಎಳಗರುವಿನಿಂದ ಕೂಡಿದ್ದಾಗಿಯೂ ಸುಂದರ ವಾಗಿರಬೇಕು. ॥೬೩-೬೪-೬೫॥

ಅದರ ಜೊತೆಗೆ ಹಾಲುಕರೆಯಲು ಒಂದು ಕಂಚಿನ ಪಾತ್ರೆಯನ್ನೂ ದಾನ ಕೊಡಬೇಕು. ಒಟ್ಟಿನಲ್ಲಿ ಆ ಶನಿಪ್ರದೋಷದ ದಿನ ಯಾವ ಒಂದು ಅಲ್ಪವಸ್ತು ವನ್ನು ದಾನಮಾಡಿದರೂ ಅದು ಐಹಿಕ ಮತ್ತು ಆಮುಷ್ಮಿಕ ಸುಖಗಳೆರಡನ್ನೂ ಒದಗಿಸುವುದು ಇದಾದಮೇಲೆ ವೃಷಭನನ್ನು ಆರಾಧಿಸಬೇಕು. ಗಂಧ, ಹೂವು, ಮಂತ್ರಾಕ್ಷತೆ, ವಸ್ತ್ರ ಇವುಗಳಿಂದ ಧರ್ಮರೂಪಿಯಾದ ವೃಷಭನನ್ನು ಪೂಜಿಸಿ, ಧೂಪದೀಪಾದಿಗಳಿಂದಲೂ, ನೈವೇದ್ಯ ತಾಂಬೂಲಾದಿಗಳಿಂದಲೂ ವೃಷಭನನ್ನು ತೃಪ್ತಿಗೊಳಿಸಬೇಕು. ಹಾಗೆಯೇ ಶಿವಮೂರ್ತಿಸ್ವರೂಪವೂ ಧರ್ಮರೂಪಿಯೂ ಆದ ವೃಷಭನು ತೃಪ್ತನಾಗಲಿ ಎಂದು ಅರ್ಘ್ಯಪ್ರದಾನಮಾಡಬೇಕು.॥೬೬-೬೭-೬೮॥

ಹೀಗೆ ಪ್ರಾರ್ಥಿಸಿ, ಆ ವೃಷಭನ ಅಂಡಭಾಗವನ್ನು ಸ್ಪರ್ಶಮಾಡುತ್ತಾ

ಶೃಂಗಮಧ್ಯೇ ಶಿವಂ ದೃಷ್ಟ್ವಾ ಸಮಾಹಿತಮನಾಶ್ರಿವೇ ।
ಧರ್ಮಸ್ತ್ವಂ ವೃಷರೂಪೇಣ ಜಗದಾನಂದಕಾರಕಃ ॥೭೦॥

ಅಷ್ಟಮೂರ್ತೇರಧಿಷ್ಠಾನಮತಃ ಪಾಹಿ ಸಮಾಮುಖಾತ್ ।
ಪೃಥಿವ್ಯಾಂ ಯಾನಿ ತೀರ್ಥಾನಿ ಸಾಗರಾಂತಾನಿ ಯಾನಿ ವೈ ॥೭೧॥

ಅಂಡಮಾಶ್ರಿತ್ಯ ತಿಷ್ಠಂತಿ ಪ್ರದೋಷೇ ಗೋವೃಷಸ್ಯ ಚ ।
ಕುರ್ಯಾತ್ತದ್ವೃಷಣಂ ಸ್ಪೃಷ್ಟ್ವಾ ಶಂಕರಸ್ಯ ವಿಲೋಕನಂ ॥೭೨॥

ಪ್ರದೋಷೇ ಶಂಕರಂ ದೃಷ್ಟ್ವಾ ವೃಷಶೃಂಗಾಂತರೇ ಶಿವೇ ।
ಬ್ರಹ್ಮಹತ್ಯಾಯುತಂ ನಶ್ಯೇದ್ಭುಕ್ತಿಂ ಮುಕ್ತಿಂ ಚ ವಿಂದತಿ ॥೭೩॥

ಏವಂ ದೃಷ್ಟ್ವಾ ತು ಭುಂಜೀಯಾಚ್ಛಾಂಭವೈಃ ಕ್ಷಾರವರ್ಜಿತಂ ।
ವ್ರತಂ ಸಮರ್ಪ್ಯ ದೇವಾಯ ಮಂತ್ರೇಣಾನೇನ ಶಾಂಭವಿ ॥೭೪॥

ಮೇಲಿನ ಸ್ತೋತ್ರವನ್ನು ಉಚ್ಚರಿಸಬೇಕು. ಅಂಡಸ್ಪರ್ಶಮಾಡುತ್ತಾ ವೃಷಭನ ಕೋಡುಗಳ ಮಧ್ಯಭಾಗದಿಂದ ಶಿವಲಿಂಗವನ್ನು ದರ್ಶನಮಾಡಬೇಕು. ಮತ್ತು ಆಗ ಈರೀತಿ ವೃಷಭನನ್ನು ಪ್ರಾರ್ಥಿಸಬೇಕು. ॥೬೯-೭೦॥

"ಧರ್ಮದೇವನೇ, ನೀನು ಲೋಕಕ್ಕೆ ಆನಂದವನ್ನುಂಟುಮಾಡಲು ಈ ವೃಷಭರೂಪದಿಂದ ಅವತರಿಸಿದ್ದೀಯೆ. ಅಷ್ಟಮೂರ್ತಿರೂಪಿಯಾದ ಪರಶಿವನಿಗೆ ನೀನು ಆವಾಸಸ್ಥಾನನಾಗಿರುವೆ. ಪೃಥಿವಿಯಲ್ಲಿ ಪ್ರಸಿದ್ಧವಾಗಿರುವ ಸಕಲತೀರ್ಥಗಳೂ ನಿನ್ನ ಅಂಡಭಾಗವನ್ನು ಆಶ್ರಯಿಸಿ ನಿಂತಿವೆ. ಇಂತಹ ನೀನು ನನ್ನ ಸಮಸ್ತ ಪಾಪ ರಾಶಿಯನ್ನು ನಿರ್ಮೂಲಗೊಳಿಸು." ಎಂದು ಪ್ರಾರ್ಥಿಸುತ್ತಾ ವೃಷಭಾಂಡವನ್ನು ಸ್ಪರ್ಶಿಸಬೇಕು ॥೭೧-೭೨॥

ಪ್ರದೋಷಕಾಲದಲ್ಲಿ ವೃಷಭದ ಶೃಂಗಮಧ್ಯದಲ್ಲಿ ಶಿವನನ್ನು ನೋಡುವುದರಿಂದ ಬ್ರಹ್ಮಹತ್ಯಾದಿ ಅಸಂಖ್ಯ ಮಹಾಪಾಪಗಳು ನಾಶವಾಗಿ ಶಾಶ್ವತವಾದ ಮುಕ್ತಿಯು ಲಭಿಸುವುದು. ಹೀಗೆ ಶಿವದರ್ಶನಮಾಡಿ ಅನಂತರ ವ್ರತಿಯು ಶಾಂಭವರೊಡಗೂಡಿ ನಕ್ತಭೋಜನ ಮಾಡಬೇಕು. ತಾನುಮಾತ್ರ ಉಪ್ಪು, ಕಾರ ಇವುಗಳಿಲ್ಲದಿರುವ ಆಹಾರವನ್ನು ಸೇವಿಸಬೇಕು. ॥೭೩-೭೪॥

ವ್ರತೇನಾನೇನ ಚೀರ್ಣೇನ ಪ್ರಸನ್ನೋ ಭವ ಶಂಕರ ।
ತ್ವದ್ಭಕ್ತಿಪರಮಾಂ ಜ್ಞಾನಂ ಮುಕ್ತಿಂ ಚೈವ ಪ್ರಯಚ್ಛಮೇ ॥೭೫॥

ಅಜ್ಞಾನಾಜ್ಞಾನತೋ ವಾಪಿ ಯತ್ಕೃತಂ ಪೂಜನಂ ತವ ।
ಶನಿಪ್ರದೋಷಯೋಗೇಽಸ್ಮಿನ್ ತದಸ್ತು ಪ್ರೀತಿಕೃತ್ತವ ॥೭೬॥

ಏವಂ ಕೃತ್ವಾ ವ್ರತಂ ಭಕ್ತ್ಯಾ ಸಂಪೂಜ್ಯ ಶಿವಮಂಬಿಕಾಂ ।
ಸರ್ವಜ್ಞತ್ವಮವಾಪ್ನೋತಿ ಮಮ ಲೋಕಂ ಸ ವಿಂದತಿ ॥೭೭॥

ಇದಂ ವ್ರತಂ ಸಪ್ತಕೃತ್ವೋ ಯಃ ಕರೋತಿ ಜಿತೇಂದ್ರಿಯಃ ।
ಮಹತ್ಫಲಮವಾಪ್ನೋತಿ ಋಣಕೋಟ್ಯಾ ವಿಮುಚ್ಯತೇ ॥೭೮॥

ಏಕವಿಂಶತಿಕೃತ್ವಸ್ತು ವ್ರತಮೇತತ್ಸುದುರ್ಲಭಂ ।
ಪುತ್ರಾದೀನ್ ಲಭತೇ ಸದ್ಯೋ ಭುಕ್ತಿಂ ಮುಕ್ತಿಂ ಚ ವಿಂದತಿ ॥೭೯॥

ವ್ರತಸಂಪೂರ್ಣತಾರ್ಥಾಯ ಗಾಮೇಕಾಂ ವೃಷಭಂ ಶಿವೇ ।
ಶಿವಾಯ ವಾ ದ್ವಿಜಾಯಾಥ ದತ್ವಾ ಚಾಶೀಃ ಪ್ರಯೋಜಯೇತ್ ॥೮೦॥

---

ಪರಮೇಶ್ವರನೇ, ಈಗ ನಾನು ಆಚರಿಸಿದ ವ್ರತದಿಂದ ಪ್ರಸನ್ನನಾಗಿ ನೀನು ನಿನ್ನಲ್ಲಿ ಅತಿಶಯವಾದ ಭಕ್ತಿಯನ್ನೂ, ಶಾಶ್ವತವಾದ ಮುಕ್ತಿಯನ್ನೂ ನನಗೆ ಕರುಣಿಸು. ತಿಳಿದೋ, ತಿಳಿಯದೆಯೋ ನಡೆಸಿದ ನನ್ನ ಸಮಸ್ತ ಅಪರಾಧವನ್ನೂ ಕ್ಷಮಿಸಿ, ನನ್ನ ಈ ಸೇವೆಯನ್ನು ಸಫಲಗೊಳಿಸು. ಇವೆಲ್ಲವೂ ಈ ಶನಿಪ್ರದೋಷ ಸಮಯದಲ್ಲಿ ನಿನಗೆ ಪ್ರೀತಿಕರಗಳಾಗಲಿ. ಎಂದು ಭಕ್ತಿಯಿಂದ ಪಾರ್ವತೀ ಪರಶಿವ ರನ್ನು ಧ್ಯಾನಿಸಿ ವ್ರತವನ್ನು ಸಮಾಪ್ತಿಗೊಳಿಸಬೇಕು. ಇದರಿಂದ ವ್ರತಮಾಡಿ ದವನು ಸರ್ವಜ್ಞನಾಗುವನಲ್ಲದೆ ಕೈಲಾಸವನ್ನೂ ಸೇರುವನು. ।೭೫-೭೬-೭೭॥

ಈ ಶನಿಪ್ರದೋಷವ್ರತವನ್ನು ಏಳು ಸಾರಿ ಮಾಡಿದವನು ಋಣಬಾಧೆ ಗಳಿಂದ ಬಿಡುಗಡೆ ಹೊಂದಿ ಮಹಾಸುಕೃತವನ್ನು ಪಡೆಯುವನು ಇಪ್ಪತ್ತೊಂದು ಬಾರಿ ಈ ವ್ರತವನ್ನಾಚರಿಸಿದವರು ಪೌತ್ರಾದಿ ಸಕಲ ಐಹಿಕಸುಖಸಂಪತ್ತುಗಳನ್ನೂ ಪಡೆದು, ಸದ್ಯೋಮುಕ್ತಿಯನ್ನು ಹೊಂದುವರು. ವ್ರತಸಂಪೂರ್ಣಮಾಡಲು ವ್ರತಿ ಯಾದವನು, ಒಂದು ಹಸುವನ್ನಾಗಲಿ, ಎತ್ತನ್ನಾಗಲಿ, ಶಿವಪ್ರೀತಿಗಾಗಿ, ಶಿವಾಲ

॥ ಈಶ್ವರ ಉವಾಚ ॥

ಅಪಿ ಪ್ರಹೀಣಸ್ಯ ಸಮಸ್ತಲಕ್ಷಣೈಃ
ಕ್ರಿಯಾವಿಹೀನಸ್ಯ ನಿಕೃಷ್ಟಜನ್ಮನಃ ।
ಪ್ರದಕ್ಷಿಣೀಕೃತ್ಯ ಶಶಾಂಕಶೇಖರಂ
ಪ್ರಯಾಸ್ಯತಃ ಕಸ್ಯ ನ ಸಿದ್ಧಿರಗ್ರತಃ ॥೮೧॥

ಶಕೃದ್ವಿರೂಪಾಕ್ಷಪದಂ ಪ್ರದೋಷೇ
ನಾನ್ಯಂ ಸುರಂ ಚಿಂತಯತೇ ಸ ಧನ್ಯಃ ।
ಮಾನ್ಯಃ ಸ ಸಾಮಾನ್ಯನರೋಽಪಿ ವಾ ಶಿವೇ
ಮನ್ಯೇ ನ ಚಾನ್ಯಂ ಕಿಲ ಶೈಲಕನ್ಯೇ ॥೮೨॥

ಸಂತಪ್ತಶೂಲೇ ನಿವಸೇತ್ಸಮಾಃ ಶತಂ
ಮಾಂ ವಿಷ್ಣುತುಲ್ಯಂ ತನುತೇ ಪ್ರದೋಷೇ ।
ಸ ದೋಷ ಏವೇಹ ಭವೇತ ಪಾತಕೀ
ಸ ಬ್ರಹ್ಮಹತ್ಯಾಯುತಪಾತಕಂ ನರಃ ॥೮೩॥

---

ಯುಕ್ತೋ ಅಥವಾ ಶೈವಬ್ರಾಹ್ಮಣನಿಗೋ ದಾನಮಾಡಿ, ಅವನಿಂದ ಆಶೀರ್ವಾದವನ್ನು ಪಡೆಯಬೇಕು. ೭೭-೭೯-೮೦॥

ಈ ವ್ರತವನ್ನು ಆಚರಿಸಿದವನು ಲಕ್ಷಣವಿಹೀನನಾಗಿ, ಕ್ರಿಯಾಶೂನ್ಯನಾಗಿ ನಿಕೃಷ್ಟವಾದ ಜನ್ಮದಲ್ಲಿ ಜನಿಸಿದ್ದರೂ. ಈ ವ್ರತಾಂಗವಾಗಿ ಚಂದ್ರಶೇಖರನೆನಿಸಿದ ಪರಶಿವನನ್ನು ಧ್ಯಾನಿಸಿ ಪ್ರದಕ್ಷಿಣೆಮಾಡಿದಮೇಲೆ ಅಂತಹವನಿಗೆ ಸಮಸ್ತ ಸಿದ್ಧಿಗಳೂ ಸಿದ್ಧಿಸುವುವು. ॥೮೧॥

ಪ್ರದೋಷಕಾಲದಲ್ಲಿ ಒಂದುಸಾರಿ ಈಶ್ವರನ ಪಾದಕ್ಕೆ ವಂದಿಸುತ್ತಾ, ಮತ್ತಾವ ದೇವತೆಗಳನ್ನೂ ಧ್ಯಾನಿಸದೆ ಕೇವಲ ಶಿವಸ್ವರೂಪಜ್ಞಾನದಲ್ಲಿಯೇ ಆಸಕ್ತನಾಗಿರುವವನೇ ಲೋಕದಲ್ಲಿ ಮಾನ್ಯನು. ಮತ್ತು ಮಾನ್ಯತರನು. ಅವನಿಗಿಂತಲೂ ಶ್ರೇಷ್ಠನೆನಿಸಿದವನು ಯಾರೂ ಇಲ್ಲವೆಂದೇ ನನ್ನ ಭಾವನೆ. ॥೮೨॥

ಪ್ರದೋಷಕಾಲದಲ್ಲಿ ಯಾವನು ನನ್ನನ್ನು ವಿಷ್ಣುವಿಗೆ ಸಮನೆಂದು ತಿಳಿದು ಧ್ಯಾನಿಸುವನೋ ಅವನು ಮಹಾಪಾಪಿಯೆನಿಸುವನು. ಅಂತಹವನು ನರಕಲೋಕ

ಸಂದರ್ಶನಂ ಸಂಸ್ತವಮಂಬಿಕೇ ಮುದಾ
ಪ್ರದೋಷಕಾಲೇಷು ಸುರೇತರಾಣಾಂ ।
ಕುರ್ವನ್ಮಹಾಪಾತಕೀಮುಭ್ಯುಪೈತಿ
ತಸ್ಮಾತ್ತದಾ ನಾನ್ಯಮನಾ ಭವೇದ್ವ್ರತೀ ॥೮೪॥

ದಧಿಕ್ಷೀರಮಧ್ವಾಜ್ಯ ಸಶರ್ಕರಾಭಿಃ
ಶಿವೇ ನಾರಿಕೇಲಾಮ್ರಜಂಬೀರಸಾರೈಃ ।
ಸುಗಂಧೋದಕೈಃ ಪುಷ್ಪಬಿಲ್ವಾದಿಭಿರ್ಮಾಂ
ಸಮಭ್ಯರ್ಚ್ಯ ಮುಕ್ತಃ ಶಿವೇ ಧೂಪದೀಪೈಃ ॥೮೫॥

ವರಾನ್ನೈಃ ಶಿವೇ ಪಾಯಸಾಪೂಪಶಾಕೈಃ
ಸುತಾಂಬೂಲ ನೀರಾಜನಛತ್ರದಾನೈಃ ।
ಪ್ರಣಾಮಸ್ತವಪ್ರಕ್ರಮೈರ್ನೃತ್ತಗೇಯೈ
ರ್ವರೈಶ್ಚಾಮರೈರ್ವೀಜಕೋ ಮತ್ಪ್ರಿಯಸ್ಸ್ಯಾತ್ ॥೮೬॥

---

ದಲ್ಲಿ ನೂರಾರುವರ್ಷ ಶೂಲದ ಮೇಲೆ ವಾಸಿಸುವನು. ನಿಜವಾಗಿಯೂ ಅವನೇ ಪಾಪಿಯು. ಅವನಿಗೆ ಅನೇಕ ಬ್ರಹ್ಮಹತ್ಯೆಗಳ ಪಾಪವು ಸಂಘಟಿಸುವುದು. ||೮೩||

ಪ್ರದೋಷಕಾಲದಲ್ಲಿ ಶಿವನನ್ನು ಬಿಟ್ಟು ಇತರ ದೇವರನ್ನು ದರ್ಶನಮಾಡುವುದೂ, ಸ್ತುತಿಸುವುದೂ ಮಹಾಪಾತಕಪ್ರದವು. ಆದ್ದರಿಂದ ಯಾರೂ ಆ ಕಾಲದಲ್ಲಿ ಶಿವನನ್ನು ಹೊರತು ಮತ್ತಾವ ದೇವರನ್ನೂ ಧ್ಯಾನಿಸಬಾರದು. ||೮೪||

ದೇವಿಯೇ, ಪ್ರದೋಷಕಾಲದಲ್ಲಿ ಯಾವನು ಶಿವಲಿಂಗಕ್ಕೆ, ಹಾಲು, ಮೊಸರು, ಜೇನುತುಪ್ಪ, ತುಪ್ಪ, ಸಕ್ಕರೆ, ಎಳನೀರು, ಮಾವಿನಹಣ್ಣಿನ ರಸ, ಕಿತ್ತಲೇರಸ, ಗಂಧೋದಕ, ಪುಷ್ಪೋದಕ, ಬಿಲ್ವೋದಕ ಮುಂತಾದುವುಗಳಿಂದ ಅರ್ಚಿಸಿ ನನ್ನನ್ನು ತೃಪ್ತಿಪಡಿಸುವನೋ ಅವನು ನಿಜವಾಗಿಯೂ ಮುಕ್ತಿಯನ್ನು ಪಡೆಯುವನು. ||೮೫||

ಹಾಗೆಯೇ ಶಿವನಿಗೆ ಪಾಯಸ, ಒಬ್ಬಟ್ಟು, ಶಾಕಪಾಕಾದಿಗಳು, ತಾಂಬೂಲ, ನೀರಾಜನ, ಛತ್ರಚಾಮರಾದ್ಯುಪಚಾರಗಳು, ಪ್ರದಕ್ಷಿಣ ನಮಸ್ಕಾರ, ನಾಟ್ಯ ಗಾನಾದಿಗಳು ಇವೇ ಮೊದಲಾದ ಉಪಚಾರಗಳಿಂದ ನನ್ನನ್ನು ತೃಪ್ತಿಪಡಿಸುವವನೂ ನನ್ನ ಅನುಗ್ರಹಕ್ಕೆ ಪಾತ್ರನಾಗುವನು. ||೮೬||

ಬ್ರಹ್ಮಾಂಡಮಂಡಲಗತಾನಿ ಸುತೀರ್ಥಷಂಡಾ
ನ್ಯಾಯಾಂತಿ ತದ್ವೃಷವರಾಂಡಗತಾನಿ ತತ್ರ ।
ಶೃಂಗಾಂತರೇ ತು ನಿವಸೇದಥ ಧರ್ಮಜಾಲಂ
ತಸ್ಮಾತ್ಪ್ರದೋಷಸಮಯೇ ಕ್ಷಣಕೃತ್ಸ್ಪೃಶೇನ್ಮಾಂ ॥೮೭॥

ಭೂಮೌ ಪುತ್ರಕಲತ್ರಮಿತ್ರಸಹಿತಾಃ ಸತ್ರಾತಿರಾತ್ರಾದಿಭಿ
ರ್ಯಷ್ಟಾರೋತ್ರ ಭವಂತಿ ಧಾನ್ಯಧನಕೈರ್ಗೋಭಿಶ್ಚ ನಾಗಾಶ್ವಕೈಃ ।
ಪ್ರಾಸಾದಾಂಬರಭೂಷಣಂ ಮಮ ಶಿವೇ ಪ್ರಾಪ್ಯ ಪ್ರಸಾದೋಜ್ಜ್ವಯಾ
ತ್ತಸ್ಮಿನ್ ತಾಂ ಪ್ರದಿಶಾಮಿ ಸಂಪದಧಿಕಾಂ ಮುಕ್ತಿಂ ಪ್ರದೋಷಾರ್ಚಕೇ ॥೮೮॥

ಆನಂದಾಂಬುಜಕಂದ ಏಷ ಗಿರಿಜೇ ಮಂದಪ್ರದೋಷೋ ಮಮ
ಮಂದಾರೋತ್ತಮಮಾಲಯಾ ಸುಮಗಣೈರ್ವೃಂದಾರವೃಂದೋತ್ತಮಾಃ ।
ಸಾನಂದಾಂಬುಧಿವೀಚಿಮಗ್ನಹೃದಯಾಃ ಸಂಪೂಜಯಂತಿ ದ್ರುತಂ
ಕುಂದಾಮಂದಮರಂದಮಿಂದುಶಕಲಾಲಂಕಾರಮೀಶೇ ತದಾ ॥೮೯॥

---

ದೇವಿಯೇ, ಪ್ರದೋಷಕಾಲದಲ್ಲಿ ಪ್ರಪಂಚದಲ್ಲಿರುವ ಸಮಸ್ತ ತೀರ್ಥಗಳೂ ವೃಷಭನ ಅಂಡಭಾಗವನ್ನು ಆಶ್ರಯಿಸಿ ನಿಲ್ಲುವುವು. ಧರ್ಮಪುರುಷನು ಆ ವೃಷಭದ ಎರಡು ಕೋಡುಗಳ ಮಧ್ಯದಲ್ಲಿ ನೆಲಸುವನು. ಇದರಿಂದಲೇ ಆ ಕಾಲದಲ್ಲಿ ಆ ಎರಡು ಭಾಗಗಳನ್ನೂ ಸ್ಪರ್ಶಮಾಡುತ್ತಾ ನನ್ನನ್ನು ದರ್ಶನಮಾಡಬೇಕು. ॥೮೭॥

ಸತ್ರ, ಅತಿರಾತ್ರವೇ ಮೊದಲಾದ ಮಹಾಯಾಗಾಚರಣೆಯಿಂದ ಮಹಾಮಹಿಮರಾದವರು, ಇದರ ಫಲವಾಗಿ ಭೂಲೋಕದಲ್ಲಿ, ಮಕ್ಕಳು, ಪತ್ನಿಯರು, ಬಂಧುಮಿತ್ರರು ಇವರಿಂದ ಸೌಖ್ಯವನ್ನನುಭವಿಸುತ್ತಾ, ಧನಧಾನ್ಯಗಳನ್ನು ಪಡೆದು ದಿವ್ಯಹರ್ಮ್ಯಗಳಲ್ಲಿ ವಾಸಿಸುವರು, ಪ್ರದೋಷಕಾಲದಲ್ಲಿ ಆರಾಧಿಸಿದವರು, ಆ ಎಲ್ಲಾ ಐಹಿಕಸೌಖ್ಯಗಳನ್ನೂ ಅನುಭವಿಸುತ್ತಾ ಮುಂದಿನ ಮೋಕ್ಷಸುಖವನ್ನೂ ಸಹ ಅನಾಯಾಸವಾಗಿ ಹೊಂದುವರು. ॥೮೮॥

ಶನಿಪ್ರದೋಷವೆಂಬುದು ಆನಂದವೆಂಬ ಕಮಲಕ್ಕೆ ಮೊಳಕೆಯಂತಿರುವುದು. ಆದರಿಂದಲೇ ದೇವಶ್ರೇಷ್ಠರೂ ಸಹ ಆ ಸಮಯದಲ್ಲಿ ಮಂದಾರಪುಷ್ಪಗಳಿಂದಲೂ, ಆ ಪುಷ್ಪವೃಷ್ಟಿಯಿಂದಲೂ ಚಂದ್ರಶೇಖರನಾದ ಮಹಾದೇವನನ್ನೂ ಆನಂದಾಂಬುಧಿ

ಶಶಿಖಂಡಶಿಖಂಡಖಂಡಪರಶುಂ
ವಿಧಿಮುಂಡಾಮಲಕುಂಡಲೀಶಮಾಲಂ ।
ನಗಕೋದಂಡಧರಂ ತ್ವಖಂಡಬಿಲ್ವೈಃ
ಪ್ರಕಟೋಚ್ಚಂಡನತಾಂಡವಂ ಶಿವೇಜ್ಯರ್ ನೇಮುಃ ॥೯೦॥

ಶತಮುಖಮುಖಮುಖ್ಯಲೇಖಜಾಲಾಃ
ಸುಮುಖಾ ಏವ ನಮಂತಿ ಶಂಕರಾಂಘ್ರಿಂ ।
ಸಕಲಾಘೌಘಹರೇ ಪ್ರದೋಷಕಾಲೇ
ಪ್ರಮಥಾ ಯಲ್ಲಕಲಿಂಗಲೋಕನಪ್ರಹೃಷ್ಟಾಃ ॥೯೧॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಶನಿಪ್ರದೋಷಮಹಿಮಾ
ವರ್ಣನಂ ನಾಮ ಏಕತ್ರಿಂಶೋಽಧ್ಯಾಯಃ

---

ಮಗ್ನರಾಗಿ ಪೂಜಿಸುವರು. ಆದರ ಫಲವನ್ನೂ ಅನಾಯಾಸವಾಗಿ ಹೊಂದುವರು. ||೮೯||

ಅರ್ಧಚಂದ್ರನನ್ನು ಶಿರಸ್ಸಿನಲ್ಲಿಯೂ, ಖಂಡಪರಶುವನ್ನು ಕೈಯಲ್ಲಿಯೂ, ಬ್ರಹ್ಮಶಿರವೇ ಮೊದಲಾದ ರುಂಡಗಳ ಮಾಲೆಯನ್ನು ಕಂಠದಲ್ಲಿಯೂ ಧರಿಸಿರುವ ಮಹಾದೇವನು, ಮಹಾಮೇರುವೆಂಬ ಧನುಸ್ಸನ್ನು ಧರಿಸಿರುವನೆಂದು ಧ್ಯಾನಿಸುತ್ತಾ, ನಾಟ್ಯಾಚಾರ್ಯನೆಂದು ಸ್ತುತಿಸುತ್ತಾ ಅಖಂಡವಾದ ಬಿಲ್ವದಳಗಳಿಂದ ಅರ್ಚಿಸಿ ನಮಸ್ಕರಿಸುವರು. ||೯೦||

ಇಂದ್ರನೇ ಮೊದಲಾದ ಸಕಲ ದೇವತೆಗಳಿಗೂ ಸಕಲ ಪಾಪನಾಶಕರವಾದ ಈ ಪ್ರದೋಷಸಮಯದಲ್ಲಿ ಪರಶಿವನ ಪಾದಪದ್ಮವನ್ನು ಪೂಜಿಸಿ, ಧ್ಯಾನಿಸಿ ತಾವು ಆನಂದವನ್ನೈದುವರು. ಎಲ್ಲರೂ ಈಕಾಲದಲ್ಲಿ ಶಿವಲಿಂಗದರ್ಶನಮಹಿಮೆಯಿಂದ ಸಕಲವಿಧವಾದ ಇಷ್ಟಾರ್ಥಗಳನ್ನೂ ಪಡೆಯುವರಲ್ಲದೆ ಶಿವಸಾಯುಜ್ಯವನ್ನೂ ಹೊಂದುವರು. ಪ್ರಮಥಗಣಗಳಂತೂ ತಪ್ಪದೆ ಪ್ರದೋಷಕಾಲದಲ್ಲಿ ಪರಶಿವನ ದರ್ಶನದಿಂದ ಶಿವಾನುಗ್ರಹವನ್ನು ಸಂಪಾದಿಸುವರು. ಆದ್ದರಿಂದ ಎಲೌ ಪಾರ್ವತಿಯೇ, ಪ್ರದೋಷಕಾಲವೇ ಶಿವಪೂಜೆಗೆ ಅತ್ಯಂತ ಉತ್ತಮವಾದ ಕಾಲವು. ಶನಿಪ್ರದೋಷ

ವಂತೂ ನನ್ನ ಅರ್ಚನೆಗೆ ಅತ್ಯುತ್ತಮವಾದುದೆಂಬುದನ್ನು ಎಂದಿಗೂ ಮರೆಯಬೇಡ. ಎಂದು ಪರಶಿವನು ಪಾರ್ವತಿಗೆ ಉಪದೇಶಿಸಿದನು. ॥೯೧॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶನಿಪ್ರದೋಷ ಮಹಿಮಾ ವರ್ಣನೆಯನ್ನು ವಿವರಿಸುವ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ದ್ವಾತ್ರಿಂಶೋಽಧ್ಯಾಯಃ

॥ ಈಶ್ವರ ಉವಾಚ ॥

**ಶಿವರಾತ್ರಿವ್ರತಂ ಪುಣ್ಯಂ ಮಮೈವ ಪ್ರೀತಿದಂ ಪರಂ ।**
**ಶಿವೋ ಲಿಂಗತಯೋದ್ಭೂತಸ್ತಸ್ಯಾಂ ರಾತ್ರೌ ಮಹೇಶ್ವರಿ ॥೧॥**

**ಬ್ರಹ್ಮವಿಷ್ಣ್ವೋರ್ಬೋಧನಾರ್ಥಂ ಚತುರ್ದಶ್ಯಾಂ ನಿಶಿ ಪ್ರಿಯೇ ।**
**ಮಾಘೇ ಕೃಷ್ಣಚತುರ್ದಶ್ಯಾಂ ಸೋಮಪಾತಾರ್ದ್ರಯುಕ್ತಕೇ ॥೨॥**

**ಸಾ ತಿಥಿರ್ದುರ್ಲಭತರಾ ಯೋಗಯುಕ್ತಾ ವಿಶೇಷತಃ ।**
**ಮಾಘಕೃಷ್ಣಚತುರ್ದಶ್ಯಾಂ ಪೂಜ್ಯೋಽಹಂ ಲಿಂಗಮಧ್ಯಮೇ ॥೩॥**

---

## ಮೂವತ್ತೆರಡನೆಯ ಅಧ್ಯಾಯ

ಪರಮೇಶ್ವರನು ಪಾರ್ವತೀದೇವಿಗೆ ಶಿವರಾತ್ರೀ ವ್ರತಮಹಿಮೆಯನ್ನು ಹೀಗೆ ವಿವರಿಸಲಾರಂಭಿಸಿದನು. ಶಿವರಾತ್ರಿಯೆಂಬುದು ನನಗೆ ಅತ್ಯಂತ ಪ್ರಿಯವಾದ ದಿನ. ಆ ರಾತ್ರಿಯಲ್ಲಿಯೇ ನಾನು ಶಿವಲಿಂಗಾಕಾರವನ್ನು ಪಡೆದೆನು. ಬ್ರಹ್ಮ, ವಿಷ್ಣು, ಇವರಿಗೆ ಜ್ಞಾನಬೋಧನೆಮಾಡುವ ಸಲುವಾಗಿ ಆದಿನ ಲಿಂಗಾಕಾರವನ್ನು ಹೊಂದಬೇಕಾಯಿತು. ಆದ್ದರಿಂದಲೇ, ಮಾಘಕೃಷ್ಣ ಚತುರ್ದಶಿಯದಿನ ನನ್ನನ್ನು ಶಿವಲಿಂಗ ಮಧ್ಯದಲ್ಲಿ ಆರಾಧಿಸಬೇಕು. ಅದರಲ್ಲಿಯೂ ಆ ದಿನವು ಸೋಮವಾರ, ವ್ಯತೀಪಾತ, ಆರ್ದ್ರಾನಕ್ಷತ್ರ ಇವುಗಳಿಂದ ಕೂಡಿದ್ದರೆ ಮತ್ತೂ ಪ್ರಶಸ್ತವೆನಿಸುವುದು. ॥೧-೩॥

ಅಂತಹ ಶುಭಯೋಗವಿಶಿಷ್ಟವಾದ ದಿನವು ದೊರೆಯುವುದೇ ದುರ್ಲಭ. ಆದಿನ ರಾತ್ರಿ ನಾಲ್ಕು ಯಾಮಗಳೂ ನಿದ್ರೆ, ಆಹಾರ, ಇವುಗಳನ್ನು ತೊರೆದು ಶಿವಲಿಂಗ

ರಾತ್ರೌ ಯಾಮಚತುಷ್ಟಯೇ ಅನಿದ್ರೋಪೋಷಣಾದಿಭಿಃ ।
ನೈತ್ಯಕಂ ವ್ರತಮೇತದ್ಧಿ ಸರ್ವೇಷಾಂ ಸರ್ವದಾ ಶಿವೇ ॥೪॥

ತ್ರಯೋದಶ್ಯರ್ಧಘಟಿಕಾ ಯದಿ ತಸ್ಯಾಂಗತಾ ಭವೇತ್ ।
ಪ್ರದೋಷಪೂಜಾ ತತ್ರೈವ ಕಾರ್ಯಾ ಸಾ ಪ್ರಹರಾದಿಮೇ ॥೫॥

ನಿಶೀಥಸಮಯೇ ಗ್ರಾಹ್ಯಾ ಮಾಘಕೃಷ್ಣಚತುರ್ದಶೀ ।
ತಸ್ಯಾಂ ಸಮಸ್ತಪುಣ್ಯಾನಿ ತೀರ್ಥಾನ್ಯಾಯತನಾನಿ ಚ ॥೬॥

ಸ್ಥಾವರೇ ವಾ ಚರೇ ಲಿಂಗೇ ಸಂಕ್ರಾಮಿಷ್ಯಂತಿ ಪಾರ್ವತಿ ।
ಉಪವಾಸಪ್ರಭಾವೇನ ಅತಂದ್ರನಿಶಿಜಾಗರಾತ್ ॥೭॥

ಚತುರ್ಯಾಮಾರ್ಚನಾದ್ದೇವಿ ಬಿಲ್ವಪತ್ರೇಣ ಕೇವಲಂ ।
ಅಕ್ಷಯ್ಯಂ ಪುಣ್ಯಮಾಪ್ನೋತಿ ಶಿವಸಾಯುಜ್ಯಮಶ್ನುತೇ ॥೮॥

ಶಿವೇ ಮೇ ಶಿವರಾತ್ರಿಂ ಯಃ ಪೂಜಾಜಾಗರಣೈರ್ನಯೇತ್ ।
ಅಖಂಡಿತವ್ರತೀ ಸಃ ಸ್ಯಾದಾಖಂಡಲಶತಂ ವಸೇತ್ ॥೯॥

---

ಮಧ್ಯದಲ್ಲಿ ನನ್ನನ್ನು ಆರಾಧಿಸಬೇಕು. ಇದನ್ನು ನಿತ್ಯವ್ರತವೆಂದು ತಿಳಿ. ಎಲ್ಲರೂ ಇದನ್ನು ತಪ್ಪದೆ ಆಚರಿಸಬೇಕು. ||೩-೪||

ಆ ಚತುರ್ದಶೀತಿಥಿಗೆ ಪ್ರದೋಷಕಾಲದಲ್ಲಿ ಅರ್ಧಗಳಿಗೆತ್ರಯೋದಶೀ ವೇಧೆ ಇದ್ದರೂ ಚತುರ್ದಶೀ ದಿನವೇ ಪ್ರದೋಷಪೂಜೆಯನ್ನೂ ನೆರವೇರಿಸಬೇಕು. ಆ ಚತುರ್ದಶಿಯರಾತ್ರಿ ಮೊದಲನೆಯ ಯಾಮದಲ್ಲಿ ಪ್ರದೋಷಪೂಜೆಯನ್ನು ನೆರವೇರಿಸಬಹುದು. ಮಾಘಕೃಷ್ಣ ಚತುರ್ದಶಿಯ ಅರ್ಧ ರಾತ್ರಿಯ ಸಮಯದಲ್ಲಿ ಪ್ರಪಂಚದಲ್ಲಿರುವ ಸಕಲತೀರ್ಥಗಳೂ, ದೇವತಾಂಶಗಳೂ ಶಿವಲಿಂಗದಲ್ಲಿ ಅಡಗಿಬಿಡುತ್ತವೆ. ಸ್ಥಾವರ ಅಥವಾ ಚರಾತ್ಮಕ ಲಿಂಗವಾಗಲಿ ಆ ಕಾಲದಲ್ಲಿ ಪೂಜ್ಯವೆನಿಸುವುದು. ||೫-೬||

ಆ ದಿವಸ ಹಗಲು ಉಪವಾಸಮಾಡಿ, ಸೋಮಾರಿತನವಿಲ್ಲದೆ ರಾತ್ರಿ ಜಾಗರಣೆ ಮಾಡಿ ನಾಲ್ಕು ಯಾಮಗಳೂ ಬಿಲ್ವದಿಂದ ಶಿವಾರ್ಚನೆಮಾಡುವುದರಿಂದ ನಾಶರಹಿತವಾದ ಸುಕೃತವು ಲಭಿಸುವುದು. ಮತ್ತು ಶಿವಸಾಯುಜ್ಯವೂ ದೊರೆಯುವುದು. ಈರೀತಿ ತಪ್ಪದೆ ಶಿವರಾತ್ರಿಯ ದಿನ ಯಾವನು ಭಕ್ತಿಯಿಂದ ಜಾಗರಣಾದಿಗಳಿಂದ ಶಿವಾರ್ಚನೆ

ಶಿವಲೋಕೇ ಸರ್ವಭಾಗ್ಯೈಃ ಸುರಾಸುರನಮಸ್ಕೃತಃ ।
ನಿತ್ಯಂ ಚ ಕಾಮಿಕಂ ದೇವಿ ಶಿವರಾತ್ರಿವ್ರತಂ ಮಮ ॥೧೦॥

ಮಮ್ಯೈವ ಭಕ್ತ್ಯೋ ಯೋ ದೇವಿ ಶಿವರಾತ್ರ್ಯರ್ಚಕೋ ಭವೇತ್ ।
ಪೂಜಾಜಾಗರಣೋಪೇತೋ ರಾತ್ರೌ ಯಾಮಚತುಷ್ಟಯಂ ॥೧೧॥

ಗಣತ್ವಮಕ್ಷಯಂ ತಸ್ಯ ಮಮ ಕೈಲಾಸಮೂರ್ಧನಿ ।
ವರ್ಷೇ ವರ್ಷೇ ಮಹಾದೇವಿ ನರನಾರ್ಯೋ ದ್ವಿಜಾಂತ್ಯಜಾಃ ॥೧೨॥

ಶಿವರಾತ್ರೌ ಮಹಾದೇವಂ ನಿತ್ಯಂ ಭಕ್ತ್ಯಾ ಯಜಂತಿ ಹಿ ।
ದೇವಾ ವಿಧೀಂದ್ರವಿಷ್ಣ್ವಾದ್ಯಾ ಸದಾರಾಶ್ಚಾಸುರಾದ್ವಿಜಾಃ ॥೧೩॥

ಶಿವರಾತ್ರ್ಯಾಂ ಮಹಾದೇವಂ ಪೂಜಯಂತಿ ದೃಢವ್ರತಾಃ ।
ಶಿವರಾತ್ರಿವ್ರತಾದ್ದೇವಿ ತ್ರಿಸ್ಸತ್ಯಂ ನ ಪರಾತ್ಪರಂ ॥೧೪॥

---

ಮಾಡುವನೋ, ಅವನು ನೂರಾರು ಇಂದ್ರರಿರುವ ಪರ್ಯಂತ ದೇವಲೋಕದಲ್ಲಿ ವಾಸಿಸುವನು. ॥೭-೮-೯॥

ಹಾಗೆಯೇ ಆತನು ದೇವರಾಕ್ಷಸರಿಂದ ವಂದಿತನಾಗಿ ಶಿವಲೋಕದಲ್ಲಿ ವಾಸ ಮಾಡುವನು. ಶಿವರಾತ್ರಿವ್ರತವು ನಿತ್ಯವ್ರತವಾಗಿರುವಂತೆ ಕಾಮ್ಯವೂ ಆಗಿದೆ. ಯಾವನು ನನ್ನಲ್ಲಿ ಅತಿಯಾಗಿ ಭಕ್ತಿಯಿಟ್ಟು ಪೂಜಾ ಜಾಗರಣಾದಿಗಳಿಂದ ನಾಲ್ಕು ಯಾಮಗಳೂ ನನ್ನನ್ನು ಶಿವರಾತ್ರಿಯದಿನ ಪೂಜಿಸುವನೋ ಅವನು ನನ್ನ ಗಣ ಗಳಿಗೆ ಒಡೆಯನಾಗುವನು. ॥೧೦-೧೧॥

ಮತ್ತು ಅವನಿಗೆ ಕೈಲಾಸಶಿಖರದಲ್ಲಿ ಸ್ಥಿರವಾಸವು ಲಭಿಸುವುದು. ದೇವಿಯೇ, ಈರೀತಿ ಶಿವರಾತ್ರಿವ್ರತವನ್ನು ಪ್ರತಿವರ್ಷದಲ್ಲಿಯೂ ತಪ್ಪದೆ ನನ್ನ ಭಕ್ತರೆನಿಸಿದ ಪುರುಷರು, ಸ್ತ್ರೀಯರು, ಬ್ರಾಹ್ಮಣರು, ಚಂಡಾಲರು, ಯಾವ ಭೇದಭಾವವೂ ಇಲ್ಲದೆ ಪೂಜಿಸುವರು. ಇದೇರೀತಿ ನನ್ನಲ್ಲಿ ಸ್ಥಿರಭಕ್ತಿಯುಳ್ಳ ದೇವತೆಗಳೂ, ಬ್ರಹ್ಮ, ಇಂದ್ರ, ವಿಷ್ಣು ಮೊದಲಾದವರೂ ತಮ್ಮ ತಮ್ಮ ಪತ್ನಿಯರೊಡಗೂಡಿ ಈ ವ್ರತ ವನ್ನು ತಪ್ಪದೆ ಆಚರಿಸುವರು. ರಾಕ್ಷಸರೂ ಸಹ ಈ ವ್ರತವನ್ನು ಭಕ್ತಿಯಿಂದ ನಡೆ ಸುವರು. ॥೧೨-೧೩॥

ಈ ಶಿವರಾತ್ರಿವ್ರತಕ್ಕಿಂತ ಉತ್ತಮವಾದ ವ್ರತವು ಮತ್ತೊಂದಿಲ್ಲವೆಂದು ಪ್ರಮಾಣಮಾಡಿ ಹೇಳುವೆನು. ಯಾವನು ಆ ದಿನ ಭಕ್ತಿಯಿಂದ ಶಿವಾರ್ಚನೆ

ನ ಪೂಜಯತಿ ಭಕ್ತ್ಯೇಶಂ ರುದ್ರಂ ತ್ರಿಭುವನೇಶ್ವರಂ ।
ಯೋಽನ್ನಭುಕ್ ಕ್ರಿಮಿಭುಕ್ ಸಸ್ಯಾತ್ ನಿದ್ರೋಪ್ಯಜಾಗರೋ ಭವೇತ್ ॥೧೫॥

ನಾನಾಯೋನಿಸಹಸ್ರೇಷು ಭ್ರಮತೇ ಸೋಽಧಮೋ ನರಃ ।
ದ್ವಾದಶಾಬ್ದಿಕಮೇವಂ ಸ್ಯಾಚ್ಚತುರ್ವಿಂಶಾಬ್ದಿಕಂ ತು ವಾ ॥೧೬॥

ಯಾವಜ್ಜನ್ಮ ಮಹಾಪುಣ್ಯಂ ಕುರ್ವನ್ ಮದ್ಗಣಪೋ ಭವೇತ್ ।
ಮಾಘಕೃಷ್ಣಚತುರ್ದಶ್ಯಾಂ ಭೌಮಃ ಸೋಮಃ ಪ್ರಶಸ್ಯತೇ ॥೧೭॥

ಭೌಮವಾರೇಣ ಸಂಯುಕ್ತಾ ಕೃಷ್ಣಾಂಗಾರ ಚತುರ್ದಶೀ ।
ಯದ್ಯಾದ್ರಾವ್ಯತೀಪಾತಯುಕ್ತಾ ಚೇಚ್ಛಿವಯೋಗಂ ಸುದುರ್ಲಭಃ ॥೧೮॥

ಸ ಜನ್ಮಾಯುತಪಾಪಘ್ನೋ ತಸ್ಯಾಂ ಬಿಲ್ವೈಕಪೂಜನಾತ್ ।
ಶಿವಯೋಗಸ್ಯ ಯೋಗೋ ವೈ ತದ್ಭವೇದುತ್ತಮೋತ್ತಮಂ ॥೧೯॥

ತ್ರಯೋದಶೀ ಕಲಾಪ್ಯೇಕಾ ಮಧ್ಯೇ ಚೈವ ಚತುರ್ದಶೀ ।
ಅಂತೇ ಚೈವ ಸಿನೀವಾಲೀ ತ್ರಿಸ್ಪೃಶ್ಯಾಂ ಶಿವಮರ್ಚಯೇತ್ ॥೨೦॥

---

ಮಾಡದೆ, ಅನ್ನವನ್ನು ಭಕ್ಷಿಸುವನೋ, ಅವನು ಆದಿನ ಕ್ರಿಮಿಗಳನ್ನು ತಿಂದಂತೆಯೇ ಸರಿ. ಅಲ್ಲದೆ ರಾತ್ರಿ ಜಾಗರಣೆಮಾಡದೆ ನಿದ್ರೆಯಿಂದ ಯಾವನು ಕಾಲಕಳೆಯುವನೋ, ಅವನು ನಾನಾಯೋನಿಗಳಲ್ಲಿ ಅಧಮಜನ್ಮಗಳನ್ನು ಪಡೆದು ಸುತ್ತುವನು॥೧೪-೧೫-೧೬॥

ಈ ವ್ರತವನ್ನು ಹನ್ನೆರಡುವರ್ಷ, ಅಥವಾ ಇಪ್ಪತ್ತುನಾಲ್ಕುವರ್ಷ ಅಥವಾ ತಾನು ಬದುಕಿರುವವರೆಗೂ ಯಾರು ಒಂದೇ ಸಮನಾಗಿ ಭಕ್ತಿಯಿಂದಾರಾಧಿಸುವರೋ, ಅಂತಹವರು ನನ್ನ ಗಣಶ್ರೇಷ್ಠರಾಗಿ ನನ್ನ ಸಮೀಪವನ್ನೈದುವರು. ಮತ್ತು ಆ ಶಿವರಾತ್ರಿಯು ಸೋಮ ಅಥವಾ ಮಂಗಳವಾರದದಿನ ಬಂದರೆ ಅದು ಯೋಗವೆನಿಸುವುದು. ಮಾಘಕೃಷ್ಣಚತುರ್ದಶಿಯು ಮಂಗಳವಾರದಿಂದ ಕೂಡಿ, ಆದ್ರಾ, ವ್ಯತೀಪಾತಗಳಿಂದ ಸಹಿತವಾದರೆ ಅದು ಶಿವಯೋಗವೆನಿಸುವುದು. ಆದರೆ ಅದು ಸಾಮಾನ್ಯವಾಗಿ ದುರ್ಲಭ. ॥೧೭-೧೮॥

ಶಿವತಿಥಿಯೋಗಾತ್ಮಕವಾದ ಪುಣ್ಯದಿನದಲ್ಲಿ ಒಂದೇ ಒಂದು ಬಿಲ್ವಪತ್ರಿಯಿಂದ ಶಂಕರನನ್ನು ಪೂಜಿಸಿದರೂ, ಹತ್ತುಸಾವಿರ ಜನ್ಮಗಳಿಂದ ಸಂಪಾದಿಸಿದ ಪಾಪವು ನಾಶಹೊಂದುವುದು. ಅದು ಅಷ್ಟು ಮಹಿಮಾಪೂರ್ಣವಾದುದು. ಆ

ಅರ್ಧರಾತ್ರಾದಧಶ್ಚೋರ್ಧ್ವಂ ಯುಕ್ತಾ ಯಾ ಸ್ಯಾಚ್ಚತುರ್ದಶೀ ।
ತಸ್ಯಾಮೇವ ಪ್ರಕುರ್ವೀತ ಸೋಽಶ್ವಮೇಧಫಲಂ ಲಭೇತ್ ॥೨೦॥

ಪ್ರದೋಷವ್ಯಾಪಿನೀ ಚಾಪಿ ಗ್ರಾಹ್ಯಾ ಸೇಯಂ ಶಿವಾರ್ಚಕೈಃ ।
ಪ್ರದೋಷವತ್ಕಲಾವ್ಯಾಪ್ತೌ ಪರೈಷಾ ಸಂಪ್ರಶಸ್ಯತೇ ॥೨೨॥

ಪೂರ್ವಾಪರೇಹ್ನಿ ದೇವೇಶಿ ನಿಶೀಥವ್ಯಾಪ್ಯಗೋತ್ತಮಾ ।
ಜಾಗರಂ ಚೋಪವಾಸಂ ಚ ತಸ್ಯಾಂ ಕುರ್ಯಾಚ್ಛಿವಾರ್ಚಕಃ ॥೨೩॥

॥ ದೇವ್ಯುವಾಚ ॥

ಶಿವರಾತ್ರ್ಯಾಂ ಮಹಾದೇವ ಕಥಮರ್ಚಂತಿ ಸಾಧಕಾಃ ।
ಕೋ ವಿಧಿಸ್ತಸ್ಯ ನಿಯಮಃ ತತ್ಸರ್ವಂ ವದ ಮೇ ವಿಭೋ ॥೨೪॥

---

ಯೋಗವು ಚತುರ್ದಶಿತಿಥಿಗೆ ತ್ರಯೋದಶೀತಿಥಿ ಯೋಗವಾಗುವ ಒಂದು ಕಲಾತ್ಮಕವಾದ ಸಮಯದಲ್ಲಿಯೂ, ಹಾಗೆಯೇ ಚತುರ್ದಶೀ ಅಮಾಸಂಬಂಧವಾಗುವ ಒಂದು ಕಲೆಯಲ್ಲಿಯೂ, ಚತುರ್ದಶೀ ಮಧ್ಯಭಾಗದಲ್ಲಿಯೂ ಅಂದರೆ ಚತುರ್ದಶೀ ತಿಥಿಯ ಆದಿ, ಮಧ್ಯ, ಅಂತ್ಯಕಾಲಗಳಲ್ಲಿ ಶಿವಾರ್ಚನೆಮಾಡುವುದು ಅತ್ಯಂತ ಶ್ರೇಯಸ್ಕರ. ॥೧೯-೨೦॥

ಚತುರ್ದಶೀತಿಥಿಯು ಯಾವ ರಾತ್ರಿಯ ಅರ್ಧಭಾಗಕ್ಕಿಂತ ಹಿಂದೆಯೂ, ಮುಂದೆಯೂ ಪೂರ್ಣವಾಗಿ ವ್ಯಾಪ್ತವಾಗಿರುವುದೋ, ಆ ರಾತ್ರಿ ಶಿವಾರ್ಚನೆಮಾಡಿದರೆ ಅಶ್ವಮೇಧಯಾಗದ ಫಲವು ಲಭಿಸುವುದು. ಒಂದುವೇಳೆ ಪ್ರದೋಷಕಾಲದಲ್ಲಿ ಚತುರ್ದಶೀ ವ್ಯಾಪ್ತಿಯಿದ್ದರೂ ಆದಿನ ಶಿವರಾತ್ರಿಯನ್ನಾಚರಿಸಬಹುದು. ಚತುರ್ದಶೀ ತಿಥಿಯು ಹಿಂದಿನ ದಿನದಲ್ಲಲ್ಲದೆ ಪ್ರದೋಷಕಾಲದಲ್ಲಿದ್ದು ಹಾಗೆಯೇ ಮಾರನೆಯ ದಿನದಪೂರ್ವಾಹ್ನದಲ್ಲಿಯೂ ಇರುವುದಾದರೆ ಅದೂ ಅತ್ಯಂತ ಪ್ರಶಸ್ತವೆನಿಸುವುದು. ಏಕೆಂದರೆ ಶಿವಾರ್ಚನೆಗೂ, ಜಾಗರಣೆಗೂ ಮಾರನೆಯದಿನದ ಪಾರಣೆಗೂ ಚತುರ್ದಶೀ ತಿಥಿಯು ಶ್ರೇಷ್ಠವೆನಿಸುವುದು. ॥೨೧-೨೨-೨೩॥

ಹೀಗೆ ಪರಮೇಶ್ವರನು ಹೇಳುತ್ತಿರುವಾಗ ಮಧ್ಯೆ ಪಾರ್ವತಿಯು ಪ್ರಶ್ನಿಸುತ್ತಾ ' ಸಾಧಕರಾದವರು ಶಿವರಾತ್ರಿಯದಿನ ಯಾವ ಕ್ರಮದಿಂದ ಶಂಕರನನ್ನು ಪೂಜಿಸುತ್ತಾರೆ ? ಅದರ ವಿಧಾನವೆಂತು ? ಅದೆಲ್ಲವನ್ನೂ ತನಗೆ ತಿಳಿಸಬೇಕು' ಎಂದು ಪ್ರಾರ್ಥಿಸಿ

॥ ಮಹೇಶ್ವರ ಉವಾಚ ॥

ಕಥಯಾಮಿ ವಿಧಿಂ ತೇದ್ಯ ಶಿವರಾತ್ರೌ ಸಮರ್ಚನೇ ।
ಶೃಣ್ವಪರ್ಣೇ ನ ಪ್ರಕಾಶ್ಯಂ ರಹಸ್ಯಂ ಪರಮಂ ಮಮ ॥೨೫॥

ಸ್ಥಾವರೇ ವಾ ಚರೇ ವಾಪಿ ಮೃದ್ಬಾಣಸ್ಫಟಿಕೇಪಿ ಚ ।
ಧಾತುಜೇ ವಾ ಯಥಾ ಜೋಷಂ ಪೂಜಾ ಯಾಮಚತುಷ್ಟಯೇ॥೨೬॥

ಸಂಪಾದ್ಯ ಪೂಜಾಸಾಮಗ್ರೀಂ ಶಿವಕ್ಷೇತ್ರೇ ಗೃಹೇಪಿ ವಾ ।
ಪ್ರಾತಃ ಕೃತ್ಯಂ ಚ ನಿರ್ವರ್ತ್ಯ ದುಷ್ಟಾಲಾಪವಿವರ್ಜಿತಃ ॥೨೭॥

ಸ್ನಾತ್ವಾ ನದ್ಯಾಂ ತಟಾಕೇ ವಾ ಧೌತವಸ್ತ್ರಧರಶ್ಶುಚಿಃ ।
ಸಿತಭಸ್ಮತ್ರಿಪುಂಡ್ರಾಂಕೋ ರುದ್ರಾಕ್ಷಾಭರಣಾನ್ವಿತಃ ॥೨೮॥

ಗಾಂ ಗೋಮಯೇನೋಪಲಿಪ್ಯ ರಂಗವಲ್ಯಾದಿಮಂಡಿತಾಂ ।
ವಿತಾನಮಂಡಪೈರ್ಯುಕ್ತಾಂ ವೇದಿಕಾಸ್ತರಣಾವೃತಾಂ ॥೨೯॥

ಕಲ್ಪಯೇತ್ಪೀಠಮುತ್ಕೃಷ್ಟಂ ಸಮಾಸೀನಃ ಕುಶಾಸನೇ ।
ಪಂಚಾಮೃತಂ ಫಲರಸಂ ಪಂಚಗವ್ಯಂ ಸುಮಾನ್ಯಪಿ ॥೩೦॥

---

ದಳು. ಆಗ ಶಂಕರನು ಹೀಗೆಂದನು. 'ದೇವಿಯೆ' ಅದನ್ನೇ ನಿನಗೆ ತಿಳಿಸುವೆನು ಈಗ ಕೇಳು. ಈ ಶಿವಾರ್ಚನವಿಧಿಯು ಅತ್ಯಂತ ಗೂಢವಾದದ್ದೆಂದು ತಿಳಿ.॥೨೪-೨೫॥

ಆ ದಿವಸ ಸ್ಥಿರಲಿಂಗ, ಚರಲಿಂಗ, ಮೃತ್ತಿಕಾಲಿಂಗ, ಬಾಣಲಿಂಗ, ಸ್ಫಟಿಕಲಿಂಗ ಅಥವಾ ಮತ್ತಾವ ಲೋಹಗಳಿಂದ ಮಾಡಿದ ಶಿವಲಿಂಗವನ್ನಾಗಲಿ ನಾಲ್ಕು ಯಾಮಗಳ ಪೂಜೆಗೆ ಉಪಯೋಗಿಸಬಹುದು. ಶಿವಾರಾಧನೆಯನ್ನು, ಶಿವಾಲಯದಲ್ಲಾಗಲಿ, ಶಿವಕ್ಷೇತ್ರದಲ್ಲಾಗಲಿ, ತನ್ನ ಮನೆಯಲ್ಲಿಯೇ ಆಗಲಿ ನೆರವೇರಿಸಬಹುದು ಶಿವಾರ್ಚನೆಗೆ ಬೇಕಾದ ಸಾಮಗ್ರಿಗಳನ್ನೆಲ್ಲಾ ಸಂಪಾದಿಸಿಕೊಳ್ಳಬೇಕು. ಆ ದಿನ ಪ್ರಾತಃಕಾಲದ ನಿತ್ಯಕರ್ಮಗಳನ್ನೆಲ್ಲಾ ಮುಗಿಸಿಕೊಂಡು ಕೆಟ್ಟ ಮಾತುಕತೆಗಳನ್ನು ಆಡದೆ ಸದಾ ಧ್ಯಾನಪರನಾಗಿರಬೇಕು. ॥೨೬-೨೭-೨೮॥

ನದಿ ಅಥವಾ ಕೆರೆ, ಬಾವಿ ಇವುಗಳಲ್ಲಿ ಸ್ನಾನಮಾಡಿ, ಶುಭ್ರವಸ್ತ್ರವನ್ನೂ ಸ್ವಚ್ಛವಾದ ಭಸ್ಮತ್ರಿಪುಂಡ್ರವನ್ನೂ ಧರಿಸಿ, ರುದ್ರಾಕ್ಷಾಭರಣದಿಂದ ಅಲಂಕೃತನಾಗಿ ನೆಲವನ್ನು ಗೋಮಯದಿಂದ ಸಾರಿಸಿ, ರಂಗವಲ್ಲಿಯಿಟ್ಟು ಮಂಟಪ ಮೇಲ್ಕಟ್ಟು

ಬಿಲ್ವಪದ್ಮಾರ್ಕಕಲ್ಹಾರ ನವನೀಲೋತ್ಪಲಾನಿ ಚ ।
ದಮನೋಶೀರಕಾದೀನಿ ಸಂಪಾದ್ಯಾಂಬುಜಚಂದನಂ ॥೩೦॥

ಧೂಪದೀಪೌ ಫಲಾನೀಶೇ ವಾಗ್ಯತೋ ಹವಿರೇವ ಚ ।
ತಾಂಬೂಲಂ ಚ ಸುವಾಸಾಂಸಿ ಸಂಪಾದ್ಯ ನಿಯಮಾನ್ವಿತಃ ॥೩೨॥

ಸಂಕಲ್ಪ್ಯ ಚ ಶಿವಸ್ಯಾಗ್ರೇ ಧ್ಯಾಯನ್ನಾಮೇವ ಕೇವಲಂ ।
ಜಾಗರೇಣೋಪವಾಸೇನ ಪೂಜಾಂ ಯಾಮಚತುಷ್ಟಯೇ ॥೩೩॥

ಕರೋಮಿ ತವ ದೇವೇಶ ಗೃಹಾಣಾಂಬಾಸಮನ್ವಿತಃ ।
ಆಚಮ್ಯ ಪ್ರಾಣಾನಾಯಮ್ಯ ಜಪೇತ್ಪಂಚಾಕ್ಷರಂ ಶಿವೇ ॥೩೪॥

ಸಾಂಗಂ ನ್ಯಾಸಂ ಸಹಸ್ರಂ ಮೇ ಯಾಮೇ ಯಾಮೇಥ ಪೂಜಕಃ ।
ಧ್ಯಾಯೇದ್ದೇವಂ ವಿರೂಪಾಕ್ಷಂ ಶಿವರಾತ್ರ್ಯಾಂ ಶಿವಾರ್ಚಕಃ ॥೩೫॥

---

ಗಳಿಂದ ಶೋಭಿಸುವ ಒಂದು ವೇದಿಕೆಯನ್ನು ಕಲ್ಪಿಸಿಕೊಳ್ಳಬೇಕು. ಪೂಜಾರ್ಥವಾಗಿ ಮತ್ತು ಆದರ ಮಧ್ಯದಲ್ಲಿ ಒಂದು ಪೀಠವನ್ನು ಕಲ್ಪಿಸಿ ತಾನು ದರ್ಭಮಯವಾದ ಪೀಠದಲ್ಲಿ ಕುಳಿತು ಪಂಚಾಮೃತ, ಪಂಚಗವ್ಯ, ನಾನಾಜಾತಿಯ ಪುಷ್ಪಗಳು ಇವುಗಳನ್ನು ಸಮೀಪದಲ್ಲಿಟ್ಟುಕೊಳ್ಳಬೇಕು. ॥೨೯-೩೦॥

ಶಿವಪೂಜೆಗಾಗಿ, ಬಿಲ್ವಪತ್ರೆ, ಕಮಲ, ಎಕ್ಕದಹೂವು, ಕಲ್ಹಾರ ಪುಷ್ಪ, ನೀಲೋತ್ಪಲಗಳು, ದವನ, ಲಾಮಂಚ, ಚಂದನ, ವಿಧವಿಧವಾದ ಹಣ್ಣುಗಳು, ಧೂಪ, ದೀಪ, ನೈವೇದ್ಯಕ್ಕೆ ಹುಗ್ಗಿ ಮುಂತಾದುವುಗಳು, ತಾಂಬೂಲಾರ್ಥವಾದ ಅಡಕೆ ಎಲೆಗಳು ಶ್ರೇಷ್ಠವಾದ ವಸ್ತ್ರಗಳು ಇವುಗಳೆಲ್ಲವನ್ನೂ ಯಥಾಶಕ್ತಿ ಸಂಪಾದಿಸಿಟ್ಟುಕೊಳ್ಳಬೇಕು. ॥೩೧-೩೨॥

ಅನಂತರ ಶಿವಲಿಂಗದ ಮುಂದೆ ಕುಳಿತು ನನ್ನನ್ನೇ ಧ್ಯಾನಮಾಡುತ್ತಾ ಸಂಕಲ್ಪಮಾಡಬೇಕು. ಜಾಗರಣೆ, ಉಪವಾಸಗಳಿಂದ ನಾಲ್ಕು ಯಾಮಗಳಲ್ಲಿಯೂ ತಪ್ಪದೆ ಪೂಜೆಮಾಡುವೆನೆಂದೂ, ಅದನ್ನು ಪಾರ್ವತಿಯ ಸಮೇತವಿದ್ದು ಸ್ವೀಕರಿಸಬೇಕೆಂದೂ ಮೊದಲು ಪ್ರಾರ್ಥಿಸಬೇಕು. ಹಾಗೆಯೇ ಆಚಮನಮಾಡಿ ಪ್ರಾಣಾಯಾಮಪೂರ್ವಕವಾಗಿ ಶಿವಪಂಚಾಕ್ಷರೀ ಮಂತ್ರವನ್ನು ಜಪಿಸಬೇಕು. ಅಂಗನ್ಯಾಸ ಕರನ್ಯಾಸಗಳಿಂದ ನಾಲ್ಕು ಯಾಮಗಳಲ್ಲಿಯೂ ಸಾವಿರ ಸಾವಿರ ಸಂಖ್ಯೆಗಳಿಂದ ಶಿವಪಂಚಾಕ್ಷರೀಮಂತ್ರವನ್ನು ಜಪಮಾಡಬೇಕು. ॥೩೩-೩೪-೩೫॥

ದೇವಂ ನಿತ್ಯಂ ಮಹೇಶಂ ರಜತಗಿರಿವಶಂ ಚಾರುಚಂದ್ರಾವತಂಸಂ
ರತ್ನಾಕಲ್ಪೋಜ್ಜ್ವಲಾಂಗಂ ಪರಶುಮೃಗವರಾಭೀತಹಸ್ತಾಂತರಂಗಂ ।
ಪದ್ಮಾಸೀನಂ ಸಹಾಂಬಂ ವೃತಗಣಪಗಣೈರ್ವ್ಯಾಘ್ರಕೃತ್ತಿಂ ವಸಾನಂ
ವಿಶ್ವಾದ್ಯಂ ವಿಶ್ವವಂದ್ಯಂ ನಿಖಿಲಭಯಹರಂ ಸರ್ವಪಾಪಾಹಿಹಾರಂ ॥೩೬॥

ಧ್ಯಾತ್ವಾವಾಹ್ಯ ಮಹಾಲಿಂಗೇ ಸಪುಷ್ಪಾಂಜಲಿರೀಶ್ವರಿ ।
ಪಾದ್ಯಾರ್ಘ್ಯಾಚಮನಾದೀನಿ ದದ್ಯಾತ್ಪಂಚಾಕ್ಷರೇಣ ಹಿ ॥೩೭॥

ಪಂಚಾಮೃತೈಃ ಪಂಚಗವ್ಯೈಃ ಶಿವೇ ಫಲರಸೈರಪಿ ।
ಗಂಧಪುಷ್ಪಕುಶಾಂಬೂನಿ ದದ್ಯಾದ್ರುದ್ರೇಣ ಭಾಮಿನಿ ॥೩೮॥

ಘೃತದೀಪಾವಲಿಂ ದದ್ಯಾದ್ಧೂಪಂ ಗುಗ್ಗುಲುಸಂಯುತಂ ।
ಕುರ್ಯಾದ್ಧಾರಾಭಿಷೇಕಂ ನೋ ರುದ್ರೈಕಾದಶಸಂಖ್ಯಯಾ ॥೩೯॥

---

ಅನಂತರ ಈ ರೀತಿ ನನ್ನ ಸ್ವರೂಪವನ್ನು ಧ್ಯಾನಿಸಬೇಕು. " ಮಹೇಶ್ವರನು, ನಿತ್ಯನು, ಶಾಶ್ವತನು, ರಜತಾದ್ರಿವಾಸಿಯು, ಚಂದ್ರಶೇಖರನು, ಅವನ ದೇಹವು ಸದಾ ರತ್ನಾಭರಣಗಳಿಂದ ಅಲಂಕೃತವಾಗಿರುವುದು. ಪರಶುವಿನಿಂದಲೂ, ಜಿಂಕೆಯಿಂದಲೂ ಶಂಕರನ ಪಾಣಿಪದ್ಮವು ವಿಭೂಷಿತವಾಗಿರುವುದು. ಶಂಕರನು ದೇವಿಯೊಡನೆ ಸದಾ ಪದ್ಮಾಸನದಲ್ಲಿ ಮಂಡಿಸಿರುವನು. ಗಣಪತಿಯೇ ಮೊದಲಾದ ಗಣನಾಯಕರಿಂದ ಸದಾ ಪರಿವೃತನಾಗಿರುವನು. ಸದಾ ವ್ಯಾಘ್ರಚರ್ಮವನ್ನೇ ಧರಿಸಿ, ಲೋಕಪೂಜ್ಯನೂ, ಲೋಕರಕ್ಷಕನೂ, ಅನಾದಿಸಿದ್ಧನೂ ಆಗಿ ಸಮಸ್ತ ಭಕ್ತರ ಪಾಪರಾಶಿಯನ್ನೂ ಹೋಗಲಾಡಿಸುವುದರಲ್ಲಿ ಅತಿ ಸಮರ್ಥನೆನಿಸಿರುವನು. ಸಮಸ್ತ ಪಾಪರಾಶಿಯೆಂಬ ಸರ್ಪವನ್ನೇ ಮೆಟ್ಟಿ ಅದನ್ನು ಹಾರವನ್ನಾಗಿ ಮಾಡಿಕೊಂಡಿರುವವನು." ॥೩೬॥

ಹೀಗೆಂದು ಧ್ಯಾನಿಸುತ್ತಾ ಮಹಾಲಿಂಗದಲ್ಲಿ ಆವಾಹನೆಮಾಡಿ ಪುಷ್ಪಾಂಜಲಿಯನ್ನರ್ಪಿಸುತ್ತಾ, ಪಾದ್ಯ, ಅರ್ಘ್ಯ, ಆಚಮನ ಮುಂತಾದುವುಗಳನ್ನು ಶಿವಪಂಚಾಕ್ಷರೀ ಮಂತ್ರದಿಂದ ಅರ್ಪಿಸಿ, ಪಂಚಾಮೃತ, ಪಂಚಗವ್ಯ, ಫಲರಸ, ಗಂಧೋದಕ, ಪುಷ್ಪೋದಕ, ಕುಶೋದಕ ಇವೇ ಮುಂತಾದುವುಗಳ ಧಾರೆಯಿಂದ ರುದ್ರಾಧ್ಯಾಯವನ್ನು ಪಠನೆಮಾಡುತ್ತಾ ಅಭಿಷೇಕಮಾಡಬೇಕು. ತುಪ್ಪದ ದೀಪಮಾಲೆಗಳಿಂದಲೂ

ತೌರ್ಯತ್ರಿಕೈಸ್ತದಾ ದೇವಿ ಶಿವರಾತ್ರ್ಯಾಂ ಶಿವೇ ಮುದಾ ।
ಸ ಕೂರ್ಚೇ ತರ್ಪಯೇದಂತೇ ಭವಾಯೇತ್ಯಷ್ಟನಾಮಭಿಃ ॥೪೦॥

ಕಿಂಚಿದ್ದತ್ವಾಥ ನೈವೇದ್ಯಂ ಪರಿಮೃಜ್ಯಾಥ ವಾಸಸಾ ।
ಪೀಠೇ ಸಂಸ್ಥಾಪ್ಯ ದೇವೇಶಂ ಗಂಧಪುಷ್ಪಾಕ್ಷತೈರ್ಯಜೇತ್ ॥೪೧॥

ಭಸ್ಮನಾ ಬಿಲ್ವಕುಸುಮಮಾಲಿಕಾಭಿರ್ಮಹೇಶ್ವರಿ ।
ಭೂಷಣೈರ್ಭೂಷಯೇದೀಶಂ ಪದ್ಮಕಲ್ಹಾರಚಂಪಕೈಃ ॥೪೨॥

ಮಂದಾರೈಃ ಕನಕೈಶ್ಚೈವ ತಥಾ ದವನಕಾದಿಭಿಃ ।
ಶತಾಷ್ಟನಾಮಭಿರ್ವಾಪಿ ನಾಮಸಾಹಸ್ರಕೋಽಪಿ ವಾ ॥೪೩॥

ಮೂರ್ತಯೋಽಷ್ಟೌ ಶಿವಸ್ಯೈತಾಃ ಪೂರ್ವಾದಿಕ್ರಮಯೋಗತಃ ।
ಪೂಜಯೇತ್ಸ್ಕಂದ ನಂದೀಶೌ ಗಣಚಂಡೇಶ್ವರಾದಿಕಾನ್ ॥೪೪॥

---

ಅಭಿಷೇಕಮಧ್ಯದಲ್ಲಿ ಶಂಕರನನ್ನು ಪೂಜಿಸಬೇಕು. ಏಕಾದಶಸಂಖ್ಯೆಯಲ್ಲಿ ರುದ್ರ ಪಾರಾಯಣಮಾಡುತ್ತಾ ರುದ್ರಾಭಿಷೇಕವನ್ನು ನೆರವೇರಿಸಬೇಕು. ||೩೭-೩೮-೩೯||

ಒಂದುವಾರ ಅಭಿಷೇಕಾನಂತರ ಮಂಗಳವಾದ್ಯಗಳನ್ನು ಮೊಳಗಿಸಿ, ಅನಂತರ ದರ್ಭಕೂರ್ಚಸಹಿತವಾಗಿ "ಭವಾಯದೇವಾಯನಮಃ" ಎಂಬ ಎಂಟುನಾಮ ಗಳಿಂದ ಶಿವತೃಪ್ತ್ಯರ್ಥವಾಗಿ ತರ್ಪಣಮಾಡಬೇಕು. ವಾರವಾರಕ್ಕೂ ನಿವೇದನ ಮಾಡಿ, ಬಟ್ಟೆಯಿಂದ ಶಿವಲಿಂಗವನ್ನು ಒರೆಸಿ, ಪೀಠದಲ್ಲಿಟ್ಟು ಮತ್ತೆ ಗಂಧಪುಷ್ಪಾಕ್ಷತೆ ಗಳಿಂದ ಅರ್ಚಿಸಬೇಕು. ||೪೦-೪೧||

ಅನಂತರ ಶಿವಲಿಂಗಕ್ಕೆ ಭಸ್ಮ, ಬಿಲ್ವಪತ್ರೆ, ಹೂವು, ಮಾಲಿಕೆ, ಒಡವೆಗಳು ಇವೇ ಮೊದಲಾದುವುಗಳಿಂದಲೂ, ಕಮಲ, ಕಲ್ಹಾರ, ಸಂಪಿಗೆ, ಮಂದಾರ, ದವನ ಮುಂತಾದ ಪತ್ರಪುಷ್ಪಗಳಿಂದಲೂ, ಅಷ್ಟೋತ್ತರಶತನಾಮಗಳು, ಸಹಸ್ರನಾಮಗಳು ಇವನ್ನುಚ್ಚರಿಸುತ್ತಾ ಪೂಜಿಸಬೇಕು. ||೪೨-೪೩||

ಈಶ್ವರನ ಅಷ್ಟಮೂರ್ತಿಗಳನ್ನೂ ಎಂಟು ನಾಮಗಳಿಂದ ಪೂರ್ವಾದಿ ಯಾಗಿ ಧ್ಯಾನಿಸಿ ಆವಾಹಿಸಬೇಕು. ಅಕ್ಕಪಕ್ಕಗಳಲ್ಲಿ ಸ್ಕಂದ, ನಂದೀಶ್ವರ, ಗಣಪತಿ, ಚಂಡೀಶ್ವರ ಇವರನ್ನೂ, ಎಡಭಾಗದಲ್ಲಿ ಪಾರ್ವತಿಯನ್ನೂ ಆರಾಧಿಸಬೇಕು. ಭೂಸ್ವರೂಪದಿಂದ ಶರ್ವನೆನಿಸಿಯೂ, ಜಲರೂಪದಿಂದ ಭವನೆನಿಸಿಯೂ, ತೇಜೋ

ಉಮಾಂ ಚ ಭವಪಾರ್ಶ್ವೇ ಚ ಪೂಜಯೇದುಪಚಾರಕೈಃ ।
ಶರ್ವಾಯ ಕ್ಷಿತಿರೂಪಾಯ ಭವಾಯ ಜಲಮೂರ್ತಯೇ ॥೪೫॥

ರುದ್ರಾಯ ತೇಜೋರೂಪಾಯ ಉಗ್ರಾಯ ಪವನಾತ್ಮನೇ ।
ಭೀಮಾಯಾಕಾಶರೂಪಾಯ ಯಾಜ್ಯಾಯ ಪಶುಪಾಯ ಚ ॥೪೬॥

ಮಹಾದೇವಾಯ ಸೋಮಾಯ ಈಶಸೂರ್ಯಾತ್ಮನೇ ನಮಃ ।
ಇತಿ ಸಂಪೂಜ್ಯ ದೇವೇಶಮಷ್ಟಮೂರ್ತಿಂ ಪಿನಾಕಿನಂ ॥೪೭॥

ಗಣೇಶಂ ಭೈರವಂ ದುರ್ಗಾಂ ಸ್ಕಂದನಂದೀಶ್ವರಾವುಭೌ ।
ಚಂಡೇಶಂ ಚ ಗಣೇಶಾಂಶ್ಚ ತತ್ತನ್ಮಂತ್ರೈರ್ಯಜೇಚ್ಛಿವಾಂ ॥೪೮॥

ಮೂಲಮಂತ್ರೇಣ ತಾಂ ಶಕ್ತಿಂ ಗಂಧಪುಷ್ಪಾಕ್ಷತಾದಿಭಿಃ ।
ಧೂಪಂ ದೀಪಂ ತತೋ ದದ್ಯಾನ್ನೈವೇದ್ಯಂ ಭಕ್ಷ್ಯಭೋಜ್ಯಕಂ॥೪೯॥

ತಾಂಬೂಲಂ ಫಲಜಾಲಂ ಚ ಪಾನೀಯಂ ಮುಖವಾಸಕಂ ।
ನೀರಾಜನಂ ತತೋ ದದ್ಯಾಚ್ಛತಸಾಹಸ್ರವರ್ತಿಕಂ ॥೫೦॥

---

ರೂಪದಿಂದ ರುದ್ರನೆನಿಸಿಯೂ, ವಾಯುರೂಪದಿಂದ ಉಗ್ರನೆನಿಸಿಯೂ, ಆಕಾಶ ರೂಪದಿಂದ ಭೀಮನೆನಿಸಿಯೂ, ಯಜಮಾನರೂಪದಿಂದ ಪಶುಪತಿಯೆನಿಸಿಯೂ ಇರುವಂತೆ ಭಾವಿಸಿ ಪರಮೇಶ್ವರನನ್ನು ಪೂಜಿಸಬೇಕು. ॥೪೪-೪೫-೪೬॥

ಚಂದ್ರಸ್ವರೂಪದಿಂದ ಮಹಾದೇವನೆನಿಸಿಯೂ, ಸೂರ್ಯರೂಪದಿಂದ ಈಶ್ವರ ನೆನಿಸಿಯೂ ಇರುವ ಅಷ್ಟಮೂರ್ತಿಯನ್ನು ಮಾನಸಾ ಧ್ಯಾನಿಸಬೇಕು. ಹಾಗೆಯೇ, ಗಣಪತಿ, ಭೈರವ, ದುರ್ಗಾ, ಕುಮಾರಸ್ವಾಮಿ, ನಂದೀಶ್ವರ, ಚಂಡೀಶ್ವರ, ಗಣನಾಯಕರು, ಇವರನ್ನು ಆಯಾ ದೇವತೆಗಳ ಮಂತ್ರದಿಂದ ಆವಾಹಿಸಿ ಪೂಜಿಸ ಬೇಕು. ॥೪೭-೪೮॥

ದೇವಿಯನ್ನು ಮಾತ್ರ ಮೂಲಮಂತ್ರದಿಂದ ಆವಾಹಿಸಿ, ಗಂಧಪುಷ್ಪಾಕ್ಷತಾದಿ ಗಳಿಂದ ಪೂಜಿಸಬೇಕು. ಹಾಗೆಯೇ ಆವಾಹಿತಗಳಾದ ಸಕಲ ದೇವರಿಗೂ, ಧೂಪ, ದೀಪ, ಭಕ್ಷ್ಯಭೋಜ್ಯಗಳ ನಿವೇದನ, ಪೂರ್ಣಫಲ, ತಾಂಬೂಲ ಮುಂತಾದುವು ಗಳನ್ನು ಸಮರ್ಪಿಸಬೇಕು. ಕೊನೆಯಲ್ಲಿ ಲಕ್ಷಬತ್ತಿಗಳಿಂದ ಕೂಡಿದ ನೀರಾಜನ ವನ್ನು ಸ್ವಾಮಿಗೆ ಬೆಳಗಬೇಕು. ॥೪೯-೫೦॥

ಚಾಮರಂ ದರ್ಪಣಂ ಛತ್ರಂ ವಿತಾನಂ ಧ್ವಜಮೇವ ಚ ।
ವ್ಯಜನಂ ಭಾಜನಂ ದೇವಿ ದದ್ಯಾದ್ವಿತ್ತಮವಂಚಯನ್ ॥೫೦॥

ನಮೇತ್ಪ್ರದಕ್ಷಿಣಂ ಸ್ತೋತ್ರಂ ಋಕ್ಸಾಮಾಥರ್ವಯಾಜುಷಾಂ ।
ಕುರ್ಯಾನ್ನೃತ್ತಂ ಗೀತವಾದ್ಯವೀಣಾವೇಣುಮೃದಂಗಕಾನ್ ॥೫೨॥

ನಿವೇದಯಿತ್ವಾ ದೇವಾಯ ಸ್ತೋತ್ರಮೇತತ್ಪಠೇನ್ನರಃ ॥೫೩॥

ವಿಶ್ವಾಧಿಕ ತ್ರಿದಶನಾಯಕ ದೇವದೇವ
ವಂದಾರುವಂದಿತಪದಾಬ್ಜ ಮಹೇಶ ಶರ್ವ ।
ಪಾರ್ವ್ಯಂಬಯಾ ಶಶಿಕಲಾಮಲಚಾರುಮೌಲೇ
ಮಾಮಾಶು ಲೋಕಯ ಭವಾಂಬುಧಿವೀಚಿಲಗ್ನಂ ॥೫೪॥

ವಿಶ್ವೇಶ ವಿಶ್ವಜನಕಾವ್ಯಯ ಸೋಮಧಾಮ
ಭೂಪಾವಶೇಷಮಹಿಮಾಗಮ ವಾಮದೇವ ।

---

ಅನಂತರ ಛತ್ರಿ, ಚಾಮರ, ಕನ್ನಡಿ, ಮೇಲ್ಕಟ್ಟು, ಧ್ವಜ, ಬೀಸಣಿಗೆ ಮುಂತಾದ ಉಪಚಾರಗಳಿಂದ ಸ್ವಾಮಿಯನ್ನು ಸೇವಿಸಬೇಕು. ವೇದಪಾರಾಯಣ, ಸ್ತೋತ್ರಪಠನ ಮುಂತಾದುವುಗಳಿಂದ ಸ್ವಾಮಿಗೆ ಪ್ರದಕ್ಷಿಣಾದಿಗಳನ್ನು ಮಾಡಿ, ನಾನಾವಿಧವಾದ ವಾದ್ಯಧ್ವನಿಗಳಿಂದ ನಾಟ್ಯಸೇವೆಯನ್ನೂ ಸ್ವಾಮಿಗೆ ಸಲ್ಲಿಸಿ ಕೊನೆಯಲ್ಲಿ ಈ ಮುಂದೆ ಹೇಳುವ ಸ್ತೋತ್ರವನ್ನು ಪಠಿಸುತ್ತಾ ಸ್ವಾಮಿಯನ್ನು ಧ್ಯಾನಿಸಬೇಕು. ॥೫೧-೫೨-೫೩॥

"ಲೋಕಾತೀತನೇ, ದೇವದೇವನೆ, ಸ್ವರ್ಗಾಧಿಪತಿಯೇ, ನೀನು ಭಕ್ತಜನರಿಂದ ವಂದಿತವಾದ ಪಾದಕಮಲವುಳ್ಳವನಲ್ಲವೆ! ಮಹೇಶನೇ, ಚಂದ್ರಕಲೆಯಿಂದ ಅಲಂಕೃತವಾದ ಮೌಳಿಭಾಗವುಳ್ಳವನೇ, ನೀನು ಸಂಸಾರವೆಂಬ ಘೋರಸಮುದ್ರದ ಅಲೆಗಳ ಹೊಡೆತಕ್ಕೆ ಸಿಕ್ಕಿ ನರಳುತ್ತಿರುವ ನನ್ನನ್ನು ಕರುಣಾಪಾಂಗದಿಂದ ನೋಡು. ನನ್ನನ್ನು ಉದ್ಧರಿಸು. ॥೫೪॥

ವಿಶ್ವೇಶ್ವರನೇ, ಪ್ರಪಂಚದ ಪ್ರಾಣಿವರ್ಗದಲ್ಲಿ ನಾಶರಹಿತನಾಗಿರುವವನೇ, ನೀನು ಚಂದ್ರನಿಗೆ ಆಶ್ರಯವಿತ್ತಿರುವೆಯಲ್ಲವೆ. ಅತಿಶಯವಾದ ಮಹಿಮೆಯುಳ್ಳವ

ಕಾಮಾಂಗನಾಶನ ಗರಾಶನ ಕಾಲಕಾಲ
ಮಾಂ ಪಾಹಿ ಸಂಸೃತಿಜಗದ್ಗತಮಾಶು ಚೇಶ ॥೫೫॥

ಕಂದರ್ಪದರ್ಪಹರಸರ್ಪವಿಶೋಭಿತಾಂಗ
ಗರ್ತಾಸನಸ್ಥ ಗಜಚರ್ಮಪರೀತದೇಹ ।
ಕರ್ತಾ ತ್ವಮೇವ ಜಗತಾಂ ಪರಮೇಶಹರ್ತಾ
ಪಾತಾ ತ್ವಮೀಶ ಪರಿಪಾಹಿ ಭವಾಬ್ಧಿಮಗ್ನಂ ॥೫೬॥

ಹೇ ವಿಶ್ವನಾಥ ಗಣನಾಥ ಸುಮನ್ಮಥಾರೇ
ಮನ್ನಾಥ ನಾಶಿತಮಹಾಘಚಯಾವ್ಯಯ ಚಂದ್ರಚೂಡ ।
ಪಾಹೀಶ ಮಾಮಕಥಿಯಾ ಭವಪಾಶಲಗ್ನಂ
ಮಗ್ನಂ ಮಹಾಭವಸಮುದ್ರಸುಪಂಕಿಲಂ ಮಾಂ ॥೫೭॥

ನಾಗಿ, ವಾಮದೇವಾದಿ ಮುಖಗಳಿಂದ ಪ್ರಕಾಶಿಸುವ ಮಹೇಶ್ವರನಾದ, ನೀನು ಕಾಮನ ದೇಹವನ್ನು ಧ್ವಂಸಮಾಡಿದವನು. ವಿಷವನ್ನು ಭಕ್ಷಿಸಿದವನು. ಕಾಲ ಕಾಲನು. ನಾನಾವರೋ ಸಂಸಾರವೆಂಬ ಜಗತ್ತಿನಲ್ಲಿ ಮುಳುಗಿರುವೆನು. ಇಂತಹ ನನ್ನನ್ನು ಮಹೇಶ್ವರನೇ, ಪ್ರೀತಿಯಿಂದ ರಕ್ಷಿಸು. ॥೫೫॥

ಮನ್ಮಥನ ದರ್ಪವನ್ನು ನಾಶಮಾಡಿದವನೂ, ಸರ್ಪಾಭರಣದಿಂದ ಶೋಭಿಸುವವನೂ, ಪಾತಾಳವಾಸಿಯೂ, ಆನೆಯ ಚರ್ಮವನ್ನು ಹೊದ್ದಿರುವವನೂ ಆದ ನೀನು ಜಗತ್ಕರ್ತನಲ್ಲವೆ! ಪರಮವಾದ ಸಂಸಾರಸಾಗರದಲ್ಲಿ ಮುಳುಗಿ ವ್ಯಥೆಪಡುತ್ತಿರುವ ನನ್ನ ದುಃಖವನ್ನು ನಾಶಗೊಳಿಸುವುದರಲ್ಲಿ ನೀನೊಬ್ಬನೇ ಸಮರ್ಥನು. ಇಂತಹ ನೀನು ನನ್ನನ್ನು ಸರ್ವದಾ ಪಾಲಿಸುತ್ತಿರು. ॥೫೬॥

ಲೋಕದೊಡೆಯನೇ, ಗಣಗಳಿಗೆ ಅಧಿಪತಿಯೇ, ಮನ್ಮಥಾರಿಯೇ, ನೀನು ನನಗೆ ಒಡೆಯನೆನಿಸಿದ್ದು ಜನ್ಮಜನ್ಮಾಂತರಗಳಿಂದ ಸಂಪಾದಿಸಿದ್ದ ಸಮಸ್ತ ಪಾಪರಾಶಿಯನ್ನು ನಿರ್ಮೂಲಗೊಳಿಸು. ಚಂದ್ರಶೇಖರನೇ, ಸಂಸಾರವೆಂಬ ಮಹಾಪಾಶಕ್ಕೆ ಸಿಕ್ಕಿಬಿದ್ದಿರುವ ಮತ್ತು ಭವಸಾಗರದಲ್ಲಿ ಮುಳುಗಿ ಕೆಸರುಹತ್ತಿ ವ್ಯಥೆಪಡುತ್ತಿರುವ ಅನಾಥನಾದ ನನ್ನನ್ನು ಕರುಣಾಪಾಂಗದಿಂದ ಉದ್ಧರಿಸು. ॥೫೭॥

ತ್ರ್ಯಕ್ಷಾಕ್ಷಯ್ಯಫಲಪ್ರದಾವ್ಯಯ ವಿಭೋ ದಕ್ಷಾದಿದೀಕ್ಷಾಪಹ
ಉಕ್ಷೋಧ್ವಾಂಗಗತಾಮಿತಮಹಾ ವೀಕ್ಷಾದಿದಗ್ಧಾಸುರ ।
ಕಕ್ಷಾದಿಸ್ಥಿತಪಕ್ಷಪಾತಸುದೃಶಾ ಸಂವೀಕ್ಷ್ಯಮಾಮೀಶ್ವರ
ಪಕ್ಷೀಂದ್ರಪ್ರಿಯವಾಹಪೂಜಿತಪದ ಪ್ರತ್ಯಕ್ಷಮುಕ್ತಿಪ್ರದ ॥೫೮॥

ಇತ್ಥಂ ಯಾಮಚತುಷ್ಟೇಷ್ವೇವಂ ಸಂಸ್ತುವೀತ ಮಹೇಶ್ವರಂ ।
ಪ್ರತ್ಯೇಕಮರ್ಘ್ಯಂ ದದ್ಯಾದ್ವೈ ಸ ಪುಷ್ಪಾಂಬುವಿಮಿಶ್ರಿತಂ ॥೫೯॥

ನಮಶ್ಶಿವಾಯ ಶಾಂತಾಯ ಸರ್ವಪಾಪಹರಾಯ ಚ ।
ಶಿವರಾತ್ರೌ ಮಯಾ ದತ್ತಮರ್ಘ್ಯಂ ಪ್ರೀತಿಕರೋಸ್ತುತೇ ॥೬೦॥

ಮಯಾ ಕೃತಾನ್ಯನೇಕಾನಿ ಪಾತಕಾನಿ ಚ ಶಂಕರ ।
ಗೃಹಾಣಾರ್ಘ್ಯಮುಮಾಕಾಂತ ಶಿವರಾತ್ರೌ ಪ್ರಸೀದ ಮಾಂ ॥೬೧॥

---

ಲೋಚನತ್ರಯಗಳಿಂದ ಭಕ್ತರನ್ನು ನೋಡಿ ಅಕ್ಷಯವಾದ ಫಲವನ್ನು ಅನುಗ್ರಹಿಸುವ ಮಹಾದೇವನೇ, ನೀನು ಗರ್ವಿತರಾದ ದಕ್ಷಬ್ರಹ್ಮನೇ ಮೊದಲಾದವರ ಯಜ್ಞದೀಕ್ಷೆಯನ್ನು ಕ್ಷಣಕಾಲದಲ್ಲಿ ಧ್ವಂಸಮಾಡಿದೆ. ಕೇವಲ ದೃಷ್ಟಿಪಾತದಿಂದಲೇ ಅನೇಕ ರಾಕ್ಷಸರ ಕುಲವನ್ನು ನಾಶಗೊಳಿಸಿದೆ. ಗರುಡವಾಹನನಾದ ವಿಷ್ಣುವಿನಿಂದಲೂ ಪೂಜಿತನಾಗಿರುವೆ. ಪ್ರತ್ಯಕ್ಷವಾಗಿ ಮೋಕ್ಷಸುಖವನ್ನು ಕರುಣಿಸುವ ಸಾಮರ್ಥ್ಯವು ನಿನಗಿರುವುದಲ್ಲವೆ! ಮಹಾದೇವನೇ, ಇಂತಹ ದಯಾಶಾಲಿಯಾದ ನೀನು ವಿಶ್ವಾಸಪೂರಿತವಾದ ನಿನ್ನ ಅಪಾಂಗದಿಂದ ನನ್ನನ್ನು ನೋಡಿ ಉದ್ಧರಿಸು."॥೫೮॥

ಹೀಗೆ ಯಾಮಚತುಷ್ಟಯಗಳಲ್ಲಿಯೂ ಪೂಜಾಂತ್ಯದಲ್ಲಿ ಧ್ಯಾನಮಾಡಿ, ಕೊನೆಯಲ್ಲಿ ಪೂಜಾಸಾದ್ಗುಣ್ಯಾರ್ಥವಾಗಿ ಈ ರೀತಿ ಪ್ರಾರ್ಥಿಸುತ್ತಾ ಪುಷ್ಪಮಿಶ್ರಿತವಾದ ನೀರಿನಿಂದ ಅರ್ಘ್ಯಪ್ರದಾನಮಾಡಬೇಕು. ಸುಖಕರನೂ, ಶಾಂತನೂ, ಸರ್ವಪಾಪನಾಶಕನೂ ಆದ ನೀನು ನನ್ನಿಂದ ಈ ಶಿವರಾತ್ರಿಯಲ್ಲಿ ಕೊಡಲ್ಪಡುವ ಅರ್ಘ್ಯದಿಂದ ಸಂತುಷ್ಟನಾಗಿ ವರಪ್ರದನಾಗು. ॥೫೯-೬೦॥

ಶಂಕರನೇ, ನನ್ನಿಂದ ಆಚರಿತವಾದ ಸಮಸ್ತ ಪಾತಕಗಳೂ ನಾಶವಾಗುವಂತೆ, ಈ ಅರ್ಘ್ಯವನ್ನು ಸ್ವೀಕರಿಸಿ ನನ್ನನ್ನು ಅನುಗ್ರಹಿಸು. ಪಾರ್ವತೀಪತಿಯೇ, ಸಾಂಸಾರಿಕವಾದ ದುಃಖ, ದಾರಿದ್ರ್ಯ ಮುಂತಾದ ಹಿಂಸೆಗಳಿಂದ ನಾನು ಪರಿತಾಪಪಟ್ಟಿರು

ದುಃಖದಾರಿದ್ರ್ಯಭಾರೈಶ್ಚ ದಗ್ಧೋಽಹಂ ಪಾರ್ವತೀಪತೇ ।
ಮಾಮರ್ಘ್ಯದಾನಾತ್ಸುಪ್ರೀತಃ ಸುಖಿನಂ ಕುರು ಶಂಕರ ॥೬೨॥

ಮಯಾ ಕೃತಾನ್ಯಘೌಘಾನಿ ಹರ ಶಂಕರ ಶಂಕುರು ।
ಶಿವರಾತ್ರೌ ದದಾಮ್ಯರ್ಘ್ಯಂ ಶಿವರಾತ್ರೌ ಪ್ರಸೀದ ಮೇ ॥೬೩॥

ಪ್ರತಿಪ್ರಹರಮೇವಂ ಸ್ಯಾದರ್ಘ್ಯಂ ದತ್ವಾ ವಿಚಕ್ಷಣಃ ।
ದಂಡವತ್ಪ್ರಣತೋ ಭೂತ್ವಾ ಸ್ತುತ್ವಾ ದತ್ವಾರ್ಘ್ಯಮಾದರಾತ್ ॥೬೪॥

ಏಕಾಗ್ರಪ್ರಣತೋ ಭೂತ್ವಾ ತತೋ ದೇವಂ ಕ್ಷಮಾಪಯೇತ್ ।
ಅಂಗಹೀನಂ ಕ್ರಿಯಾಹೀನಂ ವಿಧಿಹೀನಂ ಮಹೇಶ್ವರಂ ॥೬೫॥

ಪೂಜಿತೋಽಸಿ ಮಹಾದೇವ ತತ್ಕ್ಷಮಸ್ವ ಘೃಣಾನಿಧೇ ।
ಯಚ್ಚಾಪ್ಯುಪಹತೈಃ ಪುಷ್ಪೈರಶಸ್ತೈರ್ಭಾವದೂಷಿತೈಃ ॥೬೬॥

ಕೇಶಕೀಟಾಪವಿದ್ಧೈಶ್ಚ ಪೂಜಿತೋಽಸಿ ಮಯಾ ಪ್ರಭೋ ।
ಅನ್ಯಥಾಸಕ್ತಚಿತ್ತೇನ ಕ್ರಿಯಾಹೀನೇನ ವಾ ವಿಭೋ ॥೬೭॥

---

ವೆನು. ಈಗ ನನ್ನಿಂದ ಕೊಡಲ್ಪಡುವ ಅರ್ಘ್ಯದಿಂದ ಸಂತುಷ್ಟನಾಗಿ ನನ್ನನ್ನು ಸುಖಿಯನ್ನಾಗಿ ಮಾಡು. ||೬೧-೬೨||

ಮಹೇಶ್ವರನೆ, ನಾನು ಅನೇಕ ಪಾಪಕಾರ್ಯಗಳನ್ನು ಅರಿಯದೆ ಆಚರಿಸಿರುವೆನು. ಈ ಶಿವರಾತ್ರಿಯ ದಿನ ಕೊಡುವ ಅರ್ಘ್ಯದಿಂದ ನೀನು ಸಂತುಷ್ಟನಾಗಿ ನನ್ನನ್ನು ಕ್ಷಮಿಸಿ ಕಾಪಾಡು" ಎಂದು ಪ್ರತಿಯಾಮದಲ್ಲಿಯೂ ಪ್ರಾರ್ಥಿಸಿ, ಅರ್ಘ್ಯಪ್ರದಾನ ಮಾಡಿ, ದಂಡಪ್ರಣಾಮಮಾಡುತ್ತಾ ಭಗವಂತನನ್ನು ನಾನಾರೀತಿ ಸ್ತುತಿಸಬೇಕು. ||೬೪-೬೫||

ಅನಂತರ ಸ್ಥಿರಮನಸ್ಸಿನಿಂದ ದೇವರ ಮುಂದೆ ನಿಂತು ಈ ರೀತಿ ಕ್ಷಮಾಪಣೆಯನ್ನು ಯಾಚಿಸಬೇಕು. " ಮಹೇಶ್ವರನೇ, ನಾನು ಮಾಡಿದ ಈ ನಿನ್ನ ಆರಾಧನಾ ಕಾರ್ಯದಲ್ಲಿ ಪೂಜಾಂಗಗಳು, ಪೂಜಾಕ್ರಿಯೆಗಳು ಎಷ್ಟೋ ಲುಪ್ತವಾಗಿರಬಹುದು. ಅವೆಲ್ಲವನ್ನೂ ದಯಾಶಾಲಿಯಾದ ನೀನು ಕ್ಷಮಿಸಿ ಕಾಪಾಡಬೇಕು. ಕ್ರಿಮಿಕೀಟಗಳಿಂದಲೂ, ಕೇಶಗಳಿಂದಲೂ ಅಪವಿತ್ರವಾಗಿರುವ ಪ್ರಶಸ್ತವಲ್ಲದ ಹೂವುಗಳನ್ನೇ ನಿನಗೆ ನಾನು ಅರ್ಚನೆ ಮಾಡಿರಬಹುದು. ಪೂಜಾಕಾಲದಲ್ಲಿ ನನ್ನ ಮನಸ್ಸು

ನಿದ್ರಾತಂದ್ರಾಹೃತಾಂಗೇನ ಕ್ಷುತ್ತ್ಕ್ಷಾಮಫಲಭಕ್ಷಣೈಃ ।
ತಾಮಸೇನ ಚ ಭಾವೇನ ಹೀನಮಂತ್ರಾಕ್ಷರೇಣ ಚ ॥೧೮॥

ಪೂಜಿತೋಽಸಿ ಮಯಾ ದೇವ ತತ್ಸರ್ವಂ ಕ್ಷಮ್ಯತಾಂ ಮಮ ।
ವ್ರತಸಂಪೂರ್ಣತಾಂ ಯಾತು ಫಲಂ ಚಾಕ್ಷಯಮಸ್ತು ಮೇ ॥೧೯॥

ಏವಂ ಸ್ತುತ್ವಾ ನಮಸ್ಕೃತ್ಯ ಪೂಜಾಸ್ಥಾನಂ ವಿಸರ್ಜಯೇತ್ ।
ನೈವೇದ್ಯಾದಿ ಚ ತತ್ಸರ್ವಂ ಭಸ್ಮಾಂಗಾಯ ನಿವೇದಯೇತ್ ॥೨೦॥

ಪರೇದ್ಯುಃ ಕೃತಕರ್ಮಾರ್ಥ ಸಂಪೂಜ್ಯ ಶಿವಮವ್ಯಯಂ ।
ಬ್ರಾಹ್ಮಣಾನ್ ಭೋಜಯೇಚ್ಛಕ್ತ್ಯಾ ಗಂಧಪುಷ್ಪಾಕ್ಷತಾರ್ಪಣೈಃ॥೨೧॥

ಏವಮೀಶೇ ವ್ರತಂ ಕುರ್ಯಾನ್ನಿತ್ಯಕಂ ಪ್ರತಿವರ್ಷಕೇ ।
ಮಾಘಕೃಷ್ಣಚತುರ್ದಶ್ಯಾಂ ಸರ್ವಕಾಮಫಲಪ್ರದಂ ॥೨೨॥

---

ಮತ್ತೊಂದು ಕಡೆ ಪ್ರವೇಶಿಸಿರಬಹುದು. ಇಂತಹ ಕ್ರಿಯಾಹೀನಾದಿಗಳಿಂದ ನೀನು ಅತೃಪ್ತನಾಗದೆ ನನ್ನ ಅಪರಾಧವನ್ನು ಕ್ಷಮಿಸಿಬಿಡು. ॥೧೫-೧೬-೧೭॥

ಮಹೇಶನೆ, ಪೂಜಾಕಾಲದಲ್ಲಿ ನಿದ್ರೆ, ತೂಕಡಿಗೆ ಮುಂತಾದುವುಗಳಿಂದ ನಾನು ಅನ್ಯ ಮನಸ್ಕನಾಗಿರಬಹುದು. ಹಸಿವು, ಸೀನು ಮುಂತಾದುವುಗಳಿಂದಲೂ, ಫಲಭಕ್ಷಣಾದಿಗಳಿಂದಲೂ ಪೂಜೆಯಲ್ಲಿ ಅನಾದರವಿಟ್ಟಿರಬಹುದು. ಮಂತ್ರೋಚ್ಚಾರಣೆಯ ಕಾಲದಲ್ಲಿ ಅಕ್ಷರಲೋಪವಾಗಿರಬಹುದು. ಇಂತಹ ಸಕಲಾಪರಾಧಗಳನ್ನೂ ಕ್ಷಮಿಸಿ ನನ್ನ ಪೂಜೆಯನ್ನು ಸಾರ್ಥಕಗೊಳಿಸು. ನನ್ನಿಂದ ಆಚರಿತವಾದ ಈ ಶಿವರಾತ್ರಿ ವ್ರತವು ನಿನಗೆ ತೃಪ್ತಿಯನ್ನುಂಟುಮಾಡುವುದಾಗಲಿ, ಆದರಿಂದ ಅಕ್ಷಯಫಲವು ನನಗೆ ಲಭಿಸಲಿ" ಎಂಬುದಾಗಿ ಪ್ರಾರ್ಥಿಸಿಕೊಂಡು ನಮಸ್ಕಾರಮಾಡಿ ಅನಂತರ ವಿಸರ್ಜನೆಮಾಡಬೇಕು. ಶಿವನಿವೇದಿತವಾದ ವಸ್ತುಗಳನ್ನು ಭಸ್ಮಧಾರಿಯಾಗಿರುವ ಶಾಂಭವನಿಗೆ ದಾನಮಾಡಬೇಕು. ॥೧೮-೧೯-೨೦॥

ಮಾರನೆಯ ದಿನವೂ ನಿತ್ಯಸ್ವರೂಪನಾದ ಪರಶಿವನನ್ನು ಪೂಜಿಸಿ, ಬ್ರಾಹ್ಮಣರಿಗೆ ಯಥಾಶಕ್ತಿ ಭೋಜನಮಾಡಿಸಿ ದಕ್ಷಿಣಾದಿಗಳಿಂದ ತೃಪ್ತಿಪಡಿಸಬೇಕು. ಇದೇ ರೀತಿ ಪ್ರತಿವರ್ಷವೂ ಮಾಘ ಕೃಷ್ಣಚತುರ್ದಶಿಯ ದಿನ ಸರ್ವಕಾಮಫಲಪ್ರದವಾದ ಈ ಶಿವರಾತ್ರಿ ವ್ರತವನ್ನು ತಪ್ಪದೆ ಆಚರಿಸಬೇಕು. ॥೨೧-೨೨॥

ಚತುರ್ವಿಂಶದ್ವಾ ದಶಾಬ್ದೇ ಕುರ್ಯಾದುದ್ಯಾಪನಂ ಬುಧಃ ।
ಆಜನ್ಮೀ ತು ನ ತತ್ಕುರ್ಯಾತ್ಸೋಽಕ್ಷಯಾಂ ಲಭತೇ ಗತಿಂ ॥೭೩॥

ಮಾಘಕೃಷ್ಣ ಚತುರ್ದಶ್ಯಾಂ ಪೂಜ್ಯ ಲಿಂಗಂ ಪಿನಾಕಿನಃ ।
ಚತುರ್ದಶೀ ದರ್ಶಯುಕ್ತಾ ಅಷ್ಟಮೀ ನವಮೀಯುತಾ ॥೭೪॥

ಪಾರಣಂ ತತ್ರ ಕರ್ತವ್ಯಂ ರೌದ್ರರ್ಕ್ಷೇ ವಾ ಪುನರ್ವಸೌ ।
ಕಲಶಾ ದಶ ಚಾಷ್ಟೌ ವಾ ಸೋದಕಾನಭಿಪೂರ್ಯ ಚ ॥೭೫॥

ಗಂಧಪುಷ್ಪಾಕ್ಷತಫಲಂ ಋತ್ವಿಜೋಽನ್ಯಾನಿ ಮಂತ್ರಯೇತ್ ।
ಆಚಾರ್ಯಂ ವರಯೇದೇಕಂ ಬ್ರಾಹ್ಮಣಂ ವೇದಪಾರಗಂ ॥೭೬॥

ಗಣೇಶಂ ಸ್ಕಂದನಂದೀಶಂ ಕಾಲೀಂ ಭದ್ರಾಂ ಸರಸ್ವತೀಂ ।
ವೃಷಭಂ ತ್ವಾಮುಮಾಂ ದೇವಿ ಕಲಶೇಷ್ವಭಿತೋ ಯಜೇತ್ ॥೭೭॥

ಮೃತ್ಯುಂಜಯೇನ ಮಂತ್ರೇಣ ವಹ್ನೌ ಹುತ್ವಾ ಶತಾಷ್ಟಕಂ ।
ಚರುಣಾ ಸರ್ಪಿಷಾ ತೇನೇಶಿ ಬ್ರಾಹ್ಮಣಾನ್ ಭೋಜಯೇಚ್ಛತಂ ॥೭೮॥

ಹನ್ನೆರಡು ಅಥವಾ ಇಪ್ಪತ್ತುನಾಲ್ಕು ವರ್ಷ ಈರೀತಿ ವ್ರತವನ್ನು ಮಾಡಿದ ಮೇಲೆ ಉದ್ಯಾಪನೆ ಮಾಡಬೇಕು. ಮರಣಪರ್ಯಂತವಾಗಿ ಈ ವ್ರತವನ್ನು ಮಾಡುವುದಾದರೆ ಉದ್ಯಾಪನೆಯೇ ಬೇಕಿಲ್ಲ. ಉದ್ಯಾಪನೆ ಮಾಡುವುದರಿಂದ ಶಾಶ್ವತವಾದ ಮುಕ್ತಿಯು ಲಭಿಸುವುದು. ಅಮಾತಿಥಿವೇಧೆಯಿರುವ ಚತುರ್ದಶಿಯಲ್ಲಿಯೂ, ನವಮೀವೇಧೆಯುಳ್ಳ ಅಷ್ಟಮಿತಿಥಿಯಲ್ಲಿಯೂ, ಪುನರ್ವಸೂಯುತವಾದ ಆರ್ದ್ರಾ ನಕ್ಷತ್ರದಲ್ಲಿಯೂ ವ್ರತಾಂಗವಾದ ಪಾರಣೆಯನ್ನು ನೆರವೇರಿಸಬೇಕು. ॥೭೩-೭೪॥

ಮತ್ತು ಉದ್ಯಾಪನೆಯನ್ನೂ ಅದೇ ದಿನಗಳಲ್ಲಿ ಎಂಟು ಅಥವಾ ಹತ್ತು ಕಲಶಗಳಲ್ಲಿ ಗಂಧ, ಪುಷ್ಪ, ಅಕ್ಷತೆ, ಉದಕ, ಫಲ ಇವುಗಳನ್ನು ತುಂಬಿ ಅಷ್ಟಮೂರ್ತಿಗಳನ್ನು ಅವುಗಳಲ್ಲಿ ಆವಾಹನೆ ಮಾಡಿ, ಎಂಟುಜನ ಋತ್ವಿಕ್ಕುಗಳನ್ನು ಆಹ್ವಾನಿಸಬೇಕು. ಇದಕ್ಕಾಗಿ ವೇದವೇದಾಂಗಪಾರಂಗತನಾದ ಒಬ್ಬ ಬ್ರಾಹ್ಮಣನನ್ನು ಆಚಾರ್ಯನನ್ನಾಗಿ ಪ್ರಾರ್ಥಿಸಿಕೊಳ್ಳಬೇಕು. ॥೭೫-೭೬॥

ಅನಂತರ ಕಲಶಗಳಲ್ಲಿ ಸ್ಕಂದ, ನಂದೀಶ್ವರ, ಕಾಲಿ, ಭದ್ರ, ಸರಸ್ವತಿ, ವೃಷಭ, ಪಾರ್ವತಿ ಈ ದೇವತೆಗಳನ್ನು ಸುತ್ತಲೂ ಆವಾಹಿಸಿ ಪೂಜಿಸಬೇಕು. ಅನಂತರ

ಯಥಾಶಕ್ತ್ಯಾ ಧೇನುವಸ್ತ್ರಂ ಹಿರಣ್ಯಂ ವ್ರತದಕ್ಷಿಣಾಂ ।
ಆಚಾರ್ಯಾಯಾಥ ಋತ್ವಿಗ್ಭ್ಯೋ ದದ್ಯಾದುದ್ಯಾಪನಂ ಸ್ಮೃತಂ ॥೭೯॥

ಏತದ್ವೈ ಸಂಗ್ರಹೇಣೈವ ಕುರ್ಯಾದುದ್ಯಾಪನಂ ಶಿವೇ ।
ಶಿವರಾತ್ರಿವ್ರತಸ್ಯಾಸ್ಯ ಸರ್ವಕಾಮಪ್ರಪೂರಣಂ ॥೮೦॥

॥ ಈಶ್ವರ ಉವಾಚ ॥

ಭೂತಾಯಾಮಥ ಭೂತನಾಥಮಗಜೇ ಮಾಘ್ಯಾಂಮುಮುಕ್ಷೇ ನರಃ ।
ಪಾಪೌಘಾನ್ನ ಬಿಭೇತಿ ಶಂಕರಪದಧ್ಯಾನಾನುರಕ್ತಸ್ಸದಾ ।
ಮುಕ್ತಸ್ಸಂಸೃತಿಘೋರಪಾಶತ ಇಮಾಂ ಗಾಂ ಸರ್ವದಾನಾಧಿಕಾಂ ।
ದತ್ವಾ ಯತ್ಫಲಮಾಪ್ನುಯಾತ್ಸುನಿಶಿತಂ ತತ್ಪ್ರಾಪ್ಯ ಮಾಪ್ನೋತಿ ಚ ॥೮೧॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಮಹಾಶಿವರಾತ್ರಿಮಹಿಮಾ
ಕಲ್ಪೋದ್ಯಾಪನಾದಿ ಕಥನಂ ನಾಮ ದ್ವಾತ್ರಿಂಶೋಽಧ್ಯಾಯಃ

---

ಸ್ವಶಾಖೋಕ್ತವಾಗಿ ಅಗ್ನಿಯನ್ನು ಪ್ರತಿಷ್ಠೆಮಾಡಿಕೊಂಡು, ಮೃತ್ಯುಂಜಯಮಂತ್ರ ದಿಂದ ನೂರೆಂಟು ಹೋಮಗಳನ್ನು ಚರ್ವಾಜ್ಯಗಳಿಂದ ನಡೆಸಬೇಕು. ತದಂಗವಾಗಿ ನೂರುಜನ ಬ್ರಾಹ್ಮಣರಿಗೆ ಭೋಜನಸೌಕರ್ಯಗಳನ್ನು ಏರ್ಪಡಿಸಬೇಕು. ||೭೬-೭೮||

ತನ್ನ ಶಕ್ತಿಯನ್ನನುಸರಿಸಿ, ಗೋದಾನ, ವಸ್ತ್ರದಾನ, ಹಿರಣ್ಯದಾನ ಮುಂತಾದುವುಗಳನ್ನು ದಕ್ಷಿಣೆಯೊಡನೆ ನೆರವೇರಿಸಬೇಕು. ಆಚಾರ್ಯರು, ಋತ್ವಿಕ್ಕುಗಳು ಇವರಿಗೆ ಯಥೋಚಿತವಾದ ಸಂಭಾವನೆಯನ್ನು ಕೊಟ್ಟು ವ್ರತವನ್ನು ಪೂರ್ತಿಗೊಳಿಸಬೇಕು. ಇದೇ ಉದ್ಯಾಪನೆಯ ಕ್ರಮ. ಪಾರ್ವತಿಯೇ, ಈ ವಿಧಾನವನ್ನು ನಿನಗೆ ಸಂಕ್ಷೇಪವಾಗಿ ಹೇಳಿರುವೆನು. ಒಟ್ಟಿನಲ್ಲಿ ಈ ಶಿವರಾತ್ರಿ ವ್ರತಾಚರಣೆಯು ಸರ್ವಕಾಮಫಲಪ್ರದವಾದದ್ದು. ಇದನ್ನು ಭಕ್ತಿಯಿಂದ ನಡೆಸುವುದರಿಂದ ಭಕ್ತರ ಸಕಲ ಇಷ್ಟಾರ್ಥಗಳೂ ನೆರವೇರುವುವು. ಇದರಲ್ಲಿ ಸಂಶಯವಿಲ್ಲ. ||೭೯-೮೦||

ಎಲೌ ದೇವಿಯೇ, ಮಾಘಮಾಸದ ಕೃಷ್ಣಚತುರ್ದಶೀ ತಿಥಿಯಲ್ಲಾಗಲಿ, ಆರ್ದ್ರಾನಕ್ಷತ್ರದ ದಿನದಲ್ಲಾಗಲಿ, ಯಾರು ಭೂತಪತಿಯಾದ ನನ್ನನ್ನು ಭಕ್ತಿಯಿಂದ ಆರಾಧಿಸುವರೋ, ಅಥವಾ ಆ ದಿನಗಳಲ್ಲಿ ಯಾರು ನನ್ನ ಪಾದಧ್ಯಾನದಲ್ಲಿ ಆಸಕ್ತರಾಗುವರೋ, ಅಂತಹವರು ಪಾಪರಾಶಿಯಿಂದ ವಿಮುಕ್ತರಾಗುವರು. ಪಾಪಭಯವು

ಅವರಿಗೆ ಎಂದೂ ಇರುವುದಿಲ್ಲ. ಅಖಂಡವಾದ ಈ ಭೂಮಿಯನ್ನೇ ದಾನಮಾಡಿ ದವರಿಗೆ ಎಂತಹ ಸುಕೃತವು ದೊರಕುವುದೋ, ಅಷ್ಟು ಪುಣ್ಯರಾಶಿಯೂ ಈ ಶಿವರಾತ್ರಿ ವ್ರತಾಚರಣೆಯಿಂದ ಲಭಿಸುವುದು. ಇದರಿಂದ ಆ ನನ್ನ ಭಕ್ತರು ಐಹಿಕಸುಖಗ ಳನ್ನು ಪಡೆದು ಕೊನೆಗೆ ನನ್ನ ಸಾರೂಪ್ಯವನ್ನು ಪಡೆಯುವರು. ಎಂದು ಮಹಾ ದೇವನು ತನ್ನ ಪತ್ನಿಯಾದ ಪಾರ್ವತಿಗೆ ಬೋಧಿಸಿದನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ತಿಳಿಯಪಡಿಸಿದನು. ॥೨೧॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಮಹಾಶಿವರಾತ್ರೀ ವ್ರತಮಹಿಮೆಯನ್ನು ತಿಳಿಸುವ ಮೂವತ್ತೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ತ್ರಯಸ್ತ್ರಿಂಶೋಽಧ್ಯಾಯಃ

॥ ಶ್ರೀ ಶಿವ ಉವಾಚ ॥

ಮಾಸಿ ಮಾಸ್ಯಪಿ ದೇವೇಶಿ ಕುರ್ಯಾಚ್ಚೈವ ಚತುರ್ದಶೀಂ ।
ಸಾ ಮಾಸಶಿವರಾತ್ರೀತಿ ಕಥಿತಾ ಕೃಷ್ಣಪಕ್ಷಗಾ ॥೧॥

ಚೈತ್ರಾದಿ ಕೃಷ್ಣಪಕ್ಷೇಷು ತತ್ರನ್ಮಾಸಿ ಚತುರ್ದಶೀಂ ।
ಪ್ರಾಪ್ಯ ಸಂಪೂಜಯೇದ್ದೇವಂ ಲಿಂಗಮೂರ್ತಿಂ ಸದಾಶಿವಂ ॥೨॥

ರಾತ್ರೌ ಯಾಮಚತುಷ್ಟಯೇ ಪೂಜಯೇದ್ಬಿಲ್ವಪತ್ರಕೈಃ ।
ಏಕಭುಕ್ತೇನ ನಕ್ತೇನ ಸೋಪವಾಸೇನ ವಾ ಶಿವೇ ॥೩॥

---

## ಮೂವತ್ತಮೂರನೆಯ ಅಧ್ಯಾಯ

ಪರಶಿವನು ಪಾರ್ವತಿಯೊಡನೆ ಮಾಸಶಿವರಾತ್ರೀ ವಿಷಯವನ್ನು ಪ್ರಸ್ತಾಪಿಸುತ್ತಾ ಹೀಗೆಂದನು. "ದೇವಿಯೇ, ಪ್ರತಿಮಾಸದ ಕೃಷ್ಣಚತುರ್ದಶಿಯಲ್ಲಿಯೂ ಶಿವಲಿಂಗಸ್ವರೂಪಿಯಾದ ನನ್ನನ್ನುದ್ದೇಶಿಸಿ ಪೂಜಾದಿಗಳನ್ನು ನಡೆಸಬಹುದು. ಅದಕ್ಕೆ ಮಾಸಶಿವರಾತ್ರಿಯೆಂಬ ಹೆಸರಿರುವುದು. ಆ ದಿನಗಳು ಶಿವಲಿಂಗಪೂಜೆಗೆ ಅತ್ಯಂತ ಪ್ರಶಸ್ತವಾದವುಗಳು. ॥೧-೨॥

ಆ ದಿನಗಳಲ್ಲಿಯೂ ರಾತ್ರಿ ನಾಲ್ಕುಯಾಮಗಳಲ್ಲಿಯೂ ಶಿವಲಿಂಗವನ್ನು ಬಿಲ್ವಪತ್ರಾದಿಗಳಿಂದ ಪೂಜಿಸಬಹುದು. ಆದಿನ ನಕ್ತಭೋಜನದಿಂದಲಾಗಲಿ ಅಥವಾ ಉಪವಾಸದಿಂದಾಗಲಿ ಇದ್ದು ಈ ವ್ರತವನ್ನು ಮಾಡಬೇಕು. ಆ ಕೃಷ್ಣಚತುರ್ದಶಿಯು

ತತ್ರ ಕೃಷ್ಣಚತುರ್ದಶ್ಯಾಂ ಸಾಯಂ ಶೌಚಂ ನಿವರ್ತ್ಯ ಚ ।
ನದ್ಯಾಂ ವಾ ದೇವಖಾತೇ ವಾ ಸ್ನಾನಮಂತ್ರೈಃ ಕುಶೈರ್ಯುತಃ ॥೪॥

ಧೃತವಾಸಾಃ ಭಸ್ಮಯುತಸ್ತ್ರಿಪುಂಡ್ರಾಕ್ಷಧರೋ ಭವೇತ್ ।
ಸಂಶೋಧ್ಯ ಕಲಶಂ ಶುದ್ಧಂ ಸ್ವಯಮಂಬು ಪ್ರಸಾಧಯೇತ್ ॥೫॥

ವಸ್ತ್ರಪೂತಂ ತದಾ ದೇವಿ ಸುಪುಷ್ಪಾಣಿ ತದಾ ವ್ರತೀ ।
ಗೃಹೀತ್ವಾ ನಿಯಮೋಪೇತೋ ಗೃಹೇ ವಾಪಿ ಶಿವಾಲಯೇ ॥೬॥

ಸಂಶೋಧ್ಯ ಗೋಮಯಾಂಭೋಭಿಃ ಸ್ಥಂಡಿಲಂ ಶಿವಪೂಜನೇ ।
ವಿತಾನಪುಷ್ಪಜಾಲಾಢ್ಯಂ ಮಂಡಪಂ ಪರಿಕಲ್ಪಯೇತ್ ॥೭॥

ಪೀಠಂ ತತ್ರ ನಿಧಾಯೈವ ಪ್ರಾಙ್ಮುಖೋದಙ್ಮುಖೋಽಪಿ ವಾ ।
ಏಣಾಜಿನಕುಶೇ ಸ್ಥಿತ್ವಾ ಸಂಪಾದ್ಯಾರ್ಘ್ಯಾಚಮಂ ಶಿವೇ ॥೮॥

---

ಸಾಯಂಕಾಲ, ಕೆರೆ, ನದಿ ಅಥವಾ ಕೊಳಕ್ಕೆ ಹೋಗಿ ಅಲ್ಲಿ ಶೌಚ, ಸ್ನಾನಾದಿಗಳನ್ನು ವಿಧಿವತ್ತಾಗಿ ನೆರವೇರಿಸಿಕೊಳ್ಳಬೇಕು. ||೩-೪||

ದರ್ಭಪವಿತ್ರವನ್ನಿಟ್ಟು, ಶುಭ್ರವಸ್ತ್ರಧಾರಿಯಾಗಿ, ಭಸ್ಮತ್ರಿಪುಂಡ್ರಾದಿಗಳಿಂದ ಅಲಂಕೃತನಾಗಿ, ಶುದ್ಧವಾದ ವಸ್ತ್ರದಿಂದ ಶೋಧಿತವಾದ ಶುದ್ಧೋದಕವನ್ನು ಕಲಶದಲ್ಲಿ ತುಂಬಿಕೊಂಡು ದೇವಪೂಜಾರ್ಥವಾಗಿ ಮನೆಗೆ ತರಬೇಕು. ಹಾಗೆಯೇ ಶಿವಪೂಜೆಗಾಗಿ ಸುಗಂಧಮಯವಾದ ಪುಷ್ಪಗಳನ್ನು ಸಂಪಾದಿಸಿಕೊಂಡು ತನ್ನ ಮನೆಯಲ್ಲಾಗಲಿ, ಶಿವಾಲಯದಲ್ಲಾಗಲಿ ಪೂಜೆಗೆ ಸಿದ್ಧಮಾಡಿಕೊಳ್ಳಬೇಕು. ||೫-೬||

ಗೋಮಯಸಹಿತವಾದ ನೀರಿನಿಂದ ಭೂಮಿಯನ್ನು ಶುದ್ಧಿಗೊಳಿಸಿಕೊಂಡು, ಪೂಜೆಗಾಗಿ ಸ್ಥಂಡಿಲವನ್ನು ಏರ್ಪಡಿಸಿಕೊಳ್ಳಬೇಕು. ಅದರ ಮೇಲೆ ಮಂಟಪವನ್ನು ಪುಷ್ಪಮಾಲಾದಿಗಳಿಂದ ಅಲಂಕರಿಸಿಕೊಂಡು ಅದರಲ್ಲಿ ಪೂರ್ವಾಭಿಮುಖವಾಗಿಯೋ, ಅಥವಾ ಉತ್ತರಾಭಿಮುಖವಾಗಿಯೋ ಒಂದು ಪೀಠವನ್ನು ಕಲ್ಪಿಸಿಕೊಳ್ಳಬೇಕು. ಅದರ ಮುಂದೆ ತಾನೂ ಸಹ ಪೂರ್ವ ಅಥವಾ ಉತ್ತರಾಭಿಮುಖವಾಗಿ ಕೃಷ್ಣಾಜಿನ ಅಥವಾ ದರ್ಭಾಸನದ ಮೇಲೆ ಕುಳಿತು, ಅರ್ಘ್ಯಾಚಮನಾದಿಗಳಿಗೆ ಬೇಕಾದ ಸಾಮಾನುಗಳನ್ನು ಸಿದ್ಧಪಡಿಸಿಕೊಳ್ಳಬೇಕು. ||೭-೮||

ಪ್ರಕ್ಷಾಳ್ಯ ಧಾತುಪಾತ್ರಾಣಿ ನವಾನಿ ಕಲಶಂ ತಥಾ ।
ಶಂಖಂ ಚ ಧೂಪದೀಪೈಶ್ಚ ಸಪುಷ್ಪಾಂಬುನಿ ಸಾಧಯೇತ್ ॥೯॥

ಪಂಚಾಮೃತಂ ಪಂಚಗವ್ಯಂ ತಥಾ ಫಲರಸಂ ಶಿವೇ ।
ಗಂಧಪುಷ್ಪಾಕ್ಷತಾಸ್ತತ್ರ ಸಂಸ್ಥಾಪ್ಯಾಥ ನಿವೇದನಂ ॥೧೦॥

ತಾಂಬೂಲಂ ಚೈವ ವಾಸೋಥ ರತ್ನಾಲಂಕರಣಾನಿ ಚ ।
ಸಂಕಲ್ಪ್ಯ ನಿಯಮೋಪೇತೋ ಮಾಸಿಕೀಂ ಶಿವರಾತ್ರಿಕೀಂ ॥೧೧॥

ತತೋಥ ಪ್ರಥಮೇ ಯಾಮೇ ಸಂಪೂಜ್ಯೈವ ಮಹೇಶ್ವರಂ ।
ಪಂಚಾಕ್ಷರಶತಂ ಜಪ್ತ್ವಾ ಸಾಂಗನ್ಯಾಸಂ ಮಹೇಶ್ವರಿ ॥೧೨॥

ಕಲಶಂ ಪೂಜ್ಯ ಶಂಖಂ ಚ ಗಂಧಪುಷ್ಪಾಕ್ಷತಾದಿಭಿಃ ।
ಅಂಗೇಷು ಭಾವಯೇದ್ದೇವಾನ್ ತತಃ ಪ್ರಜನನೇತಿ ಚ ॥೧೩॥

ಲಿಂಗಸಂಸ್ಥಂ ಮಹಾದೇವಮೇವಂ ಧ್ಯಾಯೇತ್ತ್ವಯಾ ಸಹ ।
ಸಾಂಬಂ ತ್ರಿನೇತ್ರಂ ಚಂದ್ರಾಂಕಂ ನೀಲಕಂಠಂ ಪಿನಾಕಿನಂ ॥೧೪॥

---

ಅಭಿಷೇಕಾರ್ಚನಾದಿಗಳಿಗೆ ಹೊಸದಾಗಿರುವ ಲೋಹಮಯವಾದ ಪಾತ್ರೆಗಳನ್ನು ಸಿದ್ಧಗೊಳಿಸಿಕೊಳ್ಳಬೇಕು. ಹಾಗೆಯೇ, ಶಂಖ, ಧೂಪ, ದೀಪ, ಹೂವು, ಗಂಧ, ನೀರು, ಪಂಚಗವ್ಯ, ಪಂಚಾಮೃತ, ಫಲರಸ, ಅಕ್ಷತೆ, ನಿವೇದನಕ್ಕೆ ಬೇಕಾದ ವಸ್ತುಗಳು ಇವೆಲ್ಲವನ್ನೂ ಒದಗಿಸಿಕೊಳ್ಳಬೇಕು. ॥೯-೧೦॥

ಹಾಗೆಯೇ, ತಾಂಬೂಲ, ಮುಖವಾಸಸ್ಸು, ರತ್ನಾಲಂಕಾರಗಳು ಇವುಗಳನ್ನು ಒದಗಿಸಿಕೊಂಡು, ಮಾಸಶಿವರಾತ್ರೀ ವ್ರತವನ್ನು ಮಾಡುತ್ತೇನೆಂದು ಸಂಕಲ್ಪಮಾಡಿಕೊಳ್ಳಬೇಕು. ಅದೇ ರಾತ್ರಿ ಪ್ರಥಮಯಾಮದಲ್ಲಿ ಮಹೇಶ್ವರನನ್ನು ಪೂಜಿಸಿ, ನೂರು ಶಿವಪಂಚಾಕ್ಷರೀಮಂತ್ರಜಪಮಾಡಿ ಅಂಗನ್ಯಾಸಾದಿಗಳನ್ನು ನೆರವೇರಿಸಬೇಕು. ॥೧೧-೧೨॥

ಆ ಮೇಲೆ ಕಲಶಪೂಜೆ, ಶಂಖಪೂಜೆ ಇವುಗಳನ್ನು ನೆರವೇರಿಸಿ, ಶಿವಲಿಂಗದಲ್ಲಿ ಪಾರ್ವತೀಪತಿಯಾದ ನನ್ನ (ಶಿವನ) ಸ್ವರೂಪವನ್ನು ಮನಸಾ ಧ್ಯಾನಮಾಡಬೇಕು. ಪರಶಿವನು ಪಾರ್ವತಿಯೊಡಗೂಡಿ, ನೇತ್ರತ್ರಯಗಳಿಂದಲೂ, ಚಂದ್ರಕಲೆ

ವರದಾಭಯಹಸ್ತಂ ಚ ಮೃಗಟಂಕಧರಂ ಶಿವಂ ।
ನಾಗಯಜ್ಞೋಪವೀತಾಢ್ಯಂ ದಿವ್ಯಾಲಂಕಾರಭೂಷಿತಂ ॥೧೫॥

ಸೋಮಧಾಮಸಮಾನಾಸ್ಯಾಂ ನೀಲೇಂದೀವರಲೋಚನಾಂ ।
ಫುಲ್ಲಕಲ್ಹಾರಸಂಕಾಶಾಂ ಸರ್ವಾಭರಣಭೂಷಿತಾಂ ॥೧೬॥

ಮದಂಕಸಂಸ್ಥಾಂ ತ್ವಾಂ ಧ್ಯಾಯೇತ್ಸಾಧಕಃ ಪರಮೇಶ್ವರಂ ।
ತತ್ರ ನಾನ್ಯಮನಾ ದೇವಿ ಪಂಚಾಕ್ಷರಪುರಸ್ಸರಂ ॥೧೭॥

ಸಮಾವಾಹ್ಯ ತತೋ ಲಿಂಗೇ ವಾಮನಾಸಾಪುಟೇನ ಹಿ ।
ಪಾದ್ಯಾರ್ಘ್ಯಾಚಮನಾದೀನಿ ಮೂಲಮಂತ್ರೇಣ ದಾಪಯೇತ್ ॥೧೮॥

ಪಂಚಗವ್ಯೈರ್ವಿಶೋಧ್ಯೇಶಂ ತತಃ ಪಂಚಾಮೃತೈರಪಿ ।
ಪುನಃ ಫಲರಸೈರ್ದೇವಿ ಗಂಧಪುಷ್ಪಕುಶೋದಕಂ ॥೧೯॥

---

ಯಿಂದಲೂ, ನೀಲಕಂಠದಿಂದಲೂ, ಪಿನಾಕಾಯುಧದಿಂದಲೂ ಶೋಭಿಸುತ್ತಿರುವನು. ॥೧೩-೧೪॥

ವರದ ಮತ್ತು ಅಭಯ ಮುದ್ರೆಗಳನ್ನು ತನ್ನ ಕೈಗಳಿಂದ ತೋರ್ಪಡಿಸುತ್ತಿರುವನು. ಜಿಂಕೆ ಮತ್ತು ಟಂಕಾಯುಧಗಳನ್ನು ಕೈಯಲ್ಲಿ ಧರಿಸಿರುವನು. ಸರ್ಪವನ್ನೇ ಯಜ್ಞೋಪವೀತವನ್ನಾಗಿ ಮಾಡಿಕೊಂಡು ದಿವ್ಯಾಲಂಕಾರಭೂಷಿತನಾಗಿರುವನೆಂದು ನನ್ನ ಸ್ವರೂಪವನ್ನು ಮನಸ್ಸಿನಲ್ಲಿ ಧ್ಯಾನಿಸಬೇಕು. ಅದೇ ರೀತಿ ದೇವಿಯಾದ ನಿನ್ನ ಆಕಾರವನ್ನೂ, ವ್ರತಮಾಡುವವನು ಈ ರೀತಿ ಅನುಸಂಧಾನ ಮಾಡಬೇಕು. "ದೇವಿಯು ಚಂದ್ರನಂತೆ ಹೊಳೆಯುವ ಮುಖವುಳ್ಳವಳು. ನೀಲವಾದ ಕಮಲದಂತೆ ಲೋಚನವುಳ್ಳವಳು. ಅರಳಿದ ಕಲ್ಹಾರಪುಷ್ಪದಂತೆ ವಿರಾಜಿಸುವವಳು. ದಿವ್ಯಾಲಂಕಾರಭೂಷಿತಳು. ಇಂತಹ ದೇವಿಯು ಸರ್ವದಾ ಪರಶಿವನ ತೊಡೆಯಮೇಲೆ ಮಂಡಿಸಿರುವಳು." ಹೀಗೆಂದು ಸಾಧಕನು ದೇವಿಯನ್ನೂ ಧ್ಯಾನಿಸುತ್ತಾ ಅನನ್ಯಮನಸ್ಕನಾಗಿ ಕುಳಿತು ಶಿವಪಂಚಾಕ್ಷರೀಮಂತ್ರವನ್ನು ಜಪಿಸಬೇಕು. ॥೧೫-೧೬-೧೭॥

ಅನಂತರ ವಿಧಿವತ್ತಾಗಿ ಶಿವಲಿಂಗದಲ್ಲಿ ಪರಶಿವನನ್ನು ಆವಾಹನೆಮಾಡಿ, ಪಾದ್ಯ, ಅರ್ಘ್ಯ, ಆಚಮನ ಇವುಗಳನ್ನು ಮೂಲಮಂತ್ರದಿಂದ ಸಮರ್ಪಿಸಬೇಕು. ಹಾಗೆಯೇ ಪಂಚಗವ್ಯ, ಪಂಚಾಮೃತ, ಫಲೋದಕ, ಫಲರಸಗಳು, ಗಂಧಪುಷ್ಪ

ದದ್ಯಾದನುಕ್ರಮೇಣೈವ ರುದ್ರೇಣೈವಾಭಿಷೇಚಯೇತ್ ।
ತದಂತೇ ತರ್ಪಣಂ ಕುರ್ಯಾದ್ಭವಾದ್ಯೈರಷ್ಟನಾಮಭಿಃ ॥೨೦॥

ವಾಸಸಾ ಪರಿಮೃಜ್ಯೇಶಂ ಪೀಠೇ ಸಂಸ್ಥಾಪ್ಯ ಪೂಜಯೇತ್ ।
ಭಸ್ಮನಾ ಚಂದನೇನಾಪಿ ಅಕ್ಷತಾಭಿರ್ಮಹೇಶ್ವರಂ ॥೨೧॥

ಬಿಲ್ವಪತ್ರೈಶ್ಶಿವೇ ಪುಷ್ಪೈರ್ವಾಸೋಲಂಕಾರಭೂಷಣೈಃ ।
ನಿಧನೇತ್ಯಾದಿಭಿರ್ಮಂತ್ರೈರ್ಬಿಲ್ವೈಃ ಪುಷ್ಪೈಃ ಪ್ರಪೂಜಯೇತ್ ॥೨೨॥

ಶತಾಷ್ಟನಾಮಭಿರ್ವಾಪಿ ಪೂಜಯೇದಿಂದುಶೇಖರಂ ।
ಚತುರ್ದಶ್ಯಾಂ ತಥಾ ದೇವಿ ನಾಮಭಿಶ್ಚ ಚತುರ್ದಶ ॥೨೩॥

ಪೂಜಯೇದ್ಬಿಲ್ವಪತ್ರಾದ್ಯೈರ್ನಮೋಂತೈರೇವಮೀಶ್ವರಂ ।
ಚತುರ್ದಶ್ಯಾಂ ಮೃಗಕರಂ ಅಪಾಮಾರ್ಗೈಃ ಪ್ರಪೂಜಯೇತ್ ॥೨೪॥

ಅಜೈಕಪಾದಹಿರ್ಬುಧ್ನ್ಯೋ ಭವಶ್ಶರ್ವ ಉಮಾಪತಿಃ ।
ರುದ್ರಃ ಪಶುಪತಿಶ್ಶಂಭುರ್ಮಹೇಶಃ ಶಿವ ಈಶ್ವರಃ ॥೨೫॥

---

ಕುಶೋದಕಗಳು ಇವುಗಳಿಂದಲೂ, ರುದ್ರಮಂತ್ರೋಚ್ಚಾರಣೆಯಿಂದಲೂ ಅಭಿಷೇಕ ಮಾಡಬೇಕು. ಅದಾದಮೇಲೆ ಭವಾದಿ ಶಿವನಾಮಗಳನ್ನುಚ್ಚರಿಸುತ್ತಾ ತರ್ಪಣ ಮಾಡಬೇಕು. ॥೧೮-೧೯-೨೦॥

ಅನಂತರ ಶುದ್ಧವಸ್ತ್ರದಿಂದ ಶಿವಲಿಂಗವನ್ನು ಒರಸಿ ಪೀಠದಮೇಲಿಟ್ಟು ಭಸ್ಮದಿಂದಲೂ, ಚಂದನ, ಗಂಧ, ಅಕ್ಷತೆ ಇವುಗಳಿಂದಲೂ ಅಲಂಕರಿಸಬೇಕು. 'ನಿಧನಪತಯೇ ನಮಃ' ಇತ್ಯಾದಿ ವೇದವಾಕ್ಯಗಳಿಂದ ಬಿಲ್ವದಳ, ಮಂತ್ರಾಕ್ಷತೆ, ಪುಷ್ಪಗಳು ಇವುಗಳನ್ನು ಅರ್ಪಿಸುತ್ತಾ ಪೂಜೆಮಾಡಬೇಕು. ॥೨೧-೨೨॥

ಅಷ್ಟೋತ್ತರಶತನಾಮಗಳು, ಸಹಸ್ರನಾಮಗಳು, ಅಜಾದಿಚತುರ್ದಶನಾಮಗಳು ಇವೇ ಮೊದಲಾದುವುಗಳಿಂದ ಶಂಕರನನ್ನು ಪೂಜಿಸಬೇಕು. ನಮಶ್ಶಬ್ದಾಂತಗಳಾದ ಶಿವನಾಮಗಳಿಂದ ಚತುರ್ದಶೀತಿಥಿಯನ್ನು ಅಪಾಮಾರ್ಗಪತ್ರ (ಉತ್ತರಣೀ ಚಿಗುರು) ಗಳಿಂದ ಶಂಕರನನ್ನು ಪೂಜಿಸುವುದು ಅತ್ಯಂತಶ್ರೇಯಸ್ಕರ. ॥೨೩-೨೪॥

ಅಜೈಕಪಾತ್, ಅಹಿರ್ಬುಧ್ನ್ಯ, ಭವ, ಶರ್ವ, ಉಮಾಪತಿ, ರುದ್ರ, ಪಶುಪತಿ, ಶಂಭು, ಮಹೇಶ್ವರ, ಶಿವ, ಈಶ್ವರ, ಮಹಾದೇವ, ಹರ, ಭೀಮ ಎಂಬ ಈ

ಮಹಾದೇವೋ ಹರೋ ಭೀಮೋ ನಾಮಾನ್ಯೇವಂ ಚತುರ್ದಶ ।
ಏಭಿರ್ನಾಮಭಿರೀಶಾನಂ ಚತುರ್ದಶ್ಯಾಂ ಪ್ರಪೂಜಯೇತ್ ॥೨೬॥

ಸಾಪೂಪಾಜ್ಯಂ ಹವಿರ್ದೇವಿ ವಿನಿವೇದ್ಯ ಪ್ರಣವೇನ ಹಿ ।
ತಾಂಬೂಲಂ ದೀಪಧೂಪಂ ಚ ನೀರಾಜನಮಥಾಚರೇತ್ ॥೨೭॥

ಕರ್ಪೂರಖಂಡದೀಪಂ ಚ ಘೃತದೀಪಾ ನಿವೇದಯೇತ್ ।
ಸ್ತೋತ್ರೈಃ ಸ್ತುವೀತೈವಮೀಶೇ ಪ್ರದಕ್ಷಿಣನಮಸ್ಕೃತೀಃ ॥೨೮॥

ಛತ್ರಂ ಚ ಚಾಮರಂ ಚೈವ ಧ್ವಜಂ ವ್ಯಜನಮೇವ ಚ ।
ದದ್ಯಾಚ್ಛಿವಾಯ ದೇವೇಶಿ ವಾದ್ಯಾನಿ ವಿವಿಧಾನಿ ಚ ॥೨೯॥

ನರ್ತನಂ ಕರತಾಲಂ ಚ ಋಗ್ಯಜುಸ್ಸಾಮಾಥರ್ವಕೈಃ ।
ಪೌರಾಣೈರಿತಿಹಾಸೋತ್ಥೈಃ ಸ್ತೋತ್ರವರ್ಯೈಃ ಸ್ತುವೀತ ಚ ॥೩೦॥

ನಮಶ್ಶಿವಾಯಾಥ ನಮಶ್ಶಿವಾಯೈ
ನಮೋಽಸ್ತು ಗೌರ್ಯೈ ಶಶಿಶೇಖರಾಯ ।
ನಮೋಽಸ್ತು ದೇವ್ಯೈ ಚ ನಮೋಽಸ್ತು ಶಂಭವೇ
ನಮೋಽಸ್ತು ದೇವಾಯ ನಮೋಽಸ್ತು ದೇವ್ಯೈ ॥೩೧॥

---

ಹದಿನಾಲ್ಕುನಾಮಗಳಿಂದ ನಮಶ್ಶಬ್ದಾಂತವಾಗಿ ಅಪಾಮಾರ್ಗಪತ್ರವನ್ನು ಪ್ರತಿ ಚತುರ್ದಶಿಯಲ್ಲಿಯೂ ಶಂಕರನಿಗೆ ಅರ್ಪಿಸಬೇಕು ॥೨೫-೨೬॥

ಒಬ್ಬಟ್ಟು, ತುಪ್ಪ, ಹುಗ್ಗಿ ಮುಂತಾದ ವಸ್ತುಗಳನ್ನು ಪ್ರಣವಮಂತ್ರದಿಂದ ಸ್ವಾಮಿಗೆ ನಿವೇದಿಸಬೇಕು. ತಾಂಬೂಲ, ಧೂಪದೀಪಗಳು, ಮಂಗಳಾರತಿ, ಕರ್ಪೂರಾರತಿ, ಘೃತದೀಪಾರತಿ ಇವುಗಳನ್ನು ಸಮರ್ಪಿಸಿದ ಮೇಲೆ ಅನೇಕ ಸ್ತುತಿವಚನಗಳಿಂದ ದೇವರನ್ನು ಸ್ತುತಿಸಿ ಪ್ರದಕ್ಷಿಣನಮಸ್ಕಾರಗಳನ್ನು ನಡೆಸಬೇಕು ॥೨೭-೨೮॥

ಛತ್ರಿ, ಚಾಮರ, ಧ್ವಜ, ಬೀಸಣಿಗೆ, ಮುಂತಾದ ಉಪಚಾರಗಳನ್ನು ಸಮರ್ಪಿಸಿ ಶಿವನಿಗೆ ವಂದಿಸಿ, ನಾನಾವಿಧವಾದ ವಾದ್ಯಧ್ವನಿಪುರಸ್ಸರವಾಗಿ ನರ್ತನ, ತಾಳವಾದ್ಯ, ವೇದತ್ರಯಪಾರಾಯಣ ಇವುಗಳಿಂದ ದೇವರನ್ನು ತೃಪ್ತಿಪಡಿಸಬೇಕು. ಕೊನೆಯಲ್ಲಿ ಪುರಾಣೇತಿಹಾಸಗಳಲ್ಲಿ ಉಕ್ತವಾಗಿರುವ ಸ್ತುತಿಪಾಠಗಳಿಂದ ಶಂಕರಪಾರ್ವತಿಯರನ್ನು ಈ ರೀತಿ ಸ್ತುತಿಸಬೇಕು. ॥೨೯-೩೦॥

ನಮಶ್ಶಿವಾಯ ಪ್ರಣತಾರ್ತಿಹಾರಿಣೇ
ನಮೋ ಜಗಜ್ಜನ್ಮಗತಿಪ್ರದಾಯೈ ।
ನಮೋಽಸ್ತು ವೇದ್ಯಾಯ ಮಹೇಶ್ವರಾಯ
ನಮೋಽಸ್ತು ಗಂಧರ್ವಗಣಸ್ತುತಾಯೈ ॥೩೨॥

ನಮಶ್ಶಿವಾಯಾದಿವಿಹಾರಕಾರಿಣೇ
ನಮೋ ಜನಿತ್ರ್ಯೈ ಭವಮಂಗಳಾಯೈ ।
ನಮೋಽಸ್ತು ವಿಷ್ಣ್ವಾದಿವರಪ್ರದಾಯ
ನಮೋಽಸ್ತು ವಾಣೀಸ್ತುತಿಸಂಸ್ತುತಾಯೈ ॥೩೩॥

ನಮಶ್ಶಿವಾಯಾಂತಕಗರ್ವಹಾರಿಣೇ
ನಮೋಽಸ್ತು ಭಂಡಾಸುರಖಂಡನಾಯೈ ।
ನಮೋಽಸ್ತು ವೇದಾಂತವಚಃಸ್ತುತಾಯ
ನಮೋಽಸ್ತು ಲಕ್ಷ್ಮ್ಯಾದಿ ಸುಸಂಸ್ತುತಾಯೈ ॥೩೪॥

---

" ಮಂಗಳಕರನೂ, ಚಂದ್ರಶೇಖರನೂ, ದೇವದೇವನೂ ಸುಖಕರನೂ ಆದ ಶಂಕರನಿಗೆ ನಮಸ್ಕಾರ, ಮಂಗಳಪ್ರದಳೂ, ದೇವತೆಗಳನ್ನು ರಕ್ಷಿಸುವವಳೂ ಆದ ಜಗನ್ಮಾತೆಯಾದ ಗೌರೀದೇವಿಗೆ ವಂದನೆ. ॥೩೧॥

ಭಕ್ತರ ಪೀಡೆಗಳನ್ನು ನಾಶಗೊಳಿಸುವ, ವೇದಪ್ರತಿಪಾದಿತನೂ, ಮಹೇಶ್ವರನೂ ಆದ ಶಂಕರನಿಗೆ ನಮಸ್ಕಾರವು. ಪ್ರಪಂಚದ ಸೃಷ್ಟಿಗೂ, ರಕ್ಷಣೆಗೂ ಮೂಲಕಾರಣಳಾದ, ದೇವಗಂಧರ್ವದಿಂದ ಸ್ತುತ್ಯಳಾಗಿರುವ ಮಹಾದೇವಿಗೂ ಪ್ರಣಾಮಗಳು. ॥೩೨॥

ಜಗತ್ತಿನ ಮೂಲಕಾರಣನೂ, ವಿಷ್ಣ್ವಾದಿ ಸಕಲ ದೇವತೆಗಳಿಗೂ ವರವಿತ್ತವನೂ ಆದ ಮಹೇಶ್ವರನಿಗೆ ವಂದನೆ. ಹಾಗೆಯೇ ಪ್ರಪಂಚದ ಉತ್ಪತ್ತಿಗೆ ಮೂಲಕಾರಣಳೂ, ಸರಸ್ವತಿಯಿಂದ ಸ್ತುತ್ಯಳಾದವಳೂ, ಮಂಗಳಸ್ವರೂಪಳೂ ಆದ ದೇವಿಗೆ ಪ್ರಣಾಮಗಳು. ॥೩೩॥

ಯಮನ ಗರ್ವವನ್ನು ನಾಶಗೊಳಿಸಿದವನೂ ಉಪನಿಷದ್ವಾಕ್ಯಗಳಿಂದ ಸಂಸ್ತುತನೂ ಆದ ಮಹಾದೇವನೇ, ನಿನಗೆ ವಂದನೆಗಳು. ಅದೇ ರೀತಿ ಭಂಡಾಸುರ

ನಮಶ್ಶಿವಾಯ ಪ್ರಮಥಾಧಿಪಾಯ
ನಮೋಽಸ್ತು ರುದ್ರಾಣಿವರಪ್ರದಾಯ್ಯೈ ।
ನಮೋಽಸ್ತು ದೇವಾದಿಗಣಸ್ತುತಾಯ
ನಮೋಽಸ್ತು ಭದ್ರಪ್ರದಮಂಗಳಾಯ್ಯೈ ॥೩೫॥

ಏವಂ ಸ್ತುತ್ವಾ ಶಿವೌ ದೇವಿ ಚತುರ್ದಶ್ಯಾಂ ಸದಾಶಿವಂ ।
ಪ್ರಹರೇ ಪ್ರಹರೇ ಚಾಪಿ ಏವಮೇವ ಯಥಾವಿಧಿ ॥೩೬॥

ದದ್ಯಾದರ್ಘ್ಯಂ ಕ್ರಮೇಣೈವಂ ಪೂಜಾಂತೇ ಚ ಮಹೇಶ್ವರಿ ।
ಆಧಿವ್ಯಾಧಿಸಮಾಯುಕ್ತಂ ಋಣದೌರ್ಭಾಗ್ಯಪೀಡಿತಂ ॥೩೭॥

ದದಾಮ್ಯರ್ಘ್ಯಂ ಮಹೇಶಾಯ ಸುಪ್ರೀತಸ್ತೇನ ಮೇ ಭವೇತ್ ।
ಏವಮೇವಾರ್ಘ್ಯದಾನಂ ಚ ರಾತ್ರೌ ಯಾಮಚತುಷ್ಟಯೇ ॥೩೮॥

ಮಾಸಿ ಮಾಸಿ ಮಹೇಶಾನಿ ಕೃಷ್ಣಪಕ್ಷೇ ವಿಶೇಷತಃ ।
ಚೈತ್ರಾದಿಸರ್ವಮಾಸೇಷು ಮಾಸಿ ಮಾಸಿ ಸಿತಾಸು ಚ ॥೩೯॥

---

ನನ್ನು ನಾಶಗೊಳಿಸಿದವಳೂ, ಲಕ್ಷ್ಮ್ಯಾದಿ ದೇವಿಯರಿಂದ ಸಂಸ್ತುತಳೂ ಆದ ಮಹೇಶ್ವರಿಯೇ, ನಿನಗೆ ನಮಸ್ಕಾರ. ॥೩೪॥

ಪ್ರಮಥಗಣಗಳಿಗೆ ಅಧಿಪತಿಯೂ, ದೇವಾದಿಗಣವಂದಿತನೂ ಆದ ಮಹೇಶ್ವರನಿಗೂ, ರುದ್ರಾಣಿಯರೆಂಬ ರುದ್ರಗಣಸ್ತ್ರೀಯರಿಗೆ ವರಪ್ರದಾಯಕಿಯೂ ಸಂಪೂರ್ಣಮಂಗಳಪ್ರದಳೂ ಆದ ಗೌರೀದೇವಿಗೂ ಪ್ರಣಾಮಗಳು.'' ॥೩೫॥

ಈರೀತಿ ಪ್ರತಿಯಾಮಾಂತ್ಯದಲ್ಲಿಯೂ ಪಾರ್ವತೀಪರಶಿವರನ್ನು ಸ್ತುತಿಸುತ್ತಾ ಕೊನೆಯಲ್ಲಿ ಅರ್ಘ್ಯಪ್ರದಾನಮಾಡಬೇಕು. ಆ ಕಾಲದಲ್ಲಿ 'ಮಹೇಶ್ವರನೇ, ನಾನು ಈಗ ಕೊಡುತ್ತಲಿರುವ ಅರ್ಘ್ಯವು ಮನೋವ್ಯಥೆ, ದೇಹವ್ಯಥೆ ಇವುಗಳಿಂದಲೂ, ಋಣ ದಾರಿದ್ರ್ಯ ಇವುಗಳಿಂದಲೂ ಕೂಡಿ ನರಳುತ್ತಿರುವ ನಿನ್ನ ಭಕ್ತನಿಂದ ಬರತಕ್ಕದ್ದಾಗಿರುವುದು. ಇಂತಹ ಅರ್ಘ್ಯವನ್ನು ಸ್ವೀಕರಿಸಿ ನನ್ನಲ್ಲಿ ಅನುಗ್ರಹವಿಡು'' ಎಂದು ಪ್ರಾರ್ಥಿಸುತ್ತಾ ನಾಲ್ಕು ಯಾಮಾಂತ್ಯದಲ್ಲಿಯೂ ಪುಷ್ಪಸಹಿತವಾದ ಜಲವನ್ನು ಅರ್ಘ್ಯರೂಪವಾಗಿ ಕೊಡಬೇಕು. ॥೩೬-೩೭-೩೮॥

ಪಾರ್ವತಿಯೇ, ಹೀಗೆ ಈ ವ್ರತವನ್ನು ಪ್ರತಿಮಾಸದ ಕೃಷ್ಣಚತುರ್ದಶಿಯ ದಿನ ನೆರವೇರಿಸಬೇಕು. ಒಂದು ವೇಳೆ ಶುಕ್ಲ ಚತುರ್ದಶಿಯ ದಿನವಾದರೂ ಈ

ಏಕಂ ವಾ ಪ್ರಹರಂ ಪೂಜಾಂ ಯದಿ ಕುರ್ಯಾಚ್ಚ ನಕ್ತಭುಕ್ ।
ಏವಂ ನರೋ ವಾ ನಾರೀ ವಾ ವಿಧವೋಪವಸೇನ್ನಿಶಿ ॥೪೦॥

ಸುಕೃತೈರ್ಲಭ್ಯತೇ ಭೂತಾ ತಸ್ಯಾಮರ್ಚನಮೇವ ಮೇ ।
ಪುಣ್ಯಲಕ್ಷೈಶ್ಚ ಲಕ್ಷ್ಯೇತ ನ ವಿನಾಮತ್ಪ್ರಸಾದತಃ ॥೪೧॥

ಬ್ರಹ್ಮಾ ಸ್ವಯಂ ಚತುರ್ವಕ್ತ್ರಃ ಪಂಚವಕ್ತ್ರಃ ಸ್ವಯಂ ಹರಿಃ ।
ಸಿಕ್ಥೇ ಸಿಕ್ಥೇ ಫಲಂ ತಸ್ಯ ವಕ್ತುಂ ಶಕ್ತೋ ನ ಪಾರ್ವತಿ ॥೪೨॥

ಬ್ರಹ್ಮಾಂಡೋದರಮಧ್ಯಾನಿ ಯಾನಿ ತೀರ್ಥಾನಿ ಸಂತಿ ವೈ ।
ಸಂಸ್ಥಿತಾನಿ ಭವಂತೀಹ ಭೂತಾಯಾಂ ಪಾರಣೇ ಕೃತೇ ॥೪೩॥

ಪರೇದ್ಯುಃ ಪೂಜ್ಯ ಮಾಂ ದೇವಿ ಯಥಾಶಕ್ತ್ಯಾ ದ್ವಿಜಾರ್ಚನಂ ।
ಏವಂ ತ್ರ್ಯಬ್ದಂ ದ್ವಾದಶಾಬ್ದಂ ವ್ರತಂ ಕುರ್ಯಾದ್ವಿಧಾನತಃ ॥೪೪॥

---

ವ್ರತವನ್ನು ನಡೆಸಬಹುದು. ನಾಲ್ಕು ಯಾಮಗಳು ನಡೆಸಲು ಸಾಧ್ಯವಿಲ್ಲದಿದ್ದರೆ ಒಂದು ಯಾಮವಾದರೂ ಪೂಜೆಮಾಡಿ ನಕ್ತಭೋಜನವಮಾಡಬಹುದು. ಸ್ತ್ರೀಪುರುಷರೆಲ್ಲರೂ ಇದನ್ನು ಆಚರಿಸಬಹುದು. ವಿಧವೆಯಾದರೆ ರಾತ್ರಿ ಉಪವಾಸ ಮಾಡಬೇಕು. ||೩೯-೪೦||

ಕೃಷ್ಣಚತುರ್ದಶಿಯು ಶಿವಾರ್ಚನೆಗೆ ಯೋಗ್ಯವಾಗಿ ದೊರೆಯುವುದೇ ಒಂದು ವಿಶೇಷಪುಣ್ಯದಿಂದ. ಆದಿನದಲ್ಲಿಯೂ ನನ್ನನ್ನು ಪೂಜಿಸಿ ತೃಪ್ತಿಪಡಿಸುವ ಭಾಗ್ಯವು ಲಕ್ಷಸಂಖ್ಯೆಯ ಪುಣ್ಯವಿಶೇಷದಿಂದ ಮಾನವರಿಗೆ ಲಭಿಸುವುದು. ನಾಲ್ಕು ಮುಖದ ಬ್ರಹ್ಮನೂ, ಐದುಮುಖದ ವಿಷ್ಣುವೂ ಇದರ ಪುಣ್ಯಫಲವನ್ನು ವಿವರಿಸಿ ಹೇಳಲು ಸಮರ್ಥರಾಗುವುದಿಲ್ಲ. ||೪೧-೪೨||

ತ್ರಯೋದಶೀವಿದ್ಧವಾದ ಚತುರ್ದಶಿಯಲ್ಲಿ ಶಿವಾರ್ಚನೆಮಾಡಿ ಅದೇ ತಿಥಿಯಲ್ಲಿ ಪಾರಣೆಯನ್ನೂ ನೆರವೇರಿಸಿದರೆ, ಬ್ರಹ್ಮಾಂಡಾಂತರ್ಗತವಾದ ಸಮಸ್ತ ತೀರ್ಥಗಳನ್ನೂ ಪ್ರಾಶನಮಾಡಿದಂತಾಗುವುದು. ಮಾರನೆಯದಿನವೂ ಯಥಾಶಕ್ತಿ ಈಶ್ವರಾರ್ಚನೆಮಾಡಿ, ದ್ವಿಜಾರ್ಚನಪುರಸ್ಸರವಾಗಿ ವ್ರತವನ್ನು ಸಮಾಪ್ತಿಗೊಳಿಸಬೇಕು. ಈರೀತಿ ಮೂರುವರ್ಷ, ಅಥವಾ ಹನ್ನೆರಡುವರ್ಷ ವಿಧಿವತ್ತಾಗಿ ಈ ವ್ರತವನ್ನು ನಡೆಸಬೇಕು. ||೪೩-೪೪||

ಸಂವತ್ಸರಂ ವಾ ದೇವೇಶಿ ಆಜನ್ಮೇ ಮದ್ಗಣೋ ಭವೇತ್ ।
ಉದ್ಯಾಪನವಿಧಿಂ ವಕ್ಷ್ಯೇ ಭೂತಾಯಾಂ ಮಾಸಿ ಮಾಸಿಕೇ ॥೪೫॥

ವ್ರತಸ್ಯೋದ್ಯಾಪನಂ ದೇವ ಕಿಂ ಕರ್ತವ್ಯಂ ಚ ಮಾನವೈಃ ।
ಕೋ ವಿಧಿಃ ಕಾನಿ ದ್ರವ್ಯಾಣಿ ಕಥಂ ಕಾರ್ಯಂ ವದ ಪ್ರಭೋ ॥೪೬॥

॥ ಶ್ರೀ ಈಶ್ವರ ಉವಾಚ ॥

ಶೃಣು ಕಾಮ್ಯವಿಧಿಂ ಭದ್ರೇ ಲೋಕಾನಾಂ ಹಿತಕಾಮ್ಯಯಾ ।
ಚತುರ್ದಶಾಬ್ದಂ ಕರ್ತವ್ಯಂ ಮಾಸಭೂತಾವ್ರತಂ ಶಿವೇ ॥೪೭॥

ಏಕಭುಕ್ತಂ ತ್ರಯೋದಶ್ಯಾಂ ಚತುರ್ದಶ್ಯಾಮುಪೋಷಣಂ ।
ಸಂಪಾದ್ಯ ಸರ್ವಸಂಭಾರಾನ್ಮಂಡಪಂ ತತ್ರ ಕಾರಯೇತ್ ॥೪೮॥

---

ಕೊನೆಗೆ ಒಂದು ವರ್ಷವಾದರೂ ಮಾಡಬಹುದು. ಜನ್ಮಾವಧಿ ಮಾಡುವವನು ನನ್ನ ಗಣಗಳಲ್ಲಿ ಒಬ್ಬನಾಗಿಬಿಡುವನು. ಈಗ ವ್ರತಕ್ಕೆ ಉದ್ಯಾಪನೆ ಮಾಡುವ ಕ್ರಮವನ್ನು ಹೇಳುವೆನು ಕೇಳು, ಎಂದು ಪರಮೇಶ್ವರನು ನುಡಿಯಲು ಪ್ರೀತ್ಯಾತುರಗಳಿಂದ ದೇವಿಯು ಶಂಕರನನ್ನು ಕುರಿತು " ಮಹಾದೇವನೇ, ಈ ಮಾಸಶಿವರಾತ್ರೀವ್ರತದ ಉದ್ಯಾಪನೆಯನ್ನು ಮಾನವರು ಯಾವರೀತಿ ಮಾಡಬೇಕು? ಅದಕ್ಕೆ ಬೇಕಾದ ದ್ರವ್ಯಗಳಾವುವು? ಅದೆಲ್ಲವನ್ನೂ ನನಗೆ ಸ್ಪಷ್ಟವಾಗಿ ತಿಳಿಯುವಂತೆ ಹೇಳು " ಎಂದು ಪ್ರಾರ್ಥಿಸಿಕೊಂಡಳು. ||೪೫-೪೬||

ಆಗ ಈಶ್ವರನು ಹೀಗೆ ನುಡಿದನು " ದೇವಿಯೇ ಕೇಳು, ಈ ಕಾಮ್ಯರೂಪವಾದ ಉದ್ಯಾಪನಾವಿಧಿಯನ್ನು ಲೋಕಹಿತಕ್ಕಾಗಿ ನಿನಗೆ ತಿಳಿಯಹೇಳುವೆನು. ಈ ಮಾಸಶಿವರಾತ್ರೀ ವ್ರತವನ್ನು ಹದಿನಾಲ್ಕುವರ್ಷಪರ್ಯಂತ ಆಚರಿಸಿದ ಮೇಲೆ ಉದ್ಯಾಪನೆಮಾಡಬೇಕು. ಉದ್ಯಾಪನೆಯನ್ನೂ ಚತುರ್ದಶೀತಿಥಿಯಲ್ಲಿಯೇ ನಡೆಸಬೇಕು. ಹಿಂದಿನ ತ್ರಯೋದಶಿಯದಿನ ಒಂದು ಹೊತ್ತು ಊಟಮಾಡಬೇಕು. ಚತುರ್ದಶಿಯದಿನ ಪೂರ್ಣ ಉಪವಾಸಮಾಡಬೇಕು. ಉದ್ಯಾಪನೆಗೆ ಬೇಕಾದ ಸಕಲ ಸಾಮಗ್ರಿಗಳನ್ನೂ ಆ ದಿನವೇ ಸಂಪಾದಿಸಿಟ್ಟುಕೊಳ್ಳಬೇಕು. ||೪೭-೪೮||

ವಸ್ತ್ರೈಃ ಪುಷ್ಪೈಃ ಸಮಾಯುಕ್ತಂ ಫಲಪಲ್ಲವಶೋಭಿತಂ ।
ತನ್ಮಧ್ಯೇ ವಿಲಿಖೇತ್ಪದ್ಮಂ ಸರ್ವತೋಭದ್ರಮಂಡಪಂ ॥೪೯॥

ಧೂಪದೀಪಸಮಾಯುಕ್ತಂ ಕುಂಭಾಷ್ಟಕವಿರಾಜಿತಂ ।
ಆಚಾರ್ಯಂ ವರಯೇತ್ತತ್ರ ಋತ್ವಿಗ್ಭಿಸ್ಸಹಿತಂ ಶಿವೇ ॥೫೦॥

ಶಿವರೂಪಾಶ್ಚ ತೇ ವಿಪ್ರಾಃ ಪೂಜ್ಯಾಶ್ಚಂದನಪುಷ್ಪಕೈಃ ।
ಅನುಜ್ಞಾತಶ್ಚ ತೈರ್ವಿಪ್ರೈಃ ಶಿವಮಾವಾಹ್ಯ ಕುಂಭಕೈಃ ॥೫೧॥

ಅವ್ರಣಂ ಸಜಲಂ ಕುಂಭಂ ಮೃನ್ಮಯಂ ಹೇಮತಾಮ್ರಜಂ ।
ಕುಂಭೋಪರಿ ನ್ಯಸೇದ್ದೇವಮುಮಯಾ ಸಹಿತಂ ಶಿವಂ ॥೫೨॥

ಸೌವರ್ಣಂ ಚಾಪಿ ರೌಪ್ಯಂ ವಾ ತಾಮ್ರಂ ಮೃನ್ಮಯಮೇವ ವಾ ।
ರತ್ನಾಲಂಕಾರಕೈರ್ಯುಕ್ತಂ ವಸ್ತ್ರೈಃ ಪುಷ್ಪೈಃ ಪ್ರಪೂಜಯೇತ್ ॥೫೩॥

---

ಒಂದು ಮಂಟಪವನ್ನು ಸಿದ್ಧಗೊಳಿಸಿಕೊಂಡು ಅದನ್ನು ವಸ್ತ್ರ, ಪುಷ್ಪ, ಚಿಗುರು, ತೋರಣಗಳಿಂದ ಅಲಂಕರಿಸಿ, ಅದರ ಮಧ್ಯದಲ್ಲಿ ಸರ್ವತೋಭದ್ರ ಮಂಡಲವನ್ನು ರಚಿಸಿಕೊಳ್ಳಬೇಕು. ಅದರಲ್ಲಿ ಎಂಟು ಕಲಶಗಳನ್ನೂ, ಧೂಪ ದೀಪಾದಿ ಪೂಜಾಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಂಡು ಋತ್ವಿಕ್ಕುಗಳಿಗೂ ಆಚಾರ್ಯನಿಗೂ ವರಣಕೊಡಬೇಕು. ||೪೯-೫೦||

ಅವರನ್ನು ಸಾಕ್ಷಾಚ್ಛಿವರೂಪಿಗಳೆಂದೇ ಭಾವಿಸಬೇಕು. ಅವರಿಗೆ ಗಂಧ ಪುಷ್ಪಾಕ್ಷತಾದಿಗಳಿಂದ ತೃಪ್ತಿಯನ್ನುಂಟುಮಾಡಿ, ಅವರ ಅನುಜ್ಞೆಪಡೆದು, ಆ ಕಲಶಗಳಲ್ಲಿ ಶಿವನನ್ನು ಆವಾಹಿಸಬೇಕು. ಆ ಕಲಶಗಳು, ಒಡಕಿಲ್ಲದೆ, ನೀರಿನಿಂದ ತುಂಬಿರಬೇಕು. ಮಣ್ಣಿನದಾಗಲಿ, ಚಿನ್ನ ಅಥವಾ ತಾಮ್ರ ಇವುಗಳದ್ದಾಗಲಿ ಆಗಿರಬಹುದು. ಅಂತಹ ಕಲಶಗಳ ಮೇಲೆ ಪಾರ್ವತೀಸಹಿತನಾದ ಪರಶಿವಮೂರ್ತಿಯನ್ನು ಆವಾಹಿಸಿ ಪೂಜಿಸಬೇಕು. ||೫೧-೫೨||

ಆ ಉಮಾಮಹೇಶ್ವರಮೂರ್ತಿಯು ಕೂಡ ಸುವರ್ಣ, ಬೆಳ್ಳಿ, ತಾಮ್ರ, ಮಣ್ಣು ಇವುಗಳಲ್ಲಿ ಯಾವುದರಿಂದಲಾದರೂ ನಿರ್ಮಿತವಾಗಿರಬಹುದು. ಅದನ್ನು ರತ್ನಾಲಂಕಾರಗಳಿಂದಲೂ, ವಸ್ತ್ರಭೂಷಣಾದಿಗಳಿಂದಲೂ ಅಲಂಕರಿಸಬೇಕು. ಹೀಗೆ ಈಶ್ವರನನ್ನೂ ಆವಾಹಿಸಿ, ಅದರಲ್ಲಿ ಪಾರ್ವತೀಸಾನ್ನಿಧ್ಯವನ್ನೂ ಪ್ರಾರ್ಥಿಸಿ, ಸುತ್ತಲೂ

ಪ್ರತಿಷ್ಠಾಪ್ಯಾರ್ಚಯೇನ್ಮೂರ್ತಿಂ ಸೋಮಾಂ ದಿಕ್ಪಾಲಕಾನಪಿ ।
ಪರಿತೋಽಷ್ಟಸುಕುಂಭೇಷು ಪೂಜಯೇನ್ಮೂಲಮಂತ್ರತಃ ॥೩೪॥

ಪೂರ್ವೇದ್ಯುರ್ಗಂಧಪುಷ್ಪೈಶ್ಚ ಸೋಪವಾಸಂ ಪ್ರಪೂಜಯೇತ್ ।
ಧೂಪದೀಪೈಶ್ಚ ನೈವೇದ್ಯೈಃ ಫಲೈರ್ನಾನಾವಿಧೈರಪಿ ॥೩೫॥

ಪ್ರಾತಸ್ಸ್ನಾತ್ವಾ ಪರೇದ್ಯುರ್ವಾ ಪೂಜಯೇತ್ಕೃತನೈತ್ಯಕಃ ।
ಋತ್ವಿಗಾಚಾರ್ಯಸಹಿತೋ ಮೂರ್ತಿಂ ದಿಕ್ಪಾಲಸಂಯುತಾಂ ॥೩೬॥

ಪೂಜಯೇದ್ಗಂಧಪುಷ್ಪಾದ್ಯೈಃ ಧೂಪಂ ದೀಪಂ ನಿವೇದಯೇತ್ ।
ನೈವೇದ್ಯಂ ಭಕ್ಷ್ಯಭೋಜ್ಯಂ ಚ ಅಪೂಪಾಂಶ್ಚ ಚತುರ್ದಶ ॥೩೭॥

ಪ್ರತ್ಯೇಕಂ ಸಘೃತಾಕ್ತಂ ತು ಸಂಖ್ಯಯಾ ಚ ಚತುರ್ದಶ ।
ಸ್ವಶಾಖೋಕ್ತೇನ ಮಾರ್ಗೇಣ ಪ್ರತಿಷ್ಠಾಪ್ಯ ಹುತಾಶನಂ ॥೩೮॥

ಪರಿಸ್ತೀರ್ಯ ವಿಲಾಪ್ಯಾಜ್ಯಂ ಹವಿಸ್ಸಂಸ್ಕೃತ್ಯ ಹಾವಯೇತ್ ।
ಆಚಾರ್ಯಋತ್ವಿಕ್ಸಹಿತಃ ಸಪತ್ನೀಕಃ ಸ್ವಯಂ ಶುಚಿಃ ॥೩೯॥

---

ಇರುವ ಕಲಶಗಳಲ್ಲಿಯೂ ಇದೇರೀತಿ ಶಿವಮೂಲಮಂತ್ರದಿಂದ ಈಶ್ವರನನ್ನು ಆವಾಹಿಸಬೇಕು. ॥೩೩-೩೪॥

ಆ ದಿವಸ ಉಪವಾಸದಲ್ಲಿಯೇ ಗಂಧಪುಷ್ಪಧೂಪದೀಪನೈವೇದ್ಯಾದಿಗಳಿಂದ ಶಿವಪೂಜೆಮಾಡಬೇಕು. ಮಾರನೆಯ ದಿನ ಬೆಳಗ್ಗೆ ಎದ್ದು ಋತ್ವಿಗಾಚಾರ್ಯರೊಡನೆ ಸ್ನಾನಾದಿನಿತ್ಯಕರ್ಮಗಳನ್ನು ಮುಗಿಸಿಕೊಂಡು ದಿಕ್ಪಾಲಕಸಹಿತವಾದ ಆವಾಹಿತವಾದ ಸಕಲ ದೇವತೆಗಳನ್ನೂ ಪೂಜಿಸಬೇಕು. ॥೩೬॥

ಗಂಧಪುಷ್ಪಧೂಪದೀಪನೈವೇದ್ಯಾದಿಗಳಿಂದ ಪೂಜೆಯನ್ನು ಮುಗಿಸಬೇಕು. ಹದಿನಾಲ್ಕು ತುಪ್ಪದ ಭಕ್ಷ್ಯಗಳನ್ನಾಗಲಿ, ಒಬ್ಬಟ್ಟನ್ನಾಗಲಿ ನಿವೇದನಮಾಡಬೇಕು. ಪೂಜಾನಂತರ ಸ್ವಶಾಖೋಕ್ತಮಾರ್ಗದಿಂದ ಅಗ್ನಿಯನ್ನು ಪ್ರತಿಷ್ಠೆಮಾಡಿಕೊಳ್ಳಬೇಕು. ॥೩೭-೩೮॥

ಹಾಗೆಯೇ ಪರಿಸ್ತರಣಾದಿಗಳಿಂದಲೂ, ಆಜ್ಯ ಮತ್ತು ಹವಿಸ್ಸಂಸ್ಕಾರಗಳಿಂದಲೂ ಪ್ರಧಾನ ಹೋಮವನ್ನು ನಡೆಸಬೇಕು. ನಮಶ್ಶಬ್ದಾಂತಗಳಾದ ರುದ್ರಮಂತ್ರ

ರುದ್ರೇಣೈವ ನಮೋಂತೇನ ಜುಹುಯಾಜ್ಜಾತವೇದಸಿ ।
ತತಸ್ಸ್ವಿಷ್ಟಕೃತಂ ದತ್ವಾ ಹೋಮಶೇಷಂ ಸಮಾಪಯೇತ್ ॥೬೦॥

ಆಚಾರ್ಯಂ ಋತ್ವಿಜಶ್ಚೈವ ಪೂಜಯೇದ್ದಕ್ಷಿಣಾದಿಭಿಃ ।
ಗಾಂ ಸವತ್ಸಾಂ ಸವಸನಾಮಾಚಾರ್ಯಾಯ ನಿವೇದಯೇತ್ ॥೬೧॥

ತತಸ್ಸಕುಂಭಾಂ ತಾಂ ಮೂರ್ತಿಮಾಚಾರ್ಯಾಯ ನಿವೇದಯೇತ್ ।
ಪ್ರೀಯತಾಂ ಮೇ ಶಿವೌ ನಿತ್ಯಂ ಸ್ಯಾತಾಂ ಮುಕ್ತಿಪ್ರದೌ ಮಮ ॥೬೨॥

ದಿಕ್ಪಾಲಮೂರ್ತೀಃ ಕುಂಭಾಂಶ್ಚ ಋತ್ವಿಗ್ಭ್ಯೋದಾಪಯೇತ್ಕ್ರಮಾತ್।
ನತ್ವಾ ತಾನ್ ಬ್ರಾಹ್ಮಣಾನ್ ದೇವಿ ಗಂಧಪುಷ್ಪೈಃ ಪ್ರಪೂಜಯೇತ್ ॥೬೩॥

ವಿತ್ತಶಾಠ್ಯಮಕುರ್ವಾಣೋ ದಕ್ಷಿಣಾಭಿಃ ಪ್ರಪೂಜಯೇತ್ ।
ಪುನಸ್ಸಂಪೂಜ್ಯ ಮಾಂ ಲಿಂಗೇ ಪ್ರಾರ್ಥಯೇದ್ವ್ರತಸಿದ್ಧಯೇ ॥೬೪॥

ವ್ರತಮೇತತ್ಕೃತಂ ಯನ್ಮೇ ಪೂರ್ಣಂ ವಾಪೂರ್ಣಮೇವ ವಾ ।
ರೋಗಪೀಡಾರ್ತಿತೋ ದೇವಿ ದಿವಾ ಭುಕ್ತಂ ತು ಯನ್ಮಯಾ ॥೬೫॥

---

ಗಳಿಂದ ಅಗ್ನಿಯಲ್ಲಿ ಪ್ರಧಾನಹೋಮಮಾಡಬೇಕು. ಅನಂತರ ಸ್ವಿಷ್ಟಕೃದಾದಿ ಹೋಮಶೇಷದಿಂದ ಹೋಮಸಮಾಪ್ತಿಗೊಳಿಸಬೇಕು. ||೫೯-೬೦||

ಋತ್ವಿಗಾಚಾರ್ಯರನ್ನು ದಕ್ಷಿಣಾದಿಗಳಿಂದ ತೃಪ್ತಿಪಡಿಸಿ, ಕರುವಿನಿಂದ ಕೂಡಿದ ಗೋದಾನವನ್ನೂ ವಸ್ತ್ರದಾನವನ್ನೂ ಆಚಾರ್ಯನಿಗೆ ನಿವೇದಿಸಬೇಕು. ಪಾರ್ವತೀ ಪರಮೇಶ್ವರರು ಈ ಕಲಶ ವಸ್ತ್ರಪ್ರತಿಮಾದಾನದಿಂದ ತೃಪ್ತರಾಗಿ ನನಗೆ ಅನುಗ್ರಹ ವನ್ನುಂಟುಮಾಡಲಿ, ಎಂದು ಹೇಳುತ್ತಾ ಆಚಾರ್ಯನಿಗೆ ಪ್ರಧಾನಕಲಶವನ್ನೂ ಶಿವಮೂರ್ತಿಯೊಡನೆ ದಾನಮಾಡಬೇಕು. ||೬೧-೬೨||

ದಿಕ್ಪಾಲಕರನ್ನು ಆವಾಹನೆಮಾಡಿದ್ದ ಕಲಶಗಳನ್ನು ಋತ್ವಿಜರಿಗೆ ದಾನವಾಗಿ ಕೊಡಬೇಕು. ಅನಂತರ ದ್ರವ್ಯಲೋಭಮಾಡದೆ ಇತರ ಬ್ರಾಹ್ಮಣರನ್ನು ಗಂಧ ಪುಷ್ಪಾದಿಗಳಿಂದಲೂ, ದಕ್ಷಿಣತಾಂಬೂಲಗಳಿಂದಲೂ ತೃಪ್ತಿಪಡಿಸಿ ಮತ್ತೆ ಶಿವನಿಗೆ ಪುನಃ ಪೂಜೆಮಾಡಬೇಕು. ||೬೩-೬೪||

ಪಾರ್ವತಿಯೇ, ಈರೀತಿ ನನ್ನ ಪವಿತ್ರವಾದ ಮಾಸಶಿವರಾತ್ರೀವ್ರತವನ್ನು ಪೂರ್ಣ ವಾಗಿಯೋ, ಅಪೂರ್ಣವಾಗಿಯೋ ನೆರವೇರಿಸುತ್ತಾ ಪ್ರತಿ ಚತುರ್ದಶಿಯಲ್ಲಿಯೂ

ಮಾಸಿ ಮಾಸಿ ಚತುರ್ದಶ್ಯಾಂ ಕದಾಚಿತ್ಸಾಪಯೋಗತಃ ।
ಸರ್ವಂ ಸಂಪೂರ್ಣತಾಂ ಯಾತು ತ್ವತ್ಪ್ರಸಾದಾನ್ಮಹೇಶ್ವರಿ ॥೬೬॥

ಬ್ರಾಹ್ಮಣಾನ್ ಭೋಜಯೇತ್ತತ್ರ ಪರೇದ್ಯುಶ್ಚ ಚತುರ್ದಶ ।
ಸಪತ್ನೀಕಾನ್ ಭಕ್ಷ್ಯಭೋಜ್ಯೈರ್ಗಂಧಪುಷ್ಪಾಕ್ಷತಾದಿಭಿಃ ॥೬೭॥

ದಕ್ಷಿಣಾಭಿಃ ಪ್ರತೋಷ್ಯೈವ ಸ್ವಯಂ ಭುಂಜೀತ ಬಂಧುಭಿಃ ।
ಏವಂ ನರೋ ವಾ ನಾರೀ ವಾ ವಿಧವಾಪಿ ಚತುರ್ದಶೀ ॥೬೮॥

ಮಾಸಿಕೀ ಯಚ್ಚ ಲಭ್ಯೇತ ತದೇಕಾಗ್ರಮನಾಃ ಶೃಣು ।
ಅಪುತ್ರೋ ಲಭತೇ ಪುತ್ರಂ ಕುಮಾರೀ ಸತ್ಪತಿಂ ಲಭೇತ್ ॥೬೯॥

ನಿರ್ಧನೋ ಧನವಾನ್ ಭೂಯಾದಾಯುರ್ಹೀನಸ್ತಥಾಯುಷಂ ।
ಭಕ್ತೋ ಮುಕ್ತಿಮವಾಪ್ನೋತಿ ವಿಧವಾ ಪತಿಲೋಕಗಾ ॥೭೦॥

---

ಶಿವಾನುಗ್ರಹದಿಂದ ಇದು ಸಂಪೂರ್ಣ ಫಲಪ್ರದವಾಗಲಿ ಎಂದು ಪ್ರಾರ್ಥಿಸುತ್ತಾ ವ್ರತಸಮಾಪ್ತಿಯಿಂದ ದಿವಾಭೋಜನಮಾಡುವವನು ನಿಜವಾಗಿಯೂ ಸಮಸ್ತ ವ್ಯಾಧಿಗಳಿಂದ ನಿರ್ಮುಕ್ತನಾಗಿ ಶಿವಸಾಯುಜ್ಯವನ್ನು ಪಡೆಯುವನು. ॥೬೫-೬೬॥

ಈ ವ್ರತಪೂರ್ತ್ಯರ್ಥವಾಗಿ ಮಾರನೆಯ ದಿನ ಹದಿನಾಲ್ಕುಜನ ಬ್ರಾಹ್ಮಣರ ದಂಪತಿಗಳಿಗೆ ಸಮಾರಾಧನೆ ಮಾಡಿಸಿ, ಅವರನ್ನು ಭಕ್ಷ್ಯಭೋಜ್ಯಾದಿಗಳಿಂದಲೂ ದಕ್ಷಿಣೆ ತಾಂಬೂಲಾದಿಗಳಿಂದಲೂ ತೃಪ್ತಿಪಡಿಸಿ, ತಾನೂ ಬಂಧುಗಳೊಡನೆ ಸಂತೋಷ ದಿಂದ ಭುಂಜಿಸಬೇಕು. ಈ ವ್ರತವನ್ನು ಸ್ತ್ರೀಪುರುಷರಲ್ಲಿ ಯಾರಾದರೂ ಮಾಡ ಬಹುದು. ವಿಧವೆಗೂ ಈ ವ್ರತಾಚರಣೆಯಲ್ಲಿ ಅಧಿಕಾರವಿದೆ. ॥೬೭-೬೮॥

ಏಕಾಗ್ರಮನಸ್ಸಿನಿಂದ ಈ ಮಾಸಶಿವರಾತ್ರೀ ವ್ರತವನ್ನು ಆಚರಿಸಿದವರಿಗೆ ಶಿವಾನುಗ್ರಹದಿಂದ ಸಕಲ ಇಷ್ಟಾರ್ಥಗಳೂ ಸಿದ್ಧಿಸುವುವು: ಮಕ್ಕಳಿಲ್ಲದವರು ಸತ್ಪುತ್ರ ರನ್ನೂ, ಪತಿಯನ್ನು ಅಪೇಕ್ಷಿಸುವವಳು ಸತ್ಪತಿಯನ್ನೂ, ಧನಾಪೇಕ್ಷಿಯು ಐಶ್ವರ್ಯ ವನ್ನೂ, ಆಯುಷ್ಕಾಮಿಯು ದೀರ್ಘಾಯುಸ್ಸನ್ನೂ, ಭಕ್ತನು ಶಾಶ್ವತಮುಕ್ತಿಯನ್ನೂ, ಪತಿವಿಹೀನಳಾದವಳು ಪತಿಸಾಮೀಪ್ಯವನ್ನೂ ಪಡೆಯುವರು. ॥೬೯-೭೦॥

ಭಕ್ತ್ಯೋ ಮದ್ಗಣಪೋ ಭೂಯಾನ್ನಾಸಿ ಭೂತಾರ್ಚನೇನ ಮೇ ।
ಕಿಂ ಪುನರ್ಬಹುನೋಕ್ತೇನ ಸರ್ವಾನ್ಕಾಮಾನವಾಪ್ನುಯಾತ್ ॥೭೦॥

ಏವಂ ಮಾಸಚತುರ್ದಶೀಷು ನಿಯತಃ ಸಂಪೂಜಯನ್ಮಾಂ ಹರಂ
ಶರ್ವಾಣೀಸಹಿತಂ ಸ ಶರ್ಮ ಲಭತೇ ಸರ್ವೇಷು ಲೋಕೇಷ್ವಪಿ ।
ಪೂರ್ವೋದ್ಯಚ್ಛಶಿಸುಂದರಂ ನಗವರಂ ಕೈಲಾಸಮಾಪ್ಯಾದರಾತ್
ಪಶ್ಚಾನ್ಮೇ ಗಣಪುಂಗವೇಂದ್ರತಾಮುಪಗತೋ ಜ್ಞಾನಾದ್ವಿಲೀನೋ ಭವೇತ್
॥೭೨॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಮಾಸಶಿವರಾತ್ರೀ
ವ್ರತೋದ್ಯಾಪನವಿಧಿನಿರೂಪಣಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

ನಿಜವಾದ ಭಕ್ತಿಯಿಂದ ನನ್ನನ್ನು ಈ ಮಾಸಶಿವರಾತ್ರೀ ದಿನಗಳಲ್ಲಿ ಅರ್ಚನೆ ಮಾಡಿದ ಭಕ್ತರಿಗೆ, ನಾನು ನಿಜವಾಗಿಯೂ ನನ್ನ ಗಾಣಾಧಿಪತ್ಯವನ್ನೇ ಅನುಗ್ರಹಿಸಿ ಕೊಡುವೆನು. ಹೆಚ್ಚೇನು ! ಅವನ ಅಭೀಷ್ಟಗಳನ್ನೆಲ್ಲಾ ನಾನು ಸಲ್ಲಿಸುವೆನೆಂದೇ ತಿಳಿ. ಎಲೌ ದೇವಿಯೇ, ಈ ರೀತಿ ಮಾಸಚತುರ್ದಶೀ ತಿಥಿಗಳಲ್ಲಿ ಉಮಾಸಹಿತನಾದ ನನ್ನನ್ನು ವ್ರತರೂಪದಿಂದ ಪೂಜಿಸುವವನು ಐಹಿಕವಾದ ಸಕಲ ಸಂಪತ್ತನ್ನೂ ಪಡೆಯುವನಲ್ಲದೆ, ಲೋಕಪೂಜ್ಯನೆನಿಸಿಕೊಂಡು ಬಾಳಿ, ಆ ಜನ್ಮವನ್ನು ಕಳೆದು ಕೊಂಡನಂತರ ಚಂದ್ರಿಕೆಯಿಂದ ಶೋಭಿಸುವ ಚಂದ್ರನಿಂದ ಸುರಂಜಿತವಾಗಿರುವ ಕೈಲಾಸಗಿರಿಯನ್ನು ಪ್ರವೇಶಿಸಿ, ಅಲ್ಲಿ ನನ್ನ ಗಣಶ್ರೇಷ್ಠರಲ್ಲಿ ಉತ್ತಮಸ್ಥಾನವನ್ನು ಪಡೆದು, ಸುಜ್ಞಾನಿಯೆನಿಸಿಕೊಂಡು ಮುಕ್ತಿಸಾಮ್ರಾಜ್ಯಸುಖವನ್ನು ಅನುಭವಿಸುವ ನೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಎಂದು ಪರಶಿವನು ಪಾರ್ವತಿಗೆ ಮಾಸ ಶಿವರಾತ್ರೀ ವ್ರತಮಹಿಮಾದಿಗಳನ್ನು ವಿವರಿಸಿ ಹೇಳಿದನು. ॥೭೧-೭೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ
ಮಾಸಶಿವರಾತ್ರೀವ್ರತೋದ್ಯಾಪನೆಯ ವಿಧಿಯನ್ನು ತಿಳಿಸುವ
ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಚತುಸ್ತ್ರಿಂಶೋಽಧ್ಯಾಯಃ

|| ಶ್ರೀ ಈಶ್ವರ ಉವಾಚ ||

ಕೃಷ್ಣಾಷ್ಟಮ್ಯಾಂ ಮಹಾದೇವಿ ಪೂಜಯೇನ್ಮಾಂ ಯತವ್ರತಃ ।
ದೃಢವ್ರತೋ ಮಹಾದೇವಿ ಬೋಧಾಯನವಿಧಾನತಃ ||೧||

ಸ್ತ್ರಿಯೋ ಗೃಹಸ್ಥಾಃ ಪುರುಷಾ ವರ್ಣಿನೋಽಪಿ ಮಹೇಶ್ವರಿ ।
ಸರ್ವಕೃಷ್ಣಾಷ್ಟಮೀಷ್ವೇಶೇ ಉಪೋಷ್ಯಾಹಃ ಪ್ರದೋಷಕೇ ||೨||

ನದ್ಯಾಂ ತಟಾಕೇ ಸಂಸ್ನಾಯೊಧ್ಧೌತವಸ್ತ್ರಧರಶ್ಶುಚಿಃ ।
ಭಸ್ಮತ್ರಿಪುಂಡ್ರಸಹಿತೋ ರುದ್ರಾಕ್ಷಾಭರಣೈರ್ಯುತಃ ||೩||

---

### ಮೂವತ್ತನಾಲ್ಕನೆಯ ಅಧ್ಯಾಯ

ಪರಮೇಶ್ವರನು ಈಗ ಪಾರ್ವತಿಗೆ ಕೃಷ್ಣಾಷ್ಟಮೀ ತಿಥಿಯಲ್ಲಿ ನಡೆಸುವ ಶಿವವ್ರತವನ್ನು ಉಪದೇಶಿಸುವನು:—ದೇವಿಯೇ, ಕೇಳು. ಸ್ತ್ರೀಯರಾಗಲಿ, ಗೃಹಸ್ಥರಾದ ಪುರುಷರಾಗಲಿ, ಬ್ರಹ್ಮಚಾರಿಗಳಾಗಲಿ ಎಲ್ಲಾ ಮಾಸಗಳ ಕೃಷ್ಣಪಕ್ಷದ ಅಷ್ಟಮೀ ತಿಥಿಗಳಲ್ಲಿಯೂ ದೃಢಮನಸ್ಸಿನಿಂದ ಈ ವ್ರತವನ್ನು ಮಾಡಬಹುದು. ಆದರೆ ಆ ದಿನ ಹಗಲು ಉಪವಾಸವಿದ್ದು ಪ್ರದೋಷಕಾಲದಲ್ಲಿ ಈ ವ್ರತವನ್ನು ನಡೆಸಬೇಕು. ಬೋಧಾಯನಋಷಿಪ್ರೋಕ್ತವಾದ ಕ್ರಮದಿಂದ ಇದನ್ನು ನೆರವೇರಿಸುವುದು ಒಳ್ಳೆಯದು. ||೧ ೨||

ಆ ದಿನ ಪ್ರಾತಃಕಾಲ ನದಿಯಲ್ಲಿಯೋ ಕೆರೆಯಲ್ಲಿಯೋ ಸ್ನಾನಮಾಡಿ, ಶುಭ್ರವಸ್ತ್ರಧಾರಿಯಾಗಿ ಭಸ್ಮತ್ರಿಪುಂಡ್ರದಿಂದಲೂ, ರುದ್ರಾಕ್ಷಮಾಲಿಕೆಗಳಿಂದಲೂ

ಬಿಲ್ವಪುಷ್ಪಾಣಿ ಸಂಪಾದ್ಯ ಧೌತಕುಂಭೋಂಭಸಾಯುತಃ ।
ಕುಶಾಂಶ್ಚ ಸಾಗ್ರಾಂತ್ಸಂಪಾದ್ಯ ಕೃತನಿತ್ಯಕ್ರಿಯೋ ದ್ವಿಜಃ ॥೪॥

ಪೂಜಾಸ್ಥಾನಂ ಸಮಾಲಿಪ್ಯ ಗೋಮಯೇನ ನವಾಂಭಸಾ ।
ರಂಗವಲ್ಲೀಶೋಭಿತಂ ಚ ಪುಷ್ಪಮಂಡಪಕೈರ್ಯುತಂ ॥೫॥

ವಿತಾನಪಲ್ಲವೋಪೇತಂ ತೋರಣಾವಲಿಭೂಷಿತಂ ।
ತಸ್ಮಿಂತ್ಸಂಸ್ಥಾಪಿತೇ ಪೀಠೇ ಸಮಾವಾಹ್ಯ ವೃಷಧ್ವಜಂ ॥೬॥

ಸಾಂಬಂ ಸಗಣಮವ್ಯಗ್ರೋ ಉಗ್ರಾರ್ಚನಪರಾಯಣಃ ।
ಸಂಕಲ್ಪ್ಯ ದೇಶಕಾಲಾದಿ ಪಂಚಾಕ್ಷರಜಪಾದರಃ ॥೭॥

ಪಾದ್ಯಾರ್ಘ್ಯಾಚಮನಾದೀನಿ ಶಂಖಂ ಕುಂಭಂ ಚ ಸಾಂಬುಯುಕ್ ।
ಲಿಂಗಾಗ್ರೇ ಸ್ಥಾಪಯೇದ್ದೇವಿ ಸ ಕೂರ್ಚಂ ಗಂಧಪುಷ್ಪಯುಕ್ ॥೮॥

ಪಂಚಾಮೃತಂ ಪಂಚಗವ್ಯಂ ತಥಾ ಫಲರಸಾನಿ ಚ ।
ಮಧುಪರ್ಕಂ ಚ ಪಾತ್ರೇಷು ಸ್ಥಾಪಯೇದ್ಗಂಧಪುಷ್ಪಕಂ ॥೯॥

---

ಅಲಂಕೃತನಾಗಿ, ಶುಭ್ರವಾದ ಕಲಶದಲ್ಲಿ ಶುದ್ಧೋದಕವನ್ನೂ, ಬಿಲ್ವಪತ್ರೆಗಳನ್ನೂ, ಅಗ್ರಸಹಿತಗಳಾದ ದರ್ಭೆಗಳನ್ನೂ ಶೇಖರಿಸಿಟ್ಟುಕೊಳ್ಳಬೇಕು. ||೩-೪||

ಪೂಜಾಸ್ಥಾನವನ್ನು ಗೋಮಯಾದಿಗಳಿಂದ ಶುದ್ಧಿಗೊಳಿಸಿಕೊಂಡು, ರಂಗವಲ್ಲ್ಯಾದಿಗಳಿಂದ ಅಲಂಕರಿಸಿ, ಹೂವಿನ ಮಂಟಪವನ್ನು ಮೇಲ್ಕಟ್ಟು ತೋರಣಾದಿಗಳಿಂದ ಸಿಂಗರಿಸಿಕೊಂಡು, ಅದರಲ್ಲಿ ಪರಶಿವನ ಆವಾಹನೆಗೆ ಮುಖ್ಯವಾದ ಒಂದು ಪೀಠವನ್ನು ಕಲ್ಪಿಸಿಕೊಳ್ಳಬೇಕು. ||೫-೬||

ಅಲ್ಲಿಯೇ ಕುಳಿತು, ಪ್ರಾಣಾಯಾಮ ಪುರಸ್ಸರವಾಗಿ ದೇಶಕಾಲಾದಿಗಳನ್ನು ಕೀರ್ತಿಸಿ, ಗಣಸಹಿತನಾದ ಸಾಂಬನನ್ನು ಪೂಜಿಸುತ್ತೇನೆಂದು ಸಂಕಲ್ಪಮಾಡಿ, ಶಿವಪಂಚಾಕ್ಷರೀಮಂತ್ರವನ್ನು ಯಥಾಶಕ್ತಿ ಸಂಖ್ಯೆಯಲ್ಲಿ ಜಪಿಸಬೇಕು. ಒಂದು ಕಲಶವನ್ನು ಜಲಸಹಿತವಾಗಿ ಶಿವಲಿಂಗದಮುಂದೆ ಇಟ್ಟು, ದರ್ಭಕೂರ್ಚ, ಗಂಧ, ಪುಷ್ಪ, ಇವುಗಳಿಂದ ಅದನ್ನು ವಿಧಿವತ್ತಾಗಿ ಅರ್ಚಿಸಬೇಕು. ಪಾದ್ಯ, ಅರ್ಘ್ಯ, ಆಚಮನಾದಿಗಳಿಂದ ಪೂಜೆಯನ್ನು ಆರಂಭಿಸಬೇಕು. ||೭-೮||

ಪಂಚಾಮೃತ, ಪಂಚಗವ್ಯ, ಫಲರಸ, ಮಧುಪರ್ಕದ್ರವ್ಯ ಇವೇ ಮೊದಲಾ

ತಾಂಬೂಲಂ ಚ ಹವಿರ್ದೇವಿ ಸಂಪಾದ್ಯಾಖಂಡಿತಾಕ್ಷತಾನ್ ।
ಘೃತದೀಪಾನ್ ತತೋ ದಿಕ್ಷು ಪೈಷ್ಟಾನ್ ಕುರ್ಯಾತ್ಸವರ್ತಿಕಾನ್ ॥೧೦॥

ಆತ್ವಾವಹೇತಿ ಮಂತ್ರೇಣ ಶಿವಮಾವಾಹಯೇತ್ಸುಧೀಃ ।
ಸಾಂಬಂ ಚ ಸಗಣಂ ದೇವಂ ಲಿಂಗೇಭ್ಯರ್ಚೇತ್ಪಿನಾಕಿನಂ ॥೧೧॥

ಪಾದ್ಯಾರ್ಘ್ಯಾಚಮನಾದೀನಿ ದದ್ಯಾದ್ದೇವಿ ಪೃಥಕ್ಪೃಥಕ್ ।
ಮೂಲಮಂತ್ರೇಣ ವಿಧಿವನ್ಮಧುಪರ್ಕಂ ತತಶ್ಶಿವೇ ॥೧೨॥

ಪಂಚಾಮೃತಂ ಪಂಚಗವ್ಯಂ ತಥಾ ಫಲರಸೈಶ್ಶಿವೇ ।
ಗಂಧಪುಷ್ಪಕುಶಾಗ್ರಾಂಬು ಲಿಂಗೇ ದದ್ಯಾತ್ ಷಡಕ್ಷರೈಃ ॥೧೩॥

ಶತರುದ್ರೇಣ ವಿಧಿವದ್ಗೋಶೃಂಗೇಣಾಭಿಷೇಚಯೇತ್ ।
ಇಮಾ ಆಪ ಇತೀತ್ಯೇವಮಾಪೋ ದದ್ಯಾಚ್ಛಿವಾಯ ತು ॥೧೪॥

ದುವುಗಳಿಂದ ಅಭಿಷೇಕದ್ರವ್ಯಗಳನ್ನು ಸಿದ್ಧಪಡಿಸಿಕೊಳ್ಳಬೇಕು. ಹಾಗೆಯೇ ಗಂಧ, ಹೂವು, ತಾಂಬೂಲ, ಹುಗ್ಗಿ, ನುಚ್ಚಾಗದಿರುವ ಮಂತ್ರಾಕ್ಷತೆ, ಹಿಟ್ಟಿನಲ್ಲಿಮಾಡಿ ತುಪ್ಪದಬತ್ತಿಗಳನ್ನು ಹೊಂದಿರುವ ದೀಪಗಳ ಸಾಲುಗಳು, ಇವುಗಳನ್ನೆಲ್ಲಾ ಹತ್ತಿರ ಇಟ್ಟಿರಬೇಕು. ||೯-೧೦||

"ಆತ್ವಾವಹೇ" ಎಂಬ ಯಾಜುಷಮಂತ್ರದಿಂದ ಆ ಕಲಶದಲ್ಲಿ ಅಂಬಾ ಸಹಿತನಾಗಿಯೂ ಪರಿವಾರಪರಿವೃತನಾಗಿಯೂ ಇರುವ ಪಿನಾಕಿಯನ್ನು ಆವಾಹಿಸಬೇಕು. ಶಿವಮೂಲಮಂತ್ರಗಳಿಂದ ಪಾದ್ಯ, ಅರ್ಘ್ಯ, ಆಚಮನ ಮುಂತಾದುವುಗಳನ್ನೂ, ವಿಧಿವತ್ತಾಗಿ ಮಧುಪರ್ಕವನ್ನೂ ಸ್ವಾಮಿಗೆ ಅರ್ಪಿಸಬೇಕು. ||೧೧-೧೨||

ಪಂಚಾಮೃತ, ಪಂಚಗವ್ಯ, ಫಲರಸ, ಗಂಧ, ಪುಷ್ಪ, ಕುಶ, ಇವುಗಳಿಂದ ಮಿಶ್ರಿತವಾದ ಅಗ್ರೋದಕವನ್ನು ಷಡಕ್ಷರೀಮಂತ್ರಪುರಸ್ಸರವಾಗಿ ರುದ್ರಮಂತ್ರಗಳಿಂದ ಅಭಿಷೇಕಮಾಡಬೇಕು. ಗೋಶೃಂಗದಿಂದ ಅಭಿಷೇಕವನ್ನು ನಡೆಸಬೇಕು. 'ಇಮಾ ಆಪಶ್ಶಿವತಮಾ' ಎಂಬ ಮಂತ್ರಗಳಿಂದ ಶುದ್ಧೋದಕವನ್ನು ಶಿವಲಿಂಗಕ್ಕೆ ಅಭಿಷೇಕಮಾಡಬೇಕು. ||೧೩-೧೪||

ಆಪೋಹಿಷ್ಠೇತಿ ಮನುಭಿರಭಿಷಿಂಚೇತ್ತತಃ ಪರಂ ।
ಬ್ರಹ್ಮಜಜ್ಞೈಃ ಪಾವಮಾನ್ಯೈಃ ಕದ್ರುದ್ರಾಯೇತಿ ಮಂತ್ರತಃ ॥೧೫॥

ಸರ್ವೋಹ್ಯೇಷ ಮಹಾರುದ್ರಃ ಪುರುಷೋ ರುದ್ರ ಇತ್ಯಪಿ ।
ವಿಶ್ವಂಭೂತಮಿತೀಶಾನಿ ವಾಮದೇವಾದಿನಾಮಭಿಃ ॥೧೬॥

ಯಜುಃ ಪವಿತ್ರಮಾಪೋಸ್ಮಾದ್ಯೋ ರುದ್ರೋಗ್ನಾವಿತಿ ಮಂತ್ರತಃ ।
ಅಭಿಷಿಚ್ಯ ಮಹಾದೇವಂ ಶಿವಲಿಂಗಸ್ವರೂಪಿಣಂ ॥೧೭॥

ದೇವಸ್ಯತ್ವೇತಿ ಮಂತ್ರೇಣ ಸ ಕೂರ್ಚೇಣಾಭಿಷೇಚಯೇತ್ ।
ಭವಾಯೇತ್ಯಷ್ಟಭಿರ್ವಿದ್ವಾನ್ ತರ್ಪಯೇನ್ನಾಮಭಿಃ ಪೃಥಕ್ ॥೧೮॥

ಸಂಶೋಧ್ಯ ವಾಸಸಾ ಲಿಂಗಂ ಪೀಠೇ ಸಂಸ್ಥಾಪ್ಯ ಪೂಜಯೇತ್ ।
ಸಿತಭಸ್ಮಗಂಧವಸ್ತ್ರಂ ಸಾಕ್ಷತಂ ಚೋಪವೀತಕಂ ॥೧೯॥

ಸುವರ್ಣರತ್ನಾಕಲ್ಪೈಶ್ಚ ಬಿಲ್ವೈಃ ಪುಷ್ಪೈಃ ಪ್ರಪೂಜಯೇತ್ ।
ಕಮಲೋತ್ಪಲಕಲ್ಹಾರಮಂದಾರಕರವೀರಕೈಃ ॥೨೦॥

---

ಆಪೋಹಿಷ್ಠಾ, ಬ್ರಹ್ಮಜಜ್ಞಾನಂ, ಪವಮಾನಸೂಕ್ತ, ಕದ್ರುದ್ರಾಯ ಪ್ರಚೇತಸೇ, ಸರ್ವೋಹ್ಯೇಷರುದ್ರಸ್ತಸ್ಮೈ, ಮಹಾರುದ್ರ, ಪುರುಷಸೂಕ್ತ, ವಿಶ್ವಂ ಭೂತಂ ಭುವನಂ, ವಾಮದೇವಾಯ ನಮಃ, ಇತ್ಯಾದಿ ಮಂತ್ರೋಚ್ಚಾರಣ ಪುರಸ್ಸರ ವಾಗಿ ಅಭಿಷೇಕಮಾಡಬೇಕು. ॥೧೫-೧೬॥

ಪವಿತ್ರಂತೇ, ಆಪೋ ಅಸ್ಮಾನ್ಮಾತರಃ, ಯೋ ರುದ್ರೋ ಅಗ್ನೌ ಯೋ, ಎಂಬ ಮಂತ್ರಗಳಿಂದ ಶಿವಲಿಂಗಸ್ವರೂಪಿಯಾದ ಮಹಾದೇವನಿಗೆ ಅಭಿಷೇಕಮಾಡ ಬೇಕು. ದೇವಸ್ಯತ್ವೇತಿ ಮಂತ್ರದಿಂದ ಕೂರ್ಚಸಹಿತವಾಗಿ ಶಿವಲಿಂಗಾಭಿಷೇಕ ಮಾಡಬೇಕು. ಅನಂತರ ಭವಾಯ ದೇವಾಯ ನಮಃ ಇತ್ಯಾದಿಯಾದ ಎಂಟು ಶಿವ ನಾಮಗಳನ್ನು ಜಪಿಸುತ್ತಾ ತರ್ಪಣಮಾಡಬೇಕು. ॥೧೭-೧೮॥

ಅನಂತರ ಶಿವಲಿಂಗವನ್ನು ಶುದ್ಧವಸ್ತ್ರದಿಂದ ಒರಸಿ, ಪೀಠದಲ್ಲಿಟ್ಟು ಪೂಜೆಗೆ ಆರಂಭಿಸಬೇಕು. ಶುಭ್ರವಾದ ಭಸ್ಮ, ಗಂಧ, ವಸ್ತ್ರ, ಅಕ್ಷತೆ, ಯಜ್ಞೋಪವೀತ, ಸುವರ್ಣಾಭರಣ, ಬಿಲ್ವಪತ್ರೆ, ಪುಷ್ಪಾದಿಗಳನ್ನೂ ಆದರಲ್ಲಿಯೂ ಕಮಲ, ನೈದಿಲೆ,

ಕರ್ಣಿಕಾರಾರ್ಕದಮನೈಃ ಕನಕೈರ್ದ್ರೋಣಸಂಭವೈಃ ।
ಶತಾಷ್ಟನಾಮಭಿರ್ದೇವಿ ನಿಧನೇತ್ಯಾದಿಮಂತ್ರತಃ ॥೨೦॥

ಧೂಪಂ ಚ ಗುಗ್ಗುಲೋಪೇತಂ ಘೃತದೀಪಾನ್ಮನೋಹರಾನ್ ।
ಗಣಾಂಶ್ಚ ಪರಿತಃ ಪೂಜ್ಯ ಗಂಧಪುಷ್ಪಾಕ್ಷತಾದಿಭಿಃ ॥೨೨॥

ಮಹಾಕಾಲಾಯ ಪೂರ್ವೇ ತು ಶಂಕುಕರ್ಣಾಯ ದಕ್ಷಿಣೇ ।
ನಂದಿಕೇಶಾಯ ಪಶ್ಚಾತ್ತು ವಕ್ರತುಂಡಾಯ ಚೋತ್ತರೇ ॥೨೩॥

ಈಶಾನೇ ಚಂಡಿಕೇಶಾನಂ ಧರ್ಮಂ ಚೈವ ಶಿವಾಗ್ರತಃ ।
ಉತ್ತರೇ ಚ ಮಹಾದೇವೀಂ ಪೂಜಯೇದುಪಚಾರಕೈಃ ॥೨೪॥

ತತ್ತನ್ನಾಮಭಿರೇವೇಶಿ ಶಿವಸ್ಯ ಪರಿತೋ ಯಜೇತ್ ।
ಉದ್ದೀಪ್ಯಸ್ವೇತಿ ಮಂತ್ರೇಣ ಚಾಷ್ಟಪೈಷ್ಟಿಕದೀಪತಃ ॥೨೫॥

---

ಕಲ್ಹಾರ, ಮಂದಾರ, ಕಣಿಗಲು ಮುಂತಾದ ಪುಷ್ಪಗಳಿಂದ ಅರ್ಚಿಸಬೇಕು. ||೧೯-೨೦||

ಕರ್ಣಿಕಾರ (ಗಿಡಕರ್ಣಿಕೆ) ಎಕ್ಕ, ದವನ, ಸಂಪಿಗೆ, ತುಂಬೆ ಮುಂತಾದ ಹೂವುಗಳಿಂದ ಅಷ್ಟೋತ್ತರಶತನಾಮಾರ್ಚನೆಮಾಡಬೇಕು. "ನಿಧನ ಪತಯೇ ನಮಃ" ಇತ್ಯಾದಿ ನಾಮಮಂತ್ರಗಳಿಂದ ಧೂಪ, ದೀಪ, ನೈವೇದ್ಯ ಇವುಗಳನ್ನು ಅರ್ಪಿಸಬೇಕು. ಹಾಗೆಯೇ ಶಂಕರನ ಸುತ್ತಲೂ ಗಣದೇವತೆಗಳನ್ನು ಪೂಜಿಸಬೇಕು. ||೨೧-೨೨||

ಮಹಾಕಾಲ, ಶಂಕುಕರ್ಣ, ನಂದಿಕೇಶ, ವಕ್ರತುಂಡ, ಚಂಡಿಕೇಶ್ವರ ಈ ಗಣದೇವತೆಗಳನ್ನು ಕ್ರಮವಾಗಿ, ಪೂರ್ವ, ದಕ್ಷಿಣ, ಪಶ್ಚಿಮ, ಉತ್ತರ, ಈಶಾನ್ಯ ಈ ದಿಗ್ಭಾಗಗಳಲ್ಲಿ ಆವಾಹಿಸಿ ಪೂಜಿಸಬೇಕು. ಈಶ್ವರನ ಮುಂದೆ ಧರ್ಮದೇವತೆಯನ್ನೂ, ಉತ್ತರಭಾಗದಲ್ಲಿ ಮಹಾದೇವಿಯನ್ನೂ, ಆಯಾ ನಾಮಗಳಿಂದಲೇ ಆರಾಧಿಸಬೇಕು. ಎಂಟು ಹಿಟ್ಟಿನ ಸೊಡಲುಗಳಿಂದ ನಿರ್ಮಿತವಾಗಿರುವ ನೀರಾಜನವನ್ನು 'ಉದ್ದೀಪ್ಯಸ್ವಜಾತವೇದಃ' ಎಂಬ ಮಂತ್ರದಿಂದ ಬೆಳಗಬೇಕು. ||೨೩-೨೪-೨೫||

ಹವಿಸ್ಸಾಜ್ಯಂ ಚ ತಾಂಬೂಲಂ ಶಿವೇ ದದ್ಯಾದ್ಗಣೇಷು ಚ ।
ನೀರಾಜನಂ ತತೋ ದದ್ಯಾದ್ವಾದ್ಯಘೋಷಪುರಸ್ಸರಂ ॥೨೬॥

ಛತ್ರಂ ಚ ಚಾಮರೇ ದೇವಿ ವ್ಯಜನಾದರ್ಶಕೇ ತಥಾ ।
ಪ್ರದಕ್ಷಿಣಂ ಪ್ರಣಾಮಂ ಚ ಸ್ತವನೋತತ್ಪ್ರಯೋಜಯೇತ್ ॥೨೭॥

ಜಯ ಶಂಕರ ಪಾರ್ವತೀಪತೇ
ವಿಧಿವಿಷ್ಣ್ವಿಂದ್ರಸುಸೇವಿತಾಬ್ಜಪಾದ ।
ಉರಗೇಂದ್ರಾಭರಣ ಪ್ರಸೀದ ಶಂಭೋ
ಪ್ರಸಭಂ ಪಾಪಮಪಾಕುರುಷ್ವ ಸದ್ಯಃ ॥೨೮॥

ಜಯ ಸೋಮಾನಲಸೂರ್ಯಲೋಚನಾಕ್ಷ ಶಂಭೋ
ಧೃತಚಂದ್ರಾಂಕಜಟಾಕುಟೀರಗಂಗ ।
ಪರಿಪಾಹಿ ಪತಂಗಮಧ್ಯವಾಸ
ವಿಧಿಮುಂಡಾಭರಣ ಪ್ರಸೀದ ದೇವ ॥೨೯॥

---

ಅನಂತರ ತುಪ್ಪದಿಂದ ಪಕ್ವವಾಗಿರುವ ಹವಿಸ್ಸನ್ನೂ, ತಾಂಬೂಲವನ್ನೂ ಗಣದೇವತೆಗಳಿಗೆ ಅರ್ಪಿಸಿ, ವೇದವಾದ್ಯಘೋಷಪುರಸ್ಸರವಾಗಿ ನೀರಾಜನಮಾಡಬೇಕು. ಹಾಗೆಯೇ ಛತ್ರ, ಚಾಮರ, ವ್ಯಜನ, ಆದರ್ಶ ಮುಂತಾದಉಪಚಾರಗಳಿಂದ ಅರ್ಚಿಸಿ, ಪ್ರದಕ್ಷಿಣನಮಸ್ಕಾರಾದಿಗಳಿಂದ ಸೇವಿಸಿ ಈರೀತಿ ಶಂಕರನನ್ನು ಸ್ತುತಿಸಬೇಕು. ||೨೬-೨೭||

' ಶಂಕರನೇ, ಪಾರ್ವತೀಪತಿಯೇ, ಬ್ರಹ್ಮ, ವಿಷ್ಣು, ಇಂದ್ರ ಇವರಿಂದ ಪೂಜಿತವಾದ ಪಾದಪದ್ಮವುಳ್ಳವನೇ, ನಾಗಾಭರಣನೇ, ನನ್ನ ಸಮಸ್ತ ಪಾಪರಾಶಿಯನ್ನೂ ನಿರ್ಮೂಲಗೊಳಿಸು. ನನ್ನ ಮೇಲೆ ನಿನ್ನ ಕರುಣಾಕಟಾಕ್ಷವನ್ನು ಬೀರುವವನಾಗು. ||೨೮||

ಚಂದ್ರ, ಸೂರ್ಯಾಗ್ನಿಗಳನ್ನೇ ನೇತ್ರತ್ರಯಗಳನ್ನಾಗಿ ಮಾಡಿಕೊಂಡಿರುವ ಮಹಾದೇವನೇ, ನೀನು ಚಂದ್ರಬಿಂಬವನ್ನೂ ದೇವಗಂಗೆಯನ್ನೂ ನಿನ್ನ ಜಟಾಕುಹರದಲ್ಲಿ ಅಡಗಿಸಿಕೊಂಡಿರುವೆಯಲ್ಲವೆ! ಸೂರ್ಯಮಂಡಲಮಧ್ಯವರ್ತಿಯಾಗಿ, ಬ್ರಹ್ಮಕಪಾಲಮಾಲೆಯಿಂದ ಆವೃತನಾಗಿರುವ ನೀನು ನನಗೆ ಅನುಗ್ರಹಮಾಡಿ ರಕ್ಷಿಸು. ನನ್ನ ಸಮಸ್ತ ಅಪರಾಧವನ್ನೂ ಕ್ಷಮಿಸುವವನಾಗು. ||೨೯||

ಜಯ ಸೋಮಕಲಾವತಂಸ ಶೂಲಪಾಣೇ
ಗಣವೃಂದಾನುಲಸೇವನ ಪ್ರಸೀದ ।
ಹರಭರ್ಗೋತ್ತಮ ನಂದಿ ಚಂಡಿಕೇಶ
ಗಣಸ್ಕಂದಾತುಲ ಶಂಕುಕಾಲಕಾಲ್ಯೈಃ ॥೩೦॥

ಪರಿತಸ್ಸೇವಿತಪಾರ್ಶ್ವ ವಿಶ್ವನಾಥ
ಸ್ಥಿರಧನ್ವನ್ನಮಸಾ ಪ್ರತುಷ್ಟಿಮೇಹಿ ।
ಜಯ ಸಾಂಬ ಮಹೋರಗೇಂದ್ರಹಾರ
ಪ್ರಸಭಂ ಮನ್ಮಥನಾಶನ ಪ್ರಸೀದ ಭರ್ಗ ॥೩೧॥

ಭವ ಭೀಮ ಮಹೇಶ್ವರಾವ ಶಂಭೋ ।
ಮಯಿ ದೃಷ್ಟಿಂ ಕರುಣಾಂ ಕುರುಷ್ವ ಶಂಭೋ ॥೩೨॥

ಇತಿ ಸ್ತುತ್ವಾ ಮಹಾದೇವಂ ಕಾಲಾಷ್ಟಮ್ಯಾಂ ತದಾ ವ್ರತೀ ।
ಪ್ರತಿಷ್ಠಾಪ್ಯ ತತೋ ವಹ್ನಿಂ ಸ್ವಸ್ವಶಾಖೋಕ್ತಮಾರ್ಗತಃ ॥೩೩॥

---

ಚಂದ್ರಕಲೆಯನ್ನೇ ಶಿರೋಭೂಷಣವನ್ನಾಗಿ ಮಾಡಿಕೊಂಡು, ಸಮಸ್ತ ಗಣನಾಯಕರಿಂದಲೂ ಸೇವಿತನಾಗಿರುವ ಮಹಾದೇವನೇ, ನನ್ನಲ್ಲಿ ಪ್ರಸನ್ನನಾಗು. ಹರ, ಭರ್ಗ, ನಂದಿ, ಚಂಡಿಕೇಶ್ವರ, ಗಣನಾಥ, ಸ್ಕಂದಸ್ವಾಮಿ, ಶಂಕು, ಕಾಲಕಾಲ ಮುಂತಾದ ಗಣದೇವತೆಗಳು ಸದಾ ನಿನ್ನನ್ನು ಸೇವಿಸುತ್ತಿರುವರಲ್ಲವೆ! ಇಂತಹ ನೀನು ನನ್ನನ್ನು ಅಭಿಮಾನದಿಂದ ರಕ್ಷಿಸಿ ಕಾಪಾಡು. ॥೩೦॥

ಗಣನಾಯಕರಿಂದ ಸುತ್ತಲೂ ಆವೃತನಾಗಿರುವ ಮಹೇಶ್ವರನೇ, ವಿಶ್ವೇಶ್ವರನೇ, ಸ್ಥಿರವಾದ ಧನುಸ್ಸನ್ನು ಹೊಂದಿರುವವನೇ, ಈ ನನ್ನ ಅಲ್ಪಸೇವೆಯಿಂದ ತೃಪ್ತಿಹೊಂದು. ಮಹಾದೇವನೇ, ಉರಗಾಭರಣನೇ, ಮನ್ಮಥನಾಶಕನೇ, ನೀನು ಸರ್ವೋತ್ಕೃಷ್ಟನಾಗಿರು. ನನ್ನ ಸರ್ವಾಪರಾಧವನ್ನೂ ಹೋಗಲಾಡಿಸಿ ನನ್ನನ್ನುದ್ಧರಿಸು. ॥೩೧॥

ಸಂಸಾರದುಃಖನಾಶಕನೇ, ಭಯಂಕರನೇ, ಮಹೇಶ್ವರನೇ, ನನ್ನಲ್ಲಿ ನಿನ್ನ ಕರುಣಾದೃಷ್ಟಿಯನ್ನು ಬೀರುವವನಾಗು. ನನ್ನನ್ನು ಸಲಹು' ಎಂದು ಕೃಷ್ಣಾಷ್ಟಮಿಯ ದಿವಸ ಪ್ರಾರ್ಥಿಸಿ, ಮಾರನೆಯದಿನ ಪ್ರಾತಃಕಾಲ ಸ್ವಶಾಖೋಕ್ತರೀತಿಯಿಂದ ಅಗ್ನಿಪ್ರತಿಷ್ಠಾಪನೆಮಾಡಿಕೊಂಡು ಹೋಮಾದಿಗಳನ್ನು ನಡೆಸಬೇಕು. ॥೩೨-೩೩॥

ಅಶನೀಯಂ ಹವಿರ್ಯತ್ಸ್ಯಾಜ್ಜುಹುಯಾತ್ತೇನ ಸರ್ಪಿಷಾ ।
ಇಮಾ ರುದ್ರೇತ್ಯಾದಿಭಿರ್ಮಾರ್ಗಂ ಪೂರ್ವಂ ತು ಜುಹುಯಾಚ್ಛಿವೇ॥ ೩೪॥

ಶತಂ ಹಿಮೇತ್ಯಾದಿಭಿಶ್ಚ ಅರ್ಹಂ ಬಿಭರ್ಷಿ ಇತ್ಯಪಿ ।
ಮಾನ ಆಯುಷಿ ಇತ್ಯೇತದಾತೇ ಪಿತರಿತಿ ಕ್ರಮಾತ್ ॥೩೫॥

ಮಾನಸ್ತೂರ್ಕ ಏವಾಹೀತಿ ಮಾನೋ ಮಹಾಂತಮಿತ್ಯಪಿ ।
ಮಾನಸ್ತೋಕೇನ ಮಂತ್ರೇಣ ಹವಿಷ್ಯಂತ ಇತಿಕ್ರಮಾತ್ ॥೩೬॥

ವಾಸ್ತೋಷ್ಪತೇತಿಮಂತ್ರೇಣ ಆದ್ರಾರ್ಯಾ ರುದ್ರ ಇತ್ಯಪಿ ।
ಪ್ರಮುಂಚಂತು ದುರಿತಾನೀತಿ ಮಂತ್ರಾಸ್ತೇ ಸಮಿದಾನಕೇ ॥೩೭॥

ಭವಾಯೇತ್ಯಷ್ಟಭಿರ್ಮಂತ್ರೈಃ ಸ್ವಾಹಾಂತೈರ್ಜುಹುಯಾಚ್ಛಿವೇ ।
ಭವಸ್ಯ ದೇವಸ್ಯ ಪತ್ನ್ಯೈಶ್ಚ ಇತ್ಯಷ್ಟಾಭಿರ್ಜುಹೋತ್ಯಪಿ ॥೩೮॥

ದೇವಸ್ಯ ಚ ಸುತಾಯೇತಿ ಜುಹುಯಾಜ್ಜಾತವೇದಸಿ ।
ತತಸ್ಸ್ವಿಷ್ಟಕೃತಂ ಹುತ್ವಾ ಆಜ್ಯೈರ್ಹೋಮಂ ಸಮಾಪಯೇತ್ ॥೩೯॥

ಪುನರಷ್ಟಸುಮೈಃ ಪೂಜ್ಯ ಹೋಮಾಂತೇಶಂ ಪ್ರಸಾದಯೇತ್ ।
ಪ್ರೀಯತಾಂ ಭಗವಾನೀಶಃ ಸಾಂಬಃ ಸಗಣ ಈಶ್ವರಃ ॥೪೦॥

---

ತಾನು ಊಟಮಾಡುವ ಹವಿಸ್ಸನ್ನೇ ಹೋಮಕ್ಕಾಗಿಯೂ ಉಪಯೋಗಿಸಬೇಕು. 'ಇಮಾರುದ್ರಾಯ' 'ಶತಂಹಿಮೇ' 'ಅರ್ಹಂಬಿಭರ್ಷಿ' 'ಮಾನಸ್ತೋಕೆ' 'ಆತೇಪಿತರ್ಮರುತಾಂ' ಇತ್ಯಾದಿ ವೇದ ಮಂತ್ರಗಳಿಂದ ಆ ಹವಿಸ್ಸನ್ನು ಆಜ್ಯಪುರಸ್ಸರವಾಗಿ ಹೋಮಮಾಡಬೇಕು. ||೩೪-೩೫||

'ಮಾನಸ್ತೂರ್ಕೆ' ಮಾನೋಮಹಾಂತಮುತಮಾನೋ' 'ಮಾನಸ್ತೋಕೆ ತನಯೆ' 'ವಾಸ್ತೋಷ್ಪತೆಪ್ರತಿಜಾನೀಹ್ಯಸ್ಮಾನ್' 'ಪ್ರಮುಂಚಂತು ವಿಶ್ವೇದೇವಾ' ಇತ್ಯಾದಿಮಂತ್ರಗಳಿಂದ ಸಮಿದಾಧಾನಮಾಡಬೇಕು. ||೩೬-೩೭||

'ಭವಾಯ ದೇವಾಯಸ್ವಾಹಾ' ಎಂಬ ಭವಾದಿಯಾದ ಎಂಟು ಶಿವನಾಮಗಳಿಂದಲೂ 'ಭವಸ್ಯ ದೇವಸ್ಯ ಪತ್ನ್ಯೈ ಸ್ವಾಹಾ' ಎಂಬ ಭವಪತ್ನ್ಯಾದಿ ಎಂಟು ನಾಮಗಳಿಂದಲೂ ಆಜ್ಯಹೋಮಾದಿಗಳನ್ನು ನೆರವೇರಿಸಬೇಕು. ಅನಂತರ ಸ್ವಿಷ್ಟಕೃದಾದಿ ಹೋಮಶೇಷವನ್ನು ಪೂರ್ತಿಗೊಳಿಸಿ ಪರಶಿವನನ್ನು ಗಣಸಮೇತನಾಗಿ

**ಅನಯಾ ಪೂಜಯಾ ಹೋಮೈಸ್ತೃಪ್ತೋ ಮಾಂ ಸಂಪ್ರಸೀದತು ।**
**ದದ್ಯಾದರ್ಘ್ಯಂ ಮಹೇಶಾಯ ಸಪುಷ್ಪಾಂಬುಮಹೇಶ್ವರಿ ॥೪೧॥**

**ದುಃಖದಾರಿದ್ರ್ಯದಿಮಗ್ನಂ ಮಾಮುದ್ಧರ ಮಹೇಶ್ವರ ।**
**ಅಷ್ಟಮ್ಯಾಮರ್ಘ್ಯದಾನೇನ ಅಷ್ಟಮೂರ್ತೇ ಪ್ರಸೀದ ಮೇ ॥೪೨॥**

**ಇತ್ಯರ್ಘ್ಯಂ ಚ ತತೋ ದತ್ವಾ ಪೂಜಾಮುದ್ವಾಸ್ಯ ಸತ್ತಮೇ ।**
**ಬ್ರಾಹ್ಮಣಾಯ ಹಿರಣ್ಯಂ ಗಾಂ ಶಾಂಭವಾಯ ನಿವೇದಯೇತ್ ॥೪೩॥**

**ಯತ್ಕಿಂಚಿದ್ವಾ ಯಥಾಶಕ್ತಿ ದದ್ಯಾದೀಶಾನತುಷ್ಟಯೇ ।**
**ಭಕ್ಷ್ಯಭೋಜ್ಯಾನ್ನಸಂಯುಕ್ತಂ ಭುಂಜೀಯಾಚ್ಛಾಂಭವೈಸ್ಸಹ ॥೪೪॥**

**ದಕ್ಷಿಣಾಭಿಶ್ಚ ತಾನ್ ಪುಷ್ಪೈರ್ಗಂಧತಾಂಬೂಲಪೂರ್ವಕಂ ।**
**ಭೋಜಯೇಚ್ಚ ಸ್ವಯಂ ಭುಂಜನ್ನಕ್ತಂ ಶಕ್ತೋಽಥ ವರ್ಜಯೇತ್ ॥೪೫॥**

ತೃಪ್ತನಾಗಲಿ ಎಂದು ಮನಸಾಧ್ಯಾನಮಾಡಿ ವ್ರತಸಮಾಪ್ತಿಗೊಳಿಸಬೇಕು. ||೩೮-೩೯-೪೦||

ಈ ಪೂಜೆಯಿಂದಲೂ ಹೋಮದಿಂದಲೂ 'ಪರಶಿವನು ತೃಪ್ತನಾಗಲಿ, ಅದರಿಂದ ಅವನ ಪ್ರಸನ್ನತೆಯು ನನಗೆ ಒದಗಲಿ' ಎಂದು ಪ್ರಾರ್ಥಿಸುತ್ತಾ, ಪರಶಿವನಿಗೆ ಅರ್ಘ್ಯಪ್ರದಾನಮಾಡಬೇಕು. ಮತ್ತು ದುಃಖ, ಬಡತನ, ಇವುಗಳಿಂದ ವ್ಯಥೆಪಡುತ್ತಿರುವ ನನ್ನನ್ನು ಈ ಅರ್ಘ್ಯದಾನದಿಂದ ತೃಪ್ತನಾಗಿ ನೀನು ಉದ್ಧರಿಸು. ಅಷ್ಟಮೂರ್ತಿಯೇ ಪ್ರಸನ್ನನಾಗು, ಎಂದು ಹೇಳುತ್ತಾ ಮತ್ತೂ ಅರ್ಘ್ಯವನ್ನು ಕೊಡಬೇಕು. ||೪೧-೪೨||

ಹೀಗೆ ಅರ್ಘ್ಯವನ್ನು ಕೊಟ್ಟು, ಪೂಜೆಯನ್ನು ಮುಗಿಸಿ, ಶಾಂಭವನೆನಿಸಿದ ಬ್ರಾಹ್ಮಣನಿಗೆ ಹಿರಣ್ಯಸಹಿತವಾದ ಗೋವನ್ನು ದಾನಮಾಡಬೇಕು. ಈಶ್ವರ ತೃಪ್ತ್ಯರ್ಥವಾಗಿ ಯತ್ಕಿಂಚಿತ್ ಹಿರಣ್ಯವನ್ನೂ ದಾನಮಾಡಬಹುದು. ಹಾಗೆಯೇ ಭಕ್ಷ್ಯಭೋಜ್ಯಸಹಿತವಾದ ಅನ್ನವನ್ನು ಶಾಂಭವರೊಡನೆ ಕುಳಿತು ತಾನೂ ಊಟ ಮಾಡಬೇಕು. ||೪೩-೪೪||

ಭೋಜನಾನಂತರ ಬ್ರಾಹ್ಮಣರಿಗೆ ದಕ್ಷಿಣೆ, ಗಂಧ, ತಾಂಬೂಲ ಇವುಗಳನ್ನು ಕೊಟ್ಟು ತಾನೂ ತೃಪ್ತನಾಗಬೇಕು. ಇದೇ ಕೃಷ್ಣಾಷ್ಟಮೀ ವ್ರತವಿಧಾನ. ಈರೀತಿ

ಕೃಷ್ಣಾಷ್ಟಮೀಷು ನಿಯತಮೇಷಾ ಸಾಮಾನ್ಯತೋ ವಿಧಿಃ ।
ಏಕಾಬ್ದಂ ತ್ರೀಣಿ ವಾ ದೇವಿ ದ್ವಾದಶಾಬ್ದಮಥಾಪಿ ವಾ ॥೪೬॥

ಕೃತ್ವಾ ವ್ರತೋದ್ಯಾಪನಂ ಚ ನಕ್ತಾಶೀ ವಾ ಭವೇತ್ತತಃ ।
ಸಿತಾಸಿತಾಸ್ವಷ್ಟಮೀಷು ಅವಿಮುಕ್ತೇ ತು ನೈತ್ಯಕಂ ॥೪೭॥

ಉಪೋಷ್ಯೈವಾವಿಮುಕ್ತೇಶಂ ಪೂಜ್ಯ ಬಿಲ್ವೈಸ್ಸುಮೈರಪಿ ।
ಶಿವೇ ಗಂಗಾಂಬುಭಿಶ್ಶೀತೈರಭಿಷಿಚ್ಯ ಮಹೇಶ್ವರಂ ॥೪೮॥

ಧೂಪದೀಪಾದಿನೈವೇದ್ಯೈಸ್ಸ್ತುವೀತೈವಂ ಮಹೇಶ್ವರಂ ।
ಕಾಲಾಷ್ಟಮೀಷು ನಿಯತಮವಿಮುಕ್ತೇಶ್ವರಂ ಹಿ ಮಾಂ ॥೪೯॥

ಗಂಗಾಧರಾಂಧಕರಿಪೋ ಪ್ರಮಥಾಧಿನಾಥ
ವಿಶ್ವೇಶ ವಿಶ್ವಗತ ಸರ್ಜಕ ಭರ್ಜಕಾಂತ ।
ಬ್ರಹ್ಮಾದಿ ವಿಷ್ಣುಸುರವರ್ಗಸುಪೂಜಿತಾಂಘ್ರೇ
ಮಾಮೀಶ ಪಾಹಿ ದಯಯಾ ಸ್ಮರ ಕಾಲನಾಶ ॥೫೦॥

---

ಒಂದು ವರ್ಷ ಅಥವಾ ಮೂರುವರ್ಷ, ಶಕ್ತಿಯಿದ್ದರೆ ಹನ್ನೆರಡು ವರ್ಷಗಳು ಈ ವ್ರತವನ್ನು ನಡೆಸಿ ಅನಂತರ ಉದ್ಯಾಪನೆ ಮಾಡಬೇಕು ॥೪೫-೪೬॥

ಶುಕ್ಲ ಅಥವಾ ಕೃಷ್ಣಪಕ್ಷದ ಅಷ್ಟಮೀತಿಥಿಗಳಲ್ಲಿ ಕಾಶೀಗತವಾದ ಗಂಗಾನದಿಯಲ್ಲಿ ಸ್ನಾನಮಾಡಿ, ಆದಿನ ಉಪವಾಸದಿಂದ ಕಾಶೀ ವಿಶ್ವೇಶ್ವರನನ್ನು ಪೂಜಿಸಿ, ಶೀತಲವಾದ ಗಂಗೋದಕದಿಂದ ಅಭಿಷೇಕಮಾಡಿ, ಧೂಪ, ದೀಪ, ನೈವೇದ್ಯಾದಿಗಳಿಂದ ಮಹೇಶ್ವರನನ್ನು ಪೂಜಿಸಿ, ಕೃಷ್ಣಾಷ್ಟಮಿಯ ತಿಥಿಯಲ್ಲಿ ತಪ್ಪದೆ ಈರೀತಿ ಭಗವಂತನನ್ನು ಪ್ರಾರ್ಥಿಸಿಕೊಳ್ಳಬೇಕು. ॥೪೭-೪೮॥

" ಶಿರಸ್ಸಿನಲ್ಲಿ ಗಂಗೆಯನ್ನು ಧರಿಸಿದ ಅಂಧಕಾಸುರಸೂದನನೇ, ನೀನು ಪ್ರಮಥನಾಥನೂ, ವಿಶ್ವಪತಿಯೂ, ಜಗತ್ಸೃಷ್ಟಿಸ್ಥಿತಿನಾಶಕನೂ ಆಗಿರುವೆ. ಬ್ರಹ್ಮಾದಿ ಸಕಲ ದೇವತೆಗಳ ಗುಂಪಿನಿಂದಲೂ ನೀನು ಪೂಜಿತನಾಗಿರುವೆ. ಇಂತಹ ಕಾಲ ಕಾಲನಾದ ನೀನು ನಮ್ಮನ್ನು ದಯೆಯಿಂದ ರಕ್ಷಿಸು. " ॥೪೯-೫೦॥

ಇತಿ ಸ್ತುತ್ವಾ ವಿಮುಕ್ತೇಶಂ ಕಾಲರಾಜಂ ಪ್ರಪೂಜಯೇತ್ ।
ಕಾಲಾಷ್ಟಮ್ಯಾಂ ತು ನಿಯತಂ ಕಾಶೀವಾಸೀ ಮಹೇಶ್ವರಿ ॥೫೧॥

ಕುಲಸ್ತಂಭಂ ಶವಾಸಾದ್ಯ ಗಂಧಪುಷ್ಪಾಂಬುಭಿಸ್ಸದಾ ।
ಅಪೂಪಹವಿಷಾ ಚೈವ ವಟಕೈರ್ಲಡ್ಡುಕೈರಪಿ ॥೫೨॥

ಪೂಜಯೇದ್ಧೂಪದೀಪೈಶ್ಚ ಕಾಲಾಷ್ಟಮ್ಯಾಂ ಸ್ತುವೀತ ಚ ।
ಭೈರವಂ ಭೀಷಣಾಕಾರಂ ವಾಸನಿರ್ವಿಘ್ನಹೇತವೇ ॥೫೩॥

ಸ್ತೋತ್ರೇಣಾನೇನ ದೇವೇಶಿ ಕಾಶ್ಯಾಂ ಕಾಲಾಷ್ಟಮೀಷು ಚ ।
ಸ್ತುವೀತ ಪದ್ಯೈರ್ಹ್ಯದ್ಯೈಸ್ತಂ ಮಮಾದ್ಯ ಗಣಪೋತ್ತಮಂ ॥೫೪॥

ದೇವರಾಜಸೇವ್ಯಮಾನ ಪಾವನಾಂಘ್ರಿಪಂಕಜಂ
ವ್ಯಾಲಯಜ್ಞಸೂತ್ರಮಿಂದುಶೇಖರಂ ಕೃಪಾಕರಂ ।
ನಾರದಾದಿಯೋಗಿಬೃಂದವಂದಿತಂ ದಿಗಂಬರಂ
ಕಾಶಿಕಾಪುರಾಧಿನಾಥ ಕಾಲಭೈರವಂ ಭಜೇ ॥೫೫॥

---

ಹೀಗೆ ವಿಶ್ವೇಶ್ವರನನ್ನು ಸ್ತುತಿಸಿ ಅನಂತರ ಕಾಲಭೈರವಾಲಯಕ್ಕೆ ಹೋಗಿ ಅಲ್ಲಿ ಕಾಲಭೈರವನನ್ನು ಪೂಜಿಸುತ್ತಾ, ಗಂಧ, ಪುಷ್ಪ, ಒಬ್ಬಟ್ಟು, ಹುಗ್ಗಿ, ಒಡೆ, ಲಾಡು ಮುಂತಾದ ಭಕ್ಷ್ಯಗಳನ್ನು ನೈವೇದ್ಯಾರ್ಥವಾಗಿ ಅರ್ಪಿಸಬೇಕು. ॥೫೧-೫೨॥

ಕೃಷ್ಣಾಷ್ಟಮಿಯ ದಿನ ಕಾಲಭೈರವನನ್ನು ಧೂಪದೀಪಾದಿಗಳಿಂದ ಪೂಜಿಸಿ ಭೀಷಣಾಕಾರನಾದ ಆ ಸ್ವಾಮಿಯನ್ನು ಕಾಶೀವಾಸದಲ್ಲಿ ಯಾವ ಅಡ್ಡಿಯೂ ಬರದಂತೆ ಈ ಸ್ತೋತ್ರದಿಂದ ಪ್ರಾರ್ಥಿಸಬೇಕು. ಆ ಕಾಲಭೈರವನು ನನ್ನ ಗಣಪ ಶ್ರೇಷ್ಠರಲ್ಲಿ ಅತ್ಯಂತ ಮುಖ್ಯನೆನಿಸಿದವನು. ॥೫೩-೫೪॥

ಕಾಲಭೈರವಸ್ವಾಮಿಯೇ, ನೀನು ದೇವೇಂದ್ರನೇ ಮೊದಲಾದ ದೇವಶ್ರೇಷ್ಠರಿಂದ ಪೂಜಿತವಾದ ಚರಣಗಳುಳ್ಳವನು. ನಾಗವನ್ನೇ ಯಜ್ಞೋಪವೀತವನ್ನಾಗಿ ಮಾಡಿಕೊಂಡಿರುವವನು. ನಾರದನೇ ಮೊದಲಾದ ಯೋಗಿಗಳ ಗುಂಪಿನಿಂದ ವಂದಿತನಾಗಿರುವೆ. ಸಮಸ್ತ ದಿಕ್ಕುಗಳೇ ನಿನಗೆ ವಸ್ತ್ರವಾಗಿರುವುದು. ಕಾಶೀನಗರಕ್ಕೆ ಮುಖ್ಯಾಧಿಪತಿಯಾಗಿರುವ ನಿನ್ನನ್ನೇ ನಾನು ಸೇವಿಸುವೆನು. ॥೫೫॥

ಭಾನುಕೋಟಿಭಾಸ್ವರಂ ಭವಾಬ್ಧಿತಾರಕಂ ಪರಂ
ನೀಲಕಂಠಮೀಪ್ಸಿತಾರ್ಥದಾಯಕಂ ತ್ರಿಲೋಚನಂ ।
ಕಾಲಕಾಲಮಂಬುಜಾಕ್ಷಕಂಧರಂ ಹರಂ ಶಿವಂ
ಕಾಶಿಕಾಪುರಾಧಿನಾಥ ಕಾಲಭೈರವಂ ಭಜೇ ॥೫೬॥

ಭುಕ್ತಿಮುಕ್ತಿದಾಯಕಂ ಪ್ರಶಸ್ತಚಾರುವಿಗ್ರಹಂ
ಭಕ್ತವತ್ಸಲಂ ಶಿವಂ ಸಮಸ್ತಲೋಕಪಾಲಕಂ ।
ನಿಕ್ವಣನ್ಮನೋಜ್ಞ ಹೇಮಕಿಂಕಿಣೀಲಸತ್ಕಟಿಂ
ಕಾಶಿಕಾಪುರಾಧಿನಾಥಕಾಲಭೈರವಂ ಭಜೇ ॥೫೭॥

ಶೂಲಟಂಕ ಪಾಶದಂಡ ಪಾಣಿಮಾದಿಕಾರಣಂ
ಶ್ಯಾಮಕಾಯಮಾದಿದೇವಮಕ್ಷರಂ ನಿರಾಮಯಂ ।
ಭೀಮವಿಕ್ರಮಂ ಪ್ರಭುಂ ವಿಚಿತ್ರತಾಂಡವಪ್ರಿಯಂ
ಕಾಶಿಕಾಪುರಾಧಿನಾಥ ಕಾಲಭೈರವಂ ಭಜೇ ॥೫೮॥

---

ಕಾಲಭೈರವನೇ, ನೀನು ಕೋಟಿಸೂರ್ಯರಂತೆ ಪ್ರಕಾಶಿಸುವವನು. ನಿನ್ನಿಂದ ಘೋರವಾದ ಸಂಸಾರಸಮುದ್ರವನ್ನು ನಾವು ದಾಟಬಹುದು. ನೀಲಕಂಠದಿಂದ ಶೋಭಿಸುತ್ತಾ ಭಕ್ತರ ಸಕಲ ಇಷ್ಟಾರ್ಥವನ್ನೂ ನೆರವೇರಿಸಿರುವೆ. ಕಾಲಕಾಲನೂ, ಕಮಲಾಕ್ಷನಾದ ವಿಷ್ಣುವಿನಿಂದ ವಂದಿತನೂ, ಮಂಗಳಸ್ವರೂಪನೂ, ಕಾಶಿಕಾಪುರಾಧಿಪತಿಯೂ ಆದ ನಿನಗೆ ವಂದಿಸುವೆನು. ||೫೬||

ಐಹಿಕಾಮುಷ್ಮಿಕಫಲಪ್ರದಾತನೂ, ಪ್ರಶಸ್ತವಾದ ಮತ್ತು ಮನೋಹರವಾದ ದೇಹವುಳ್ಳವನೂ, ಭಕ್ತರನ್ನು ಪ್ರೀತಿಸುವವನೂ, ಸಮಸ್ತಲೋಕಪಾಲಕನೂ, ಇಂಚರಗೊಡುವ ಸುವರ್ಣದ ಕಿರುಗೆಜ್ಜೆಗಳನ್ನು ಸೊಂಟದಲ್ಲಿ ಕಟ್ಟಿಕೊಂಡಿರುವವನೂ ಆದ ಕಾಲಭೈರವನೇ, ನಿನಗೆ ವಂದನೆಯು. ||೫೭||

ಕಾಲಭೈರವನೇ, ನೀನು ನಿನ್ನ ನಾಲ್ಕು ಕೈಗಳಲ್ಲಿಯೂ, ಶೂಲ, ಟಂಕ, ಪಾಶ, ದಂಡಗಳನ್ನು ಧರಿಸಿರುವೆ. ನಿನ್ನ ದೇಹವು ಶ್ಯಾಮಲವರ್ಣವಾಗಿರುವುದು. ಲೋಕಕ್ಕೆ ಆದಿಕಾರಣನೂ, ದೇವತೆಗಳಿಗೆ ಆದಿಭೂತನೂ, ನಾಶರಹಿತನೂ, ರೋಗಾದಿವಿರಹಿತನೂ, ಭೀಮಪರಾಕ್ರಮಿಯೂ, ಜಗದೊಡೆಯನೂ ಆದ ನೀನು

ರತ್ನಪಾದುಕಾಪ್ರಭಾಭಿರಾಮಪಾದಯುಗ್ಮಕಂ
ನಿತ್ಯಮದ್ವಿತೀಯಮಿಷ್ಟದೈವತಂ ನಿರಂಜನಂ ।
ಮೃತ್ಯುದರ್ಪನಾಶನಂ ಕರಾಳದಂಷ್ಟ್ರಭೀಷಣಂ
ಕಾಶಿಕಾಪುರಾಧಿನಾಥ ಕಾಲಭೈರವಂ ಭಜೇ ॥೫॥

ಧರ್ಮಸೇತುಪಾಲನಂ ತ್ವಧರ್ಮಮಾರ್ಗನಾಶನಂ
ಕರ್ಮಪಾಶಮೋಚಕಂ ಸುಶರ್ಮದಾಯಕಂ ಪ್ರಭುಂ ।
ಸ್ವರ್ಣವರ್ಣಕೇಶಪಾಶ ಶೋಭಿತಾಂಗ ನಿರ್ಮಲಂ
ಕಾಶಿಕಾಪುರಾಧಿನಾಥ ಕಾಲಭೈರವಂ ಭಜೇ ॥೬॥

ಅಟ್ಟಹಾಸ ಭಿನ್ನಪದ್ಮಜಾಂಡಕೋಶಸಂತತಿಂ
ದೃಷ್ಟಿಪಾತ ನಷ್ಟಪಾಪಜಾಲಮುಗ್ರಶಾಸನಂ ।

---

ನಾಟ್ಯಪ್ರಿಯನೆನಿಸಿರುವೆ. ಹೀಗೆ ಮಹಿಮಾಶಾಲಿಯಾಗಿ ಕಾಶೀನಗರರಕ್ಷಕನಾದ ನಿನ್ನನ್ನು ಭಜಿಸುವೆನು. ॥೪॥

ರತ್ನಮಯವಾದ ಪಾದುಕೆಗಳ ಪ್ರಭೆಯಿಂದ ನಿನ್ನ ಪಾದಯುಗಳಗಳು ಹೊಳೆಯುತ್ತಿವೆ. ಸ್ವಯಂಮಹಿಮಾಶಾಲಿಯಾಗಿ, ದ್ವಿತೀಯವಸ್ತುರಹಿತವಾಗಿ, ಪಾಪಶೂನ್ಯನಾಗಿರುವ ನೀನೇ ನಮ್ಮ ಇಷ್ಟದೈವವು. ಮೃತ್ಯುದೇವತೆಯ ದರ್ಪವು ನಿನ್ನಿಂದಲೇ ನಾಶವಾಯಿತಲ್ಲವೇ! ಭಯಂಕರವಾದ ಕೋರೆದಾಡೆಗಳಿಂದ ನೀನು ಅತಿಭಯಂಕರನಾಗಿ ಕಾಣುವೆ. ಇಂತಹ ಕಾಶಿಕಾನಗರಾಧಿಪತಿಯಾದ ನಿನಗೆ ವಂದನೆಗಳು. ॥೫॥

ಧರ್ಮವೆಂಬ ಸೇತುವೆಯನ್ನು ರಕ್ಷಿಸುವವನು ನೀನು. ಅಧರ್ಮಮಾರ್ಗವನ್ನು ನಾಶಗೊಳಿಸುವವನೂ ನೀನೇ. ಪ್ರಾರಬ್ಧಕರ್ಮಾನುಗುಣವಾಗಿ ಮಾನವರಿಗೆ ಬರುವ ವಿಪತ್ಪರಂಪರೆಗಳನ್ನು ಹೋಗಲಾಡಿಸಿ ಸುಕರ್ಮಲಭ್ಯವಾಗಿ ಸೌಖ್ಯಗಳನ್ನು ಒದಗಿಸುವುದರಲ್ಲಿ ನೀನೇ ಸಮರ್ಥನು. ನಿನ್ನ ಕೇಶಪಾಶವು ಸುವರ್ಣದಂತೆ ಸರ್ವದಾ ಶೋಭಿಸುತ್ತಿರುವುದು. ಕಾಶಿಕಾಪುರಾಧಿಪನಾದ ಕಾಲಭೈರವನೇ, ನಿನಗೆ ನಮಸ್ಕಾರ. ॥೬॥

ಕಾಲಭೈರವನೇ, ನಿನ್ನ ಅಟ್ಟಹಾಸದ ಪಾದನಿಕ್ಷೇಪದಿಂದ ಬ್ರಹ್ಮಾಂಡ ಕೋಶವೆಲ್ಲಾ ನಡುಗಿಹೋಗುವುದು. ನಿನ್ನ ದೃಷ್ಟಿಪಾತದಿಂದಲೇ ಸಮಸ್ತಪಾಪ

ಅಷ್ಟಸಿದ್ಧಿದಾಯಕಂ ಕಪಾಲಮಾಲಿಕಾಧರಂ
ಕಾಶಿಕಾಪುರಾಧಿನಾಥಕಾಲಭೈರವಂ ಭಜೇ ॥೬೦॥

ಭೂತಸಂಘನಾಯಕಂ ವಿಶಾಲಕೀರ್ತಿದಾಯಕಂ
ಕಾಶಿವಾಸಿಪುಣ್ಯಲೋಕಪಾಪಶೋಧನಪ್ರಭುಂ ।
ನೀತಿಮಾರ್ಗಕೋವಿದಂ ಪುರಾತನಂ ಜಗತ್ಪತಿಂ
ಕಾಶಿಕಾಪುರಾಧಿನಾಥ ಕಾಲಭೈರವಂ ಭಜೇ ॥೬೨॥

ಕಾಲಭೈರವಾಷ್ಟಕಂ ಪಠಂತಿ ಯೇ ಮನೋಹರಂ
ಜ್ಞಾನಮುಕ್ತಿಸಾಧನಂ ಪವಿತ್ರಪುಣ್ಯವರ್ಧನಂ ।
ಶೋಕಮೋಹದೈನ್ಯಲೋಭಕೋಪತಾಪನಾಶನಂ
ತೇ ಪ್ರಯಾಂತಿ ಕಾಲಭೈರವಾಂಘ್ರಿಸನ್ನಿಧಿಂ ಧ್ರುವಂ ॥೬೩॥

---

ರಾಶಿಯೂ ನಿರ್ಮೂಲವಾಗುವುದು. ನಿನ್ನ ಶಾಸನವಾದರೋ ಅತಿಭಯಂಕರವಾದುದು. ಅಷ್ಟೈಶ್ವರ್ಯಗಳನ್ನು ಭಕ್ತರಿಗೆ ಒದಗಿಸುವವನಾದರೂ ನೀನು ಮಾತ್ರ ಕಪಾಲಮಾಲೆಯನ್ನು ಧರಿಸಿರುವೆ. ಕಾಶಿಕಾನಗರಾಧಿಪತಿಯಾದ ಕಾಲಭೈರವನೇ, ನೀನೇ ನನಗೆ ರಕ್ಷಕನು. ನಿನ್ನನ್ನೇ ನಾನು ಮೊರೆಹೊಕ್ಕಿರುವೆನು. ॥೬೧॥

ಸಮಸ್ತಪ್ರಾಣಿಗಳಿಗೂ ಒಡೆಯನಾದ ಕಾಲಭೈರವನೇ, ನೀನು ನಿನ್ನ ಭಕ್ತರಿಗೆ ಅತಿಶಯವಾದ ಕೀರ್ತಿಬರುವಂತೆ ಅನುಗ್ರಹಿಸುವೆ. ಕಾಶೀನಗರದಲ್ಲಿ ವಾಸಿಸುವ ಜನರಿಗೆ ಪುಣ್ಯಲೋಕದ ಫಲವನ್ನು ನೀಡುವೆ. ಅಲ್ಲದೆ ಅವರು ಮಾಡುವ ಸಮಸ್ತಪಾಪಕಾರ್ಯಗಳ ಫಲವನ್ನೆಲ್ಲಾ ನಿರ್ಮೂಲಗೊಳಿಸುವೆ. ನಿನ್ನ ಭಕ್ತರಿಗೆ ನೀತಿಮಾರ್ಗವನ್ನು ಪ್ರದರ್ಶಿಸುವುದರಲ್ಲಿ ನೀನೇ ನಿಪುಣನು. ಆದ್ಯಂತರಹಿತನಾಗಿ ಜಗತ್ಪತಿಯೆನಿಸಿರುವ ಮಹೇಶ್ವರಗಣಾಗ್ರಣಿಯೇ, ನೀನೇ ನನಗೆ ರಕ್ಷಕನು. ನಿನ್ನನ್ನೇ ನಾನು ಸದಾ ಭಕ್ತಿಯಿಂದ ಧ್ಯಾನಿಸುವೆನು. ॥೬೨॥

ಕಾಶಿಕಾನಗರಾಧಿಪತಿಯಾದ ಕಾಲಭೈರವನೇ, ನಿನ್ನ ಈ ಕಾಲಭೈರವಾಷ್ಟಕವೆಂಬ ಎಂಟು ಶ್ಲೋಕಗಳಿಂದ ನಿನ್ನನ್ನು ಯಾರು ಸ್ತುತಿಸುವರೋ ಅವರಿಗೆ ಜ್ಞಾನವೂ ಮುಕ್ತಿಯೂ ಸಿದ್ಧಿಸುವುದು. ಪವಿತ್ರವಾದ ಪುಣ್ಯವು ವೃದ್ಧಿಹೊಂದುವುದು. ಶೋಕ, ಮೋಹ, ದೈನ್ಯ, ಲೋಭ, ಕೋಪ, ತಾಪ ಇವು ನಿನ್ನ ಈ ಸ್ತೋತ್ರಪಠನೆಯಿಂದ

ಪ್ರವಿಷ್ಟೋ ಯೋಽಷ್ಟಧಾನ್ಯತ್ರ ವಸನ್ನೇತಂ ಸ್ತವಂ ಜಪೇತ್ ।
ಪುನಃ ಕಾಶೀಂ ಸಮಾಸಾದ್ಯ ತತ್ರ ನಷ್ಟತನುರ್ಭವೇತ್ ॥೬೪॥

ಕಾಲಾಷ್ಟಮ್ಯಾಂ ಕಾಲರಾಜಂ ಸ್ತುವೀತೈವಂ ಪ್ರಸಾದ್ಯ ಚ ।
ಕಾಶ್ಯಾಮೇವ ನಿವಸೇತ್ಸಃ ನ ಪಾಪೇ ರಮತೇ ಹಿ ಸಃ ॥೬೫॥

ಕಿಂ ಪುನರ್ಬಹುನೋಕ್ತೇನ ಕಾಲಾಷ್ಟಮ್ಯಾರ್ಚಕೋ ನರಃ ।
ಸರ್ವಾನ್ಕಾಮಾನವಾಪ್ನೋತಿ ಭುಕ್ತಿಂ ಮುಕ್ತಿಂ ಚ ವಿಂದತಿ ॥೬೬॥

ಯಜ್ಞಾಯುತಫಲಂ ಪ್ರಾಪ್ಯ ಮಮ ಲೋಕೇ ಮಹೀಯತೇ ।
ಬ್ರಹ್ಮಹತ್ಯಾದಿಭಿಃ ಪಾಪೈರ್ಮುಚ್ಯತೇ ನಾತ್ರ ಸಂಶಯಃ ॥೬೭॥

॥ ಈಶ್ವರ ಉವಾಚ ॥

ಮಧ್ಯಾಷ್ಟಮೀ ಪ್ರಥಿತಸೋಮಕಲಾವತಂಸಂ
ಸರ್ವಾಷ್ಟಮೀಷು ನಗಜೇ ಪರಿಪೂಜಯಂತಿ ।

ನಾಶಹೊಂದುವುವು. ಒಟ್ಟಿನಲ್ಲಿ ಮಹಾಭೈರವನೇ, ನಿನ್ನನ್ನು ಹೀಗೆ ಸ್ತುತಿಸುವವನು ನಿನ್ನ ಸಾನ್ನಿಧ್ಯವನ್ನು ಪಡೆಯುವನು. ॥೬೩॥

ಕಾಶಿಯಲ್ಲಲ್ಲದೆ ಯಾವ ಶಿವಕ್ಷೇತ್ರವನ್ನು ಪ್ರವೇಶಿಸಿದಾಗಲೂ ಈ ಕಾಲಭೈರವಾಷ್ಟಕವನ್ನು ಪಠಿಸಬೇಕು. ಅದರಿಂದ ಅವನಿಗೆ ಕಾಶೀವಾಸದ ಸುಕೃತವು ಲಭಿಸಿ ಅವನ ಪಾಪವು ನಷ್ಟವಾಗುವುದು. ಕೃಷ್ಣಾಷ್ಟಮಿಯದಿನ ತಪ್ಪದೆ ಕಾಲಭೈರವನನ್ನು ಈ ಸ್ತುತಿವಚನಗಳಿಂದ ಪ್ರಾರ್ಥಿಸುವವನು ಕಾಶೀವಾಸವನ್ನು ಅನಾಯಾಸವಾಗಿ ಹೊಂದುವನು. ಅವನಿಗೆ ಎಂದೂ ಪಾಪಸಂಘಟನೆಯಿರುವುದಿಲ್ಲ. ॥೬೪-೬೫॥

ಕೃಷ್ಣಾಷ್ಟಮಿಯದಿನ ಯಾರು ಈರೀತಿ ಸ್ತುತಿಸುತ್ತಾ ಕಾಲಭೈರವನನ್ನು ಪೂಜಿಸುವರೋ, ಅವರು ಸಕಲ ಅಭೀಷ್ಟಗಳನ್ನೂ ಹೊಂದಿ ಐಹಿಕಾಮುಷ್ಮಿಕ ಸೌಖ್ಯಗಳೆರಡನ್ನೂ ಪಡೆಯುವರು. ಅಲ್ಲದೆ ಅವರಿಗೆ ಹತ್ತುಸಾವಿರ ಯಾಗಗಳ ಫಲವು ದೊರೆಯುವುದು. ಬ್ರಹ್ಮಹತ್ಯೆಯೇ ಮೊದಲಾದ ಸಕಲ ಪಾಪಗಳಿಂದಲೂ ಮುಕ್ತನಾಗಿ ಕೊನೆಗೆ ಶಿವಲೋಕವನ್ನು ಪಡೆಯುವನು. ಈ ವಿಷಯದಲ್ಲಿ ಸಂಶಯವಿಲ್ಲ. ॥೬೬-೬೭॥

ಅಷ್ಟಮೀ ಚಂದ್ರನನ್ನು ಅಂದರೆ ಅರ್ಧಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿಕೊಂಡಿರುವ ಚಂದ್ರಶೇಖರನನ್ನು ಯಾರು ತಪ್ಪದೆ ಪ್ರತಿ ಅಷ್ಟಮೀತಿಥಿಗಳಲ್ಲಿಯೂ

ನಷ್ಟಾನಿ ತೇಷು ದುರಿತಾನಿ ಭವಂತಿ ಸದ್ಯೋ
ಹೃಷ್ಟಾನಿ ತೇಷು ಸಹಿತಾನಿ ವಿಮುಕ್ತಿದಾನಿ ॥೬೮॥

ಯೋ ವಾವಿಮುಕ್ತೇ ಸಿತಭಸ್ಮಫಾಲಃ
ಕಾಲಾಷ್ಟಮೀಷು ನಿಯತಂ ಮಮ ಕಾಲರಾಜಂ ।
ಸಂಪೂಜಯನ್ನಘಗಣೈರ್ನ ಬಿಭೇತಿ ಸದ್ಯೋ
ಹೃದ್ಯೋ ಭವೇದತಿತರಾಂ ಸ ನರೋತಿಧನ್ಯಃ ॥೬೯॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಅಷ್ಟಮೀವ್ರತವಿಧಾನಂ
ಭೈರವಸ್ತುತಿಕಥನಂ ನಾಮ ಚತುಸ್ತ್ರಿಂಶೋಧ್ಯಾಯಃ

ಆರಾಧಿಸುವರೋ, ಅವರ ಸಮಸ್ತಪಾಪರಾಶಿಯೂ ನಾಶಹೊಂದುವುದು. ಅಲ್ಲದೆ ಅವರಿಗೆ ಶಾಶ್ವತವಾದ ಮುಕ್ತಿಯೂ ಲಭಿಸುವುದು. ॥೬೮॥

ಪಾರ್ವತಿಯೇ, ಯಾರು ಕಾಶಿಯಲ್ಲಿ ವಾಸಿಸುತ್ತಾ ಭಸ್ಮಭೂಷಿತಗಾತ್ರನಾಗಿ, ಪ್ರತಿ ಕೃಷ್ಣಾಷ್ಟಮಿಯಲ್ಲಿಯೂ, ನನ್ನ ಗಣಶ್ರೇಷ್ಠನಾದ ಕಾಲಭೈರವನನ್ನು ಪೂಜಿಸುವರೋ, ಅವರು ಸರ್ವಪಾಪಮುಕ್ತರಾಗಿ ಸುಕೃತಿಯೆನಿಸುವರು. ಆದರಿಂದ ಜ್ಞಾನವೈರಾಗ್ಯಾದಿಗಳು ಸಿದ್ಧಿಸಿ ಶಾಶ್ವತವಾದ ಮುಕ್ತಿಯನ್ನು ಹೊಂದುವನು. ಎಂದು ಪರಶಿವನು ಪಾರ್ವತಿಗೆ ಉಪದೇಶಿಸಿದನು. ॥೬೯॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಅಷ್ಟಮೀವ್ರತವಿಧಾನವನ್ನೂ,
ಭೈರವಸ್ತುತಿಯನ್ನೂ ತಿಳಿಸುವ ಮೂವತ್ತುನಾಲ್ಕನೆಯ ಅಧ್ಯಾಯವು
ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಪಂಚತ್ರಿಂಶೋಽಧ್ಯಾಯಃ

॥ ಶ್ರೀ ದೇವ್ಯುವಾಚ ॥

ಉದ್ಯಾಪನವಿಧಿಂ ಬ್ರೂಹಿ ಕೃಪಯಾ ಭಕ್ತವತ್ಸಲ ।
ಕಸ್ಮಿನ್ ಕಾಲೇ ಚ ಕಿಂ ದ್ರವ್ಯಂ ಕೃಷ್ಣಾಷ್ಟಮ್ಯಾಂ ಮಹೇಶ್ವರ ॥೧॥

ತನ್ಮೇ ವದ ಮಹಾದೇವ ವ್ರತಸಾದ್ಗುಣ್ಯಹೇತವೇ ॥೨॥

॥ ಶ್ರೀ ಮಹಾದೇವ ಉವಾಚ ॥

ಪೂರ್ಣಾಂ ತಿಥಿಮನುಪ್ರಾಪ್ಯ ಚಿತ್ತವಿತ್ತಾದಿಸಂಯುತಃ ।
ನಿಶೀಥವ್ಯಾಪಿನೀ ಗ್ರಾಹ್ಯಾ ಸಿತಾ ವಾ ಪ್ಯಸಿತಾ ತಿಥಿಃ ॥೩॥

---

## ಮೂವತ್ತೈದನೆಯ ಅಧ್ಯಾಯ

ಪಾರ್ವತಿಯು ಪರಶಿವನನ್ನು ಕುರಿತು "ಭಕ್ತವತ್ಸಲನಾದ ಮಹಾದೇವನೇ, ಇಲ್ಲಿನವರೆಗೂ ನೀನು ಬೋಧಿಸಿದ ಕೃಷ್ಣಾಷ್ಟಮೀವ್ರತವಿಧಾನವನ್ನು ಕೇಳಿ ತಿಳಿದುಕೊಂಡೆನು. ಆದರೆ ಉದ್ಯಾಪನೆಯ ವಿಧಿಯನ್ನು ನನಗೆ ಕರುಣೆಯಿಂದ ತಿಳಿಯಪಡಿಸುವವನಾಗು. ಯಾವಕಾಲದಲ್ಲಿ ಯಾವ ದ್ರವ್ಯಗಳಿಂದ ಆ ಉದ್ಯಾಪನೆಯನ್ನು ನೆರವೇರಿಸಬೇಕು ? ಹೇಗೆ ಮಾಡಿದರೆ ಆ ವ್ರತದ ಪೂರ್ಣಫಲವು ಲಭಿಸುವುದು ?" ಎಂದು ಪ್ರಶ್ನಿಸಲು ಆಗ ಪರಶಿವನು ಹೀಗೆ ನುಡಿದನು. ॥೧-೨॥

ದೇವಿಯೇ ಕೇಳು, ಇದರ ಉದ್ಯಾಪನೆಯನ್ನು ಅಷ್ಟಮೀತಿಥಿ ಸಂಪೂರ್ಣವಾಗಿರುವ ದಿನದಲ್ಲಿ ಮಾಡಬೇಕು. ಅಥವಾ ಅಷ್ಟಮೀತಿಥಿಯು, ಶುಕ್ಲ ಅಥವಾ

ಕೃಷ್ಣಾಷ್ಟಮೀ ವಿಶೇಷೇಣ ಸಂಪೂರ್ಣ ಫಲಹೇತವೇ ।
ಸಪ್ತಮ್ಯಾಮೇಕಭುಕ್ತಸ್ಸನ್ ಭವಭಕ್ತೋ ಜಿತೇಂದ್ರಿಯಃ ॥೪॥

ಮಾಮಭ್ಯರ್ಚ್ಯ ವಿಧಾನೇನ ಭಸ್ಮರುದ್ರಾಕ್ಷಭೂಷಣಃ ।
ನಿರ್ವರ್ತ್ಯಾವಶ್ಯಕಂ ಕರ್ಮ ವ್ರತಾಂತೇ ದ್ವಾದಶಾಬ್ದಕೇ ॥೫॥

ವರ್ಷೇ ತ್ರಿವರ್ಷೇ ದೇವೇಶಿ ಕೃತ್ವಾ ನಕ್ತಾಷ್ಟಮೀವ್ರತಂ ।
ಪೂರ್ವೋಕ್ತವಿಧಿನಾ ದೇವಿ ಕಾಮೀ ತೂದ್ಯಾಪನಂ ಚರೇತ್ ॥೬॥

ಅಷ್ಟಮ್ಯಾಂ ಬುಧವಾರೇಣ ಯುತಾಯಾಮ್ಯೈಂದವೇ ದಿನೇ ।
ಪ್ರಾತರುತ್ಥಾಯ ಮತಿಮಾನ್ ಸ್ನಾತ್ವಾ ಸಂಧ್ಯಾಮುಪಾಸ್ಯ ಚ ॥೭॥

ಮಂಡಪಂ ರಚಯೇತ್ತತ್ರ ಪುಷ್ಪಮಾಲಾವಿರಾಜಿತಂ ।
ವಿತಾನತೋರಣೋಪೇತಂ ಕದಲೀಸ್ತಂಭಮಂಡಿತಂ ॥೮॥

---

ಕೃಷ್ಣಪಕ್ಷಗಳಿಗೆ ಯಾವುದಕ್ಕೆ ಸಂಬಂಧಿಸಿದ್ದರೂ, ಅರ್ಧರಾತ್ರಿವ್ಯಾಪ್ತಿ ಆ ತಿಥಿಗೆ ಇರಬೇಕು. ಸಪ್ತಮೀದಿವಸ ಒಂದು ಹೊತ್ತು ಊಟಮಾಡಿ ಜಿತೇಂದ್ರಿಯನಾಗಿ ಉದ್ಯಾಪನಾಕಾರ್ಯವನ್ನು ನಡೆಸಬೇಕು. ||೩-೪||

ಈ ಉದ್ಯಾಪನೆ ಮಾಡಬೇಕಾದರೆ, ಪೂರ್ವೋಕ್ತವಾದ ನಕ್ತಾಷ್ಟಮೀವ್ರತ ವನ್ನು ಮೂರು ಅಥವಾ ಹನ್ನೆರಡು ವರ್ಷಗಳ ಕಾಲ ಹಿಂದೆ ಹೇಳಿದ ವಿಧಾನದಿಂದ ನಡೆಸಿ, ಅನಂತರ ಉದ್ಯಾಪನೆ ಮಾಡಬೇಕು. ಸಪ್ತಮೀ ದಿವಸ ತನ್ನ ನಿತ್ಯಕರ್ಮ ಗಳನ್ನೆಲ್ಲಾ ವಿಧಿವತ್ತಾಗಿ ನಡೆಸಿಕೊಳ್ಳಬೇಕು. ||೫-೬||

ಸೋಮ ಅಥವಾ ಬುಧವಾರದಿಂದ ಸಹಿತವಾದ ಅಷ್ಟಮೀತಿಥಿಯೇ ಉದ್ಯಾ ಪನೆಗೆ ಪ್ರಶಸ್ತವಾದುದು. ಆ ದಿನ ಪ್ರಾತಃಕಾಲ ಎದ್ದು ಸಂಧ್ಯಾವಂದನಾದಿಗಳನ್ನು ತೀರಿಸಿಕೊಂಡು, ಪುಷ್ಪಮಾಲಾದಿಗಳಿಂದಲೂ ಮೇಲ್ಕಟ್ಟು ತೋರಣಗಳಿಂದಲೂ ಬಾಳೆಕಂಬದಿಂದಲೂ, ಅಲಂಕೃತವಾದ ದಿವ್ಯಮಂಟಪಗಳಿಂದಲೂ, ಬಾಳೆಕಂಬ ದಿಂದಲೂ ಅಲಂಕೃತವಾದ ದಿವ್ಯಮಂಟಪದಲ್ಲಿ ದೇವತಾರಾಧನೆಗೆ ಸಿದ್ಧಪಡಿಸಿ ಕೊಳ್ಳಬೇಕು. ||೭-೮||

ತಸ್ಮಿನ್ ಸುಗೋಮಯೇನೈವಮುಪಲಿಪ್ತಂ ನವಾಂಭಸಾ ।
ರಂಗವಲ್ಯಾದಿ ಶೋಭಾಢ್ಯಂ ಪದ್ಮಂ ಕುರ್ಯಾತ್ಸಕೇಸರಂ ॥೯॥

ಶಿವಕ್ಷೇತ್ರೇ ಗೃಹೇವಾಪಿ ನದ್ಯಾಂ ವಾ ವಿಪಿನೇ ಗಿರೌ ।
ಪುಣ್ಯಾಹಂ ವಾಚಯಿತ್ವಾಥ ನಾಂದೀಶ್ರಾದ್ಧಂ ವಿಧಾಯ ಚ ॥೧೦॥

ಋತ್ವಿಜೋ ವರಯೇದಷ್ಟೌ ಆಚಾರ್ಯಸಹಿತಾನ್ನವ ।
ಭಸ್ಮರುದ್ರಾಕ್ಷಸಂಪನ್ನಾಃ ಶಿವಲಿಂಗಾರ್ಚಕಾಶ್ಚಿವೇ ॥೧೧॥

ವೇದಾಗಮಪುರಾಣಜ್ಞಾಃ ಬ್ರಾಹ್ಮಣಾಸ್ಸಂಶ್ರಿತವ್ರತಾಃ ।
ತಾನ್ ಗಂಧಪುಷ್ಪೈರಭ್ಯರ್ಚ್ಯ ಸ್ವಯಂ ಚೈವ ಸದಾರಕಃ ॥೧೨॥

ಉಮಾಮಹೇಶ್ವರಂ ಚಾಪಿ ಸೌವರ್ಣೇನೈವ ಕಾರಯೇತ್ ।
ಪಲೇನ ವಾ ತದರ್ಧೇನ ಕುರ್ಯಾದ್ರೌಪ್ಯೇಣ ವಾ ಶಿವೇ ॥೧೩॥

---

ಗೋಮಯ ಮತ್ತು ರಂಗವಲ್ಲೀ ಇವೇ ಮೊದಲಾದುವುಗಳಿಂದ ಭೂಶುದ್ಧಿ ಮಾಡಿ, ಅದರಲ್ಲಿ ಕೇಸರಸಹಿತವಾದ ಪದ್ಮವನ್ನು ಬರೆದು, ಅದರ ಮಧ್ಯದಲ್ಲಿ ದೇವತಾಸ್ಥಾಪನೆ ಮಾಡಬೇಕು. ಶಿವಕ್ಷೇತ್ರ, ಗೃಹಮಧ್ಯ ಅಥವಾ ನದೀತೀರ, ಅರಣ್ಯ, ಬೆಟ್ಟ ಮುಂತಾದ ಪವಿತ್ರಸ್ಥಳಗಳಲ್ಲಿ ಈ ಉದ್ಯಾಪನೆಯನ್ನು ನಡೆಸಬಹುದು. ಆ ದಿವಸ ನದ್ಯಾದಿಗಳಲ್ಲಿ ಸ್ನಾನಮಾಡಿ ಸಂಧ್ಯಾವಂದನಾದಿಗಳನ್ನು ಮುಗಿಸಿಕೊಂಡು, ವಿಧಿವತ್ತಾಗಿ ಪುಣ್ಯಾಹ ಮತ್ತು ನಾಂದೀ ಕರ್ಮಗಳನ್ನು ನಡೆಸಿಕೊಳ್ಳಬೇಕು. ॥೯-೧೦॥

ಅನಂತರ ಆಚಾರ್ಯ ಸಹಿತರಾದ ಋತ್ವಿಜರನ್ನು ಒಂಬತ್ತು ಸಂಖ್ಯೆಯಲ್ಲಿ ಆರಿಸಿಕೊಂಡು ಅವರಿಗೆ ವರಣ ಕೊಡಬೇಕು. ಅವರು ಭಸ್ಮ, ರುದ್ರಾಕ್ಷಿಗಳಿಂದ ಅಲಂಕೃತರಾಗಿ ಸದಾ ಶಿವಲಿಂಗಾರ್ಚನೆಮಾಡುವವರಾಗಿರಬೇಕು. ವೇದಶಾಸ್ತ್ರಪುರಾಣಾದಿಗಳನ್ನು ಪೂರ್ತಿಯಾಗಿ ತಿಳಿದು ಬ್ರಹ್ಮಮಾರ್ಗಾನುಯಾಯಿಗಳಾಗಿರಬೇಕು. ಗಂಧ, ಪುಷ್ಪ ಇವುಗಳಿಂದ ಅವರನ್ನು ಪತ್ನೀಸಮೇತನಾಗಿ ನಿಂತು ಅರ್ಚಿಸಿ ವರಣಕೊಡಬೇಕು. ॥೧೧-೧೨॥

ಒಂದು ಪಲ (ಮೂರು ತೊಲ) ತೂಕದ ಅಥವಾ ಅರ್ಧ ಪಲ ತೂಕದ ಚಿನ್ನ ಅಥವಾ ಬೆಳ್ಳಿಯಿಂದಾಗಲಿ ಉಮಾಮಹೇಶ್ವರ ಪ್ರತಿಮೆಯನ್ನು ಮಾಡಿಸಬೇಕು. ಹಾಗೆಯೇ, ನಂದೀಶ್ವರ, ಸ್ಕಂದಸ್ವಾಮಿ, ಮಹಾಕಾಲೇಶ್ವರ, ಶಂಕುಕರ್ಣ,

ನಂದಿಂ ಸ್ಕಂದಂ ಮಹಾಕಾಲಂ ಶಂಕುಕರ್ಣಂ ಗಣೇಶ್ವರಂ ।
ಚಂಡೇಶ್ವರಂ ಚ ವೃಷಭಂ ದುರ್ಗಾಂ ಚೈವ ಯಥಾವಿಧಿ ॥೧೪॥

ಮೃನ್ಮಯೈಸ್ತಾಮ್ರಜೈರ್ವಾಪಿ ಕುಂಭೈರಂಬುಪ್ರಪೂರಿತೈಃ ।
ಫಲಪಲ್ಲವಸಂಯುಕ್ತೈಸ್ತೇಷು ತಾಂ ಪ್ರತಿಮಾಂ ನ್ಯಸೇತ್ ॥೧೫॥

ಮಧ್ಯಮೇ ಚ ಮಹಾಕುಂಭೇ ಸಾಂಬಂ ಪುಷ್ಪಫಲೈರ್ಯುತೇ ।
ಉಮಾಮಹೇಶ್ವರಂ ಸ್ಥಾಪ್ಯ ಪ್ರತಿಷ್ಠಾಪ್ಯಾರ್ಚಯೇತ್ಕ್ರಮಾತ್ ॥೧೬॥

ದಿಗಾದಿಕ್ರಮಯೋಗೇನ ಅಷ್ಟಮೂರ್ತೀರ್ಯಜೇಚ್ಛಿವೇ ।
ಪ್ರಾಣಾನಾಯಮ್ಯ ವಿಧಿವತ್ಕೃತ್ವಾ ಸಂಕಲ್ಪಮಾದರಾತ್ ॥೧೭॥

ಉದ್ಯಾಪನಂ ಕರಿಷ್ಯೇಽಹಂ ಕೃಷ್ಣಾಷ್ಟಮ್ಯರ್ಚನಸ್ಯ ಚ ।
ಇತ್ಯುಕ್ತ್ವಾ ಪೂಜಯೇತ್ತತ್ರ ಲಿಂಗಮೂರ್ತಿಂ ಸದಾಶಿವಂ ॥೧೮॥

ಪಂಚಾಮೃತೈಃ ಪಂಚಗವ್ಯೈಸ್ತಥಾ ಫಲರಸೈರಪಿ ।
ಗಂಧಪುಷ್ಪಕುಶಾದೀಂಶ್ಚ ಮಂತ್ರಪೂತೈರ್ಯಜೇಚ್ಛಿವಂ ॥೧೯॥

---

ಗಣೇಶ್ವರ, ಚಂಡೇಶ್ವರ, ವೃಷಭೇಶ್ವರ, ದುರ್ಗಾ ಮುಂತಾದ ದೇವತಾವಿಗ್ರಹಗಳನ್ನೂ ವಿಧಿವತ್ತಾಗಿ ಮಾಡಿಸಬೇಕು. ||೧೩-೧೪||

ಮಣ್ಣು ಅಥವಾ ತಾಮ್ರ ಇವುಗಳಿಂದ ನಿರ್ಮಿತವಾದ ಕಲಶಗಳಲ್ಲಿ ನೀರನ್ನು ತುಂಬಿ, ಅದಕ್ಕೆ ಫಲ, ಪಲ್ಲವ ಇವುಗಳನ್ನು ಹಾಕಿ, ಅವುಗಳಲ್ಲಿ ಆಯಾ ದೇವತೆಗಳ ಪ್ರತಿಮೆಗಳನ್ನು ಮಂತ್ರಪೂರ್ವಕವಾಗಿ ಹಾಕಬೇಕು. ಮಧ್ಯದಲ್ಲಿರುವ ಪ್ರಧಾನ ಕಲಶದಲ್ಲಿ ಉಮಾಮಹೇಶ್ವರಮೂರ್ತಿಯನ್ನು ಹಾಕಿ, ಫಲಪುಷ್ಪಗಳಿಂದ ಅಲಂಕರಿಸಿ, ಅದರಲ್ಲಿ ವಿಧಿವತ್ತಾಗಿ ಆವಾಹನೆ ಮಾಡಿ ಪೂಜಿಸಬೇಕು. ||೧೫-೧೬||

ಶಿವನ ಅಷ್ಟಮೂರ್ತಿಗಳನ್ನೂ ಎಂಟುದಿಕ್ಕುಗಳಲ್ಲಿ ಕ್ರಮವರಿತು ಆವಾಹನೆ ಮಾಡಿ ಮತ್ತೆ ಪ್ರಾಣಾಯಾಮಪುರಸ್ಸರವಾಗಿ ಕೃಷ್ಣಾಷ್ಟಮೀವ್ರತದ ಉದ್ಯಾಪನೆಯನ್ನು ನಡೆಸುತ್ತೇನೆಂದು ಸಂಕಲ್ಪಮಾಡಬೇಕು. ಅನಂತರ ಶಿವಲಿಂಗಸ್ವರೂಪಿಯಾದ ಸದಾಶಿವನನ್ನು ಅಲ್ಲಿ ಪೂಜಿಸಬೇಕು. ||೧೭-೧೮||

ಪಂಚಾಮೃತ, ಪಂಚಗವ್ಯಸಾಮಗ್ರಿಗಳು, ಫಲರಸ, ಗಂಧ, ಪುಷ್ಪ, ದರ್ಭೆ, ಮುಂತಾದುವುಗಳನ್ನು ಮಂತ್ರದಿಂದ ಪ್ರೋಕ್ಷಿಸಿ, ಅದರಿಂದ ರುದ್ರಮಂತ್ರೋಚ್ಚಾರಣ

ರುದ್ರೇಣೈವಾಭಿಷಿಚ್ಯೇಶಂ ತರ್ಪಯೇದಷ್ಟನಾಮಭಿಃ ।
ವಾಸೋ ಯಜ್ಞೋಪವೀತಂ ಚ ಭಸ್ಮಚಂದನಸಾಕ್ಷತಂ ॥೨೦॥

ಬಿಲ್ವಪಂಕಜಪುನ್ನಾಗಸೌಗಂಧಿಕುಸುಮಾನಿ ಚ ।
ಪೂಜಯೇತ್ಪಾರ್ವತೀಕಾಂತಂ ನಿಧನೇತ್ಯಾದಿಮಂತ್ರತಃ ॥೨೧॥

ಧೂಪಂ ದೀಪಂ ತತೋ ದತ್ವಾ ನಿವೇದ್ಯ ಹವಿರಂಬಿಕೇ ।
ತಾಂಬೂಲಂ ಚ ತತೋ ದದ್ಯಾನ್ನೀರಾಜನಮತಃಪರಂ ॥೨೨॥

ಪ್ರದಕ್ಷಿಣನಮಸ್ಕಾರೈಃ ಸ್ತೋತ್ರೈಃ ಸ್ತುತ್ವಾ ಮಹೇಶ್ವರಂ ।
ವಿಸರ್ಜಯಿತ್ವಾ ಚ ತತೋ ಕುಂಭೇ ಮೂರ್ತಿಂ ಪ್ರಪೂಜಯೇತ್ ॥೨೩॥

ಗಂಧಪುಷ್ಪಾಕ್ಷತೈರ್ದೇವಿ ಋತ್ವಿಗಾಚಾರ್ಯವಸ್ತ್ರತಃ ।
ಉಮಾಮಹೇಶ್ವರಂ ದೇವಮಾಚಾರ್ಯಃ ಪೂಜಯೇಚ್ಛಿವೇ ॥೨೪॥

ರುದ್ರದುರ್ಗಾದಿಗಾಯತ್ರ್ಯಾ ಪೂಜ್ಯ ಸರ್ವೋಪಚಾರಕೈಃ ।
ಋತ್ವಿಜೋಽಷ್ಟೌ ತಥಾ ಮೂರ್ತೀಃ ಪೂಜಯೇಯುರ್ಯತವ್ರತಾಃ ॥೨೫॥

---

ಪೂರ್ವಕವಾಗಿ ಅಭಿಷೇಕಮಾಡಬೇಕು. ಹಾಗೆಯೇ ಭವಾದಿ ಎಂಟು ನಾಮಗಳಿಂದ ತರ್ಪಣಮಾಡಿ, ವಸ್ತ್ರ, ಯಜ್ಞೋಪವೀತ, ಚಂದನ, ಭಸ್ಮ ಇವುಗಳನ್ನು ಸಮರ್ಪಿಸಬೇಕು. ॥೧೯-೨೦॥

ಬಿಲ್ವದಳದಿಂದಲೂ, ಕಮಲ, ಸುರಗಿ, ಕಲ್ಹಾರ ಮುಂತಾದ ಪುಷ್ಪಗಳಿಂದಲೂ 'ನಿಧನಪತಯೇ ನಮಃ' ಇತ್ಯಾದಿ ನಾಮಮಂತ್ರಗಳನ್ನುಚ್ಚರಿಸುತ್ತಾ ಪರಶಿವನನ್ನು ಪೂಜಿಸಬೇಕು. ಹಾಗೆಯೇ, ಧೂಪ, ದೀಪ, ನೈವೇದ್ಯ, ತಾಂಬೂಲ, ನೀರಾಜನ ಇವೇ ಮೊದಲಾದ ಉಪಚಾರಗಳಿಂದ ಭಕ್ತಿಪೂರ್ವಕವಾಗಿ ಸ್ವಾಮಿಯನ್ನು ಅರ್ಚಿಸಬೇಕು. ॥೨೧-೨೨॥

ಪ್ರದಕ್ಷಿಣೆನಮಸ್ಕಾರಗಳಿಂದಲೂ, ನಾನಾವಿಧವಾದ ಸ್ತುತಿವಚನಗಳಿಂದಲೂ ಮಹೇಶ್ವರನನ್ನು ಪೂಜಿಸಿ, ಅನಂತರ ವಿಸರ್ಜನೆಮಾಡಬೇಕು. ಋತ್ವಿಗಾಚಾರ್ಯಾದಿಗಳನ್ನು ಗಂಧಾದ್ಯುಪಚಾರಗಳಿಂದ ಪೂಜಿಸಿ, ಆಚಾರ್ಯನನ್ನು ಸಾಕ್ಷಾದುಮಾಮಹೇಶ್ವರರೂಪಿಯೆಂದೇ ಆರಾಧಿಸಬೇಕು. ॥೨೩-೨೪॥

ಎಂಟು ಜನ ಋತ್ವಿಕ್ಕುಗಳನ್ನೂ ಶಿವನ ಅಷ್ಟಮೂರ್ತಿಗಳೆಂದು ಭಾವಿಸಿ,

ದಿಕ್ಕುಂಭೇಷು ಸಮಂತಾಚ್ಚ ತತೋ ಗಾಯತ್ರೀಭಿಃ ಕ್ರಮಾತ್ ।
ಸಂಪೂಜ್ಯ ಗಂಧಪುಷ್ಪಾದ್ಯೈರ್ನಿವೇದ್ಯ ಹವಿರೀಶ್ವರಿ ॥೨೬॥

ನೀರಾಜನಬಲಿಂ ಕುರ್ಯುಃ ತತ್ರಸ್ಮಂತ್ರೈರ್ದಿಶಾಮುಖೇ ।
ಮಂಟಪಾತ್ಪಶ್ಚಿಮೇ ಭಾಗೇ ಸ್ಥಂಡಿಲಂ ಚತುರಸ್ರಕಂ ॥೨೭॥

ಕೃತ್ವಾ ಚೋಲ್ಲೇಖನಾದೀನಿ ಪ್ರತಿಷ್ಠಾಪ್ಯಾಗ್ನಿಮೀಶ್ವರಿ ।
ಇಧ್ಮಾನ್ ದರ್ಭಾನ್ ಪರಿಸ್ತೀರ್ಯ ಪಾತ್ರಾಸಾದನಮಾಚರೇತ್ ॥೨೮॥

ಪೂರ್ಣಪಾತ್ರಪ್ರತಿಷ್ಠಾಂ ಚ ಬ್ರಹ್ಮಾಸನಪುರಸ್ಸರಂ ।
ಇಧ್ಮಾಧಾನಾದಿ ಚಾಘಾರಂ ಹುತ್ವಾ ಚೈವ ತು ಚಕ್ಷುಷೀ ॥೨೯॥

ಅಪಾಮಾರ್ಗಸಮಿದ್ಭಿಶ್ಚ ಬಿಲ್ವೈರ್ವಾಪಿ ಮಹೇಶ್ವರಿ ।
ಹವಿಶ್ಚ ಸರ್ಪಿಷಾ ಯುಕ್ತಂ ಸತಿಲಂ ಜುಹುಯಾಚ್ಛಿವೇ ॥೩೦॥

---

ರುದ್ರಗಾಯತ್ರೀ, ದುರ್ಗಾಗಾಯತ್ರೀ ಈ ಮಂತ್ರಗಳಿಂದ ಅವರನ್ನು ಆರಾಧಿಸಿ, ಪ್ರತಿ ದಿಕ್ಕುಗಳಲ್ಲಿಯೂ ಇಟ್ಟಿರುವ ಒಂದೊಂದು ಕಲಶದ ಮುಂದೆಯೂ ಗಂಧಾದಿ ಪೂಜಾದ್ರವ್ಯಗಳಿಂದ ಪೂಜಿಸಿ ಹವಿರ್ನಿವೇದನಮಾಡಬೇಕು. ||೨೫-೨೬||

ಅನಂತರ ನೀರಾಜನ, ಬಲಿ, ಮುಂತಾದುವುಗಳನ್ನು ಕೊಟ್ಟು, ದೇವ ಮಂಟಪದ ಪಶ್ಚಿಮಭಾಗದಲ್ಲಿ ಚತುರಸ್ರಾಕಾರವಾದ ಒಂದು ಸ್ಥಂಡಿಲವನ್ನು ಅಂದರೆ ಅಗ್ನಿಪ್ರತಿಷ್ಠೆಗೆ ಸಾಕಾದ ಪೀಠವನ್ನು ವಿಧಿವತ್ತಾಗಿ ಕಲ್ಪಿಸಿಕೊಳ್ಳಬೇಕು. ಅದರಲ್ಲಿ ಉಲ್ಲೇಖನಾದಿಗಳನ್ನು ನಡೆಸಿ ಅಗ್ನಿಪ್ರತಿಷ್ಠೆಮಾಡಿ, ಇಧ್ಮಗಳು, ದರ್ಭೆಗಳು ಇವುಗಳನ್ನು ಸಿದ್ಧಪಡಿಸಿಕೊಂಡು ಪಾತ್ರಾಸಾದನವನ್ನು ನಡೆಸಬೇಕು. ||೨೭-೨೮||

ಪೂರ್ಣಪಾತ್ರಸ್ಥಾಪನೆ, ಬ್ರಹ್ಮತ್ವವನ್ನು ಬ್ರಾಹ್ಮಣನಲ್ಲಿ ಆವಾಹಿಸುವುದು, ಹದಿನೈದು ಸಮಿತ್ತುಗಳಿಂದ ಕೂಡಿದ ಇಧ್ಮವನ್ನು ಅಗ್ನಿಗೆ ಪ್ರಕ್ಷೇಪಿಸುವುದು, ಆಘಾರಾಜ್ಯ ಹೋಮ, ಚಕ್ಷುಷೀಹೋಮ, ಇವುಗಳನ್ನು ಸ್ವಶಾಖೋಕ್ತವಾಗಿ ನೆರವೇರಿಸಿ ಅನಂತರ ಪ್ರಧಾನಹೋಮ ಮಾಡಬೇಕು. ಉತ್ತರಣೀಸಮಿತ್ತು, ಅಥವಾ ಬಿಲ್ವಸಮಿತ್ತು, ಹವಿಸ್ಸು, ಆಜ್ಯ, ತಿಲ ಈ ದ್ರವ್ಯಗಳಿಂದ ಪ್ರಧಾನಹೋಮವನ್ನು ನಡೆಸಬೇಕು. ||೨೯-೩೦||

ರುದ್ರೈರ್ನಮೋಂತೈಸ್ಸ್ವಾಹೇತಿ ಶತಾಷ್ಟಂ ಸ್ವಿಷ್ಟಕೃತ್ತತಃ ।
ಗಣಪಾಂಶ್ಚ ಹುನೇತ್ತತ್ರ ಸ್ವಾಹಾಕಾರೇಣ ಚಾನಲೇ ॥೩೧॥

ಪ್ರಾಯಶ್ಚಿತ್ತಾಹುತೀರ್ಹುತ್ವಾ ಹೋಮಶೇಷಂ ಸಮಾಪಯೇತ್ ।
ಪೂರ್ಣಾಹುತಿಂ ಚ ಜುಹುಯಾದಖಂಡಘೃತಧಾರಯಾ ॥೩೨॥

ರುದ್ರಸೂಕ್ತೇನ ದೇವೇಶಿ ಔದುಂಬರಸ್ರುಚಾ ಹುತಾ ।
ಮಧುಮಿಶ್ರೇಣ ಚಾಜ್ಯೇನ ಶಾಂತ್ಯರ್ಥಂ ಚಮಕಂ ಹುನೇತ್ ॥೩೩॥

ತದಂತೇ ಚಾಗ್ನಿಮಧ್ಯಸ್ಥಂ ಪೂಜಯೇನ್ಮಾಂ ತ್ವಯಾ ಸಹ ।
ಗಂಧೈಃ ಪುಷ್ಪೈಸ್ತಥಾ ಬಿಲ್ವೈರ್ವಾಸಸಾ ಹವಿಷಾ ತಥಾ ॥೩೪॥

ಧೂಪಂ ದೀಪಂ ತತೋ ದತ್ವಾ ನೀರಾಜ್ಯಾಗ್ನಿಂ ದ್ವಿಜೈಸ್ಸಹ ।
ತ್ರಿಃ ಪ್ರದಕ್ಷಿಣಮಾವೃತ್ಯ ಸಮಿಧಂ ಜಾತವೇದಸಂ ॥೩೫॥

ಪ್ರೋಕ್ಷಣಾಮಧ್ಯಗಾಂಭೋಭಿಃ ಪ್ರೋಕ್ಷಯೇಚ್ಚ ಸದಾರಕಾನ್ ।
ವಾಸೋಲಂಕಾರಗೋಭಿಸ್ತಾನ್ ಪೂಜಯೇಚ್ಛಾಂಭವಾಂಘ್ರಿಪೇ ॥೩೬॥

ನಮಶ್ಶಬ್ದಾಂತವಾದ ರುದ್ರಮಂತ್ರಗಳಿಂದ ಸ್ವಾಹಾಂತವಾಗಿ ನೂರೆಂಟು ಪ್ರಧಾನಹೋಮಗಳನ್ನು ನಡೆಸಿ, ಅನಂತರ ಸ್ವಿಷ್ಟಕೃದ್ಧೋಮ, ಕ್ರತುಸಾದ್ಗುಣ್ಯ ದೇವತಾಹೋಮ, ಪ್ರಾಯಶ್ಚಿತ್ತಹೋಮ, ಇವುಗಳನ್ನು ನಡೆಸಿ ಅಖಂಡವಾದ ತುಪ್ಪದ ಧಾರೆಯಿಂದ ಪೂರ್ಣಾಹುತಿಯನ್ನು ಕೊಡಬೇಕು. ॥೩೧-೩೨॥

ಆ ಪೂರ್ಣಾಹುತಿಯನ್ನು ಮಧುಮಿಶ್ರವಾದ ಆಜ್ಯಧಾರಾಪೂರ್ವಕವಾಗಿ ರುದ್ರಸೂಕ್ತ, ಚಮಕ ಇವುಗಳನ್ನು ಹೇಳುತ್ತಾ, ಅತ್ತಿಯಮರದಿಂದ ಮಾಡಿದ ಸ್ರುಕ್ಕಿನಿಂದ ನಡೆಸಬೇಕು. ಅನಂತರ ಅಗ್ನಿಮಧ್ಯದಲ್ಲಿ ಉಮಾಮಹೇಶ್ವರನು ನೆಲಸಿರುವನೆಂಬ ಭಾವನೆಯಿಂದ, ಅಗ್ನಿಪುರುಷನನ್ನು ಗಂಧಾದ್ಯುಪಚಾರಗಳಿಂದಲೂ, ಬಿಲ್ವಪತ್ರೆ, ವಸ್ತ್ರ ಮುಂತಾದುವುಗಳನ್ನು ಅರ್ಪಿಸುತ್ತಲೂ ಪೂಜಿಸಬೇಕು. ॥೩೩-೩೪॥

ಹಾಗೆಯೇ ಧೂಪ, ದೀಪ, ನೀರಾಜನ ಮುಂತಾದುವುಗಳಿಂದ ಅಗ್ನಿಯನ್ನು ಪೂಜಿಸಿ, ಬ್ರಾಹ್ಮಣರೊಡನೆ ಮೂರುಸಾರಿ ಅಗ್ನಿಪ್ರದಕ್ಷಿಣೆ ಮಾಡಬೇಕು. ಪ್ರೋಕ್ಷಣಪಾತ್ರಸ್ಥವಾದ ನೀರಿನಿಂದ ತಾನು ಪತ್ನೀಸಹಿತನಾಗಿ ಪ್ರೋಕ್ಷಿಸಿಕೊಂಡು, ಅನಂತರ

ಪೃಥಕ್ಚ ಋತ್ವಿಗಾಚಾರ್ಯಂ ಪೂಜಯೇದ್ದಕ್ಷಿಣಾದಿಭಿಃ ।
ವಿತ್ತಶಾಠ್ಯಮಕುರ್ವಾಣೋ ಬ್ರಹ್ಮಾಣಂ ಬ್ರಾಹ್ಮಣಂ ಯಜೇತ್ ॥೩೭॥

ದೀನಾನಾಥಾನ್ ದಕ್ಷಿಣಾಭಿಃ ಪೂಜ್ಯಾನ್ನೈರ್ಭೋಜಯೇದಪಿ ।
ಪ್ರತಿಮಾಸ್ತಾ ಸಕುಂಭಾಂಶ್ಚ ದೇಯಾ ಋತ್ವಿಕ್ಸುಮೂರ್ತಿಕಾಃ ॥೩೮॥

ಕುಂಭಸ್ಥೈಸ್ತಜ್ಜಲೈಃ ಸ್ನಾತ್ವಾ ಸದಾರೋ ಧೌತವಸ್ತ್ರಧೃಕ್ ।
ಗಂಧಪುಷ್ಪಧರೋ ವಿಪ್ರೋ ಋತ್ವಿಗಾಚಾರ್ಯಪೂರ್ವಕಂ ॥೩೯॥

ಭುಂಜೀಯಾದ್ಭಕ್ಷ್ಯಭೋಜ್ಯಾನ್ನಂ ಶಿವಮಭ್ಯರ್ಚ್ಯ ವಾಗ್ಯತಃ ।
ನವಮ್ಯಾಂ ಪಾರಣಂ ಕುರ್ಯಾದ್ಬಂಧುಭಿಶ್ಚ ವಿಶೇಷತಃ ॥೪೦॥

ಆಚಾರ್ಯಂ ಚ ಸಪತ್ನೀಕಂ ಪೂಜಯಿತ್ವಾ ಯಥಾವಿಧಿ ।
ಪ್ರತಿಮಾವಸ್ತ್ರಕಲಶಾನ್ ಗಾವೋ ವತ್ಸವಿಶೋಭಿತಾಃ ॥೪೧॥

ವಸ್ತ್ರಾಭರಣಘಂಟಾದ್ಯಾಃ ಕಾಂಸ್ಯದೋಹಾಃ ಪಯಸ್ವಿನೀಃ ।
ದತ್ವಾ ಬ್ರಹ್ಮಾದಿವಿಪ್ರೇಭ್ಯಃ ಕಲಶಪ್ರತಿಮಾಸ್ತಥಾ ॥೪೨॥

---

ಶೈವಬ್ರಾಹ್ಮಣ ದಂಪತಿಗಳಿಗೆ ವಸ್ತ್ರ, ಅಲಂಕಾರ, ಗೋವು ಇವುಗಳನ್ನು ದಾನ ಮಾಡುತ್ತಾ ಪೂಜೆಯನ್ನು ಸಲ್ಲಿಸಬೇಕು. ॥೩೫-೩೭॥

ಋತ್ವಿಕ್ಕುಗಳು, ಆಚಾರ್ಯರು, ಬ್ರಹ್ಮ, ಇವರಿಗೆ ತನ್ನ ಶಕ್ತ್ಯಾನುಸಾರವಾಗಿ ಕಾರ್ಪಣ್ಯವನ್ನು ಬಿಟ್ಟು, ವಿಶೇಷ ಧನಾದಿಗಳಿಂದ ತೃಪ್ತಿಪಡಿಸಬೇಕು. ಹಾಗೆಯೇ, ದೀನರಿಗೂ, ಅನಾಥರಿಗೂ, ಅನ್ನದಾನನಡೆಸಬೇಕು. ಕಲಶವಸ್ತ್ರಪ್ರತಿಮಾದಾನ ಗಳನ್ನು ಋತ್ವಿಕ್ಕುಗಳಿಗೆ ದಾನಮಾಡಬೇಕು. ॥೩೭-೩೮॥

ಕಲಶೋದಕಗಳಿಂದ ಪತ್ನೀಸಹಿತನಾಗಿ ಕುಳಿತು ಮಾರ್ಜನೆಮಾಡಿಸಿಕೊಳ್ಳ ಬೇಕು. ಅನಂತರ ಶುಭ್ರವಸ್ತ್ರಧಾರಿಯಾಗಿ ಗಂಧಪುಷ್ಪಾದಿಗಳನ್ನು ಧರಿಸಿ ಋತ್ವಿ ಗಾಚಾರ್ಯರೊಡನೆ ಭೋಜನಮಾಡಬೇಕು. ಭೋಜನವನ್ನೂ ನವಮಿಯ ದಿನ ಭಕ್ಷ್ಯಭೋಜ್ಯಾದಿಗಳೊಡನೆ ಪಾರಣೆಯಂತೆ ನಡೆಸಬೇಕು. ॥೩೯-೪೦॥

ಭೋಜನಾನಂತರ ಪತ್ನಿಸಹಿತನಾದ ಆಚಾರ್ಯನನ್ನು ಪೂಜಿಸಬೇಕು. ಅವರಿಗೆ ಕಲಶ ವಸ್ತ್ರಪ್ರತಿಮಾದಾನಗಳನ್ನೂ, ಗೋದಾನವನ್ನೂ, ಅದರೊಡನೆ ವಸ್ತ್ರಾಭರಣಗಳು, ಗಂಟೆ, ಕಂಚಿನಪಾತ್ರೆ, ಮುಂತಾದುವುಗಳನ್ನೂ ದಾನವಾಗಿ ಕೊಡಬೇಕು. ಬ್ರಾಹ್ಮಣ

ಬ್ರಾಹ್ಮಣಾನ್ ಭೋಜಯೇದನ್ನೈರ್ಗೃಹ್ಣೀಯಾದಾಶಿಷಃ ಶಿವೇ ।
ಶಿವೋ ಮೇ ಪ್ರೀಯತಾಂ ದೇವಃ ಸಾಂಬಃ ಸಗಣ ಈಶ್ವರಃ ॥೪೩॥

ಕೃಷ್ಣಾಷ್ಟಮ್ಯಾಮರ್ಚನೇನ ವ್ರತೇನೋದ್ಯಾಪನೇನ ಚ ।
ಭುಕ್ತಿಂ ಮುಕ್ತಿಂ ಚ ಮೇ ಭಕ್ತಿಂ ದದಾತು ಪರಮೇಶ್ವರಃ ॥೪೪॥

ಇತ್ಯುಕ್ತ್ವಾ ತು ಪ್ರಸಾದ್ಯೇಶಂ ವ್ರತೋದ್ಯಾಪನಕರ್ಮಣಿ ।
ಉದ್ಯಾಪನಮಿದಂ ದೇವಿ ಕೃಷ್ಣಾಷ್ಟಮ್ಯಾಂ ವ್ರತಸ್ಯ ಚ ॥೪೫॥

ಯತ್ಕೃತ್ವಾ ನ ಪುನರ್ಜನ್ಮ ವಿಂದತೇ ಮನುಜಃ ಕ್ವಚಿತ್ ।
ಗಾಣಾಪತ್ಯಮವಾಪ್ನೋತಿ ಮಮ ಕೈಲಾಸಮೌಲಿಗಃ ॥೪೬॥

ಏವಂ ನರೋ ವಾ ನಾರೀ ವಾ ಕೃತ್ವಾ ಮಧ್ಯಾಷ್ಟಮೀವ್ರತಂ ।
ಯಾನ್ಯಾನ್ ಚಿಂತಯತೇ ಕಾಮಾನ್ ಪ್ರಾಪ್ಯ ಸ ಪ್ರೇತ್ಯಮಾಂ
ವ್ರಜೇತ್ ॥೪೭॥

---

ಭೋಜನಾನಂತರ ಆಶೀರ್ವಾದವನ್ನು ಪಡೆದು, ನಾನು ಆಚರಿಸಿದ ಈ ವ್ರತದಿಂದ ಪಾರ್ವತೀಪತಿಯಾದ ಶಂಕರನು ಸುಪ್ರೀತನಾಗಲಿ ಎಂದು ಸರ್ವವನ್ನೂ ಶಿವಾರ್ಪಣೆ ಮಾಡಬೇಕು. ॥೪೧-೪೨-೪೩॥

ದೇವಿಯೇ, ಈರೀತಿ ನಡೆಸಿದ ಕೃಷ್ಣಾಷ್ಟಮೀವ್ರತದ ಉದ್ಯಾಪನೆಯಿಂದ ಪರಶಿವನು ತೃಪ್ತನಾಗಿ ನನಗೆ ಭುಕ್ತಿಮುಕ್ತಿಗಳನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸಬೇಕು. ಹೀಗೆಮಾಡುವುದರಿಂದ ನಾನು ನಿಜವಾಗಿಯೂ ತೃಪ್ತನಾಗುವೆನು. ದೇವಿಯೇ, ಇದೇ ಕೃಷ್ಣಾಷ್ಟಮೀವ್ರತದ ಉದ್ಯಾಪನೆಯ ವಿಧಾನ. ॥೪೪-೪೫॥

ಈ ಮಧ್ಯಾಷ್ಟಮೀವ್ರತ ಮತ್ತು ಅದರ ಉದ್ಯಾಪನೆಯನ್ನು ವಿಧಿವತ್ತಾಗಿ ನಡೆಸುವುದರಿಂದ ಮಾನವರು ನನ್ನ ಕೈಲಾಸದಲ್ಲಿ ಗಾಣಾಪತ್ಯಪದವಿಯನ್ನು ಹೊಂದುವರು. ಈ ವ್ರತವನ್ನು ಸ್ತ್ರೀಪುರುಷರಲ್ಲಿ ಯಾರುಬೇಕಾದರೂ ಮಾಡಬಹುದು. ಹಾಗೆ ಮಾಡಿದವರಿಗೆ ಸಕಲ ಇಷ್ಟಾರ್ಥಗಳೂ ದೊರೆತು ಕೊನೆಗೆ ಅವರು ನನ್ನ ಸಾಯುಜ್ಯವನ್ನು ಪಡೆಯುವರು. ॥೪೬-೪೭॥

ಉದ್ಯಾಪ್ಯ ಚ ಪುನರ್ದೇವಿ ಗೃಹ್ಣೀಯಾದಥ ಭಕ್ತಿತಃ ।
ಕಿಂ ಪುನರ್ಬಹುನೋಕ್ತೇನ ನಾನೇನ ಸದೃಶಂ ವ್ರತಂ ॥೪೮॥

ಭುಕ್ತಿಮುಕ್ತಿಪ್ರದಂ ಪುಂಸಾಂ ಸೌಭಾಗ್ಯಾರೋಗ್ಯವರ್ಧನಂ ।
ಪಾಪಾಪಹಂ ಪುಣ್ಯದಂ ಚ ಪ್ರಶಸ್ತಂ ಮಮ ಪೂಜನಂ ॥೪೯॥

ಸರ್ವಕಾಮಪ್ರದಂ ಪುತ್ರ್ಯಮಪುತ್ರಾಣಾಂ ವಿಶೇಷತಃ ।
ಸರ್ವೋ ಭದ್ರಮವಾಪ್ನೋತಿ ದುರ್ಗಾಣ್ಯಾಶು ತರತ್ಯಪಿ ॥೫೦॥

ಏವಂ ಕೃಷ್ಣಾಷ್ಟಮೀಷು ವ್ರತಮಶುಭಹರಂ ಪುತ್ರ್ಯಮಾರೋಗ್ಯದಂ ಮೇ
ಕೃತ್ವಾ ಜನ್ಮಶತಾಯುತಾಘಸುಮಹಾಪಾಪೈರ್ನ ಬಿಭ್ಯೇದ್ಯಥಾ ।
ಪಶ್ಚಾನ್ಮೇ ಗಣಪುಂಗವೇಂದ್ರತಾಮುಪಗತೋ ನಾಸೌ ಶಿವೇ ದುರ್ಗತಿಂ
ನಾಪ್ನೋತೀಶ್ವರಚಿಂತಕಃ ಸ ಸುಕೃತಾಂ ರಾಶಿಂ ಚ ವಿಂದೇದಪಿ ॥೫೧॥

---

ಪ್ರಾರಂಭದಲ್ಲಿಯೇ ಉದ್ಯಾಪನೆಮಾಡಿ ವ್ರತವನ್ನು ಆರಂಭಿಸಬಹುದು. ಒಟ್ಟಿನಲ್ಲಿ ವ್ರತಗಳಲ್ಲಿ ಈ ವ್ರತವು ಅತ್ಯುತ್ತಮವೆನಿಸಿಕೊಂಡಿರುವುದು. ಐಹಿಕವಾದ ಮತ್ತು ಆಮುಷ್ಮಿಕವಾದ ಸಕಲ ಸೌಖ್ಯಗಳನ್ನೂ ಕೊಟ್ಟು, ಆರೋಗ್ಯಾದಿಗಳನ್ನು ಹೆಚ್ಚಿಸಿ, ಪಾಪನಾಶಕವಾಗಿ ಪುಣ್ಯಪ್ರದವೆನಿಸುವ ಈವ್ರತದ ವಿಷಯದಲ್ಲಿ ಹೆಚ್ಚು ಹೇಳುವುದೇನಿದೆ? ॥೪೮-೪೯॥

ಈವ್ರತವು ಸಕಲ ಇಷ್ಟಾರ್ಥಗಳನ್ನೂ, ಪುತ್ರಪೌತ್ರಾದಿಸಂಪತ್ತನ್ನೂ ಒದಗಿಸಿ ಅಮಂಗಳಗಳನ್ನು ನಿವಾರಿಸುವುದು. ದೇವಿಯೇ ಕೇಳು, ಈ ಕೃಷ್ಣಾಷ್ಟಮೀ ವ್ರತಾಚರಣೆಯಿಂದ ಮಾನವರು ಶತಜನ್ಮಗಳಿಂದ ಸಂಪಾದಿಸಿದ ಪಾಪರಾಶಿಯನ್ನೆಲ್ಲಾ ನಿವಾರಿಸಿಕೊಳ್ಳುವರು. ಐಹಿಕವಾದ ಪುತ್ರಪೌತ್ರಾದಿಸಂಪತ್ತನ್ನೂ ಅನುಭವಿಸುವರು. ಅನಂತರ ನನ್ನ ಸನ್ನಿಧಿಗೆ ಬಂದು ನನ್ನ ಗಣಾಧಿಪತಿಗಳಲ್ಲಿ ಒಬ್ಬರೆನಿಸುವರು. ಈಶ್ವರಧ್ಯಾನನಿರತನಾದವನಿಗೆ ಎಂದೂ ನರಕವಾಸವಾಗಲಿ, ಅನಿಷ್ಟಪ್ರಾಪ್ತಿಯಾಗಲಿ ಇರುವುದಿಲ್ಲ. ಸುಕೃತರಾಶಿಯನ್ನೇಪಡೆದು ಬಹುಕಾಲಜೀವಿಸುವನು. ಅಷ್ಟು ಪರಮ ಪವಿತ್ರವೂ ಪುಣ್ಯಪ್ರದವೂ ಆದ ಈ ವ್ರತದ ಕ್ರಮವನ್ನೂ ಉದ್ಯಾಪನೆಯ ವಿಧಾನ ವನ್ನೂ ನಿನಗೆ ಈಗ ತಿಳಿಯಪಡಿಸಿರುವೆನು. ಎಂದು ಮಹಾದೇವನು ದೇವಿಗೆ ತಿಳಿಸಿದನು. ॥೫೦-೫೧॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಕೃಷ್ಣಾಷ್ಟಮೀವ್ರತೋದ್ಯಾಪನ
ವಿಧಾನಕಥನಂ ನಾಮ ಪಂಚತ್ರಿಂಶೋಽಧ್ಯಾಯಃ

---

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಕೃಷ್ಣಾಷ್ಟಮೀ ವ್ರತೋದ್ಯಾಪನ
ಕ್ರಮವನ್ನು ತಿಳಿಯಪಡಿಸುವ ಮೂವತ್ತೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಷಟ್ತ್ರಿಂಶೋಽಧ್ಯಾಯಃ

|| ಶ್ರೀ ಶಿವ ಉವಾಚ ||

ಶಿವವ್ರತಾನಿ ವಿಧಿವತ್ತವ ಪ್ರೋಕ್ತಾನಿ ಶೈಲಜೇ ।
ಕಿಂ ಪುನರ್ದೇವಿ ಮಾಂ ಪೃಚ್ಛ ತತ್ತೇ ವಕ್ಷ್ಯಾಮಿ ಸಾಂಪ್ರತಂ ॥೧॥

|| ದೇವ್ಯುವಾಚ ||

ದೇವದೇವ ಮಹಾದೇವ ಕರುಣಾಲಯ ಶಂಕರ ।
ಶ್ರುತಾನಿ ವಿಶ್ರುತಾನ್ಯದ್ಯ ವ್ರತಾನಿ ಪ್ರೀತಿದಾನಿ ತೇ ॥೨॥

ಅವಿಮುಕ್ತೇ ನಿವಸತಾಂ ನಿಯತಂ ನಿಯಮಶ್ಚ ಕಃ
ಶಿವಾರ್ಚನಾದ್ಯಕರಣೇ ಪ್ರಾಯಶ್ಚಿತ್ತಂ ಶ್ರುತಿಶ್ರುತಂ ॥೩॥

---

## ಮೂವತ್ತಾರನೆಯ ಅಧ್ಯಾಯ

ಪರಶಿವನು ಮತ್ತೆ ಪಾರ್ವತಿಯನ್ನು ಕುರಿತು " ದೇವಿ, ಇಲ್ಲಿನವರೆಗೆ ನಿನಗೆ ಸಕಲವಿಧವಾದ ಶೈವವ್ರತಗಳನ್ನೂ ತಿಳಿಸಿರುವೆನು. ಮತ್ತೇನನ್ನಾದರೂ ನನ್ನಿಂದ ಕೇಳಬಯಸುವೆಯಾ ! " ಎಂದು ಕೇಳಲು, ಆಗ ಗೌರೀದೇವಿಯು " ದಯಾಸಾಗರನಾದ ಪರಮಾತ್ಮನೇ, ನಿಜವಾಗಿಯೂ ಇಲ್ಲಿನವರೆಗೆ ಎಂದೂ ಕೇಳದಿದ್ದ ಅನೇಕ ವಿಷಯಗಳನ್ನು ತಿಳಿದುಕೊಂಡಿರುವೆನು. ಅದೆಲ್ಲವೂ ನನಗೆ ಮನವರಿಕೆಯಾಗಿದೆ. ||೧-೨||

ಆದರೆ ಕಾಶೀಕ್ಷೇತ್ರವೆಂದು ಪ್ರಸಿದ್ಧವಾಗಿರುವ ಅವಿಮುಕ್ತಕ್ಷೇತ್ರದಲ್ಲಿ ವಾಸಿಸುವರು ಯಾವ ರೀತಿ ಇರಬೇಕು? ಶಿವಾರ್ಚನೆ ನಡೆಸದಿದ್ದವರಿಗೆ ಇರುವ

ತನ್ಮೇ ವಿಸ್ತರಯಾದ್ಯೇಶ ವಿಸ್ತಾರಯ ಸ್ಮಣಾಮಿಹ ॥೪॥

॥ ಶ್ರೀ ಈಶ್ವರ ಉವಾಚ ॥

ಸಮ್ಯಕ್ಪೃಷ್ಟಂ ತ್ವಯಾ ದೇವಿ ಲೋಕಾನಾಂ ಹಿತಹೇತವೇ ।
ರಹಸ್ಯಂ ಸರ್ವವೇದಾನಾಂ ನೋಕ್ತಂ ಪೂರ್ವಂ ಮಯಾಂಬಿಕೇ ॥೫॥

ಬೃಹಜ್ಜಾಬಾಲಕಥಿತಂ ತತ್ತೇ ವಕ್ಷ್ಯಾಮ್ಯನುಕ್ರಮಾತ್
ಕಾಶೀವಾಸಿಜನಾಚಾರಂ ಬೃಹಜ್ಜಾಬಾಲದರ್ಶಿತಂ ॥೬॥

ಶಿವಾರ್ಚನಪರಿತ್ಯಾಗೇ ಚೈಕಾಹ್ನಾಪಿ ಚ ಸತ್ತಮೇ ।
ಪ್ರಾಯಶ್ಚಿತ್ತಂ ವದಾಮ್ಯದ್ಯ ಶೃಣು ಶ್ರವಣಭೂಷಣಂ ॥೭॥

ಏತದರ್ಥಂ ಹಿ ಮುನಯೋ ಮುಕ್ತಿಮಂಟಪಮಧ್ಯಮೇ ।
ವಿಶ್ವೇಶ್ವರಾಗ್ರತಃ ಸ್ಥಿತ್ವಾ ಭಸ್ಮರುದ್ರಾಕ್ಷಭೂಷಣಾಃ ॥೮॥

---

ಪ್ರಾಯಶ್ಚಿತ್ತವೇನು? ಅದನ್ನು ನನಗೆ ವಿಸ್ತಾರವಾಗಿ ತಿಳಿಸುವವನಾಗು. ನನ್ನ ಮೂಲಕ ಜನಸಾಮಾನ್ಯಕ್ಕೂ ಅದು ತಿಳಿದಂತಾಗುವುದು " ಎಂದು ಪ್ರಾರ್ಥಿಸಿದಳು. ಆಗ ಈಶ್ವರನು ಹೀಗೆಂದನು. ॥೩-೪॥

ದೇವಿಯೇ, ಲೋಕಹಿತಾರ್ಥವಾಗಿ ನೀನು ಕೇಳಿದ ಪ್ರಶ್ನೆಯು ಅತ್ಯಂತ ಸಾಧುವಾಗಿದೆ. ನಿನ್ನ ಪ್ರಶ್ನೆಗೆ ಹೇಳಬೇಕೆಂದಿರುವ ಉತ್ತರವು ಕೇವಲ ವೇದದ ಸಾರವೆನಿಸಿದೆ. ಇನ್ನೂ ಅತ್ಯಂತ ರಹಸ್ಯವಾದುದರಿಂದ ಇದನ್ನು ನಾನು ಇಲ್ಲಿನವರೆಗೂ ಹೇಳಿಲ್ಲ. ಕಾಶೀಕ್ಷೇತ್ರವಾಸಿಗಳ ಆಚಾರವಿಚಾರವು ಬೃಹಜ್ಜಾಬಾಲೋಪನಿಷತ್ತಿನಲ್ಲಿ ವಿಸ್ತಾರವಾಗಿದೆ. ಅದನ್ನೇ ಈಗ ನಿನಗೆ ತಿಳಿಸುವೆನು ಕೇಳು. ॥೫-೬॥

ಶಿವಾರ್ಚನೆಯನ್ನು ಒಂದು ಹಗಲು ಬಿಟ್ಟವನಿಗೂ ಪ್ರಾಯಶ್ಚಿತ್ತವುಂಟು, ಅದನ್ನು ಈಗ ಹೇಳುತ್ತೇನೆ. ಕೇಳು. ಕರ್ಣಭೂಷಣದಂತೆ ಅದನ್ನು ಅವಧಾರಿಸು. ಹಿಂದೆ ಇದೇ ಸಂಶಯದಲ್ಲಿದ್ದ ಋಷಿಗಳು ಮುಕ್ತಿಮಂಟಪದ ಮಧ್ಯದಲ್ಲಿ ವಿಶ್ವೇಶ್ವರಸ್ವಾಮಿಯ ಮುಂದುಗಡೆ ನಿಂತು ಭಸ್ಮರುದ್ರಾಕ್ಷಧಾರಿಗಳಾಗಿ ಈಶ್ವರವಾದಪೂಜಕನಾದ ಭುಸುಂಡನಿಗೆ ನಮಸ್ಕರಿಸಿ ಈರೀತಿ ಪ್ರಾರ್ಥಿಸಿಕೊಂಡರು. ॥೭-೮॥

ಪ್ರಣಮ್ಯಾಹುರ್ಭುಸುಂಡಂ ತಂ ಚಂದ್ರಖಂಡಶಿವಾರ್ಚನಂ ॥೯॥

॥ ಮುನಯ ಊಚುಃ ॥

ಕಿಂ ಕಾರ್ಯಂ ಬ್ರಾಹ್ಮಣಾನಾಂ ಚ ಕಿಂ ಚ ಧಾರ್ಯಂ ಕ್ವ ಸಂಸ್ಥಿತಃ ।
ಕಃ ಪೂಜನೀಯೋ ಧ್ಯೇಯಶ್ಚ ತನ್ನೋ ಬ್ರೂಹಿ ಶಿವಾರ್ಚಕ ॥೧೦॥

ಇತಿ ಪೃಷ್ಟೋ ಭುಸುಂಡೋಽಸೌ ಬೃಹಜ್ಜಾಬಾಲಸಂಭವಂ ।
ರಹಸ್ಯಂ ತಾನವೋಚನ್ಮೇ ಕರ್ತವ್ಯಂ ಬ್ರಾಹ್ಮಣೇಷು ಯತ್ ॥೧೧॥

ಪ್ರಥಮಂ ಭಸ್ಮರುದ್ರಾಕ್ಷಧಾರಣೇ ಮಹಿಮಾಂ ಶಿವೇ ।
ತ್ರಿಪುಂಡ್ರಂ ತನ್ಮಹಾನಾಂ ಚ ಧಾರಣೇ ಮಹಿಮಾಂ ವದತ್ ॥೧೨॥

॥ ಭುಸುಂಡ ಉವಾಚ ॥

ಸಮ್ಯಕ್ಪೃಷ್ಟಂ ಮುನಿಶ್ರೇಷ್ಠಾಃ ಬ್ರಾಹ್ಮಣಾನಾಂ ಹಿತಾಯ ತಂ ।
ಕೈಲಾಸೇ ಯನ್ಮಹಾದೇವ್ಯೈ ಬೃಹಜ್ಜಾಬಾಲಗಂ ವೃಷಂ ॥೧೩॥

---

ಮಹೇಶ್ವರಭಕ್ತನಾದ ಭುಸುಂಡನೇ, ಬ್ರಾಹ್ಮಣರೆನಿಸಿದವರ ಮುಖ್ಯ ಕರ್ತವ್ಯವಾವುದು ? ಅವರು ಧರಿಸಿಕೊಳ್ಳುವುದಾದರೂ ಏನು ? ಅವರು ಎಲ್ಲಿ ವಾಸಿಸಬೇಕು ? ಅವರಿಗೆ ಪೂಜ್ಯವಾದ ಮತ್ತು ಧ್ಯೇಯವಾದ ವಸ್ತುವಾವುದು ? ಇದನ್ನೆಲ್ಲಾ ವಿಸ್ತರಿಸಿ ಹೇಳಬೇಕೆಂದು ಪ್ರಾರ್ಥಿಸಿಕೊಳ್ಳಲು, ಆಗ ಭುಸುಂಡನು ಬೃಹಜ್ಜಾಬಾಲೋಪನಿಷತ್ತಿನ ಸಾರಭೂತವಾಗಿರುವ ಶಿವರಹಸ್ಯವನ್ನು ಆ ಬ್ರಾಹ್ಮಣರಿಗೆ ವಿಶದವಾಗಿ ತಿಳಿಯಪಡಿಸಿದನು. ॥೯-೧೦-೧೧॥

ಆ ಭುಸುಂಡನು ಮೊದಲು ಭಸ್ಮರುದ್ರಾಕ್ಷಿಧಾರಣೆ. ಮತ್ತು ಭಸ್ಮತ್ರಿಪುಂಡ್ರಧಾರಣಫಲ ಇವುಗಳನ್ನು ವಿವರಿಸುತ್ತಾ ಹೀಗೆಂದನು. “ ಮುನಿಶ್ರೇಷ್ಠರಿರಾ, ಕೇಳಿರಿ. ಬ್ರಾಹ್ಮಣರ ಹಿತಕ್ಕಾಗಿ ಈ ವಿಷಯವನ್ನು ಈಗ ಹೇಳಲಿರುವೆನು. ಹಿಂದೆ ಮಹಾದೇವನು ಕೈಲಾಸದಲ್ಲಿ ಪಾರ್ವತಿಗೆ ಹೇಳಿದ ಬೃಹಜ್ಜಾಬಾಲಗತವಾದ ಧರ್ಮವನ್ನು ವಿವರಿಸಿ ಹೇಳಿದ್ದನ್ನೇ ಈಗ ನಾನು ನಿಮಗೆ ತಿಳಿಯಹೇಳುವೆನು. ಸಾವಧಾನಮನಸ್ಕರಾಗಿ ಲಾಲಿಸಿರಿ. ॥೧೨-೧೩॥

ಪ್ರೋಕ್ತಾನ್ ಶ್ರೀಮಹಾದೇವೋ ದೇವ್ಯೈ ಯಚ್ಛ್ರುತಿದರ್ಶನಂ ।
ತದ್ಭವದ್ಭ್ಯೋ ವದಾಮ್ಯಸ್ಯ ಶೃಣುಧ್ವಂ ಸಾವಧಾನತಃ ॥೧೪॥

ಭಾಸುರಂ ಭೂಸುರಾಣಾಂ ಚ ಶಿವಾಚಾರಂ ಶ್ರುತೀರಿತಂ ।
ಉತ್ಪನ್ನೋ ಬ್ರಾಹ್ಮಣಕುಲೇ ಅಷ್ಟಚತ್ವಾರಿ[1] ಸಂಸ್ಕೃತಃ ॥೧೫॥

[2]ಶೌಕ್ಲ ಸಾವಿತ್ರ ಸೋಮಾದ್ಯ ದೀಕ್ಷಾಭಿಃ ಪೂತಜನ್ಮಭಿಃ ।
ಸ ತು ಮುಖ್ಯಾಧಿಕಾರೀ ಸ್ಯಾನ್ನೇತರಃ ಸಾರ್ವವರ್ಣಿಕಃ ॥೧೬॥

ವರ್ಣಾಶ್ರಮಾಚಾರರತಾ ದ್ವಿಜಾಸ್ತ್ರೈವರ್ಣಿಕಾ ಅಪಿ ।
ತೇಷೂಕ್ತಮೈಶ್ವರಾಚಾರಂ ಶ್ರುತ್ವಾ ಮುಕ್ತಿಪ್ರದಂ ದ್ವಿಜಾಃ ॥೧೭॥

---

ಬ್ರಾಹ್ಮಣಕುಲದಲ್ಲಿ ಹುಟ್ಟಿದವರಿಗೆ ಶಿವಾರ್ಚನಾರೂಪಗಳೆನಿಸಿದ ಶಿವ ಧರ್ಮವೇ ಅನುಷ್ಠೇಯವಾದದ್ದು. ಶಿವಧರ್ಮಾನುಷ್ಠಾನಕ್ಕೆ ಯೋಗ್ಯನಾದವನು ಬ್ರಾಹ್ಮಣಕುಲದಲ್ಲಿ ಹುಟ್ಟಿ ನಲವತ್ತೆಂಟು ಕರ್ಮಗಳಿಂದ ಸಂಸ್ಕೃತನಾಗಿರಬೇಕು. ಶುಕ್ಲಕೃಷ್ಣ (ಸೋಮ) ಮಾರ್ಗವನ್ನು ಅರಿತಿರಬೇಕು. ಇವುಗಳಿಂದ ಶುದ್ಧನಾಗಿ ಪರಿಶುದ್ಧವಾದ ಜನ್ಮದಲ್ಲಿ ಜನಿಸಿದವನು ಯಾವನೋ, ಅವನೇ ಇದಕ್ಕೆ ಮುಖ್ಯಾಧಿಕಾರಿ. ॥೧೪-೧೫-೧೬॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ಜಾತಿಯ ದ್ವಿಜರಲ್ಲಿಯೂ ಯಾರು ತಮ್ಮ ತಮ್ಮ ವರ್ಣಾಶ್ರಮಧರ್ಮಗಳನ್ನು ಪಾಲಿಸಿಕೊಂಡು ಬರುವರೋ, ಅವರಿಗೆ

---

1 ದಯಾ, ಕ್ಷಾಂತಿ, ಅನಸೂಯಾ, ಶೌಚ, ಅನಾಯಾಸ, ಮಂಗಳ, ಅಕಾರ್ಪಣ್ಯ, ಅಸ್ಪೃಹ ಎಂಬ ಎಂಟು ಆತ್ಮಗುಣಗಳಿಂದ ಕೂಡಿ, ಗರ್ಭಾಧಾನಾದಿ ವಿವಾಹಾಂತವಾದ ಹದಿನಾಲ್ಕು ಸಂಸ್ಕಾರಗಳಿಂದ ಸಂಸ್ಕೃತನಾಗಿ, ಪಾಕ, ಹವಿಃ, ಸೋಮ ಸಂಸ್ಥೆಗಳೆಂಬ ಸಪ್ತವಿಧಾತ್ಮಕವಾದ ಮೂರು ಸಂಸ್ಕಾರಕರ್ಮಗಳನ್ನೂ ಪಂಚಯಜ್ಞಗಳನ್ನೂ ನಡೆಸುವುದೇ ಅಷ್ಟಚತ್ವಾರಿಂಶತ್ಸಂಸ್ಕಾರಗಳು. (ಗೌತಮಧರ್ಮಸೂತ್ರ)

2 ಅಗ್ನಿ, ಸೂರ್ಯ ಮುಂತಾದ ತೇಜೋರಾಶಿಗಳ ಮೂಲಕ ದೊರಕುವ ಜ್ಞಾನಪ್ರಕಾಶವುಳ್ಳ ಮಾರ್ಗವೇ ಶುಕ್ಲಮಾರ್ಗ. ಇದನ್ನನುಸರಿಸಿ ನಡೆಯುವವರಿಗೆ ದೇವಯಾನಮಾರ್ಗಗಾಮಿಗಳೆಂದು ಹೆಸರು. ಇವರಿಂದ ಅವರಿಗೆ ಆ ವೃತ್ತಿರಹಿತವಾದ ಶಾಶ್ವತ ಮುಕ್ತಿಯು ದೊರಕುವುದು. ಇನ್ನು ಚಾಂದ್ರಮಸವಾದ ಜ್ಯೋತಿಯಿಂದ ಕರ್ಮಯೋಗಿಯು ಪಿತೃಯಾನಮಾರ್ಗಗಾಮಿಯಾಗಿ ಆವೃತ್ತಿಯುಳ್ಳ ಸ್ವರ್ಗವನ್ನು ಪಡೆದು ಕ್ಷೀಣಪುಣ್ಯನಾದಮೇಲೆ ಮತ್ತೆ ಜನ್ಮತಾಳುವನು. ಇದು ಸೋಮಾಖ್ಯ ಮಾರ್ಗ. ಈ ಎರಡು ಮಾರ್ಗವನ್ನೂ ಪೂರ್ಣವಾಗಿ ಅರಿತವನು ಪರಿಶುದ್ಧನು (ಭಗವದ್ಗೀತೆ ಅ. ೮, ಶ್ಲೋ ೨೫)

ವಾಸ್ತವ್ಯಂ ಸಾವಧಾನೇನ ಅವಿಮುಕ್ತೇಽಥ ಚೋತ್ತಮಂ ।
ತಚ್ಛಿವಾಗಾರಮತುಲಂ ಕ್ಷೇತ್ರೇಷ್ವನ್ಯೇಷು ವಾ ರುಚಿ ॥೧೮॥

ಪ್ರಶಸ್ತಂ ತೃಣಕಾಷ್ಠಾದೇಃ ಸರ್ವದಾರ್ಯ್ಯಸಮನ್ವಿತೇ ।
ಅಗ್ನಿರಿತ್ಯಾದಿಭಿರ್ಭಸ್ಮ ಧಾರ್ಯಂ ಶ್ರೌತಾನಲೋದ್ಭವಂ ॥೧೯॥

ಅಷ್ಟಷೋಡಶಕಾಂಗೇಷು ಮಂತ್ರೈರ್ವಿಪ್ರಾಸ್ತ್ರಿಯಾಯುಷೈಃ ।
ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈ ಶೂದ್ರೈಸ್ತಪ್ತವನಾಗ್ನಿಜಂ ॥೨೦॥

ವರ್ಣೀ ವನೀ ಗೃಹಸ್ಥೋ ವಾ ಯತಿರ್ವಾ ವಿಧವಾಃ ಸ್ತ್ರಿಯಃ ।
ಪ್ರಣವೇನ ಯತೇಃ ಪ್ರೋಕ್ತಂ ಸ್ತ್ರೀಣಾಂ ಪಂಚಾಕ್ಷರೇಣ ತು ॥೨೧॥

ಪಂಚಬ್ರಹ್ಮಭಿರೇವೇಹ ಭಸ್ಮನಾಪ್ಯವಗುಂಠನಂ ।
ಅತ್ಯಾಶ್ರಮೋ ಪ್ರಕಥಿತಂ ತ್ರಿಪುಂಡ್ರಸ್ಯ ಚ ಧಾರಣಂ ॥೨೨॥

---

ಈಶ್ವರಾಚಾರವೇ ಮುಖ್ಯ ಕರ್ಮವೆನಿಸುವುದು. ಅಂತಹವರು ಸ್ಥಿರಮನಸ್ಸಿನಿಂದ ಅವಿಮುಕ್ತಕ್ಷೇತ್ರವೆನಿಸಿದ ಕಾಶೀನಗರದಲ್ಲಿ ವಾಸಮಾಡಬೇಕು. ಅಥವಾ ಇತರ ಯಾವ ಶಿವಕ್ಷೇತ್ರದಲ್ಲಿಯಾದರೂ ಶಿವಸನ್ನಿಧಿಯಲ್ಲಿ ವಾಸಮಾಡಬಹುದು.||೧೭-೧೮||

ಹುಲ್ಲು, ಕಡ್ಡಿ, ಜಲ ಇವುಗಳಿಂದ ಸಮೃದ್ಧವಾಗಿರುವ ಪ್ರದೇಶವೇ ಇವರ ವಾಸಕ್ಕೆ ಯೋಗ್ಯವಾದುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣದವರೂ ಶ್ರೌತಾಗ್ನಿಯಿಂದ (ಯಾಗದ ಅಗ್ನಿಕುಂಡ) ಉತ್ಪನ್ನವಾದ ಭಸ್ಮವನ್ನು ತಮ್ಮ ಎಂಟು ಅಥವಾ ಹದಿನಾರು ಅವಯವಗಳಲ್ಲಿ ' ತ್ರಿಯಾಯುಷಂ ಜಮದಗ್ನೇ ' ರಿತ್ಯಾದಿ ಮಂತ್ರಗಳಿಂದ ಧರಿಸಬೇಕು. ಶೂದ್ರರು ಕಾಡುಕಿಚ್ಚಿನಲ್ಲಿ ಉತ್ಪನ್ನವಾದ ಭಸ್ಮವನ್ನು ಅಮಂತ್ರಕವಾಗಿ ಧರಿಸಬಹುದು. ||೧೯-೨೦||

ದ್ವಿಜರಲ್ಲಿ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ, ಸುಮಂಗಲಿಯರು ವಿಧವೆಯರು ಎಲ್ಲರಿಗೂ ಭಸ್ಮಧಾರಣೆಯಲ್ಲಿ ಅವಕಾಶವಿದೆ. ಯತಿಗಳು ಪ್ರಣವ ಮಂತ್ರದಿಂದಲೂ, ಸ್ತ್ರೀಯರು ಶಿವಪಂಚಾಕ್ಷರಿಯನ್ನುಚ್ಚರಿಸುತ್ತಲೂ, ಭಸ್ಮ ತ್ರಿಪುಂಡ್ರವನ್ನಿಡಬೇಕು. ಸದ್ಯೋಜಾತಾದಿ ಪಂಚಬ್ರಹ್ಮಾನುವಾಕಗಳಿಂದ ಭಸ್ಮೋದ್ಧೂಲನ ಮಾಡಿಕೊಳ್ಳಬೇಕು. ಜ್ಞಾನಿಯಾಗಿ ಅತ್ಯಾಶ್ರಮಿಯೆನಿಸಿಕೊಂಡವನಿಗೂ ಭಸ್ಮತ್ರಿಪುಂಡ್ರಧಾರಣೆ ಮಾಡಬೇಕೆಂಬ ನಿಯಮವುಂಟು ಇದನ್ನು ತ್ಯಜಿಸಿದವರಿಗೆ ವಿಶೇಷವಾಗಿ ಪಾಪ ಸಂಘಟಿಸುವುದು. ||೨೧-೨೨||

ಶಿರೋವ್ರತಮಿದಂ ಶ್ರೌತಂ ಧಾರ್ಯಂ ಸರ್ವಾಶ್ರಮೈರಪಿ ।
ತ್ಯಕ್ತ್ವೈತತ್ಪತಿತಾ ಯಾಂತಿ ನರಕಂ ಸ್ವಪಿತಾಮಹೈಃ ॥೨೩॥

ಭಿಕ್ಷುರ್ಭಕ್ಷ್ಯೋ ಭವೇದೇವ ಶಾಲಾವೃಕಗಣೇ ದ್ವಿಜಾಃ
ರುದ್ರಾಕ್ಷಸಂಭವಾಃ ಶ್ವೇತಾಃ ರುದ್ರಾಕ್ಷಾ ರಕ್ತಪೀತಕಾಃ ॥೨೪॥

ಕೃಷ್ಣಾಶ್ಚಾನುಕ್ರಮೇಣೈವ ವರ್ಣೈರ್ಧಾರ್ಯಾಶ್ಚ ಮಂತ್ರತಃ ।
ಸರ್ವಾಶ್ರಮೈಸ್ತಥಾ ಸ್ತ್ರೀಭಿಃ ತ್ರ್ಯಂಬಕೇನೈವ ಮಂತ್ರತಃ ॥೨೫॥

ತತ್ತ್ಯಕ್ತ್ವಾ ಧಾರಣಂ ಭಕ್ತ್ಯಾ ಉಪೋಷ್ಯಾ ಸಾಯಮೇವ ಹಿ ।
ಯತಿಃ ಪ್ರಣವಸಾಹಸ್ರಂ ಜಪನ್ಮುಕ್ತಾಘಕೋ ಭವೇತ್ ॥೨೬॥

ಧಾರಣಸ್ಪರ್ಶನೇ ದೃಷ್ಟೇ ಗೋದಾನಫಲಮಾಪ್ನುಯಾತ್ ।
ಪರ್ವಣ್ಯಪಿ ಚ ರುದ್ರಾಕ್ಷಂ ತತ್ತದ್ವರ್ಣೈಶ್ಚ ಧಾರಿತಂ ॥೨೭॥

ಈರೀತಿ ಭಸ್ಮೋದ್ಧೂಲನ ಮತ್ತು ಭಸ್ಮತ್ರಿಪುಂಡ್ರ ಮಾಡಿಕೊಳ್ಳುವುದಕ್ಕೆ ಶಿರೋವ್ರತವೆಂದು ಹೆಸರು. ಇದು ಸರ್ವಾಶ್ರಮದವರಿಗೂ ವಿಹಿತವಾಗಿದೆ. ಇದನ್ನು ನಡೆಸದವರು ಪತಿತರಾಗುವರು. ವಂಶಪರಂಪರೆಯಿಂದ ನರಕವನ್ನು ಪಡೆಯುವರು. ಅಲ್ಲದೆ ದರಿದ್ರರಾಗಿ ಕೊನೆಗೆ ಕಾಡುಪ್ರಾಣಿಗಳಿಗೆ ಆಹಾರವಾಗಿ ಮರಣ ಹೊಂದುವರು. ಇನ್ನು ರುದ್ರಾಕ್ಷಿಧಾರಣೆಯೂ ಒಂದು ಶಿವಧರ್ಮ. ಅದರಲ್ಲಿ ಬಿಳುಪು, ಹಳದಿ, ಕಪ್ಪುಬಣ್ಣದ ನಾಲ್ಕು ತರಹ ರುದ್ರಾಕ್ಷಿಗಳಿವೆ. ಬ್ರಾಹ್ಮಣಾದಿ ಚಾತುರ್ವರ್ಣ್ಯದವರಿಗೂ ಈ ನಾಲ್ಕು ಜಾತಿಯ ರುದ್ರಾಕ್ಷಿಗಳು ಕ್ರಮವಾಗಿ ಶ್ರೇಷ್ಠಗಳೆನಿಸಲ್ಪಟ್ಟಿವೆ. ರುದ್ರಾಕ್ಷಿಯ ಸರವನ್ನು ಸ್ತ್ರೀಯರೂ ಧರಿಸಬಹುದು. 'ತ್ರ್ಯಂಬಕಂ ಯಜಾಮಹೆ' ಎಂಬುದೇ ರುದ್ರಾಕ್ಷಧಾರಣೆಯ ಮಂತ್ರ. ॥೨೩-೨೪-೨೫॥

ಸಂನ್ಯಾಸಿಯಾದವನು ಆಕಸ್ಮಾತ್ತಾಗಿ ಭಸ್ಮರುದ್ರಾಕ್ಷಧಾರಣೆಯನ್ನು ಬಿಟ್ಟರೆ, ಆದಿನ ಆತನು ಸಾಯಂಕಾಲ ಪರ್ಯಂತ ಉಪವಾಸವಿದ್ದು ಸಾವಿರ ಪ್ರಣವವನ್ನು ಜಪಿಸಬೇಕು ಆಗ ಆವನ ಪಾಪವು ನಾಶವಾಗುವುದು. ಈ ಭಸ್ಮರುದ್ರಾಕ್ಷಿಗಳನ್ನು ಧರಿಸಿದವರನ್ನು ದರ್ಶನಮಾಡಿದರೂ, ಸ್ಪರ್ಶನ ಮಾಡಿದರೂ ಗೋದಾನದ ಪುಣ್ಯವು

ಪೂರ್ವೋಕ್ತಂ ಚ ಫಲಂ ಸರ್ವಂ ದದ್ಯಾತ್ಸರ್ವೇಷು ಸರ್ವದಾ ।
ಧ್ಯೇಯಃ ಸರ್ವೈರ್ಮಹಾದೇವಃ ಶಿವ ಏಕಶ್ಶಿವಂಕರಃ ॥೨೮॥

ಉಮಾಸಹಾಯೋ ವಿಶ್ವೇಶೋ ನೀಲಗ್ರೀವಸ್ತ್ರಿಲೋಚನಃ ।
ಬ್ರಾಹ್ಮಣೈರನ್ಯವರ್ಣೈಶ್ಚ ಸ್ತ್ರೀಭಿಶ್ಚ ಯತಿಭಿಸ್ತಥಾ ॥೨೯॥

ಜಪ್ಯಃ ಪ್ರಣವ ಏವೇಹ ಶಿವಪಂಚಾಕ್ಷರಂ ಮಮ ।
ತ್ರಿಕಾಲಂ ಸರ್ವದಾ ಸರ್ವೈಃ ಸ್ತ್ರೀಶೂದ್ರಾಣಾಂ ನಮೋಂತಕಃ ॥೩೦॥

ನಾತಃ ಪರಂ ತಾರಕೋ ಮೇ ಮಂತ್ರಃ ಪಂಚಾಕ್ಷರಃ ಪರಃ ।
ಕಾಶ್ಯಾಮಂತೇ ಚ ಶೈವಾನಾಂ ಕರ್ಣೇ ತೂರ್ಣಂ ವಿಮುಕ್ತಿದಂ॥೩೧॥

ದದಾಮ್ಯಹಂ ಸಪ್ರಣವಂ ಪುನರ್ಭವನಿವೃತ್ತಯೇ ।
ಗಂಗಾಂ ವಾ ಸಹ್ಯಜಾಂ ವಾಪಿ ಸಮಾಶ್ರಿತ್ಯ ವಸೇದ್ದ್ವಿಜಾಃ ॥೩೨॥

ಲಭಿಸುವುದು ಎಂತಹ ಪರ್ವಕಾಲದಲ್ಲಿಯೂ ರುದ್ರಾಕ್ಷಿಯನ್ನು ತೆಗೆಯಕೂಡದು. ॥೨೬-೨೭॥

ಭಸ್ಮರುದ್ರಾಕ್ಷಧಾರಣೆಮಾಡಿದವನಿಂದ ಎಲ್ಲರಿಗೂ ಹಿಂದೆ ಹೇಳಿದ ಫಲವು ಲಭಿಸುವುದು ಇನ್ನು ಬ್ರಾಹ್ಮಣರಿಗೆ ಆರಾಧ್ಯದೈವವೆಂದರೆ ಶಿವನೊಬ್ಬನೇ. ಆತನು ಸದಾ ಪಾರ್ವತೀಸಹಿತನಾಗಿರುವನೆಂದೂ, ನೀಲವರ್ಣದ ಕಂಠದಿಂದಲೂ, ಲೋಚನ ತ್ರಯಗಳಿಂದಲೂ ಕೂಡಿ ಜಗತ್ಪತಿಯಾಗಿರುವನೆಂದೂ ಸದಾ ಧ್ಯಾನಿಸಬೇಕು. ಬ್ರಾಹ್ಮಣರಾಗಲಿ ಇತರ ಯಾವ ವರ್ಣದವರೇ ಆಗಲಿ ಸ್ತ್ರೀಪುರುಷ ಭೇದವಿಲ್ಲದೆ ಪ್ರಣವಸಹಿತವಾದ ಶಿವಪಂಚಾಕ್ಷರೀಮಂತ್ರವನ್ನೇ ತ್ರಿಕಾಲಗಳಲ್ಲಿಯೂ ಬಿಡದೆ ಧ್ಯಾನಿಸಬೇಕು. ಆದರೆ ಸ್ತ್ರೀಶೂದ್ರರು ಮಾತ್ರ ನಮಶ್ಶಬ್ದವನ್ನು ಕೊನೆಯಲ್ಲಿಟ್ಟು ಆ ಮಂತ್ರವನ್ನು ಪುರಶ್ಚರಣೆಮಾಡಬೇಕು ॥೨೮-೨೯-೩೦॥

ದೇವಿಯೇ, ಕಾಶೀವಾಸಿಗಳಿಗೆ ಮರಣಕಾಲದಲ್ಲಿ ಶಿವಪಂಚಾಕ್ಷರೀ ಮಂತ್ರದ ಶ್ರವಣವಾದರೆ ಅದಕ್ಕಿಂತ ಬೇರೆ ತಾರಕಮಂತ್ರವೇ ಅವರಿಗೆ ಬೇಕಿಲ್ಲ. ನಾನೂ ಸಹ ಅದೇ ಮಂತ್ರವನ್ನೇ ಅವರ ಮರಣಕಾಲದಲ್ಲಿ ಇಲ್ಲಿ ಉಪದೇಶಿಸುವೆನು. ಅದರಿಂದ ಅವರಿಗೆ ಜನ್ಮಾಂತರದ ದುಃಖಗಳು ಮತ್ತೆ ಒದಗಲಾರವು ಇನ್ನು ಶಿವ ಧರ್ಮನಿರತರಾದವರು ಗಂಗಾತೀರದಲ್ಲಾಗಲಿ, ಕಾವೇರೀ ತೀರದಲ್ಲಾಗಲಿ ವಾಸ ಮಾಡಬಹುದು. ॥೩೧-೩೨॥

ಅವಿಮುಕ್ತೇ ತು ನಿಯಮಾದ್ವಾಸಃ ಕಷ್ಟತರೋ ನೃಣಾಂ ।
ಸಹ್ಯಜಾಯಾಸ್ತಟೇ ಕ್ಷೇತ್ರೇ ವಸನ್ ಭಕ್ತ್ಯಾ ಚ ಮುಚ್ಯತೇ ॥೩೩॥

ಪೂಜನೀಯೋ ಮಹಾದೇವಃ ಸ್ಮರ್ತವ್ಯಶ್ಚ ಮುಮುಕ್ಷುಭಿಃ ।
ಕಾವೇರ್ಯಾಂ ವಾಪಿ ಗಂಗಾಯಾಂ ನದೀಷ್ವನ್ಯಾಸು ವಾ ದ್ವಿಜಾಃ ॥೩೪॥

ಸ್ನಾತ್ವಾ ಸಮಂತ್ರಮುಷಸಿ ಕೃತ್ವಾ ಶೌಚಂ ವಿಧಾನತಃ ।
ಸಂತರ್ಪ್ಯ ದೇವಪಿತ್ರೃಷೀನ್ ರುದ್ರಸೂಕ್ತೈಶ್ಚ ಮಾರ್ಜಯೇತ್ ॥೩೫॥

ವಾಸೋಥ ಪರಿಧಾಯ್ಯೈವ ಭಸ್ಮರುದ್ರಾಕ್ಷಮಂಡಿತಃ ।
ಸಂಧ್ಯಾಂ ಕುರ್ಯಾದಪ್ರಮಾದಂ ದತ್ವಾರ್ಘ್ಯಂ ಸಂಧ್ಯಯೋರ್ದ್ವಯೋಃ॥೩೬॥

ಉದ್ಯಂತಮಂಶುಮಂತಂ ಚ ಧ್ಯಾಯೇತ್ತಿಷ್ಠಂಸ್ತ್ವತಂದ್ರಿತಃ ।
ಸಹಸ್ರಪರಮಾಂ ದೇವೀಂ ಶತಮಧ್ಯಾಂ ದಶಾಪರಾಂ ॥೩೭॥

---

ಅವಿಮುಕ್ತಕ್ಷೇತ್ರವಾಸದಲ್ಲಿ ಅನೇಕನಿಯಮಗಳಿವೆ. ಅವುಗಳನ್ನು ಅನುಸರಿಸುವುದು ಕಷ್ಟವಾಗಬಹುದು. ಕಾವೇರೀ ತೀರವಾಸದಲ್ಲಿ ಅಷ್ಟು ನಿರ್ಬಂಧಗಳಿಲ್ಲ. ಭಕ್ತಿಯೊಂದಿದ್ದರೆ ಸಾಕು. ಅಲ್ಲಿ ಆದರಿಂದ ಅವನು ಪಾರಾಗುವನು. ಒಟ್ಟಿನಲ್ಲಿ ಮೋಕ್ಷಾರ್ಥಿಗಳಾದವರು ಮಹಾದೇವನನ್ನು ತಪ್ಪದೆ ಪೂಜಿಸಬೇಕು. ಸದಾ ಅವನ ಗುಣರಾಶಿಯನ್ನೇ ಸ್ಮರಿಸಿಕೊಳ್ಳುತ್ತಿರಬೇಕು. ॥೩೩-೩೪॥

ಉಷಃಕಾಲಕ್ಕೆ ಮುಂಚೆ ಎದ್ದು ಶೌಚಕರ್ಮಗಳನ್ನು ಮುಗಿಸಿಕೊಂಡು, ಮಂತ್ರಪೂರ್ವಕವಾಗಿ ಕಾವೇರಿಯಲ್ಲಿಯೋ, ಗಂಗಾನದಿಯಲ್ಲಿಯೋ, ಅಥವಾ ಮತ್ತಾವ ನದಿಗಳಲ್ಲಾಗಲಿ ಸ್ನಾನಮಾಡಿ, ದೇವಋಷಿ ಪಿತೃತರ್ಪಣಮಾಡಿ, ರುದ್ರ ಸೂಕ್ತಪಾರಾಯಣ ಮಾಡಬೇಕು. ಅನಂತರ ಶುಭ್ರವಸ್ತ್ರ, ಭಸ್ಮ, ರುದ್ರಾಕ್ಷಿ ಇವುಗಳನ್ನು ಧರಿಸಿಕೊಂಡು, ಸಂಧ್ಯಾವಂದನೆ ಮಾಡುತ್ತಾ ಸೂರ್ಯದೇವನಿಗೆ ಅರ್ಘ್ಯ ಪ್ರದಾನಮಾಡಬೇಕು ॥೩೫-೩೬॥

ಪ್ರಾತಃಕಾಲದಲ್ಲಿ ಉದಯಿಸುತ್ತಿರುವ ಸೂರ್ಯನ ಎದುರಿನಲ್ಲಿ ನಿಂತು ಸೂರ್ಯ ಪ್ರಾರ್ಥನೆಮಾಡಬೇಕು. ಅನಂತರ, ಸಾವಿರ, ಅಥವಾ ನೂರು ಅಥವಾ ಹತ್ತಕ್ಕೆ ಕಮ್ಮಿಯಿಲ್ಲದ ಸಂಖ್ಯೆಯಲ್ಲಿ ಗಾಯತ್ರೀ ಮಂತ್ರಪುರಶ್ಚರಣೆಮಾಡಬೇಕು. ಮಧ್ಯಾಹ್ನ ಅಥವಾ ಸಾಯಂಕಾಲದ ವೇಳೆಯಲ್ಲಿ ನೂರುಸಾರಿ ಗಾಯತ್ರಿ ಜಪಮಾಡಬಹುದು.

ಗಾಯತ್ರೀಂ ಪ್ರಜಪೇದ್ವಿದ್ವಾನ್ ಮಧ್ಯಂ ಸಾಯಂ ಶತಂ ಭವೇತ್ ।
ಶ್ರೌತೇ ಸ್ಮಾರ್ತಾನಲೇ ವಾಪಿ ಜುಹುಯಾದ್ವೇದಮಂತ್ರತಃ ॥೩೮॥

ಜಪೇತ್ಪಂಚಾಕ್ಷರಂ ಮಂತ್ರಮೋಂಕಾರಾದ್ಯಂ ಷಡಕ್ಷರಂ ।
ಸಹಸ್ರಪರಮಂ ವಿಪ್ರಾ ಶತಾಷ್ಟಂ ವಾಭಿಭಾವತಃ ॥೩೯॥

ಸಂಭಾರ್ಯ ಪೂಜಾಸಂಭಾರಂ ಕಾಪಿಲಂ ಪಂಚಗವ್ಯಕಂ ।
ಅನ್ಯಸ್ಮಾದುತ್ತಮಂ ಪ್ರೋಕ್ತಂ ಮಧುಪರ್ಕಂ ಫಲಾನಿ ಚ ॥೪೦॥

ಉಪಲಿಪ್ತೇ ತದಾ ಪೀಠೇ ಲಿಂಗಮಭ್ಯರ್ಚಯೇದ್ದ್ವಿಜಃ ।
ಸಂಸಿಚ್ಯೈಸ್ತ್ರೈಶ್ಚ ಸಂಭಾರೈರ್ಗಂಧಚಂದನವಾರಿಭಿಃ ॥೪೧॥

ಶತ ಏಕೆ ಗುಣೋ ರುದ್ರೋ ಜಪ್ಯೋಽಪ್ಯೇಕಾದಶಾವೃತಃ ।
ಸ ಕೂರ್ಚಂ ವಾಸಸಾ ಮೃಜ್ಯ ಪರಿವೇಷ್ಟ್ಯ ಸುವಾಸಸಾ ॥೪೨॥

ಅಷ್ಟೇ ಸಂಖ್ಯೆಯಲ್ಲಿ ಸ್ಮಾರ್ತಾಗ್ನಿ (ಗೃಹ್ಯಾಗ್ನಿ) ಅಥವಾ ಶ್ರೌತಾಗ್ನಿಯಲ್ಲಾಗಲಿ ವೇದ ಮಂತ್ರಗಳನ್ನುಚ್ಚರಿಸುತ್ತಾ ಹೋಮಾದಿಗಳನ್ನು (ಔಪಾಸನಾದಿ) ನೇರವೇರಿಸಬೇಕು. ||೩೭-೩೮||

ಹಾಗೆಯೇ, ಸಾವಿರ, ಅಥವಾ ಎಂಟುನೂರು ಸಂಖ್ಯೆಯಲ್ಲಿ ಓಂಕಾರಾದಿಯಾದ ಶಿವಪಂಚಾಕ್ಷರೀಮಂತ್ರವನ್ನು ಜಪಿಸಬೇಕು. ಅನಂತರ ಶಿವಾರ್ಚನೆಗೆ ಪ್ರಯತ್ನಿಸಿ, ಶಿವಾಭಿಷೇಕಕ್ಕೆ ಕಪಿಲವರ್ಣದ ಹಸುವಿನ ಪಂಚಗವ್ಯಗಳನ್ನು ಇತರ ಪೂಜಾಸಾಮಗ್ರಿಗಳನ್ನೂ ಸಂಪಾದಿಸಿಟ್ಟುಕೊಳ್ಳಬೇಕು. ಕಪಿಲವರ್ಣದ ಹಸುವಿನ ಪಂಚಗವ್ಯಗಳೂ, ಮಧುಪರ್ಕ, ಫಲಗಳೂ ಶಿವಾರಾಧನೆಗೆ ಶ್ರೇಷ್ಠಗಳೆಂದು ಹೇಳಲ್ಪಟ್ಟಿವೆ. ||೩೯-೪೦||

ಗೋಮಯಾದಿಗಳಿಂದ ಶುದ್ಧಿಗೊಳಿಸಿದ ಸ್ಥಳದಲ್ಲಿ ಪೀಠವನ್ನಿಟ್ಟು ಅಲ್ಲಿ ಶಿವದೇವತಾಮೂರ್ತಿಯನ್ನಿರಿಸಬೇಕು. ಗಂಧೋದಕವೇ ಮೊದಲಾದುವುಗಳಿಂದ ಮೊದಲು ಅಭಿಷೇಕಾದಿಗಳನ್ನು ನಡೆಸಿ, ಅನಂತರ ಹನ್ನೊಂದುಬಾರಿ ರುದ್ರಮಂತ್ರವನ್ನುಚ್ಚರಿಸುತ್ತಾ ಅಭಿಷೇಕಮಾಡಬೇಕು. ಶುದ್ಧವಾದ ಕೂರ್ಚಸಹಿತವಾದ ವಸ್ತ್ರದಿಂದ ಶಿವಲಿಂಗವನ್ನು ಒರಸಿ, ಶುದ್ಧವಸ್ತ್ರದಿಂದ ಆಚ್ಛಾದಿಸಬೇಕು. ||೪೧-೪೨||

ಪೀಠೇ ಸ್ಥಾಪ್ಯ ತದಾ ಲಿಂಗಂ ಭಸ್ಮನಾ ಭೂಷಯೇತ್ತತಃ ।
ಗಂಧಾಕ್ಷತೋಪವೀತಾದೀನ್ ದದ್ಯಾತ್ಪಂಚಾಕ್ಷರೇಣ ಹಿ ॥೪೩॥

ತ್ರಿಶಾಖೈರ್ಬಿಲ್ವಪತ್ರೈಶ್ಚ ತಥಾ ಚಾರ್ದ್ರೈರನಾರ್ದ್ರಕೈಃ ।
ಬಿಲ್ವಪತ್ರೈಸ್ಸಮಭ್ಯರ್ಚ್ಯ ಕುಸುಮೈರ್ವಾ ಯಥಾಬಲಂ ॥೪೪॥

ನ ತು ಬಿಲ್ವಂ ಪರಿತ್ಯಜ್ಯ ಸರ್ವದಾ ಸಾವಧಾನತಃ ।
ಧೂಪಂ ದೀಪಂ ಚ ನೈವೇದ್ಯಂ ದದ್ಯಾತ್ಪ್ರಕ್ರಮನರ್ತನಂ ॥೪೫॥

ಪ್ರಣಾಮಂ ಚ ಸ್ತುತಿಶ್ಚೇತಿ ಪೂಜೇಯಂ ಪರಿಕೀರ್ತಿತಾ ।
ಬ್ರಾಹ್ಮಣಾನಾಂ ಪರೋ ಧರ್ಮಃ ಶಿವಲಿಂಗಸ್ಯ ಪೂಜನಂ ॥೪೬॥

ತ್ರಿಕಾಲಮಪ್ರಮಾದೇನ ವರ್ಣಾನಾಮಾಶ್ರಮೇಷು ಚ ।
ಯತೇಸ್ತು ಪ್ರಣವೇನೈವ ಸ್ತ್ರೀಶೂದ್ರಾಣಾಂ ಚ ಪಾರ್ಥಿವೇ ॥೪೭॥

ಪ್ರಮಾದಾದೇಕದಾ ತ್ಯಕ್ತ್ವಾ ಉಪೋಷ್ಯೈವ ಪರೇಽಹನಿ ।
ಕೃತ್ವಾಸೌ ಶಿರಸೋವಾಪಂ ಪೂಜಾಂ ತದ್ದ್ವಿಗುಣಾಂ ಚರೇತ್ ॥೪೮॥

---

ಪೀಠಸ್ಥವಾದ ಶಿವಲಿಂಗಕ್ಕೆ ಭಸ್ಮ, ಗಂಧ, ಅಕ್ಷತೆ, ಯಜ್ಞೋಪವೀತ ಇವೇ ಮೊದಲಾದುವುಗಳನ್ನು ಶಿವಪಂಚಾಕ್ಷರೀ ಮಂತ್ರದಿಂದ ಸಲ್ಲಿಸಬೇಕು. ಮೂರು ದಳಗಳಿಂದ ಕೂಡಿದ, ಹಸಿಯದಾದ ಅಥವಾ ಒಣಗಿದ ಬಿಲ್ವದಳಗಳಿಂದಲೂ ಶಕ್ತ್ಯಾನುಸಾರ ಸಂಪಾದಿಸಿದ ಹೂವುಗಳಿಂದಾದರೂ ಶಂಕರನನ್ನು ಪೂಜಿಸಬಹುದು. ॥೪೩-೪೪॥

ಬಿಲ್ವಪತ್ರೆಯಿಲ್ಲದೆ ಯಾವ ಶಿವಪೂಜೆಯನ್ನೂ ನಡೆಸಕೂಡದು. ಧೂಪ, ದೀಪ, ನೈವೇದ್ಯ, ನಮಸ್ಕಾರ, ಸ್ತೋತ್ರ ಇವುಗಳನ್ನು ಸಲ್ಲಿಸುವುದೇ ಶಿವಪೂಜೆಯು. ಈ ವಿಧವಾದ ಶಿವಲಿಂಗಪೂಜೆಯು ಬ್ರಾಹ್ಮಣರೆನಿಸಿದವರಿಗೆ ಉತ್ತಮವಾದ ಧರ್ಮವು. ॥೪೫-೪೬॥

ವರ್ಣತ್ರಯದವರೂ, ಬ್ರಹ್ಮಚರ್ಯಾದಿ ಸರ್ವಾಶ್ರಮದಲ್ಲಿರುವವರೂ ಶಿವಾರಾಧನೆಯನ್ನು ತ್ರಿಕಾಲಗಳಲ್ಲಿಯೂ ನಡೆಸಬೇಕು. ಯತಿಯು ಮಾತ್ರ ಪ್ರಣವ ಮಂತ್ರದಿಂದ ನಡೆಸಬೇಕು. ಸ್ತ್ರೀಶೂದ್ರರು ಕೇವಲ ಉಪಚಾರಗಳಿಂದಲೇ ಪೂಜಿಸಬೇಕು. ಅಕಸ್ಮಾತ್ತಾಗಿ ಒಂದು ದಿನ ಶಿವಾರಾಧನೆಯು ನಿಂತುಹೋದರೆ, ಮುಂದಿನ

ಭುಕ್ತ್ವಾ ಪ್ರಮಾದಾದೀಶಾರ್ಚಾಮಕೃತ್ವಾ ಬ್ರಾಹ್ಮಣೋ ಯದಿ ।
ತದುದ್ಗೀರ್ಯಮುಪೋಷ್ಯೈವ ಪಂಚಗವ್ಯೇನ ಶೋಧಿತಃ ॥೪೯॥

ಸಂಪೂಜ್ಯ ಶಾಂಭವಾನ್ ಪೂಜ್ಯ ದ್ವಿಗುಣಂ ಮುಕ್ತಕಿಲ್ಬಿಷಃ ।
ಜಪೇದ್ರುದ್ರಂ ಪ್ರಯತ್ನೇನ ದಿವಾನಕ್ತಂ ಚ ಭಸ್ಮಧೃಕ್ ॥೫೦॥

ದಿವಾ ಸೂರ್ಯಂ ಚ ಪಶ್ಯನ್ವೈ ರಾತ್ರೌ ಚಂದ್ರಂ ಚ ವಹ್ನಿಕಂ ।
ಪ್ರಮಾದಾದೇಕದಾ ತ್ಯಕ್ತ್ವಾ ಶಿವಲಿಂಗೇ ಶಿವಾರ್ಚನಂ ॥೫೧॥

ಪ್ರಾಯಶ್ಚಿತ್ತಮಕುರ್ವನ್ ವೈ ನರಕಂ ಪಂಚವತ್ಸರಂ ।
ಅನ್ಯಥಾ ತು ಪರೇತೋಽಸೌ ವಿಷ್ಟಾಭಕ್ಷೇಷು ತಿಷ್ಠತಿ ॥೫೨॥

ಯತಿಸ್ತ್ಯಕ್ತ್ವೈಕದಾ ಪೂಜಾಂ ಪ್ರಣವಂ ತು ಸಹಸ್ರಕಂ ।
ಪ್ರಣವೈರ್ದ್ವಿಗುಣಾಂ ಪೂಜಾಂ ಕುರ್ಯಾದ್ಭಸ್ಮಾವಗುಂಠಿತಃ ॥೫೩॥

---

ದಿನ ಉಪವಾಸವಿದ್ದು, ಕ್ಷೌರಮಾಡಿಸಿಕೊಂಡು ಎರಡುಸಾರಿ ಶಿವಾರಾಧನೆಮಾಡ ಬೇಕು. ||೪೭-೪೮||

ಒಂದುವೇಳೆ ಮರೆತು ಶಿವಪೂಜೆಮಾಡದೆ ಊಟಮಾಡಿದರೆ ಬ್ರಾಹ್ಮಣನು ಅದನ್ನು ವಾಂತಿಮಾಡಿ ಉಪವಾಸದಿಂದಿದ್ದು ಪಂಚಗವ್ಯದಿಂದ ಶುದ್ಧನಾಗಿ ಶಾಂಭವ ರನ್ನು ಪೂಜಿಸಿ, ಎರಡರಷ್ಟು ಸಾಮಗ್ರಿಗಳಿಂದ ಶಿವನನ್ನು ಪೂಜಿಸಿ, ಆ ದಿನ ಹಗಲು ರಾತ್ರಿ ಪೂರ್ತಿ ಭಸ್ಮಧಾರಿಯಾಗಿಯೇ ಇದ್ದು ರುದ್ರಪಾರಾಯಣಮಾಡಬೇಕು. ||೪೯-೫೦||

ಹಗಲು ಸೂರ್ಯನನ್ನೂ, ರಾತ್ರಿ ಅಗ್ನಿ ಮತ್ತು ಚಂದ್ರರನ್ನೂ ದರ್ಶನಮಾಡಿ ಅನಂತರ ಭೋಜನಾದಿಗಳನ್ನೂ ನೆರವೇರಿಸಬೇಕು ಅಜ್ಞಾನದಿಂದ ಶಿವಲಿಂಗಾರ್ಚನೆ ಯನ್ನೂ ಬಿಟ್ಟು ಪ್ರಾಯಶ್ಚಿತ್ತಾದಿಗಳನ್ನೂ ನೆರವೇರಿಸದೆ ಮೃತನಾದವನು ಐದು ವರ್ಷಪರ್ಯಂತ ನರಕದಲ್ಲಿ ನೆಲಸಿ, ಅನಂತರ ಪ್ರೇತರೂಪದಿಂದಿದ್ದು, ಮಲಭಕ್ಷಣೆ ಯಲ್ಲಿಯೇ ನಿರತನಾಗುವನು. ||೫೧-೫೨||

ಯತಿಯು ಶಿವಾರಾಧನೆಯನ್ನು ಬಿಟ್ಟರೆ ಪ್ರಾಯಶ್ಚಿತ್ತರೂಪವಾಗಿ ಸಹಸ್ರ ಪ್ರಣವಜಪಮಾಡಿ, ಭಸ್ಮೋದ್ಧೂಲಿತಗಾತ್ರನಾಗಿ ಎರಡುಸಾರಿ ಶಿವಪೂಜೆ ಮಾಡ ಬೇಕು. ಶಿವಾರ್ಚನೆಮಾಡದೆ ಫಲ, ಮೂಲ, ನೀರು ಇವುಗಳನ್ನು ಸೇವಿಸುವವನು

ಶಿವಪೂಜಾಂ ನ ಕುರ್ವನ್ಯೋ ಫಲಮೂಲಾಂಬುಭೋಜನಃ ।
ರೇತೋಭಕ್ಷೀ ಪರೇತೋ ಹಿ ಅಂಬುಪಃ ಫಲಭುಕ್ ಕ್ರಿಮಿಃ ॥೫೪॥

ಅನ್ನಭುಗ್ಯದಿ ವಿಷ್ಠಾಶೀ ತಿಷ್ಠತ್ಯತ್ಯಂತಸಂಕಟೇ ।
ವರ್ಣಾನಾಮಾಶ್ರಮಾಣಾಂ ಚ ವಿಧಿಶ್ಚೈವಂ ತ್ವಯಾ ಪ್ರದರ್ಶಿತಃ ॥೫೫॥

ಕಾಶೀವಾಸೀ ತು ನಿಯಮಾದ್ವಸೇದಾಮರಣಂ ಸದಾ ।
ಸರ್ವಕ್ಷೇತ್ರೋತ್ತಮಂ ತಚ್ಚ ಯತ್ರ ವಿಶ್ವೇಶ್ವರಃ ಸ್ಥಿತಃ ॥೫೬॥

ಶಿವೋಽದ್ವಿತೀಯಸ್ತತ್ರ ತುರ್ಯಃ ಸಾಕ್ಷಾಲ್ಲಿಂಗೇ ಪ್ರಕಾಶತೇ ।
ವಿಶ್ವೇಶ್ವರಾಖ್ಯಂ ಯಲ್ಲಿಂಗಂ ವೇದವೇದಾಂತಸಂಸ್ತುತಂ ॥೫೭॥

ತತ್ಪೂಜ್ಯಂ ಸರ್ವದಾ ಸರ್ವೈರ್ಬಿಲ್ವಪತ್ರೈಶ್ಚ ಸಾಕ್ಷತೈಃ ।
ಸ್ನಾಪಯಿತ್ವಾ ಕಾಪಿಲೇನ ಪಯಸಾ ಲಿಂಗಮೀಶ್ವರಂ ॥೫೮॥

ವಿಶ್ವೇಶ್ವರಾಖ್ಯಂ ಮುನಯೋ ಬ್ರಹ್ಮಹಾಪಿ ವಿಮುಚ್ಯತೇ ।
ಸುರಾಪಾನೀ ಕಾಪಿಲೇನ ಪದ್ಮಾಜ್ಯೇನ ಹಿರಣ್ಯಹೃತ್ ॥೫೯॥

---

ರೇತಸ್ಸನ್ನು ಕುಡಿಯುವ ಪ್ರೇತವಾಗುವನು. ಜಲದಲ್ಲಿ, ಹಣ್ಣಿನಲ್ಲಿ ನಾನಾರೀತಿಯ ಕ್ರಿಮಿಯಾಗಿ ಹುಟ್ಟುವನು ॥೫೩-೫೪॥

ಶಿವಾರ್ಚನೆಮಾಡದೆ ಅನ್ನವನ್ನು ಭಕ್ಷಿಸಿದವನು ಮಲಭಕ್ಷಕನಾಗಿ ಹೆಚ್ಚು ವ್ಯಥೆಪಡುವನು. ಈ ನಿಯಮವು ಎಲ್ಲಾ ಜಾತಿಯವರಿಗೂ ಎಲ್ಲಾ ಆಶ್ರಮದವರಿಗೂ ಅನ್ವಯಿಸುವುದು. ಕಾಶೀಕ್ಷೇತ್ರದಲ್ಲಿ ವಾಸಿಸುವವನು ನಿಯಮದಿಂದ ಮರಣಪರ್ಯಂತವಾಗಿಯೂ ಅಲ್ಲಿಯೇ ನೆಲಸಿರಬೇಕು. ಕಾಶೀಕ್ಷೇತ್ರವು ಅತ್ಯುತ್ತಮವಾದುದು. ಏಕೆಂದರೆ ಅಲ್ಲಿ ಸಾಕ್ಷಾದ್ವಿಶ್ವೇಶ್ವರನೇ ವಾಸಿಸುತ್ತಿರುವನು. ॥೫೫-೫೬॥

ಅಲ್ಲಿ ದ್ವಿತೀಯವಸ್ತುರಹಿತನಾಗಿಯೂ ತುರೀಯವಸ್ತುವಾಗಿಯೂ ಇರುವ ಶಂಕರನು ಸಾಕ್ಷಾಲ್ಲಿಂಗರೂಪಿಯಾಗಿಯೇ ಶೋಭಿಸುವನು. ವೇದವೇದಾಂತಗಳಲ್ಲಿ ಸಂಸ್ತುತವಾದದ್ದು ವಿಶ್ವೇಶ್ವರಲಿಂಗ. ಅಂತಹ ಶಿವಲಿಂಗವನ್ನು ಬಿಲ್ವಪತ್ರೆಗಳಿಂದಲೂ ಮಂತ್ರಾಕ್ಷತೆಗಳಿಂದಲೂ ಸರ್ವದಾ ಪೂಜಿಸಬೇಕು. ಅದೇ ಶಿವಲಿಂಗವನ್ನು ಕಪಿಲವರ್ಣದ ಗೋಕ್ಷೀರದಿಂದ ಅಭಿಷೇಕಮಾಡಬೇಕು. ॥೫೭-೫೮॥

ವಿಶ್ವೇಶ್ವರಲಿಂಗವನ್ನು ಪೂಜಿಸುವುದರಿಂದ ಬ್ರಹ್ಮಹತ್ಯಾದೋಷವೂ ನಿವಾರಣೆಯಾಗುವುದು. ಸುರಾಪಾಯಿಯು ಕಪಿಲವರ್ಣದ ಹಸುವಿನ ಕ್ಷೀರದಿಂದ ಅಭಿಷೇಕ

ಮಧುನಾ ಗುರುದಾರಾಘಾಚ್ಛಿತಯಾ ಸರ್ವಜೀವಹೃತ್ ।
ಮಹಾಪ್ರಸ್ಥಾದಿಮಾನೇನ ಸ್ನಾಪಯೇತ್ಪರ್ವಣಿ ಕ್ರಮಾತ್ ।೬೦॥

ತಂಡುಲೈಶ್ಚ ಯವೈರ್ಬಿಲ್ವೈಸ್ತಿಲೈಃ ಸಂಪೂಜ್ಯ ಶಂಕರಂ ।
ಸರ್ವಾನ್ಕಾಮಾನವಾಪ್ನೋತಿ ಸುರಲೋಕೇಷು ಮೋದತೇ ॥೬೧॥

ನಿತ್ಯಾಂತರ್ಗೃಹಯಾತ್ರಾಂ ಚ ಕುರ್ಯಾದ್ಭಸ್ಮಾಕ್ಷಧಾರಕಃ ।
ತತ್ರ ಮೂತ್ರಪುರೀಷಾದಿ ನ ಕುರ್ಯಾನ್ಮೋಹತೋಽಪಿ ಚ ॥೬೨॥

ತತ್ರ ಪ್ರಾಚ್ಯಾಂ ಪ್ರತೀಚ್ಯಾಂ ಚ ಭೈರವಾಶ್ಶೂಲಪಾಣಯಃ ।
ರಕ್ಷಂತಿ ಪರಿತಃ ಕ್ಷೇತ್ರಂ ಪಾಪಿಷ್ಠಂ ದಾರಯಂತಿ ತೇ ।೬೩॥

ಯಮಸ್ಯ ಸದನೇ ಕಲ್ಪಂ ಯದ್ದುಃಖಂ ಸಮವಾಪ್ಯತೇ ।
ತತೋಽಪಿ ಬಹುಧಾ ದುಃಖಂ ಭೈರವೇ ಘಟಿಕಾತ್ರಯಂ ॥೬೪॥

---

ಮಾಡಿದರೆ ಅವನು ಪಾಪಮುಕ್ತನಾಗುವನು. ಹಾಗೆಯೇ ಸುವರ್ಣಚೌರ್ಯದ ಪಾಪವು, ಮೊಸರು ಮತ್ತು ತುಪ್ಪ ಇವುಗಳ ಅಭಿಷೇಕದಿಂದಲೂ, ಗುರುದಾರಾ ಸಮಾಗಮದ ದುರಿತವು ಜೇನುತುಪ್ಪದ ಅಭಿಷೇಕದಿಂದಲೂ, ಪ್ರಾಣಿಹತ್ಯಾ ದೋಷವು ಸಕ್ಕರೆಯ ಅಭಿಷೇಕದಿಂದಲೂ ಪರಿಹೃತವಾಗುವುದು. ಪರ್ವಕಾಲಗಳಲ್ಲಿ ಮೇಲೆ ಹೇಳಿದ ಅಭಿಷೇಕದ್ರವ್ಯಗಳನ್ನು ಅಳತೆಯ ಸೇರುಗಳಿಂದ ಸುರಿದು ಅಭಿಷೇಕಮಾಡಬೇಕು. ॥೫೯-೬೦॥

ಅಲ್ಲಿ ತಿಲಾಕ್ಷತೆ, ಯವಾಕ್ಷತೆಗಳಿಂದ ಶಂಕರನನ್ನು ಪೂಜಿಸುವವನು ಸಕಲ ಅಭೀಷ್ಟಗಳನ್ನೂ ಪಡೆದು ದೇವಲೋಕದಲ್ಲಿ ಆನಂದವನ್ನನುಭವಿಸುವನು. ಕಾಶಿ ಯಲ್ಲಿ ವಾಸಿಸುವನು ನಿತ್ಯ ಗೃಹಕೃತ್ಯಗಳಲ್ಲಿಯೂ ಭಸ್ಮರುದ್ರಾಕ್ಷಧಾರಿಯಾಗಿಯೇ ಇರಬೇಕು. ವಿಶ್ವೇಶ್ವರಾಲಯದ ಅಕ್ಕ ಪಕ್ಕಗಳಲ್ಲಿ ಎಂದೂ ಯಾವರೀತಿಯಿಂದಲೂ ಮೂತ್ರಪುರೀಷಾದಿಗಳನ್ನು ವಿಸರ್ಜಿಸಕೂಡದು ॥೬೧-೬೨॥

ಆ ಕ್ಷೇತ್ರದ ಪೂರ್ವ ಮತ್ತು ಪಶ್ಚಿಮಭಾಗಗಳಲ್ಲಿ ಭೈರವಗಣಗಳು ತ್ರಿಶೂಲ ಗಳನ್ನು ಹಿಡಿದು ಸುತ್ತಲೂ ಸಂಚರಿಸುತ್ತಾ ಅದನ್ನು ರಕ್ಷಿಸುತ್ತಿರುವರು ಪಾಪಿ ಗಳನ್ನು ಕಂಡೊಡನೆಯೇ ಅವರನ್ನು ಸೀಳಿಬಿಡುವರು. ಯಮಲೋಕದಲ್ಲಿ ಕಲ್ಪಾಂತ್ಯ ದವರೆಗೆ ಅನುಭವಿಸುವ ದುಃಖಾನುಭವಕ್ಕಿಂತಲೂ ಈ ಭೈರವಗಣಗಳಿಂದ ಮೂರು ಗಳಿಗೆ ಮಾತ್ರ ಅನುಭವಿಸುವ ದುಃಖವು ಕ್ರೂರತರವಾಗಿ ಕಾಣುವುದು. ॥೬೩-೬೪॥

ತಸ್ಮಾದ್ವಸೇತ್ಸುನಿಯತಂ ಕಾಶ್ಯಾಂ ವಿಪ್ರಾ ವಿಮುಕ್ತಯೇ ।
ಧ್ಯಾನಾರ್ಚನವಿಹೀನಾನಾಂ ತತ್ರ ವಾಸೋ ನ ಶಸ್ಯತೇ ॥೬೫॥

ಪಂಚಾಕ್ಷರವಿಹೀನಾನಾಂ ತತ್ರ ವಾಸೋ ನ ಶಸ್ಯತೇ ।
ಭಸ್ಮರುದ್ರಾಕ್ಷಹೀನಾನಾಂ ತತ್ರ ವಾಸೋ ನ ಶಸ್ಯತೇ ॥೬೬॥

ಪ್ರದೋಷಾರ್ಚನಹೀನಾನಾಂ ತತ್ರ ವಾಸೋ ನ ಶಸ್ಯತೇ ।
ಭೂತಾಷ್ಟಮೀ ಸೋಮವಾರವಿಹೀನಾನಾಂ ದುರಾತ್ಮನಾಂ ॥೬೭॥

ಅನ್ನಪೂರ್ಣಾಕ್ಷೇತ್ರಪಾಲಿಸ್ಕಂದವಿಘ್ನೇಶಭೈರವಾನ್ ।
ಪೂಜಯೇನ್ನಿಯತಂ ಕಾಶ್ಯಾಂ ಪಂಚಕ್ರೋಶಪ್ರದಕ್ಷಿಣಾಂ ॥೬೮॥

ಕುರ್ಯಾದಂತರ್ಗೃಹಾದೀನಾಂ ಪಾತಕೈಶ್ಚ ಪ್ರಮುಚ್ಯತೇ ।
ಸ್ನಾಯಾದ್ಗಂಗಾಂಭಸಿ ಸ್ಥಿತ್ವಾ ಮಣಿಕರ್ಣ್ಯಾಮಥ ದ್ವಿಜಃ ॥೬೯॥

ಪಶ್ಯೇಚ್ಚ ನಿಯತಂ ತತ್ರ ವಿಶ್ವೇಶಂ ಚಾನ್ನಪೂರ್ಣಕಾಂ ।
ಏವಂ ಸಸಂಸ್ಥಿತಾ...ತೇ ಸ್ವೈ ಮುಕ್ತಿಂ ನಿಂದತಿ ಚೋತ್ತಮಾಂ ॥೭೦॥

ಆದ್ದರಿಂದ ಕಾಶಿಯಲ್ಲಿ ವಾಸಿಸುವರು, ನಿಯಮಬದ್ಧರಾಗಿಯೇ ಜೀವಿಸ ಬೇಕು. ವಿಶ್ವೇಶ್ವರಾರ್ಚನೆ, ವಿಶ್ವೇಶ್ವರಧ್ಯಾನ, ಶಿವಪಂಚಾಕ್ಷರೀಜಪ, ಭಸ್ಮರುದ್ರಾಕ್ಷ ಧಾರಣೆ, ಪ್ರದೋಷಕಾಲದ ಶಿವಪೂಜೆ ಇವುಗಳನ್ನು ಬಿಟ್ಟವರಿಗೆ ಕಾಶೀವಾಸವು ಶುಭವೆನಿಸುವುದಿಲ್ಲ. ॥೬೫-೬೬॥

ಕೃಷ್ಣಪಕ್ಷದ ಅಷ್ಟಮೀವ್ರತ, ಸೋಮವಾರವ್ರತ, ಇವುಗಳನ್ನು ಕಾಶೀವಾಸಿ ಗಳು ಬಿಡಕೂಡದು. ಅನ್ನಪೂರ್ಣಾದೇವಿ, ಕ್ಷೇತ್ರಪಾಲ, ಸ್ಕಂದ, ಗಣಪತಿ, ಭೈರವ ಇವರನ್ನು ನಿತ್ಯವೂ ಪೂಜಿಸುತ್ತಿರಬೇಕು. ಕಾಶೀವಾಸಿಗಳು ನಿತ್ಯವೂ ಐದು ಮೈಲಿ ವಿಸ್ತಾರವುಳ್ಳ ಕಾಶೀಕ್ಷೇತ್ರವನ್ನು ಪ್ರದಕ್ಷಿಣೆಮಾಡುತ್ತಿರಬೇಕು. ॥೬೭-೬೮॥

ಈರೀತಿ ಮಾಡುವುದರಿಂದ ಅಂತರಂಗವಾದ ಮತ್ತು ಬಹಿರಂಗದಲ್ಲಿರುವ ಪಾಪರಾಶಿಯು ನಿವಾರಣೆಯಾಗುವುದು. ಗಂಗಾನದಿಯಲ್ಲಿ ಅದರಲ್ಲಿಯೂ ಮಣಿ ಕರ್ಣಿಕಾಘಾಟಿನಲ್ಲಿ ನಿಂತು ಬ್ರಾಹ್ಮಣನಾದವನು ಸ್ನಾನಮಾಡಬೇಕು. ನಿತ್ಯವೂ ವಿಶ್ವೇಶ್ವರನನ್ನೂ ಅನ್ನಪೂರ್ಣಾದೇವಿಯನ್ನೂ ತಪ್ಪದೆ ದರ್ಶನಮಾಡುತ್ತಿರಬೇಕು.

॥ ಶ್ರೀ ಸ್ಕಂದ ಉವಾಚ ॥

ಏಕಾಹಮಪ್ಯುಜ್ಝಿತಶಂಕರಾರ್ಚನೋ
ವಿಷ್ಠಾಸು ತಿಷ್ಠೇಚ್ಚ ಶತಂ ಸಮಾ ನರಃ ।
ಯೋಽಂಬ್ವಾಶನೋ ರೇತಪಸಾತಕೀ ಭವೇ
ದನ್ನಾಶನೋ ವಿಟ್‌ಕ್ರಿಮಿಭುಕ್ಪರೇತಃ ॥೨೦॥

ಪ್ರಾಯಶ್ಚಿತ್ತಂ ಚ ಚಿತ್ತೇ ಕಲಯತಿ ತದುದೀರ್ಯ ನಿವಸೇತ್
ಸ್ವಕಂ ಮುಂಡಂ ದಂಡ್ಯೋ ನ ಭವತಿ ಪರೇತೋ ಯಮಭಟೈಃ ।
ಉಪೋಷ್ಯೈವಾಸಾಯಂ ಶಿವಮಥ ಯಜೇತ ದ್ವಿಗುಣಿತಂ
ಅಹೋ ಭಕ್ತೇಷ್ವರ್ಥಂ ದದತಿ ಹಿ ಭವೇತ್ತೋತ್ರ ನಿಯತಃ ॥೨೧॥

---

ಈ ನಿಯಮಗಳಿಂದ ಕಾಶಿಯಲ್ಲಿ ವಾಸಮಾಡುವವನು ಶಿವಾನುಗ್ರಹವನ್ನೂ ಹಾಗೆಯೇ ಶಿವಕೈವಲ್ಯವನ್ನೂ ಪಡೆಯುವನು. ಇದರಲ್ಲಿ ಸಂಶಯವಿಲ್ಲ. ॥೬೯-೭೦॥

ಹೀಗೆ ಹೇಳಿದ ಪರಶಿವನ ಮಾತನ್ನೇ ಕುಮಾರಸ್ವಾಮಿಯು ಅನುವಾದ ಮಾಡುತ್ತಾ ಜೈಗೀಷವ್ಯಾದಿಗಳಿಗೆ ಹೀಗೆ ತಿಳಿಸಿದನು.—“ ಮುನಿಗಳಿರಾ, ಕಾಶೀ ಕ್ಷೇತ್ರದಲ್ಲಿ ಒಂದು ದಿನವೂ ಶಿವಾರ್ಚನೆ ಮಾಡದೆ ಇರಕೂಡದು. ಹಾಗೆ ಒಂದು ದಿನ ವಾಸಿಸಿದರೂ ಅವನು ನರಕದ ಮಲಕೂಪದಲ್ಲಿ ನೂರಾರುವರ್ಷ ಬೀಳಬೇಕಾಗುವುದು. ಶಿವಾರ್ಚನೆಯಿಲ್ಲದೆ ನೀರುಕುಡಿದವನು ನರಕದಲ್ಲಿ ರೇತಸ್ಸನ್ನು ಪಾನಮಾಡಬೇಕಾಗುವುದು. ಅನ್ನವನ್ನು ತಿಂದವನು ಮಲರಾಶಿಗತವಾದ ಕ್ರಿಮಿಗಳನ್ನು ತಿನ್ನಬೇಕಾಗುವುದು. ॥೭೧॥

ಕಾಶಿಯಲ್ಲಿ ತಾನು ಆಚರಿಸಿದ ಅಪರಾಧಗಳ ಪ್ರಾಯಶ್ಚಿತ್ತವನ್ನು ಮನಸ್ಸಿನಲ್ಲಿಯಾಗಲಿ, ಬಾಯಿಯಲ್ಲಾಗಲಿ ಉಚ್ಚರಿಸುತ್ತಾ ಪಶ್ಚಾತ್ತಾಪಪಟ್ಟರೂ ಒಂದು ವೇಳೆ ಅವನಿಗೆ ಯಮಭಟರ ಹೊಡೆತವು ತಪ್ಪಿಹೋದೀತು. ಆದರೆ ಪ್ರಾಯಶ್ಚಿತ್ತ ರೂಪವಾಗಿ ಹಗಲುರಾತ್ರಿ ಉಪವಾಸಮಾಡಿ, ದ್ವಿಗುಣಿತವಾಗಿ ಶಿವನಿಗೆ ಪೂಜೆಯನ್ನು ಸಲ್ಲಿಸಿದ ಭಕ್ತರಿಗೆ ತೃಪ್ತನಾದ ಶಂಕರನು ಸಕಲವಿಧವಾದ ಭೋಗಭಾಗ್ಯಗಳನ್ನೂ ಕರುಣಿಸುವನು. ಅದಲ್ಲವೇ ಆಶ್ಚರ್ಯ! ॥೭೨॥

ಯೋ ಕಾಲಕಾಲಂ ನಿಯಮಾತ್ತ್ರಿಕಾಲಂ
ದ್ವಿಕಾಲಮಪ್ಯೇಕತರಂ ಚ ಕಾಲಂ ।
ಸಂಪೂಜ್ಯ ಕಾಶ್ಯಾಂ ತು ಶಿವಾರ್ಚಕಾ ದ್ವಿಜಾಃ
ಕುರ್ಯುಸ್ತು ಜಾಬಾಲಗನಿಷ್ಕೃತಿಂ ದ್ವಿಜಾಃ ॥೭೩॥

ಉಮಾಧವಂ ಮಾಧವಮಂಬಿಕಾಂ ಗಣಂ
ಸ್ಕಂದಂ ದ್ವಿಜಾ ಭೈರವದಂಡಪಾಣಿನಂ ।
ಗಂಗಾಂ ಚ ದುರ್ಗಾಂ ನ ನಮಂತಿ ಯೇ ನರಾ
ಸ್ತೇ ಪಾಮರಾ ಭೈರವಯಾತನಾರತಾಃ ॥೭೪॥

ಚತುರ್ದಶ್ಯಾಂ ಕಾಶ್ಯಾಂ ವಿಧಿನಿಯತನಕ್ತಾಶನರತಾ
ಶಿವೇ ಭೂತ್ಯಾಯುಕ್ತಾ ಶಿವಭಜನಸಸಕ್ತಾ ಹಿ ಸುನರಾಃ ।
ದ್ವಿಜಾಃ ಕಾಲಾಷ್ಟಮ್ಯಾಂ ಶಶಿಶಕಲಚೂಡಾರ್ಚನರತಾಃ
ಲಭಂತೇ ದೇಹಾಂತೇ ಶಿವಸದನಮಧ್ಯೇ ಶಿವಜನಾಃ ॥೭೫॥

---

ಯಾರು ಪ್ರತಿದಿನವೂ ಮೂರು ಕಾಲಗಳಲ್ಲಿಯೂ, ಸಾಧ್ಯವಿಲ್ಲದಿದ್ದರೆ ಎರಡು ಕಾಲ ಅಥವಾ ಒಂದೇ ಕಾಲದಲ್ಲಿಯಾದರೂ ತಪ್ಪದೆ ಕಾಶಿಯಲ್ಲಿ ಕಾಲಕಾಲನೆನಿಸಿದ ವಿಶ್ವೇಶ್ವರಮೂರ್ತಿಯನ್ನೂ ನಿಯಮಬದ್ಧರಾಗಿ ಪೂಜಿಸುವರೋ, ಅವರು ಜಾಬಾಲೋಪನಿಷತ್ತಿನಲ್ಲಿ ಹೇಳಿರುವ ಸುಕೃತರಾಶಿಯನ್ನು ಅನಾಯಾಸವಾಗಿ ಗಳಿಸುವರು. ॥೭೩॥

ಕಾಶಿಯಲ್ಲಿ ವಿಶ್ವೇಶ್ವರಮೂರ್ತಿ, ಮಾಧವಮೂರ್ತಿ, ಅಂಬಿಕೆ, ಸ್ಕಂದ, ದಂಡಪಾಣಿಯಾದ ಭೈರವ, ಗಂಗಾಮಾತೆ, ದುರ್ಗಾದೇವಿ ಇಷ್ಟು ದೇವತೆಗಳಿಗೆ ಯಾರು ಪ್ರತಿದಿನವೂ ವಂದಿಸುವುದಿಲ್ಲವೋ ಅವರು ಅಜ್ಞಾನಿಗಳು. ಅವರಿಗೆ ಭೈರವನ ಹಿಂಸೆಯು ಎಂದೂ ತಪ್ಪುವುದಿಲ್ಲ. ॥೭೪॥

ಕೃಷ್ಣಚತುರ್ದಶೀ ಮತ್ತು ಕೃಷ್ಣಾಷ್ಟಮೀ ತಿಥಿಗಳಲ್ಲಿ ಶಿವಭಜನಾಸಕ್ತರಾದ ಜನರು ಭೂತಿರುದ್ರಾಕ್ಷಯುಕ್ತರಾಗಿ, ನಿಯಮಾನುಸಾರದಿಂದ ಚಂದ್ರಶೇಖರನೆನಿಸಿದ ವಿಶ್ವೇಶ್ವರಸ್ವಾಮಿಯನ್ನು ಪೂಜಿಸಿ, ನಕ್ತವ್ರತದಿಂದ ಶಿವಪ್ರೀತಿಯನ್ನು ಗಳಿಸಿದರೆ, ಅವರಿಗೆ ದೇಹಾಂತ್ಯದಲ್ಲಿ ಶಿವಾಲಯದ ವಾಸವು ಲಭಿಸುವುದು. ಕ್ರಮವಾಗಿ ಅವರು ಶಿವಸ್ವರೂಪರೇ ಆಗುವರು. ॥೭೫॥

ಯೋ ವಾ ಪ್ರದೋಷೇ ನಿಶಿ ಸೋಮವಾರೇ
ತ್ರಿಲೋಚನಂ ಪೂಜಯತೇ ಸ ಧನ್ಯಃ ।
ವನ್ಯೈಃ ಕಿಮನ್ಯೈರ್ನರಜನ್ಮಗಾರ್ದಭೈಃ
ಕಾಶ್ಯಾಂ ಚ ಸಾಮಾನ್ಯನರೈರ್ಭರೈರ್ಭುವಃ ॥೭೬॥

ಕಾಶ್ಯಾಂ ಸ್ಥಿತ್ವಾಪಿ ಪಾಪಾಃ ಶಿವಭಜನಹೀನಾ ಹಿ ಕುನರಾಃ
ಮಹೇಶಂ ವಿಶ್ವೇಶಂ ಯದಿ ಸ್ವಕೃದಶಾಂ ನೈವ ಕಲಯೇತ್ ।
ಕೃಪಾಪಾತ್ರಂ ಯಾತ್ರಾಂ ಪ್ರತಿದಿನಮಥಾಂತರ್ಗೃಹವರೇ
ತ್ರಿನೇತ್ರಸ್ಯ ಪ್ರೀತಾಂ ನ ಹಿ ಚರತಿ ಯಾಂತ್ಯಂಧತಮಸಿ ॥೭೭॥

ತೇ ಮಜ್ಜಯಂತ್ಯಘಗಿರಿಂ ವರಗಾಂಗನೀರೇ
ಮಜ್ಜಂತಿ ನೌದಯವಿಧ್ಯೈಃಕಿಲ ಮಜ್ಜನಾಸ್ತೇ
ಪ್ರಾಚ್ಯಾಂ ಚ ಮುಕ್ತಿಪದವೀಮದವೀಯಸೀಂ ತೇ
ಸಂಪ್ರಾಪ್ನುವಂತಿ ಗಿರಿಜೇ ವಿರಜಾ ಭವಂತಿ ॥೭೮॥

---

ಯಾರು ಸೋಮವಾರ ಪ್ರದೋಷಕಾಲದಲ್ಲಿ ತ್ರಿಲೋಚನನೆನಿಸಿದ ಪರಮೇಶ್ವರನನ್ನು ಭಕ್ತಿಯಿಂದ ಪೂಜಿಸುವರೋ ಅವರು ಧನ್ಯರು. ಹಾಗೆ ಶಿವಾರ್ಚನೆ ಮಾಡದವರು ನರಜನ್ಮವನ್ನು ಪಡೆದ ಕತ್ತೆಗಳಂತಾಗುವರು. ಕಾಶಿಯಲ್ಲಿದ್ದೂ ಹಾಗೆ ಮಾಡದವರು ನಿಜವಾಗಿಯೂ ಭೂಮಿಗೆ ಭಾರವೆನಿಸುವರು. ಅವರ ಜೀವನವೇ ವ್ಯರ್ಥವೆನಿಸುವುದು. ॥೭೬॥

ಕಾಶಿಯಲ್ಲಿ ವಾಸಮಾಡುತ್ತಿದ್ದರೂ ಯಾರು ಶಿವಸೇವೆಮಾಡದೆ, ಮಹೇಶ್ವರನೂ, ಜಗತ್ಪತಿಯೂ, ಕರುಣಾಸಮುದ್ರನೂ ಆದ ಶಿವನ ಅನುಗ್ರಹವನ್ನು ಸಂಪಾದಿಸದೆ, ಪ್ರತಿದಿನವೂ ಶಿವಾಲಯದ ಪ್ರದಕ್ಷಿಣಾದಿ ಯಾತ್ರೆಯನ್ನೂ ನಡೆಸದೆ ಇರುವರೋ, ಅವರು ಘೋರತಮವಾದ ಕಗ್ಗತ್ತಲೆಯ ನರಕದಲ್ಲಿ ಬಿದ್ದು ಹೊರಳಾಡುವರು. ॥೭೭॥

ವಿಧಿವತ್ತಾಗಿ ನನ್ನ ಭಕ್ತರೆನಿಸಿದವರು ಕಾಶಿಯ ಗಂಗಾಜಲದಲ್ಲಿ ತಮ್ಮ ದೇಹವನ್ನು ಮುಳುಗಿಸಿದುದೇ ಆದರೆ, ಅವರು ತನ್ನ ಪಾಪಪರ್ವತವನ್ನೇ ನೀರಿನಲ್ಲಿ ಮುಳುಗಿಸಿದಂತಾಗುವುದು. ಅವರಿಗೆ ಮೋಕ್ಷಮಾರ್ಗವು ಅತಿ ಹತ್ತಿರವಾಗುವುದು. ಸಮಸ್ತ ಪಾಪಗಳೂ ಅವರಿಂದ ದೂರವಾಗಿ ಅವರು ಪುಣ್ಯಶರೀರಿಗಳೆನಿಸುವರು. ॥೭೮॥

ಶಶ್ವದ್ವಿಶ್ವೇಶಪಾದೌ ಯದಿ ಭಜತಿ ಕಾಶ್ಯಾಂ ಚ ನಿವಸನ್
ತಥಾನ್ಯೈಃ ಪೂರ್ಣಾಂ ತ್ವಾಂ ಭಜತಿ ಚ ಕೃಪಾಪೂರ್ಣಕಲನಾಂ ।
ಸಮಭ್ಯರ್ಣಾ ಭೂಯಾತ್ಕಿಲ ಕಲಿಜಚಾಶೇಽಪಿ ಸುಜನೇ
ಮುಕ್ತ್ಯಾಖ್ಯಾಸಾ ಕಾಂತಾ ಭಜತಿ ತಮುಮಾಕಾಂತಕೃಪಯಾ ॥೭೯॥

ಪ್ರದೋಷೇ ವಿಶೇಷೇಣ ಲೋಕೋಸ್ತದೋಷೇ
ಮಹಾಶೇಷಭೂಷಾಂಗಲಿಂಗಾರ್ಚಕಶ್ಚೇತ್ ।
ವಿಶೇಷೇಣ ದೋಷಜ್ಞ ಏವ ಪ್ರದೋಷೋ
ನ ತಸ್ಯಾಸ್ತಿ ಬುದ್ಧೇರಶೇಷಾಮರೇಡ್ಯಃ ॥೮೦॥

ಶಕ್ತಾವಿಮುಕ್ತೇಽಪಿ ಚ ದೇಹಸೌಖ್ಯ
ಯುಕ್ತಾ ವಿರಕ್ತಾ ನ ಮಹೇಶಭಕ್ತಾಃ ।
ಸಕ್ತಾಂಧಧರ್ಮೇಷು ನ ನಕ್ತಭಕ್ತಾ
ವಸುಮನಾತ್ರ ನರಾ ನ ಮುಕ್ತಾಃ ॥೮೧॥

ಕಾಶಿಯಲ್ಲಿ ವಾಸಮಾಡುತ್ತಾ. ಒಂದು ಸಾರಿ ವಿಶ್ವೇಶ್ವರನ ಪಾದಗಳನ್ನೂ, ಹಾಗೆಯೇ ದಯಾಕಟಾಕ್ಷವುಳ್ಳ ಅಂಬಿಕೆಯ ಚರಣದ್ವಂದ್ವಗಳನ್ನೂ ಯಾವನು ಭಕ್ತಿಯಿಂದ ಆರಾಧಿಸಿ ಸೇವಿಸುವನೋ, ಅಂತಹವನಿಗೆ ಈಶ್ವರಾನುಗ್ರಹವು ಪೂರ್ಣವಾಗಿ ಒದಗಿ, ಅವನು ಎಂತಹ ನೀಚನೇ ಆಗಿದ್ದರೂ, ಮೋಕ್ಷವನ್ನು ಸುಲಭವಾಗಿ ಪಡೆಯುವನು. ಇದರಲ್ಲಿ ಸಂಶಯವಿಲ್ಲ. ॥೭೯॥

ದೋಷಸಾಮಾನ್ಯರಹಿತವಾದ ಪ್ರದೋಷಕಾಲದಲ್ಲಿ ಯಾವನು ಭಯಭಕ್ತಿಯಿಂದ ಆದಿಶೇಷಭೂಷಣನೆನಿಸಿದ ಮಹಾದೇವನನ್ನು ವಿಶೇಷರೀತಿಯಿಂದ ಆರಾಧಿಸುವನೋ, ಅಂತಹವನು ನಿಜವಾಗಿಯೂ ವಿದ್ವಾಂಸನೇ ಸರಿ. ಅವನ ಬುದ್ಧಿಯಲ್ಲಿ ಯಾವ ವಿಧವಾದ ಕಲ್ಮಷಗಳೂ ನಿಲ್ಲಲಾರವು. ಅವನು ಸಕಲ ದೇವತೆಗಳಿಗೂ ಪೂಜ್ಯನೆನಿಸುವನು. ತತ್ಸದೃಶನಾದ ಮಾನವನೇ ಮತ್ತೆಲ್ಲಿಯೂ ದೊರೆಯಲಾರನು. ॥೮೦॥

ಶಕ್ತರಾಗಿ ಕಾಶಿಯಲ್ಲಿ ವಾಸಿಸುತ್ತಿದ್ದರೂ ಕೇವಲ ಶರೀರಸುಖಾಭಿಲಾಷಿಗಳಾಗಿ ಮಹೇಶಾರ್ಚನಮಾಡದೆ ಯಾರು ಕಾಲಕಳೆಯುವರೋ ಮತ್ತು ಶಿವಧರ್ಮಾತಿರಿಕ್ತಗಳಾದ ಅನ್ಯಧರ್ಮಗಳಲ್ಲಿ ಯಾರು ಆಸಕ್ತಿ ವಹಿಸುವರೋ, ಅವರು ನಿಜವಾಗಿಯೂ ಮುಕ್ತರೆನಿಸುವುದಿಲ್ಲ. ಪಾಪಭೂಯಿಷ್ಠವಾದ ನರಕದಲ್ಲಿಯೇ ಸದಾ ಬಿದ್ದು ನರಳುವರು. ಇದು ನಿಜ. ॥೮೧॥

ನಿವಸೇನ್ನಿಯಮತೋತ್ರ ಭುಕ್ತಿಮುಕ್ತ್ಯೈ
ಶಿವನಿಷ್ಠೋ ಹಿ ಗರಿಷ್ಠ ಏಷ ಧರ್ಮಃ ।
ಶ್ರುತಿಸೋಮಂ ನ ವಿಶಿಷ್ಟವಾಕ್ಯಮೇತ
ನ್ನವಿಮುಂಚೇದವಿಮುಕ್ತಗೋ ವರಿಷ್ಠಃ ॥೮೨॥

**ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಅವಿಮುಕ್ತಕ್ಷೇತ್ರವಾಸನಿಯಮ ಕಥಾನುವರ್ಣನೇ ಷಟ್ತ್ರಿಂಶೋಽಧ್ಯಾಯಃ**

---

ಒಟ್ಟಿನಲ್ಲಿ ಐಹಿಕಾಮುಷ್ಮಿಕಸುಖಗಳನ್ನು ಅಪೇಕ್ಷಿಸುವವರು ನಿಯಮಬದ್ಧರಾಗಿ ಇಲ್ಲಿ ವಾಸಮಾಡಬೇಕು. ಶಿವಧರ್ಮಗಳಲ್ಲಿ ಕಾಶೀವಾಸವೂ ಒಂದು ಮುಖ್ಯ ಧರ್ಮ. ಇದು ವೇದಪ್ರತಿಪಾದ್ಯವಾದದ್ದು. ಕೇವಲ ಸಾಮಾನ್ಯವಾಣಿಯಲ್ಲ. ಆದ್ದರಿಂದ ಯಾವನು ನಿಯಮಬದ್ಧನಾಗಿ ಕಾಶಿಯಲ್ಲಿಯೇ ಬಹುಕಾಲ ನೆಲಸಿ ವಿಶ್ವೇಶ್ವರಾರಾಧನೆ, ಗಂಗಾಸ್ನಾನ, ಶಿವಗಣಗಳ ಆರಾಧನೆ ಇವುಗಳಿಂದ ಕಾಲ ಕಳೆಯುವನೋ, ಅವನು ಸುಲಭವಾಗಿ ಮುಕ್ತಿಯನ್ನು ಪಡೆಯುವನು. ಈ ಅಭಿಪ್ರಾಯವನ್ನರಿತು ಮಾನವರು ಕಾಶೀವಾಸವನ್ನು ಬಿಡದೆ ಶಿವಾನುಗ್ರಹವನ್ನು ಸಂಪಾದಿಸಬೇಕು. ಒಟ್ಟಿನಲ್ಲಿ ಕಾಶೀವಾಸಿಯೇ ಶ್ರೇಷ್ಠತಮನು. ಇದರಲ್ಲಿ ಸಂಶಯವಿಲ್ಲ" ಎಂದು ಪರಶಿವನು ಪಾರ್ವತಿಗೆ ಕಾಶೀವಾಸದ ಮಹಿಮೆಯನ್ನೂ, ಶಿವಧರ್ಮಸ್ವರೂಪವನ್ನೂ ತಿಳಿಸಿದನೆಂದು ಕುಮಾರಸ್ವಾಮಿಯು ಜೈಗೀಷವ್ಯಾದಿ ಮಹಾಮುನಿಗಳಿಗೆ ಶ್ರುತಪಡಿಸಿದನು. ॥೮೨॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವಪ್ರೋಕ್ತವಾದ ಕಾಶೀಕ್ಷೇತ್ರವಾಸದ ಮಹಿಮೆಯನ್ನೂ, ಕಾಶೀವಾಸದ ನಿಯಮವನ್ನೂ ವಿವರವಾಗಿ ವರ್ಣಿಸುವ ಮೂವತ್ತಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಸಪ್ತತ್ರಿಂಶೋಽಧ್ಯಾಯಃ

॥ ಶ್ರೀ ಶಿವ ಉವಾಚ ॥

ಶಾಂತ್ಯಧ್ಯಾಯಾನ್ ಪ್ರವಕ್ಷ್ಯಾಮಿ ಸಮಾಹಿತಮನಾಶ್ಶಿವೇ ।
ರಾಜಚೋರಾಗ್ನಿಪೀಡಾಸು ಗ್ರಹಭೂತಗ್ರಹಾದಿಭಿಃ ॥೧॥

ಪೀಡಿತಾನಾಂ ಶಿವೇ ಶಾಂತ್ಯೈ ಮಯ್ಯೈವ ಮನಸಾ ಕೃತಾಃ ।
ತತಶ್ಶೃಣು ವದಾಮ್ಯದ್ಯ ಸರ್ವಪಾಪಕ್ಷಯಾಯ ಚ ॥೨॥

ಅತಃ ಪರಮಿದಂ ಗುಹ್ಯಂ ರುದ್ರೋದ್ಗೀತಂ ಮಹೋದಯಂ ।
ಮಹಾವಿಘ್ನಪ್ರಶಮನಂ ಮಹಾಶಾಂತಿಕರಂ ಶುಭಂ ॥೩॥

---

## ಮೂವತ್ತೇಳನೆಯ ಅಧ್ಯಾಯ

ಪರಮೇಶ್ವರನು ಪಾರ್ವತಿಗೆ ರಾಜಪೀಡೆ, ಚೋರಪೀಡೆ, ಅಗ್ನಿಪೀಡಾದಿ ಸಮಸ್ತ ಗ್ರಹಗಳ ಉಪಪ್ಲವಗಳಿಗೂ ಶಾಂತ್ಯರ್ಥವಾಗಿ ನಡೆಸುವ ಕರ್ಮಗಳನ್ನು ತಿಳಿಸುತ್ತಾ ಹೀಗೆ ನುಡಿದನು. “ದೇವಿಯೇ ಕೇಳು. ರಾಜ, ಅಗ್ನಿ, ಕಳ್ಳರು, ಗ್ರಹಗಳು, ಪಿಶಾಚಾದಿಗಳು ಇವುಗಳ ಪೀಡೆಗೆ ಪರಿಹಾರಾರ್ಥವಾದ ಕೆಲವು ಶಾಂತಿ ಕರ್ಮಗಳನ್ನು ಈಗ ಹೇಳುವೆನು ಕೇಳು. ಅದರ ಶ್ರವಣದಿಂದಲೇ ಸಮಸ್ತಪಾಪವೂ ನಾಶವಾಗುವುದು. ॥೧-೩॥

ಈಗ ನಾನು ಹೇಳಲಿರುವ ಶಾಂತಿಕರ್ಮಸ್ವರೂಪವು ಅತ್ಯಂತ ಗೋಪ್ಯವಾದದ್ದು. ರುದ್ರನಿಂದ ಉಕ್ತವಾದುದರಿಂದಲೇ ಇದು ಸಮಸ್ತ ವಿಘ್ನಗಳನ್ನೂ

ಅಕಾಲಮೃತ್ಯುಶಮನಂ ಸರ್ವವ್ಯಾಧಿನಿವಾರಣಂ ।
ಪರಚಕ್ರಪ್ರಮಥನಂ ಸದಾ ವಿಜಯವರ್ಧನಂ ॥೪॥

ಸ್ತಂಭನಂ ಪರಸೈನ್ಯಸ್ಯ ರಿಪುನಾಶಕರಂ ಸದಾ ।
ವಿಷಗ್ರಹಕ್ಷಯಕರಂ ಸಮಸ್ತಾಭೀಷ್ಟಸಾಧಕಂ ॥೫॥

ಸರ್ವಶಾಂತ್ಯಧಿಕಾರಾಖ್ಯಂ ಧರ್ಮಂ ವಕ್ಷ್ಯೇ ಶೃಣುಷ್ವ ತಂ ।
ಶಶಾಂಕಧಾರಕಸ್ತ್ರ್ಯಕ್ಷೋ ನಾಗಯಜ್ಞೋಪವೀತವಾನ್ ॥೬॥

ಚತುರ್ಮುಖಶ್ಚತುರ್ಬಾಹುಃ ಸಿತಭಸ್ಮಾವಗುಂಠಿತಃ ।
ವರೋ ವರೇಣ್ಯೋ ವರದೋ ವಾಮದೇವೋ ಮಹೇಶ್ವರಃ ॥೭॥

ತ್ರೈಲೋಕ್ಯನಮಿತಃ ಶ್ರೀಮಾನ್ ಶಾಂತಿಮಾಶು ಕರೋತು ಮೇ ।
ಸರ್ವಾವಯವಮುಖ್ಯೇನ ಗಾತ್ರೇಣ ತನುಮಧ್ಯಮಾ ॥೮॥

---

ನಾಶಗೊಳಿಸುವುದು. ಶಾಂತಿಪ್ರದವಾದದ್ದು. ಅಕಾಲದಲ್ಲಿ ಬರುವ ಮೃತ್ಯುವನ್ನು ಪರಿಹರಿಸಬಲ್ಲುದು. ಸರ್ವವ್ಯಾಧಿಗಳನ್ನೂ ಹೋಗಿಸಬಲ್ಲುದು ಶತ್ರುರಾಷ್ಟ್ರವನ್ನು ನಾಶಗೊಳಿಸಿ ವಿಜಯವನ್ನು ಕೊಡಬಲ್ಲುದು. ಪರಸೈನ್ಯವನ್ನು ಸ್ತಂಭನಮಾಡಿ ಶತ್ರುಸೈನ್ಯವನ್ನು ಧ್ವಂಸಮಾಡಬಲ್ಲುದು. ವಿಷಭಯ, ಗ್ರಹಭಯ ಇವುಗಳನ್ನು ತಪ್ಪಿಸಿ ಸಕಲ ಇಷ್ಟಾರ್ಥಗಳನ್ನೂ ಒದಗಿಸಬಲ್ಲುದು. ॥೩-೪-೫॥

ಸಕಲವಿಧವಾದ ಶಾಂತಿಕಾರ್ಯಗಳಿಗೂ ಮೂಲವಾದ ಧರ್ಮಸ್ವರೂಪವನ್ನು ಈಗ ವಿವರವಾಗಿ ಹೇಳುವೆನು ಕೇಳು. "ಚಂದ್ರಶೇಖರನೂ, ತ್ರಿಲೋಚನನೂ, ನಾಗಯಜ್ಞೋಪವೀತಿಯೂ ಆದ ಮಹಾದೇವನು ಚತುರ್ಮುಖಗಳಿಂದಲೂ, ನಾಲ್ಕು ಬಾಹುಗಳಿಂದಲೂ, ಶುಭ್ರಭಸ್ಮಧಾರಣೆಯಿಂದಲೂ ವರಪ್ರದನಾಗಿರುವನು. ಅವನೇ ಅತ್ಯಂತ ಶ್ರೇಷ್ಠನೆನಿಸಿರುವನು. ವಾಮದೇವ, ಮಹೇಶ್ವರ ಎಂಬ ಹೆಸರಿನಿಂದ ತ್ರಿಲೋಕವಂದ್ಯನಾಗಿರುವನು. ಇಂತಹ ಮಹಾದೇವನು ನಮಗೆ ಪುನಃ ಶಾಂತಿಯನ್ನುಂಟುಮಾಡಲಿ" ಎಂದು ಸರ್ವಶಾಂತಿಗಾಗಿ ಮೊದಲು ಶಿವನನ್ನು ಪ್ರಾರ್ಥಿಸಬೇಕು. ॥೬-೭-೮॥

ಪೀತಶ್ಯಾಮಾತಿಸೌಮ್ಯೇನ ಶಿವರೂಪೇಣ ಶೋಭಿತಾ ।
ಲಲಾಟೇತಿಲಕೋಪೇತಾ ಚಂದ್ರರೇಖಾರ್ಧಧಾರಿಣೀ ॥೯॥

ದಿವ್ಯಾಂಬರಧರಾ ದೇವೀ ಸರ್ವಾಭರಣಭೂಷಿತಾ ।
ವರಸ್ತ್ರೀ ಸರ್ವನಾರೀಣಾಂ ಶೋಭಾಗುಣಮಹಾಸ್ಪದಾ ॥೧೦॥

ಭಾವನಾಮಾತ್ರಸಂತುಷ್ಟಾ ಉಮಾದೇವೀ ವರಪ್ರದಾ ।
ಸಾಕ್ಷಾದಾಗತ್ಯ ರೂಪೇಣ ಶಾಂತೇನಾಮಿತತೇಜಸಾ ॥೧೧॥

ಶಾಂತಿಂ ಕರೋತು ಮೇ ಪ್ರೀತಾ ಭಕ್ತಾನಾಂ ಭಕ್ತವತ್ಸಲಾ ।
ಪದ್ಮರಾಗದ್ಯುತಿಸ್ಸೌಮ್ಯೋ ರಕ್ತಮಾಲ್ಯಾನುಲೇಪನಃ ॥೧೨॥

ಆಬಾಲೋ ಬಾಲರೂಪೇಣ ಷಣ್ಮುಖಶ್ಶಿಖಿವಾಹನಃ ।
ಪೂರ್ಣೇಂದುವದನಸ್ಸೌಮ್ಯಸ್ತ್ರಿಶಿಖಾಶಕ್ತಿಸಂಯುತಃ ॥೧೩॥

---

ಶಾಂತಿಮೂರ್ತಿಯೆಂಬ ಒಂದು ದಿವ್ಯಶಕ್ತಿಯು ಸರ್ವಾವಯವಗಳಿಂದ ಕೂಡಿ ಕ್ಷೀಣವಾಗಿರುವ ಸೊಂಟದಿಂದ ವಿರಾಜಿಸುವಳು. ಆ ಮೂರ್ತಿಯ ಹಣೆಯಲ್ಲಿ ತಿಲಕವೂ, ಶಿರಸ್ಸಿನಲ್ಲಿ ಅರ್ಧಚಂದ್ರಕಲೆಯೂ ಶೋಭಿಸುತ್ತಿರುವುದು. ಶರೀರವು ಹೊಂಬಣ್ಣ ದಿಂದಲೂ, ಸ್ವಲ್ಪ ಕಪ್ಪುಬಣ್ಣದಿಂದಲೂ ಹೊಳೆಯುತ್ತಿರುವುದು. ದಿವ್ಯಾಂಬರ ಗಳನ್ನುಟ್ಟು, ಸಕಲಾಭರಣಗಳಿಂದ ಅಲಂಕೃತಳಾಗಿರುವಳು. ಸ್ತ್ರೀಯರಲ್ಲಿ ಶ್ರೇಷ್ಠ ಳೆನಿಸಿ ಆ ಶಕ್ತಿಯು ಸೌಂದರ್ಯ, ಗುಣ, ಕಾಂತಿ ಇವುಗಳಿಗೆ ಆಶ್ರಯಸ್ಥಾನಳಾಗಿರು ವಳು. ॥೯-೧೦॥

ಆ ದಿವ್ಯಶಕ್ತಿಯೇ ಉಮಾರೂಪದಿಂದಿರುವಳು. ಆ ಶಕ್ತಿಯು ಭಕ್ತರ ಭಕ್ತಿಭಾವವೊಂದಕ್ಕೇ ಅಧೀನಳಾಗುವಳು. ಅಂತಹ ತೇಜಸ್ವಿನಿಯಾದ ದಿವ್ಯ ಶಕ್ತಿಯು ಭಕ್ತವತ್ಸಲೆಯಾಗಿ ಸಂಪೂರ್ಣ ತೇಜಸ್ಸಿನಿಂದ ಬಂದು ಭಕ್ತನಾದ ನನಗೆ ಶಾಂತಿಯನ್ನುಂಟುಮಾಡಲಿ ಎಂದು ಪಾರ್ವತಿಯನ್ನು ಪ್ರಾರ್ಥಿಸಬೇಕು. ಅನಂತರ ಕುಮಾರಸ್ವಾಮಿಯನ್ನು ಧ್ಯಾನಿಸಬೇಕು. ಷಣ್ಮುಖನು ಪದ್ಮರಾಗದಂತೆ ಕಾಂತಿ ಯುಳ್ಳವನು. ಕೆಂಪುಮಾಲೆ, ಕೆಂಪಾದ ಭೂಷಣಗಳನ್ನು ಧರಿಸಿರುವವನು. ॥೧೧-೧೨॥

ಸ್ವಭಾವತಃ ಬಾಲನಲ್ಲದಿದ್ದರೂ ಬಾಲನಂತೆ ಕಂಡುಬರುವವನು. ನವಿಲನ್ನೇ ವಾಹನವನ್ನಾಗಿ ಮಾಡಿಕೊಂಡು, ಪೂರ್ಣಚಂದ್ರನಂತೆ ಮುಖವುಳ್ಳವನಾಗಿ ಅಗ್ನಿ

ಕೃತ್ತಿಕೋಮಾಗ್ನಿರುದ್ರಾಣಾಂ ಗಂಗೋದ್ಭೂತಸ್ಸುರಾರ್ಚಿತಃ ।
ಕಾರ್ತಿಕೇಯೋ ಮಹಾತೇಜಾ ವರದಾನೈಕತತ್ಪರಃ ॥೧೪॥

ಶಾಂತಿಂ ಕರೋತು ಮೇ ಪ್ರೀತೋ ಬಲಂ ಸೌಖ್ಯಂ ಚ ಸರ್ವದಾ ।
ಶ್ವೇತವಸ್ತ್ರಪರೀಧಾನಸ್ತ್ರ್ಯಕ್ಷಃ ಕನಕಸತ್ಪ್ರಭಃ ॥೧೫॥

ಶೂಲಪಾಣಿರ್ಮಹಾಪ್ರಾಜ್ಞೋ ನಂದೀಶಶ್ಶಿವಭಾವಿತಃ ।
ಶಾಂತಿಂ ಕರೋತು ಮೇ ಶಾಂತೋ ಧರ್ಮೇ ಚ ಮತಿಯುಕ್ತವಾನ್ ॥೧೬॥

ಮಹೋದರೋ ಮಹಾಕಾಯೋ ಸ್ನಿಗ್ಧಾಂಜನಸಮಪ್ರಭಃ ।
ಏಕದಂಷ್ಟ್ರೋತ್ಕಟೋ ದೇವೋ ಗಜವಕ್ತ್ರೋ ಮಹಾಬಲಃ ॥೧೭॥

ನಾಗಯಜ್ಞೋಪವೀತೀ ಚ ನಾಗಾಭರಣಭೂಷಿತಃ ।
ಸರ್ವಾರ್ಥಸಂಪದಾಧಾರೋ ಗಣಾಧ್ಯಕ್ಷೋ ವರಪ್ರದಃ ॥೧೮॥

ರುದ್ರಸ್ಯ ತನಯೋ ದೇವೋ ನಾಯಕೋಥ ವಿನಾಯಕಃ ।
ಕರೋತು ಮೇ ಮಹಾಶಾಂತಿಂ ಕರ್ಮಸಿದ್ಧಿಂ ಚ ಸರ್ವದಾ ॥೧೯॥

---

ಯಂತೆ ತೇಜಸ್ವಿಯಾಗಿ, ಕೃತ್ತಿಕಾನಕ್ಷತ್ರಗಳು, ಪಾರ್ವತಿ, ಅಗ್ನಿ, ರುದ್ರ ಇವರ ತೇಜಸ್ಸಿನಿಂದ ಆವಿರ್ಭವಿಸಿದವನು, ಗಂಗಾದೇವಿಯಿಂದ ಬೆಳೆದವನು, ಸಕಲ ದೇವ ವಂದ್ಯನು, ಮಹಾತೇಜಸ್ವಿಯು. ಭಕ್ತರಿಗೆ ಸಮಸ್ತ ವರಗಳನ್ನೂ ಕೊಡುವುದರಲ್ಲಿ ಸಮರ್ಥನು. ಇಂತಹ ಷಣ್ಮುಖನು ನನಗೆ ಬಲವನ್ನೂ, ಸುಖವನ್ನೂ, ಶಾಂತಿಯನ್ನೂ ಕರುಣಿಸಲಿ ಎಂದು ಪ್ರಾರ್ಥಿಸಬೇಕು. ॥೧೩-೧೪॥

ಹಾಗೆಯೇ, ಶುಭ್ರವಸ್ತ್ರಧಾರಿಯಾಗಿ ಮೂರು ಕಣ್ಣುಗಳಿಂದಲೂ, ಸುವರ್ಣದಂತೆ ರಂಜಿಸುವ ದೇಹದಿಂದಲೂ ವಿರಾಜಿಸುತ್ತಾ, ಶೂಲಪಾಣಿಯಾಗಿ ಮಹಾಪ್ರಾಜ್ಞನೆನಿಸಿದ ನಂದೀಶ್ವರನು ನನಗೆ ಧರ್ಮಬುದ್ಧಿಯನ್ನೂ ಮನಶ್ಶಾಂತಿಯನ್ನೂ ಕರುಣಿಸಲಿ ಎಂದು ನಂದೀಶ್ವರನನ್ನು ಪ್ರಾರ್ಥಿಸಬೇಕು. ॥೧೫-೧೬॥

ದೊಡ್ಡ ಉದರದಿಂದ ಕೂಡಿ ಮಹಾಕಾಯನೆನಿಸಿ, ಎಣ್ಣೆಯಿಂದ ಕೂಡಿದ ಕಾಡಿಗೆಯಂತೆ ಕಪ್ಪುದೇಹವುಳ್ಳವನಾಗಿ ಮತ್ತು ಏಕದಂತದಿಂದ ವಿರಾಜಿಸುತ್ತಾ, ಗಜಮುಖನೆನಿಸಿದ ಮಹಾಗಣಪತಿಯು ನನಗೆ ಶಾಂತಿಯನ್ನುಂಟುಮಾಡಲಿ. ನಾಗಯಜ್ಞೋಪವೀತಧಾರಿಯಾಗಿ ನಾಗಾಭರಣಭೂಷಿತನಾಗಿರುವ ವಿನಾಯಕನು ಸರ್ವ

ಇಂದ್ರನೀಲನಿಭಸ್ತ್ರ್ಯಕ್ಷೋ ದೀಪ್ತಶೂಲಾಯುಧೋತ್ತಮಃ
ರಕ್ತಾಂಬರಧರಃ ಶ್ರೀಮಾನ್ ಕೃಷ್ಣಾಂಗೋ ನಾಗಭೂಷಣಃ ॥೨೦॥

ಪಾಪನೋದನಸಂಶುದ್ಧಃ ಸ್ವಲಕ್ಷ್ಮೀಮಲನಾಶನಃ ।
ಕರೋತು ಮೇ ಮಹಾಶಾಂತಿಂ ಮಹಾಕಾಲೋ ಮಹಾಬಲಃ ॥೨೧॥

ಪೀತಾಂಬರಪರೀಧಾನಾ ಕನ್ಯಾರೂಪಾಸ್ವಲಂಕೃತಾ ।
ಗಣನಾಥಾಂಬಿಕಾ ತ್ರ್ಯಕ್ಷಗುಹ್ಯಾ ಗೌರೀ ಸುರೇಶ್ವರೀ ॥೨೨॥

ಸರ್ವಸಿದ್ಧಿಪ್ರದಾ ದೇವಿ ಪ್ರಸಾದಪರಮಾ ಪರಾ ।
ಶಾಂತಿಂ ಕರೋತು ಮೇ ಶಾಂತಿಃ ಸಿದ್ಧಿಮಾಶು ಪ್ರಯಚ್ಛತು ॥೨೩॥

ಸ್ನಿಗ್ಧಾಸ್ಯಾ ಮೀನವರ್ಣೇನ ಮಹಿಷಾಸುರಮರ್ದಿನೀ ।
ಧನುಶ್ಚಕ್ರಪ್ರಹರಣಾ ಶಂಖಯಷ್ಟ್ಯಸಿಧಾರಿಣೀ ॥೨೪॥

---

ವಿಧವಾದ ಸಂಪತ್ತಿಗೂ ಆಧಾರಭೂತನಾಗಿರುವನು. ಸಕಲಗಣಗಳಿಗೂ ಅಧಿಪತಿಯೆನಿಸಿರುವನು. ವರಪ್ರದನಾದ ಗಣಪತಿಯು ನನಗೆ ಮಂಗಳವನ್ನುಂಟುಮಾಡಲಿ ಎಂದು ಗಣಪತಿಯನ್ನು ಪ್ರಾರ್ಥಿಸಬೇಕು. ||೧೭-೧೮-೧೯||

ಮಹಾಕಾಲನು ಇಂದ್ರನೀಲಮಣಿಯಂತೆ ಹೊಳೆಯುತ್ತಿರುವವನು. ಮೂರು ಕಣ್ಣುಗಳಿಂದಲೂ. ಪ್ರಕಾಶಮಾನವಾದ ಶೂಲಾಯುಧದಿಂದಲೂ ಪ್ರಕಾಶಿಸುವವನು. ನಾಗಾಭರಣದಿಂದಲೂ ಪಾಪನಿರ್ಧೂತನಾಗಿ, ಅಮಂಗಳನಿವಾರಕನಾಗಿಯೂ ರಂಜಿಸುವ ಮಹಾಕಾಲನು, ನಮಗೆ ಸರ್ವತೋಮುಖವಾದ ಮಂಗಳವನ್ನುಂಟುಮಾಡಲಿ, ಎಂದು ಮಹಾಕಾಲನನ್ನು ಪ್ರಾರ್ಥಿಸಬೇಕು. ||೨೦-೨೧||

ಪೀತಾಂಬರವನ್ನುಟ್ಟು ಸರ್ವದಾ ಕನ್ಯಕೆಯಂತೆಯೇ ಅಲಂಕೃತಳಾಗಿರುವ ಗಜಾನನನ ಮಾತ್ರವಾದ ಪಾರ್ವತಿಯು ತ್ರಿಲೋಚನಗಳಿಂದ ರಂಜಿಸುವವಳಲ್ಲವೆ! ಅಂತಹ ಸುರೇಶ್ವರಿಯೂ, ಸರ್ವಸಿದ್ಧಿಪ್ರದಾಯಕರೂ, ಪ್ರಸಾದದಾತೆಯೂ ಆದ ಪರಮೇಶ್ವರಿಯು ನನಗೆ ಶಾಂತಿಯನ್ನು ಅನುಗ್ರಹಿಸಲಿ ||೨೨-೨೩||

ಮಧುರವಾದ ಮಂದಹಾಸದಿಂದ ಸುಂದರಿಯಾದ ಮಹಿಷಾಸುರಮರ್ದಿನಿಯು, ಧನುಸ್ಸು, ಚಕ್ರ, ಗದೆ, ಶಂಖ, ಚಾವಟಿ, ಕತ್ತಿ ಮುಂತಾದ ಆಯುಧಗಳನ್ನು ಧರಿಸಿದ್ದರೂ ತನ್ನ ಭಕ್ತರಿಗೆ ಸೌಮ್ಯರೂಪದಿಂದ ಗೋಚರಿಸುವಳು. ಜಗನ್ಮಾತೆ

ಅತರ್ಜನೋದ್ಯತಾಕಾರಾ ಸರ್ವೋಪದ್ರವನಾಶಿನೀ ।
ಸರ್ವಮಂಗಳಮಾತಾ ಮೇ ಶಿವಮಾಶು ಪ್ರಯಚ್ಛತು ॥೨೫॥

ನಿರ್ಮಾಂಸೇನ ಶರೀರೇಣ ಸುಸ್ನಾಯ್ವಸ್ಥಿನಿಬಂಧನಂ ।
ಅತಿಸೂಕ್ಷ್ಮೋಽತಿವಿಕ್ರಾಂತಸ್ತ್ರ್ಯಕ್ಷೋ ಭೃಂಗಿರಿಟಿರ್ಮಹಾನ್ ॥೨೬॥

ರುದ್ರಾತ್ಮಜೋ ರುದ್ರವೀರೋ ರುದ್ರೈಕಗತಮಾನಸಃ ।
ಸೋಽಪಿ ಶಾಂತಾತ್ಮಭಾವೇನ ಶಾಂತಿಮಾಶು ಕರೋತು ಮೇ ॥೨೭॥

ಪ್ರಚಂಡಗಣಸೈನ್ಯೇಶೋ ಮಹಾಟಂಕಾಸ್ತ್ರಧಾರಕಃ ।
ಅಕ್ಷಮಾಲಾರ್ಪಿತಕರಸ್ತ್ರ್ಯಕ್ಷಶ್ಚಂಡೇಶ್ವರಃ ಪ್ರಭುಃ ॥೨೮॥

ಪ್ರಚಂಡಪಾಪಹರಣೋ ಬ್ರಹ್ಮಹತ್ಯಾದಿಶೋಧಕಃ ।
ಕರೋತು ಮೇ ಮಹಾಯೋಗೀ ಕಲ್ಯಾಣಂ ಪರಮಂ ಶುಭಂ ॥೨೯॥

---

ಯಾದ ಚಾಮುಂಡಾಂಬೆಯು ಸರ್ವರ ಉಪದ್ರವಗಳನ್ನೂ ನಾಶಗೊಳಿಸುತ್ತಾ, ಸರ್ವಮಂಗಳದಾಯಿನಿಯಾಗಿರುವಳು. ಇಂತಹ ಮಹಾಜನನಿಯು ನಮಗೆ ಮಂಗಳವನ್ನು ಅನುಗ್ರಹಿಸಲಿ ಎಂದು ಚಾಮುಂಡಾಂಬೆಯನ್ನು ಪ್ರಾರ್ಥಿಸಬೇಕು. ॥೨೪-೨೫॥

ಮಾಂಸವೇ ಇಲ್ಲದೆ ಕೇವಲ ಮೂಳೆ, ನರ ಇವುಗಳಿಂದ ಸೂಕ್ಷ್ಮರೂಪದಲ್ಲಿ ತೋರಿಬರುವ ಭೃಂಗಿಯು, ಬಹುಪರಾಕ್ರಮಿಯಾಗಿ ತ್ರಿಲೋಚನಗಳಿಂದ ಶೋಭಿಸುವನು. ರುದ್ರಪುತ್ರನಾಗಿ, ರುದ್ರನಷ್ಟೇ ಶೂರನಾಗಿ, ರೌದ್ರಕಾರ್ಯಗಳಲ್ಲಿ ಸದಾ ಆಸಕ್ತನಾಗಿರುವನು. ಅಂತಹ ಭೃಂಗಿಯು ಶಾಂತಸ್ವಭಾವದಿಂದ ನನಗೆ ಸರ್ವಕಾರ್ಯಸಿದ್ಧಿಯನ್ನೂ ಅನುಗ್ರಹಿಸಲಿ ॥೨೬-೨೭॥

ಪ್ರಚಂಡಗಣಪರಿವೃತನಾಗಿ ಮಹಾಟಂಕಾದಿಗಳಿಂದಲೂ, ಅಸ್ತ್ರಸಮೂಹದಿಂದಲೂ ವಿರಾಜಿಸುತ್ತಾ, ಜಪಮಾಲೆಯನ್ನು ಹಿಡಿದಿರುವ ಚಂಡೀಶ್ವರನು ಸಮಸ್ತ ಪಾಪನಾಶಕನಾಗಿ ಬ್ರಹ್ಮಹತ್ಯಾದಿ ಸಕಲ ಮಹಾಪಾಪಗಳನ್ನೂ ನಿರ್ಮೂಲಗೊಳಿಸುವ ಮಹಾಯೋಗಿ ಚಂಡೀಶ್ವರನು ನನಗೆ ಅಮಿತವಾದ ಮಂಗಳವನ್ನುಂಟು ಮಾಡಲಿ. ॥೨೮-೨೯॥

ಪದ್ಮಾಸನಃ ಪದ್ಮನಿಭಶ್ಚತುರ್ವದನಪಂಕಜಃ ।
ಕಮಂಡಲುಧರಃ ಶ್ರೀಮಾನ್ ದೇವಗಂಧರ್ವಪೂಜಿತಃ ॥೩೦॥

ಶಿವಧ್ಯಾನೈಕನಿರತಃ ಶಿವಸದ್ಭಾವಭಾವಿತಃ ।
ಬ್ರಹ್ಮಶಬ್ದೇನ ದಿವ್ಯೇನ ಬ್ರಹ್ಮಾ ಶಾಂತಿಂ ಕರೋತು ಮೇ ॥೩೧॥

ಶಂಖಕುಂದೇಂದುವರ್ಣಾಭಃ ಕಂಠೇ ಮರಕತಪ್ರಭಃ ।
ಅಕ್ಷಮಾಲಾಸರೋಗ್ರಸ್ತಶಿವಜ್ಞಾನೇ ವ್ಯವಸ್ಥಿತಃ ॥೩೨॥

ಚತುರ್ಮುಖಶ್ಚತುಷ್ಪಾದಸ್ತ್ರಿನೇತ್ರಃ ಸರ್ವತೋಜ್ಜ್ವಲಃ ।
ಕ್ಷಿತೇಃ ಪತಿರ್ವೃಷೋ ದೇವೋ ಧರ್ಮೋ ಧರ್ಮೋತ್ತಮೋತ್ತಮಃ ॥೩೩॥

ಈಶಂ ವಹತಿ ಪೃಷ್ಠೇನ ತಸ್ಮಾದ್ಧರ್ಮೋ ಜಗತ್ಪ್ರಭುಃ ।
ವೃಷೋ ವೃಷಪತಿಶ್ಶ್ರೀಮಾನ್ ದೇವಗಂಧರ್ವಪೂಜಿತಃ ॥೩೪॥

ಶಿವಧ್ಯಾನೈಕಸಂಪನ್ನಃ ಶಿವಸದ್ಭಾವಭಾವಿತಃ ।
ವೃಷಶಬ್ದೇನ ದಿವ್ಯೇನ ವೃಷಶ್ಶಾಂತಿಂ ಕರೋತು ಮೇ ॥೩೫॥

---

ಕಮಲಾಸನನಾಗಿ, ಕಮಲದಂತಿರುವ ನಾಲ್ಕು ಮುಖಗಳಿಂದ ವಿರಾಜಿಸುತ್ತಾ ಕಮಂಡಲುಧಾರಿಯಾಗಿ, ದೇವಗಂಧರ್ವಾದಿಗಳಿಂದ ಪೂಜಿಸಲ್ಪಡುತ್ತಾ ತಾನು ಸದಾ ಶಿವಧ್ಯಾನ, ಶಿವೋಹಂಭಾವ ಇತ್ಯಾದಿ ಶಿವಧರ್ಮಗಳನ್ನು ಅನುಷ್ಠಿಸುತ್ತಾ ಇರುವ ಬ್ರಹ್ಮಶಬ್ದವಾಚ್ಯನಾದ ಪರಬ್ರಹ್ಮನು ನನಗೆ ಶಾಂತಿಯನ್ನು ಕರುಣಿಸಲಿ. ॥೩೦-೩೧॥

ಶಂಖ, ಮಲ್ಲಿಗೆ, ಚಂದ್ರ ಈ ವಸ್ತುಗಳಂತೆ ಶುಭ್ರದೇಹಿಯಾಗಿ, ಮರಕತ (ಪಚ್ಚೆ) ದ ವರ್ಣದಂತೆ ಶೋಭಿಸುವ ಕಂಠಭಾಗದಲ್ಲಿ ರುದ್ರಾಕ್ಷಮಾಲೆಯನ್ನು ಧರಿಸಿ, ಸದಾ ಶಿವನನ್ನೇ ಧ್ಯಾನಿಸುತ್ತಿರುವ ವೃಷಭೇಶ್ವರನು, ನಾಲ್ಕು ಮುಖಗಳಿಂದಲೂ, ನಾಲ್ಕು ಕಾಲುಗಳಿಂದಲೂ, ಮೂರು ಕಣ್ಣುಗಳಿಂದಲೂ ಪ್ರಕಾಶಿಸುವನು. ಹೀಗೆ ಕ್ಷಿತಿಪತಿಯೂ, ಧರ್ಮಸ್ವರೂಪಿಯೂ, ಶಿವನನ್ನು ಸದಾ ಹೊತ್ತಿರುವವನೂ, ಅದರಿಂದಲೇ ಉತ್ತಮೋತ್ತಮಧರ್ಮಸ್ವರೂಪಿಯೆನಿಸಿರುವವನೂ ಆದ ವೃಷಪತಿಯು ದೇವಗಂಧರ್ವಪೂಜಿತನಾಗಿರುವನು. ಇಂತಹ ಶಿವಧ್ಯಾನ, ಶಿವ

ತಾರ್ಕ್ಷ್ಯಾಸನಶ್ಚತುರ್ಬಾಹುಃ ಶಂಖಚಕ್ರಗದಾಧರಃ ।
ಶ್ಯಾಮಃ ಪೀತಾಂಬರಧರೋ ವನಮಾಲಾವಿಭೂಷಿತಃ ॥೩೬॥

ಯಜ್ಞೋ ದೇವೋತ್ತಮೋ ದೇವೋ ಮಾಧವೋ ಮಧುಸೂದನಃ ।
ಶಿವಪ್ರಸಾದಸಂಪನ್ನಃ ಶಿವಧ್ಯಾನಪರಾಯಣಃ ॥೩೭॥

ಶಿವಾರ್ಚನರತೋ ನಿತ್ಯಂ ವಿಷ್ಣುಃ ಶಾಂತಿಂ ಕರೋತು ಮೇ ।
ಪದ್ಮರಾಗಪ್ರಭಾ ದೇವೀ ಚತುರ್ವದನಪಂಕಜಾ ॥೩೮॥

ಅಕ್ಷಮಾಲಾರ್ಪಿತಕರಾ ಕಮಂಡಲುಧರಾ ಶುಭಾ ।
ಬ್ರಾಹ್ಮಣೀ ಸೌಮ್ಯವದನಾ ಶಿವಪೂಜಾಪರಾಯಣಾ ॥೩೯॥

ಶಾಂತಿಂ ಕರೋತು ಮೇ ಪ್ರೀತಾ ಬ್ರಹ್ಮಶಬ್ದೇನ ನಿರ್ಮಲಾ ।
ಮಯೂರವಾಹನಾ ದೇವೀ ಸಿಂದೂರಾರುಣವಿಗ್ರಹಾ ॥೪೦॥

---

ಭಾವನೆಯಲ್ಲಿ ಮಗ್ನನಾಗಿ ವೃಷಶಬ್ದವಾಚ್ಯನಾಗಿರುವ ವೃಷಭರಾಜನು ನನಗೆ ಸನ್ಮಂಗಳಗಳನ್ನೂ ಕರುಣಿಸಲಿ. ||೩೨-೩೩-೩೪-೩೫||

ಗರುಡವಾಹನನಾಗಿ ನಾಲ್ಕು ಹಸ್ತಗಳಲ್ಲಿಯೂ ಶಂಖ, ಚಕ್ರ, ಗದಾ, ಕಮಲಗಳನ್ನು ಹಿಡಿದು, ಶ್ಯಾಮಲವರ್ಣದವನಾಗಿ, ಪೀತಾಂಬರಧಾರಿಯಾಗಿ, ವನಮಾಲೆಯನ್ನು ಧರಿಸಿ, ಯಜ್ಞಪುರುಷನಾಗಿ, ದೇವೋತ್ತಮನೆನಿಸಿದ ಮಧುಸೂದನನು ಸದಾ ಶಿವಧ್ಯಾನತತ್ಪರನಾಗಿರುವನು. ಶಿವಪೂಜೆ, ಶಿವಪ್ರಸಾದ ಇವುಗಳಲ್ಲಿಯೇ ನೆಟ್ಟ ಮನಸ್ಸುಳ್ಳ ಅಂತಹ ಮಹಾವಿಷ್ಣುವು ನನಗೆ ಚಿರಶಾಂತಿಯನ್ನು ಕೊಡಲಿ, ಎಂದು ವಿಷ್ಣುವನ್ನು ಧ್ಯಾನಿಸಬೇಕು. ||೩೬-೩೭-೩೮||

ಪದ್ಮರಾಗಮಣಿಗಳಂತೆ ಶೋಭಿಸುತ್ತಾ, ನಾಲ್ಕು ಮುಖಕಮಲಗಳಿಂದಲೂ ವಿರಾಜಿಸುತ್ತಾ ಜಪಮಾಲೆ, ಕಮಂಡಲು ಇವುಗಳನ್ನು ಕೈಯಲ್ಲಿ ಹಿಡಿದು ಶಿವಪೂಜಾಪರಾಯಣಳಾದ ಬ್ರಾಹ್ಮೀದೇವಿಯು ಸಂತುಷ್ಟಳಾಗಿ ನನಗೆ ಶಾಂತಿಯನ್ನು ಉಂಟುಮಾಡಲಿ. ||೩೯||

ಕೆಂಪುವರ್ಣದ ದೇಹದಿಂದ ನವಿಲಿನ ಮೇಲೆ ಕುಳಿತು ಶಕ್ತ್ಯಾಯುಧಧಾರಿಣಿಯಾಗಿ, ಸರ್ವಾಭರಣಭೂಷಿತಳಾಗಿ ಸದಾ ರುದ್ರಾರ್ಚನೆಮಾಡುತ್ತಾ ಮಹಾಪುಣ್ಯ

ಶಕ್ತಿಹಸ್ತಾ ಮಹಾರೂಪಾ ಸರ್ವಾಭರಣಭೂಷಿತಾ ।
ರುದ್ರಭಕ್ತಾ ಮಹಾಪ್ರಜ್ಞಾ ರುದ್ರಾರ್ಚನರತಾ ಸದಾ ॥೪೧॥

ಕೌಮಾರೀ ವರದಾ ದೇವೀ ಕ್ಷೇಮಾರೋಗ್ಯಂ ದದಾತು ಮೇ ।
ಶಂಖಚಕ್ರಗದಾಹಸ್ತಾ ಶ್ಯಾಮಾ ಪೀತಾಂಬರಪ್ರಿಯಾ ॥೪೨॥

ಚತುರ್ಭುಜಾ ತಾರ್ಕ್ಷ್ಯರಥಾ ವೈಷ್ಣವೀ ಸುರಪೂಜಿತಾ ।
ಶಿವಾರ್ಚನರತಾ ಭಕ್ತಾ ರುದ್ರೈಕಗತಮಾನಸಾ ॥೪೩॥

ಶಾಂತಿಂ ಕರೋತು ಮೇ ನಿತ್ಯಂ ಸರ್ವಾಸುರವಿಮರ್ದಿನೀ ।
ಹಿಮಶೈಲನಿಭಾ ದೇವೀ ಮಹಾವೃಷಭವಾಹಿನೀ ॥೪೪॥

ತ್ರಿಶೂಲಹಸ್ತಾ ವರದಾ ನಾನಾಭರಣಶೋಭಿತಾ ।
ರುದ್ರಭಕ್ತಾ ಮಹಾವೀರ್ಯಾ ರುದ್ರಾರ್ಚನರತಾ ಸದಾ ॥೪೫॥

ಚತುರ್ಭುಜಾ ಚತುರ್ವಕ್ತ್ರಾ ತ್ರಿನೇತ್ರಾ ಪಾಪಹಾರಿಣೀ ।
ಆರ್ತಿಂ ಹರತು ಮೇ ಪ್ರೀತ್ಯಾ ಮಾಹೇಶೀ ನಿತ್ಯಮುಜ್ಜ್ವಲಾ ॥೪೬॥

---

ಶರೀರಿಣಿಯಾಗಿರುವ ಕೌಮಾರೀದೇವಿಯು ನಮಗೆ ಕ್ಷೇಮಾರೋಗ್ಯಾದಿಗಳನ್ನು ದಯಪಾಲಿಸಲಿ. ॥೪೦-೪೧॥

ಶಂಖಚಕ್ರಗದೆಗಳನ್ನು ಕೈಯಲ್ಲಿ ಹಿಡಿದು, ಶ್ಯಾಮಲವರ್ಣದಿಂದ ರಂಜಿಸುತ್ತಾ, ಪೀತಾಂಬರವನ್ನುಟ್ಟು, ನಾಲ್ಕು ಕೈಗಳಿಂದಲೂ ಕೂಡಿ, ಗರುಡಾರೂಢಳಾಗಿ ಹೋಗುವ ಮತ್ತು ಶಿವಾರ್ಚನೆಯಲ್ಲಿಯೂ, ಶಿವಧ್ಯಾನದಲ್ಲಿಯೂ ಮಗ್ನಳಾದ ಸರ್ವಾಸುರನಾಶಕಳಾದ ವೈಷ್ಣವೀದೇವಿಯು ನನಗೆ ಮನಸ್ಸಿನ ಶಾಂತಿಯನ್ನೂ ಕರುಣಿಸಲಿ. ॥೪೨-೪೩-೪೪॥

ಹಿಮಾಚಲದಂತೆ ಶುಭ್ರವರ್ಣವುಳ್ಳವಳಾಗಿ, ವೃಷಭವಾಹಿನಿಯಾಗಿ ತ್ರಿಶೂಲವನ್ನು ಕೈಯ್ಯಲ್ಲಿ ಹಿಡಿದು, ನಾನಾಭರಣಶೋಭಿತಳಾದ ಮಾಹೇಶ್ವರಿಯು, ನಾಲ್ಕು ಕೈಗಳಿಂದಲೂ, ನಾಲ್ಕು ಮುಖಗಳಿಂದಲೂ ನೇತ್ರತ್ರಯಗಳಿಂದಲೂ ಕೂಡಿ ಸದಾ ರುದ್ರಾರ್ಚನೆಯಲ್ಲಿಯೇ ತೊಡಗಿರುವಳು. ಇಂತಹ ಮಾಹೇಶ್ವರಿಯು ಸರ್ವದಾ ಪ್ರಕಾಶಿಸುತ್ತಾ ನನ್ನ ಪೀಡಾದಿಗಳನ್ನು ಪರಿಹರಿಸಲಿ. ॥೪೫-೪೬॥

ವರಾಹಘೋಷಾ ವಿಕಟಾ ವರಾಹವರವಾಹನಾ ।
ಶ್ಯಾಮಾಂಗಾ ವರದಾ ದೇವೀ ಶಂಖಚಕ್ರಗದಾಧರಾ ॥೪೭॥

ತರ್ಜಯಂತೀ ಸದಾವಿಘ್ನಾನರ್ಚಯಂತೀ ಸದಾಶಿವಂ ।
ವಾರಾಹೀ ವರದಾ ದೇವೀ ಕ್ಷೇಮಾರೋಗ್ಯಂ ದದಾತು ನೋ ॥೪೮॥

ಐರಾವತಗಜಾರೂಢಾ ವಜ್ರಹಸ್ತಾ ಮಹಾಬಲಾ ।
ನೇತ್ರಾಣಾಂ ಚ ಸಹಸ್ರೇಣ ಭೂಷಿತಾ ಕನಕಪ್ರಭಾ ॥೪೯॥

ಐಂದ್ರೀ ದೇವೀ ಸದಾ ಕಾಲೀ ಶಾಂತಿಮಾಶು ಕರೋತು ಮೇ ।
ಊರ್ಧ್ವಕೇಶೋತ್ಕಟಾ ಕ್ಷಾಮಾ ಮಾಂಸಹಸ್ತಾಸುಬಂಧನಾ ॥೫೦॥

ಕರಾಳವದನಾ ಘೋರಾ ಖಡ್ಗಘಂಟಾವರೋದ್ಧತಾ ।
ಕಪಾಲಮಾಲಿನೀ ದೇವೀ ಕ್ರೂರಖಟ್ವಾಂಗಧಾರಿಣೀ ॥೫೧॥

ಆರಕ್ತಪಿಂಗನಯನಾ ಗಜಚರ್ಮಾವಗುಂಠಿತಾ ।
ನಾನಾನಾಗಪರೀತಾಂಗೀ ಪ್ರೇತೋಪರಿನಿವಾಸಿನೀ ॥೫೨॥

---

ವರಾಹ (ಹಂದಿ) ದ ಧ್ವನಿಯಂತೆ ಧ್ವನಿಯುಳ್ಳವಳಾಗಿ ವರಾಹದ ಮುಖದಂತೆ ಮುಖವುಳ್ಳ, ನೋಡಲು ವಿಚಿತ್ರವಾಗಿ ಕಾಣುವ, ಶ್ಯಾಮಲ ದೇಹದಿಂದ ಶಂಖ, ಚಕ್ರ, ಗದಾದಿಗಳನ್ನು ಧರಿಸಿ, ಪ್ರಪಂಚವನ್ನೇ ಹೆದರಿಸುತ್ತಾ, ಸದಾಶಿವನನ್ನೇ ಧ್ಯಾನಿಸುತ್ತಾ, ಪ್ರಕಾಶಿಸುವ ವಾರಾಹೀದೇವಿಯು ನನಗೆ ಕ್ಷೇಮಾರೋಗ್ಯಾದಿಗಳನ್ನು ಕೊಟ್ಟು ಸಲಹಲಿ. ||೪೭-೪೮||

ಐರಾವತವೆಂಬ ಆನೆಯ ಮೇಲೆ ಕುಳಿತು, ವಜ್ರಾಯುಧವನ್ನು ಹಿಡಿದು, ಮಹಾಬಲಿಷ್ಠಳಾಗಿ, ಸಹಸ್ರನೇತ್ರಗಳಿಂದ ವಿರಾಜಿಸುವ ಇಂದ್ರಾಣಿನಾಮಕಳಾದ ಕಾಳಿಕಾದೇವಿಯು ನನಗೆ ಶಾಂತಿಯನ್ನುಂಟುಮಾಡಲಿ ಎಂದು ಇಂದ್ರಾಣಿಯನ್ನು ಪ್ರಾರ್ಥಿಸಬೇಕು. ||೪೯||

ಚಾಮುಂಡಾದೇವಿಯು ಮೇಲಕ್ಕೆ ಕೆದರಿದ ಕೇಶವುಳ್ಳವಳು. ಕೆಂಪುವಸ್ತ್ರವನ್ನು ಧರಿಸಿದವಳು. ಮಾಂಸವನ್ನು ಕೈಯ್ಯಲ್ಲಿ ಧರಿಸಿ ಕ್ರೂರವಾದ ಮುಖವುಳ್ಳವಳು. ಕೈಯ್ಯಲ್ಲಿ ಕತ್ತಿ, ಗಂಟೆ ಇವನ್ನು ಹಿಡಿದು ಭಯಂಕರವಾದ ಕಪಾಲಮಾಲೆಯನ್ನು ಧರಿಸಿರುವವಳು. ಖಟ್ವಾಂಗವೆಂಬ ಕ್ರೂರಾಯುಧವನ್ನು ಹಿಡಿದು ರಕ್ತ

ಶಿವರೂಪೇಣ ಘೋರೇಣ ಶಿವಾರಾವಭಯಂಕರೀ ।
ಚಾಮುಂಡಾ ಚಂಡರೂಪೇಣ ಚಿತ್ರಾಯಂತ್ರಾಸನೇನ ತು ॥೫೩॥

ಭೂತಪ್ರೇತಪಿಶಾಚೇಭ್ಯೋ ಮಮ ರಕ್ಷಾಂ ಕರೋತು ಸಾ ।
ಆಕಾಶಮಾತರೋ ದೇವ್ಯಸ್ತಥಾ ಭೂಲೋಕಮಾತರಃ ॥೫೪॥

ಭೂತಾನಾಂ ಮಾತರಃ ಸರ್ವಾಸ್ತಥಾನ್ಯಾಃ ಪಿತೃಮಾತರಃ ।
ಸರ್ವಮಾತೃಗಣಾ ದೇವ್ಯಃ ಸ್ವಾಯುಧವ್ಯಗ್ರಪಾಣಯಃ ॥೫೫॥

ಜಗದ್ವ್ಯಾಪ್ಯಾವತಿಷ್ಠಂತ್ಯೋ ಬಲಿಕಾಮಾ ಮಹೋದಯಾಃ ।
ರುದ್ರಭಕ್ತಾ ಮಹಾವೀರ್ಯಾ ರುದ್ರಾರ್ಚನಪರಾಸ್ಸದಾ ॥೫೬॥

ಶಾಂತಿಂ ಕುರ್ವಂತು ಮೇ ನಿತ್ಯಂ ಮಾತರಶ್ಚ ಸುಪೂಜಿತಾಃ ।
ಯೇ ರುದ್ರಾ ರೌದ್ರಕರ್ಮಾಣೋ ರುದ್ರಸ್ಥಾನನಿವಾಸಿನಃ ॥೫೭॥

---

ಮತ್ತು ಹಳದಿಯವರ್ಣವುಳ್ಳ, ಕಣ್ಣುಗಳನ್ನು ತಿರುಗಿಸುತ್ತಾ, ಆನೆಯ ಚರ್ಮವನ್ನು ಹೊದ್ದು, ಅನೇಕ ಹಾವುಗಳಿಂದ ಸುತ್ತಲ್ಪಟ್ಟ ಶರೀರವುಳ್ಳವಳಾಗಿರುವಳು. ಸದಾ ಪ್ರೇತದಮೇಲೆಯೇ ಸಂಚರಿಸುವಳು. ಭಯಂಕರವಾದ ಧ್ವನಿಯಿಂದ ಜಗತ್ತನ್ನೇ ನಡುಗಿಸಿಬಿಡುವಳು. ಇಂತಹ ದೇವಿಯು ಭೂತಪ್ರೇತಪಿಶಾಚಿಗಳಿಂದ ಒದಗುವ ಭಯವನ್ನು ನಿವಾರಿಸಿ ನನಗೆ ಶಾಂತಿಯನ್ನೊದಗಿಸಲಿ, ಎಂದು ಚಾಮುಂಡಾಂಬೆಯನ್ನು ಪ್ರಾರ್ಥಿಸಬೇಕು. ॥೫೦-೫೧-೫೨-೫೩॥

ಆಕಾಶಮಾತೃದೇವತೆಗಳು, ಭೂಲೋಕಮಾತೃಗಣಗಳು, ಭೂತಮಾತೃಗಳು, ಪಿತೃಮಾತೃದೇವತೆಗಳು. ಇವರೇ ಮೊದಲಾದ ಮಾತೃದೇವತೆಗಳೆಲ್ಲಾ ಆಯುಧಪಾಣಿಯರಾಗಿ ಪ್ರಪಂಚವನ್ನೇ ಆವರಿಸಿ ನಿಂತಿರುವರು. ಪೂಜಾದಿಗಳನ್ನು ಅಪೇಕ್ಷಿಸುತ್ತಾ, ಮಹಾಮಹಿಮೆಯುಳ್ಳವರಾಗಿ, ರುದ್ರದೇವನನ್ನೇ ಭಜಿಸುತ್ತಾ ಸದಾ ಶಿವಾರಾಧನಾದಿಗಳಲ್ಲಿ ತೊಡಗಿರುವರು. ಇಂತಹ ಮಾತೃದೇವತೆಗಳು ನನಗೆ ನಿತ್ಯವೂ ಶಾಂತಿಯನ್ನು ಕರುಣಿಸಲಿ. ॥೫೪-೫೫-೫೬॥

ಭಯಂಕರಾಕಾರಗಳಿಂದಲೂ, ಭಯಜನಕಕರ್ಮಗಳಿಂದಲೂ ನಡೆದು, ರುದ್ರಸ್ಥಾನದಲ್ಲಿಯೇ ನೆಲಸುತ್ತಾ ಇರುವ ಕ್ರೂರದೇವತೆಗಳೂ, ಸೌಮ್ಯಕಾರ್ಯಾಚರಣೆಗಳಿಂದ ವರ್ತಿಸುತ್ತಾ ಸೌಮ್ಯವೇಷದಿಂದ ರಂಜಿಸುತ್ತಾ, ಶಾಂತಿಯುತವಾದ ಸ್ಥಾನ

ಸೌಮ್ಯಾಶ್ಚೈವ ತು ಯೇ ಕೇಚಿತ್ಸೌಮ್ಯಸ್ಥಾನನಿವಾಸಿನಃ ।
ಮಾತರೋ ರುದ್ರರೂಪಾಶ್ಚ ಗಣಾನಾಮಧಿಪಾಶ್ಚ ಯೇ ॥೫೮॥

ವಿಘ್ನಭೂತಾಸ್ತಥೈವಾನ್ಯೇ ದಶದಿಕ್ಷು ಸಮಾಶ್ರಿತಾಃ ।
ಸರ್ವೇ ಸುಪ್ರೀತಮನಸಾ ಪ್ರತಿಗೃಹ್ಣಂತ್ವಿಮಂ ಬಲಿಂ ॥೫೯॥

॥ ಶ್ರೀ ಈಶ್ವರ ಉವಾಚ ॥

ಮಹ್ಯಾಂ ಮಹ್ಯಂ ಚ ಶಾಂತಿಂ ಸುತತತಿಧನಗೋವಾಜಿಮಾತಂಗಯೂಥೇ
ರಾಷ್ಟ್ರೇ ಗ್ರಾಮೇ ಪುರೇ ವಾ ಸುವಿಹಿತಮಧುನಾ ಶಾಂತಿದಾಸ್ಸಂತು ಸರ್ವಾಃ।
ಸರ್ವೇ ಶರ್ವಾರ್ಚನಾಯಾಂ ಯಮನಿಯಮರತಾಃ ಪಾಂತು ಮಾಂ
ಸರ್ವಕಾಲೇ
ನಿತ್ಯಂ ಪ್ರೀತಾಸ್ಸದಾ ಮಾಂ ಶಿವಪದನಿರತಾಃ ಪಾಂತು ಮಾಂ ಸರ್ವದೇವಾಃ
॥೬೦॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಸಪ್ತತ್ರಿಂಶೋಽಧ್ಯಾಯಃ

---

ಗಳಲ್ಲಿ ನೆಲಸಿರುವ ಸೌಮ್ಯದೇವತೆಗಳೂ, ರುದ್ರಾಣೀದೇವಿಯರೂ, ಗಣಗಳಿಗೆ ಒಡೆಯರೆನಿಸಿದವರೂ, ಇನ್ನೂ ದಶದಿಕ್ಕುಗಳಲ್ಲಿ ನೆಲಸಿರುವ ನಾನಾದೇವತೆಗಳೂ, ವಿಘ್ನರೂಪವಾಗಿ ತೋರುವ ದೇವದೇವಿಯರೂ, ನನಗೆ ಪ್ರಸನ್ನರಾಗಿದ್ದು ನಾನು ಅರ್ಪಿಸುವ ಪೂಜಾದಿಗಳನ್ನು ಸ್ವೀಕರಿಸಿ ನನಗೆ ಮನಶ್ಶಾಂತಿಯನ್ನು ಕರುಣಿಸಲಿ, ಎಂದು ಸಕಲ ರಕ್ಷಾದೇವತೆಗಳನ್ನೂ ಭಕ್ತಿಯಿಂದ ಪ್ರಾರ್ಥಿಸಬೇಕು. ॥೫೭-೫೮-೫೯॥

ಸಂತಾನ, ಐಶ್ವರ್ಯ, ಆನೆ, ಕುದುರೆ, ರಾಷ್ಟ್ರ, ಗ್ರಾಮ, ಪಟ್ಟಣ ಮುಂತಾದ ಸಕಲ ಸಾಮಗ್ರಿಗಳಿಂದ ಕೂಡಿ ವಾಸಿಸುವ ನನಗೆ ಈ ಭೂಲೋಕದಲ್ಲಿ ಸಕಲ ದೇವತೆಗಳೂ ಶಾಂತಿಯನ್ನು ನೀಡಲಿ. ಶಿವಾರ್ಚನೆಯಲ್ಲಿಯೇ ನಿರತರಾಗಿದ್ದು, ಯಮನಿಯಮಾದಿಗಳಿಂದ ಜಿತೇಂದ್ರಿಯರಾಗಿರುವ ಸಕಲ ಮಹಿಮಾಸ್ಪದವಾದ ಭೂತವರ್ಗವೂ, ನನಗೆ ನಿತ್ಯವೂ ಪ್ರಸನ್ನವಾಗಿ ಶಿವಧ್ಯಾನತತ್ಪರನಾಗಿ ಶಿವಾರ್ಚನೆಯಲ್ಲಿಯೇ ನಟ್ಟಮನಸ್ಸುಳ್ಳ ನನ್ನನ್ನು ಸರ್ವದಾ ರಕ್ಷಿಸಲಿ ಎಂದು ಸಕಲ ದೇವತೆ

ಗಳನ್ನೂ ಪ್ರಾರ್ಥಿಸಿ ಶಾಂತಿಯನ್ನು ಬಯಸಬೇಕು, ಎಂದು ಪರಮೇಶ್ವರನು ಪಾರ್ವತಿಗೆ ವಿವರಿಸಿ ಹೇಳಿದನು. ॥೬೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಏಕಾದಶಾಂಶದಲ್ಲಿ ಮೂವತ್ತೇಳನೆಯ

ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಅಷ್ಟತ್ರಿಂಶೋಽಧ್ಯಾಯಃ

|| ಶ್ರೀ ಸ್ಕಂದ ಉವಾಚ ||

ಸಿದ್ಧಿಂ ಪುಷ್ಣಂತು ಮೇ ನಿತ್ಯಂ ಭಯೇಭ್ಯಃ ಪಾತು ಮಾಂ ಸದಾ ।
ಐಂದ್ರ್ಯಾಂ ದಿಶಿ ಗಣಾ ಯೇ ತು ವಜ್ರಹಸ್ತಾ ಮಹಾಬಲಾಃ ॥೧॥

ಸುಪೀತಾಕ್ಷಾ ಪೀತನಿಭಾಸ್ತಥಾ ವೈ ಪೀತಲೋಹಿತಾಃ ।
ದಿವ್ಯಾಂತರಿಕ್ಷಭೌಮಾಶ್ಚ ಪಾತಾಲತಲವಾಸಿನಃ ॥೨॥

ರುದ್ರಾರ್ಚನರತಾ ನಿತ್ಯಂ ಶಾಂತಿಂ ಕುರ್ವಂತು ಮೇ ಸದಾ ।
ಆಗ್ನೇಯ್ಯಾಂ ಯೇ ಗಣಾಃ ಸರ್ವೇ ಶಕ್ತಿಹಸ್ತಾ ನಿಷಂಗಿಣಃ ॥೩॥

---

## ಮೂವತ್ತೆಂಟನೆಯ ಅಧ್ಯಾಯ

ಪೂರ್ವದಿಕ್ಕಿನಲ್ಲಿ ನೆಲಸಿರುವ ಸಕಲದೇವತೆಗಳೂ ನನಗೆ ಸರ್ವಸಿದ್ಧಿಯನ್ನೂ ಒದಗಿಸಲಿ ಎಂದು ಅವರನ್ನು ಹೀಗೆ ಪ್ರಾರ್ಥಿಸಬೇಕು. ವಜ್ರಾಯುಧವನ್ನು ಹಿಡಿದು ಮಹಾಬಲಿಷ್ಠರಾಗಿ ಹಾಗೆಯೇ ಹೊಂಬಣ್ಣದ ಕಣ್ಣುಗಳಿಂದಲೂ, ಕೆಂಪುಮಿಶ್ರಿತವಾದ ಹೊಂಬಣ್ಣದ ದೇಹದಿಂದಲೂ ವಿರಾಜಿಸುವ, ದಿವ್ಯಾಂತರಿಕ್ಷಭೌಮದೇವತೆಗಳೆನಿಸಿದ ಪಾತಾಳತಲವಾಸಿಗಳಾದ ರುದ್ರಾರ್ಚನೆಮಾಡುವ ಗಣದೇವತೆಗಳು ನಮ್ಮನ್ನು ಸಲಹಲಿ, ನಮಗೆ ಶಾಂತಿಯನ್ನು ಕರುಣಿಸಲಿ ಎಂದು ಪ್ರಾರ್ಥಿಸಬೇಕು. ||೧-೨||

ಕೆಂಪುವರ್ಣದ ಕಣ್ಣುಗಳಿಂದಲೂ, ಸುವರ್ಣಛಾಯೆಯ ಮತ್ತು ಕೆಂಪು ಕಾಂತಿಯುಳ್ಳ ದೇಹದಿಂದಲೂ, ಭೂಮಿ, ಅಂತರಿಕ್ಷ, ಪಾತಾಲ ಮುಂತಾದ ಲೋಕ

ಸುರಕ್ತಾಕ್ಷಾಸ್ಸ್ವರ್ಣನಿಭಾಸ್ತಥಾ ವೈ ಪೀತಲೋಹಿತಾಃ ।
ದಿವ್ಯಾಂತರಿಕ್ಷಭೌಮಾಶ್ಚ ಪಾತಾಲತಲವಾಸಿನಃ ॥೪॥

ರುದ್ರಾರ್ಚನರತಾ ನಿತ್ಯಂ ಶಾಂತಿಂ ಕುರ್ವಂತು ಮೇ ಸದಾ ॥೫॥

ಶಿವಪ್ರಣಾಮಪರಮಾಃ ಶಾಂತಿಂ ಕುರ್ವಂತು ಮೇ ಸದಾ ।
ಯಾಮ್ಯಾಂ ದಿಶಿ ಗಣಾ ಯೇ ತು ಸತತಂ ದಂಡಪಾಣಯಃ ॥೬॥

ಸುಕೃಷ್ಣಾಕ್ಷಾಃ ಕೃಷ್ಣನಿಭಾಸ್ತಥಾ ವೈ ಕೃಷ್ಣಲೋಹಿತಾಃ ।
ಪರಮೇಶಾರ್ಚನರತಾಃ ಶಾಂತಿಂ ಕುರ್ವಂತು ಮೇ ಸದಾ ॥೭॥

ನೈಋತ್ಯಾಂ ಯೇ ಗಣಾಃ ಸರ್ವೇ ರಾಕ್ಷಸಾಃ ಖಡ್ಗಪಾಣಯಃ ।
ಸುನೀಲಾಕ್ಷಾ ನೀಲನಿಭಾಸ್ತಥಾ ವೈ ನೀಲಲೋಹಿತಾಃ ॥೮॥

ದಿವ್ಯಾಂತರಿಕ್ಷಭೌಮಾಶ್ಚ ಪರಮೇಶಾರ್ಚನೇ ರತಾಃ ।
ಸದೇಶಧ್ಯಾನನಿರತಾಃ ಶಾಂತಿಂ ಕುರ್ವಂತು ಮೇ ಸದಾ ॥೯॥

ವಾರುಣ್ಯಾಂ ಯೇ ಗಣಾಃ ಸರ್ವೇ ಸತತಂ ಪಾಶಪಾಣಯಃ ।
ಸಂಶ್ಯಾಮಾಃ ಶ್ಯಾಮನಿಭಾಸ್ತಥಾ ವೈ ಶ್ಯಾಮಲೋಹಿತಾಃ ॥೧೦॥

---

ಗಳಲ್ಲಿ ವಾಸಿಸುವ ರುದ್ರಾಭಿಮಾನದೇವತೆಗಳು ನಿತ್ಯವೂ ಶಾಂತಿಯನ್ನು ಕರುಣಿಸಲಿ. ||೩-೪-೫||

ಶಿವಾರ್ಚನೆಯಲ್ಲಿ ನಿರತರಾಗಿ, ಕಪ್ಪುಬಣ್ಣದ ದೇಹದಿಂದಲೂ, ಕೃಷ್ಣಾಕ್ಷ ದಿಂದಲೂ, ದಂಡಪಾಣಿಗಳಾಗಿಯೂ, ಕೆಂಪು ಕಪ್ಪುಬಣ್ಣದಿಂದ ಶಾಂತಿಯನ್ನೆರಚು ತ್ತಲೂ ಈಶ್ವರಾರ್ಚಕರಾಗಿ ದಕ್ಷಿಣದಿಕ್ಕಿನಲ್ಲಿರುವ ಗಣದೇವತೆಗಳು ನಮಗೆ ಶಾಂತಿ ಯನ್ನು ಅನುಗ್ರಹಿಸಲಿ. ||೬-೭||

ನೈರುತ್ಯದಿಕ್ಕಿನಲ್ಲಿ ನೀಲವರ್ಣದ ಕಣ್ಣುಗಳಿಂದ ವಿರಾಜಿಸುತ್ತಾ ಖಡ್ಗಪಾಣಿ ಗಳಾಗಿ ನೀಲಲೋಹಿತರಾದ, ದಿವ್ಯಾಂತರಿಕ್ಷಭೌಮದೇವತೆಗಳೆನಿಸಿದ ಈಶ್ವರಾರ್ಚನೆ, ಈಶ್ವರಧ್ಯಾನದಲ್ಲಿ ನಿರತರಾದ ನೈರುತ್ಯದಿಗಭಿಮಾನದೇವತೆಗಳು ನನಗೆ ಸರ್ವದಾ ಶಾಂತಿಯನ್ನು ಕರುಣಿಸಲಿ. ||೮-೯||

ಪಶ್ಚಿಮದಿಕ್ಕಿನಲ್ಲಿ ಭೌಮಾಂತರಿಕ್ಷದಿವ್ಯನಿವಾಸಿಗಳಾದ, ಪಾಶಾಯುಧಧಾರಿ

ದಿವ್ಯಾಂತರಿಕ್ಷಭೌಮಾಶ್ಚ ಪಾತಾಳತಲವಾಸಿನಃ ।
ಪರಮೇಶಾರ್ಚನರತಾಃ ಶಾಂತಿಂ ಕುರ್ವಂತು ಮೇ ಸದಾ ॥೧೧॥

ವಾಯುವ್ಯಾಂ ಯೇ ಗಣಾಸ್ಸರ್ವೇ ಸತತಂ ಧ್ವಜಪಾಣಯಃ ।
ಸುಧೂಮ್ರಾಕ್ಷಾ ಧೂಮ್ರನಿಭಾಸ್ತಥಾ ವೈ ಧೂಮ್ರಲೋಚನಾಃ ॥೧೨॥

ದಿವ್ಯಾಂತರಿಕ್ಷಾಭೌಮಾಶ್ಚ ಪಾತಾಲತಲವಾಸಿನಃ ।
ಶಿವಭಕ್ತಿಪರಾಃ ಸರ್ವೇ ಕ್ಷೇಮಂ ಕುರ್ವಂತು ಮೇ ಸದಾ ॥೧೩॥

ಕೌಬೇರ್ಯಾಂ ಯೇ ಗಣಾಸ್ಸರ್ವೇ ಸತತಂ ನಿಧಿಪಾಣಯಃ ।
ಸುಪೀತಾಕ್ಷಾಃ ಪೀತನಿಭಾಃ ತಥಾ ವೈ ಪೀತಲೋಹಿತಾಃ ॥೧೪॥

ದಿವ್ಯಾಂತರಿಕ್ಷಭೌಮಾಶ್ಚ ಪಾತಾಲತಲವಾಸಿನಃ ।
ಶಿವಭಕ್ತಿಪರಾಸ್ಸರ್ವೇ ಕ್ಷೇಮಂ ಕುರ್ವಂತು ಮೇ ಸದಾ ॥೧೫॥

ಐಶಾನ್ಯಾಂ ಯೇ ಗಣಾಃ ಸರ್ವೇ ಪ್ರಶಾಂತಾಶ್ಶೂಲಪಾಣಯಃ ।
ಸುಸೂಕ್ಷ್ಮಾಕ್ಷಾಃ ಸೂಕ್ಷ್ಮನಿಭಾಸ್ತಥಾ ವೈ ಸೂಕ್ಷ್ಮಲೋಹಿತಾಃ ॥೧೬॥

---

ಗಳಾದ, ಶ್ಯಾಮಲವರ್ಣದ ಕಾಂತಿಯಿಂದ ವಿರಾಜಿಸುವ ಪಶ್ಚಿಮದಿಗಭಿಮಾನಿ ಶಿವಾರ್ಚಕಗಣದೇವತೆಗಳು ನಮಗೆ ಚಿರಶಾಂತಿಯನ್ನು ಕರುಣಿಸಲಿ. ॥೧೦-೧೧॥

ವಾಯುವ್ಯದಿಕ್ಕಿನಲ್ಲಿ, ಧೂಮ್ರವರ್ಣದ ಲೋಚನಗಳಿಂದಲೂ, ಧೂಮವರ್ಣದ ಶರೀರದಿಂದಲೂ ವಿರಾಜಿಸುತ್ತಾ ಧ್ವಜವನ್ನು ಕೈಯಲ್ಲಿ ಹಿಡಿದು ಪಾತಾಲತಲವಾಸಿಗಳಾಗಿ ದಿವ್ಯಾಂತರಿಕ್ಷಭೌಮಗಳೆನಿಸಿದ ಶಿವಭಕ್ತಿಯುಕ್ತರಾದ ದೇವತೆಗಳು ನಮಗೆ ಸರ್ವದಾ ಕ್ಷೇಮವನ್ನುಂಟುಮಾಡಲಿ. ॥೧೨-೧೩॥

ಉತ್ತರದಿಕ್ಕಿನಲ್ಲಿ ಸರ್ವದಾ ನಿಧಿಯನ್ನೇ ಕೈಯಲ್ಲಿ ಹಿಡಿದು, ಹೊಂಬಣ್ಣದ ಕಣ್ಣುಗಳಿಂದಲೂ, ಅದೇವರ್ಣದ ದೇಹಕಾಂತಿಯಿಂದಲೂ ಕಂಗೊಳಿಸುವ ಪಾತಾಲತಲವಾಸಿಗಳಾದ ಮತ್ತು ಶಿವಭಕ್ತಿನಿರತರಾದ ಸಕಲ ದೇವತೆಗಳೂ ನಮಗೆ ಶಾಂತಿಯನ್ನು ಅನುಗ್ರಹಿಸಿ ರಕ್ಷಿಸಲಿ. ॥೧೪-೧೫॥

ಈಶಾನ್ಯದಿಕ್ಕಿನಲ್ಲಿ ನೆಲಸಿ ಶಾಂತಸ್ವಭಾವದಿಂದ ತ್ರಿಶೂಲಗಳನ್ನು ಧರಿಸಿ ಸೂಕ್ಷ್ಮರೂಪದಿಂದ ಪ್ರಕಾಶಿಸುತ್ತಾ ಲೋಕತ್ರಯಗಳಲ್ಲಿಯೂ ಸಂಚರಿಸುವ ಸ್ವಭಾವ

ದಿವ್ಯಾಂತರಿಕ್ಷಭೌಮಾಶ್ಚ ಪಾತಾಳತಲವಾಸಿನಃ ।
ರುದ್ರಪ್ರಣಾಮಪರಮಾಃ ಶಾಂತಿಂ ಕುರ್ವಂತು ಮೇ ಸದಾ ॥೧೭॥

ಊರ್ಧ್ವಭಾಗೇ ಗಣಾ ಯೇ ತು ಸತತಂ ಚಕ್ರಪಾಣಯಃ ।
ಸುಧೂಮ್ರಾಕ್ಷಾ ಧೂಮ್ರನಿಭಾಸ್ತಥಾ ವೈ ಧೂಮ್ರಲೋಹಿತಾಃ ॥೧೮॥

ದಿವ್ಯಾಂತರಿಕ್ಷಭೌಮಾಶ್ಚ ಪಾತಾಲತಲವಾಸಿನಃ ।
ರುದ್ರಪ್ರಣಾಮಪರಮಾಃ ಶಾಂತಿಂ ಕುರ್ವಂತು ಮೇ ಸದಾ ॥೧೯॥

ಅಧೋಭಾಗೇ ಗಣಾ ಯೇ ತು ಸತತಂ ಚಕ್ರಪಾಣಯಃ ।
ಸುಪದ್ಮಾಕ್ಷಾಃ ಪದ್ಮನಿಭಾಃ ತಥಾ ವೈ ಪದ್ಮಲೋಹಿತಾಃ ॥೨೦॥

ದಿವ್ಯಾಂತರಿಕ್ಷಭೌಮಾಶ್ಚ ಪಾತಾಲತಲವಾಸಿನಃ ।
ಶಿವಪೂಜಾಸಮಾಯುಕ್ತಾಃ ಶಾಂತಿಂ ಕುರ್ವಂತು ಮೇ ಸದಾ ॥೨೧॥

ಏತೇ ಗಣಾ ಮಹಾತ್ಮಾನೋ ಮಹಾಬಲಪರಾಕ್ರಮಾಃ ।
ಶಿವಂ ಸಂಪೂಜ್ಯ ಯತ್ನೇನ ಸ್ವಂ ಸ್ವಂ ಪದಮವಾಪಿರೇ ॥೨೨॥

ತತಸ್ಸುಪ್ರೀತಮನಸಃ ಶಾಂತಿಂ ಕುರ್ವಂತು ಮೇ ಸದಾ ।
ತತಸ್ಸುಪ್ರೀತಮನಸಃ ಶಾಂತಿಮಾಯುರ್ಬಲಂ ಶ್ರಿಯಂ ॥೨೩॥

---

ವುಳ್ಳ ಪಾತಾಳತಲವಾಸಿಗಳಾದ ರುದ್ರಾರ್ಚನಾಸಕ್ತರಾದ ದೇವತೆಗಳು ನಮಗೆ ಮಂಗಳವನ್ನು ದಯಪಾಲಿಸಲಿ. ॥೧೬-೧೭॥

ಚಕ್ರಪಾಣಿಗಳಾಗಿ ಧೂಮ್ರವರ್ಣದಿಂದಲೂ, ಧೂಮ್ರಾಕ್ಷದಿಂದಲೂ ಧೂಮ್ರ ಲೌಹಿತ್ಯವರ್ಣದಿಂದಲೂ ವಿರಾಜಿಸುವ ರುದ್ರಾರ್ಚನಪರರಾದ ಊರ್ಧ್ವಲೋಕದ ಗಣದೇವತೆಗಳು ನನಗೆ ಸರ್ವಶಾಂತಿಯನ್ನೂ ಕರುಣಿಸಲಿ. ॥೧೮-೧೯॥

ಇದೇರೀತಿ ಅಧೋಭಾಗದಲ್ಲಿ ಚಕ್ರಪಾಣಿಗಳಾಗಿ ವಾಸಿಸುತ್ತಾ, ಪದ್ಮವರ್ಣದಿಂದಲೂ, ಪದ್ಮದಂತಿರುವ ಲೋಚನದಿಂದಲೂ ವಿರಾಜಿಸುತ್ತಾ, ಭೂಮ್ಯಂತರಿಕ್ಷ ಸಂಚಾರಿಗಳಾಗಿ ಪಾತಾಲತಲವಾಸಿಗಳಾದ ಶಿವಪೂಜಾಪರಾಯಣರಾದ ಗಣದೇವತೆಗಳು ನನಗೆ ಚಿರಶಾಂತಿಯನ್ನು ಕರುಣಿಸಲಿ. ॥೨೦-೨೧॥

ಹಿಂದೆ ಹೇಳಿದ ಸಕಲ ಶಿವಗಣಗಳೂ ನನಗೆ ಸರ್ವಮಂಗಳವನ್ನೂ ಕರುಣಿಸಲಿ. ಈ ದೇವತೆಗಳೆಲ್ಲರೂ ಈಶ್ವರಾರಾಧನೆಮಾಡಿಯೇ ಇಂತಹ ಅಧಿಕಾರಗ

ಪ್ರಯಚ್ಛಂತ್ವಾಶು ಮರ್ತ್ಯಾನಾಂ ತದ್ಭಕ್ತಾನಾಂ ವಿಶೇಷತಃ ।
ನಾಮ್ನಾಮರಾವತೀ ಪೂಜ್ಯಾ ಪೂರ್ವಭಾಗೇ ವ್ಯವಸ್ಥಿತಾ ॥೧೪॥

ವಿದ್ಯಾಧರಗಣಾಕೀರ್ಣಾ ಸಿದ್ಧಗಂಧರ್ವಸೇವಿತಾ ।
ರತ್ನಪ್ರಾಕಾರರಚಿತಾ ಮಹಾರತ್ನೋಪಶೋಭಿತಾ ॥೧೫॥

ತತ್ರ ದೇವಪತಿಃ ಶ್ರೀಮಾನ್ಯಜ್ಞಹಸ್ತೋ ಮಹಾಬಲಃ ।
ನೇತ್ರಾಣಾಂ ತು ಸಹಸ್ರೇಣ ಶೋಭನೇನ ವಿರಾಜಿತಃ ॥೧೬॥

ಐರಾವತಗಜಾರೂಢೋ ಹೇಮವರ್ಣೋ ಮಹಾದ್ಯುತಿಃ ।
ದೇವೇಂದ್ರಃ ಪರಮೋ ಹೃಷ್ಟಃ ಪರಮೇಶಾರ್ಚನೇರತಃ ॥೧೭॥

ಶಿವಧ್ಯಾನೈಕಸಂಪನ್ನಃ ಶಿವಭಕ್ತಿಪರಾಯಣಃ ।
ಶಿವಭಕ್ತೈಸ್ತಥಾ ಚಾನ್ಯೈರ್ದೇವೈರಿಹ ಸಹಾಸುಜ್ಯೈಃ ॥೧೮॥

---

ಳನ್ನು ಪಡೆದಿರುವದು. ಇವರಿಂದ ನನಗೆ ಸಮಸ್ತಅಭಿವೃದ್ಧಿಯೂ ದೊರಕಲಿ' ಎಂದು ಭಕ್ತಿಯಿಂದ ಪ್ರಾರ್ಥಿಸಬೇಕು. ||೧೨-೧೩||

ಈ ಪ್ರಾರ್ಥನೆಯಿಂದ ತೃಪ್ತರಾದ ಆ ದೇವತೆಗಳು ಎಲ್ಲರಿಗೂ, ವಿಶೇಷವಾಗಿ ಈಶ್ವರಭಕ್ತರಿಗೆ ಸಮಸ್ತ ಮಂಗಳಗಳನ್ನೂ ಕರುಣಿಸಲಿ ಎಂದು ಕೇಳಿಕೊಳ್ಳಬೇಕು. ಬ್ರಹ್ಮಾಂಡದ ಪೂರ್ವಭಾಗದಲ್ಲಿ ಅಮರಾವತಿಯೆಂಬ ನಗರವಿರುವುದು. ಅದು ಅನೇಕ ವಿದ್ಯಾಧರರಿಂದಲೂ, ಸಿದ್ಧಗಂಧರ್ವಕಿಂಪುರುಷರೆಂಬ ದೇವತಾವಿಶೇಷಗಳಿಂದಲೂ ಶೋಭಿಸುತ್ತಿರುವುದು. ಆ ನಗರಕ್ಕೆ ರತ್ನಮಯವಾದ ಪ್ರಾಕಾರವೂ ನವರತ್ನಗಳಿಂದ ಶೋಭಿಸುವ ಪ್ರಾಸಾದಾದಿಗಳೂ ಅಲಂಕಾರಪ್ರಾಯವಾಗಿರುವುವು. ||೧೩-೧೪-೧೫||

ಅಲ್ಲಿ ದೇವತೆಗಳಿಗೆ ಅಧಿಪತಿಯಾದ ದೇವೇಂದ್ರನು ವಾಸಿಸುತ್ತಿರುವನು. ಅತನು ಸದಾ ಹವಿಸ್ಸನ್ನು ಭಕ್ಷಿಸುತ್ತಿರುವನು. ಮಹಾಬಲಿಷ್ಠನು. ಸಹಸ್ರನೇತ್ರಗಳಿಂದ ಶೋಭಿಸುತ್ತಿರುವವನು. ಐರಾವತವೆಂಬ ಆನೆಯಮೇಲೆ ಕುಳಿತು ಸುವರ್ಣಛಾಯೆಯಿಂದ ಕೂಡಿ ಸದಾ ಸಂತೋಷ ಭರಿತನಾಗಿ ಪರಶಿವನನ್ನೇ ಅರ್ಚಿಸುತ್ತಿರುವನು. ||೧೬-೧೭||

ಶಿವಧ್ಯಾನದಲ್ಲಿಯೇ ನಿರತನಾಗಿ, ಶಿವಭಕ್ತಿಪರಾಯಣನೆನಿಸಿ, ಈಶ್ವರಭಕ್ತರಾದ ದೇವತೆಗಳೊಡನೆಯೇ ವ್ಯವಹರಿಸುತ್ತಾ, ಶಿವಪ್ರಣಾಮದಲ್ಲಿಯೇ ನಿರತನಾದ ದೇವೇಂದ್ರನು ನನಗೆ ಶಾಂತಿಯನ್ನು ದಯಪಾಲಿಸಲಿ. ||೧೮||

ಶಿವಪ್ರಣಾಮಪರಮಃ ಕರೋತು ಮಮ ಶಾಂತಿಕಂ ।
ಆಗ್ನೇಯ್ಯಾಂ ತು ದಿಶೋ ಭಾಗೇ ಪುರೀ ತೇಜೋವತೀ ಶುಭಾ ॥೨೯॥

ನಾನಾದೇವಸಮಾಕೀರ್ಣಾ ರತ್ನಜ್ವಾಲಾಕ್ಷಮಾಕುಲಾ ।
ತತ್ರ ಜ್ವಾಲಾಪರೀತಾಂಗೋ ದೀಪ್ತಾಂಗಾರಸಮದ್ಯುತಿಃ ॥೩೦॥

ಭೂತಿಕೃದ್ದೇಹಿನಾಂ ದೇವೋ ಜ್ವಲನಃ ಪಾಪನಾಶನಃ ।
ಶಿವಪೂಜಾಸಮಾಯುಕ್ತಃ ಶಿವಧಾರಣಭಾವಿತಃ ॥೩೧॥

ಶಾಂತಿಂ ಕರೋತು ಮೇ ದೇವಸ್ತಥಾ ಪಾಪಪರಿಕ್ಷಯಂ ।
ವೈವಸ್ವತಪುರೀ ನಾಮ್ನಾ ದಕ್ಷಿಣಸ್ಯಾಂ ವ್ಯವಸ್ಥಿತಾ ॥೩೨॥

ಲೋಹಪ್ರಾಕಾರಸಂಯುಕ್ತಾ ಪ್ರಾಸಾದೈರ್ಗೋಪುರೈಶ್ಶುಭಾ ।
ಸುರಾಸುರಶತಾನೀಕೈಃ ಪಿತೃಯಕ್ಷೋರಗಾಲಯಃ ॥೩೩॥

ತತ್ರೇಂದ್ರನೀಲಸಂಕಾಶೋ ರತ್ನಸ್ರಗ್ವಸ್ತ್ರಭೂಷಣಃ ।
ದಂಡಹಸ್ತೋ ಮಹಾತೇಜಾಃ ಪಾಪಿನಾಂ ಭಯದಾಯಕಃ ॥೩೪॥

ಅಂತಕೋ ಮಹಿಷಾರೂಢಃ ಶಿವಪಾದಾರ್ಚನೇ ರತಃ ।
ಕರೋತು ಮೇ ಮಹಾಶಾಂತಿಂ ಶಿವಭಕ್ತಸುಖಪ್ರದಃ ॥೩೫॥

---

ಆಗ್ನೇಯದಿಕ್ಕಿನಲ್ಲಿ ತೇಜೋವತಿಯೆಂಬ ನಗರವಿರುವುದು. ಅದು ಅನೇಕ ದೇವತೆಗಳಿಂದಲೂ, ಅಮೂಲ್ಯವಾದ ರತ್ನಕಾಂತಿಯಿಂದಲೂ, ಅಗ್ನಿಯ ದಿವ್ಯತೇಜಸ್ಸಿನಿಂದಲೂ ಕೂಡಿ ಕೆಂಡದಂತೆ ಹೊಳೆಯುತ್ತಿರುವುದು. ಅಲ್ಲಿ ಸಮಸ್ತಪ್ರಾಣಿಗಳಿಗೂ ಶಕ್ತಿಯನ್ನು ಕೊಟ್ಟು ಸರ್ವರ ಪಾಪರಾಶಿಯನ್ನೂ ಧ್ವಂಸಮಾಡುವ ಅಗ್ನಿ ಪುರುಷನು ಶಿವಪೂಜಾಸಕ್ತನಾಗಿ, ಶಿವಧ್ಯಾನಮಗ್ನನಾಗಿರುವನು. ಅಂತಹ ಅಗ್ನಿದೇವನು ನನ್ನ ಸರ್ವಪಾಪವನ್ನೂ ನಾಶಗೈದು ಸ್ಥಿರಶಾಂತಿಯನ್ನು ಕರುಣಿಸಲಿ. ||೨೯-೩೦-೩೧||

ದಕ್ಷಿಣದಿಗ್ಭಾಗದಲ್ಲಿ ವೈವಸ್ವತಪುರಿಯಿರುವುದು. ಅದು ಕಬ್ಬಿಣದ ಪ್ರಾಕಾರಗಳು, ಅನೇಕ ಗೋಪುರಗಳುಳ್ಳ ಸೌಧಗಳು, ಇವುಗಳಿಂದ ರಂಜಿಸುತ್ತಿರುವುದು. ಅದರಲ್ಲಿ ದೇವತೆಗಳೂ, ರಾಕ್ಷಸರು, ಪಿತೃಗಳೂ, ಯಕ್ಷರಾಕ್ಷಸರೂ ನೆಲಸಿರುವರು. ಆ ನಗರದಲ್ಲಿ ನೀಲವರ್ಣದಿಂದಲೂ ರತ್ನಾಭರಣಗಳಿಂದಲೂ, ವಸ್ತ್ರಭೂಷಣಾದಿಗಳಿಂದಲೂ ವಿರಾಜಿಸುವ ಯಮನು ಮಹಿಷಾರೂಢನಾಗಿ ಸರ್ವದಾ ಶಿವಪೂಜೆ,

ರಕ್ಷಾವತೀ ಪುರೀ ನಾಮ್ನಾ ನಿದಿಕ್ ಸಮ್ಯಗ್ವ್ಯವಸ್ಥಿತಾ ।
ತತ್ರ ಜೀಮೂತಸಂಕಾಶಃ ಸರ್ವಾಭರಣಭೂಷಿತಃ ॥೩೬॥

ಅಸನ್ವಂತೇತಿ ಮಂತ್ರಾಪ್ತಃ ಪ್ರತಿಪಾದ್ಯೋ ನೃವಾಹನಃ ।
ಖಡ್ಗಪಾಣಿರ್ಮಹಾತೇಜಾಃ ಕರಾಳವದನೋಜ್ಜ್ವಲಃ ॥೩೭॥

ರಾಕ್ಷಸೇಂದ್ರಶ್ಚ ನಿರ್ಋತಿಃ ಶಿವಾರ್ಚನರತಸ್ಸದಾ ।
ಕರೋತು ಮೇ ಮಹಾಶಾಂತಿಂ ಶಿವಭಕ್ತಿಸಮುತ್ಸುಕಃ ॥೩೮॥

ಪಶ್ಚಿಮೇ ತು ದಿಶೋಭಾಗೇ ಪುರೀ ಶುದ್ಧವತೀ ಶುಭಾ ।
ನಾನಾರತ್ನಸಮಾಕೀರ್ಣಾ ನಾನಾಕಿನ್ನರಸೇವಿತಾ ॥೩೯॥

ತೇಜಃಪ್ರಕಾಶಪರ್ಯಂತಾ ಗಿರೌಪಮ್ಯಾ ಸದೋಜ್ಜ್ವಲಾ ।
ತತ್ರ ಮೌಕ್ತಿಕಸಂಕಾಶಃ ಪರಿಪಿಂಗಲಲೋಚನಃ ॥೪೦॥

ಶ್ವೇತವಸ್ತ್ರಪರೀಧಾನಃ ಪಾಶಹಸ್ತೋ ಮಹಾದ್ಯುತಿಃ ।
ವರುಣಃ ಪರಯಾ ಭಕ್ತ್ಯಾ ಶಿವೇವಾಹಿತಮಾನಸಃ ॥೪೧॥

---

ಶಿವಧ್ಯಾನ ಇವುಗಳಲ್ಲಿ ನಿರತನಾಗಿರುವನು. ಇಂತಹ ಯಮದೇವನು ನಮಗೆ ಸೌಖ್ಯವನ್ನು ಕರುಣಿಸಲಿ. ॥೩೨-೩೩-೩೪-೩೫॥

ನೈರುತ್ಯದಿಕ್ಕಿನಲ್ಲಿ ರಕ್ಷಾವತಿಯೆಂಬ ದಿವ್ಯನಗರವಿರುವುದು. ಅಲ್ಲಿ ಮೇಘದಂತೆ ನೀಲವರ್ಣವಿಶಿಷ್ಟನಾಗಿ, ಸರ್ವಾಭರಣಭೂಷಿತನಾಗಿ, 'ಅಸನ್ವಂತ' ಎಂಬ ಮಂತ್ರಪ್ರತಿಪಾದ್ಯನಾಗಿ. ನರವಾಹನನೆನಿಸಿದ ನಿಋುಋತಿಯು ವಾಸಿಸುತ್ತಿರುವನು. ಅವನು ಮಹಾತೇಜಸ್ವಿಯೂ. ಉಗ್ರಮುಖಿಯೂ. ರಾಕ್ಷಸರಾಜನಾದ ಅವನು ಸದಾ ಶಿವಾರ್ಚನೆಮಾಡಿಕೊಂಡಿರುವನು. ಇಂತಹ ಮಹಾತ್ಮನು ನನಗೆ ಶಾಂತಿಯನ್ನು ಕಲ್ಪಿಸಲಿ. ॥೩೬-೩೭-೩೮॥

ಪಶ್ಚಿಮದಿಗ್ಭಾಗದಲ್ಲಿ ಶುದ್ಧವತಿಯೆಂಬ ಪುರವಿರುವುದು. ಅದು ನಾನಾ ರತ್ನಗಳಿಂದ ಪ್ರಕಾಶಿಸುತ್ತಾ, ಕಿನ್ನರರಿಂದಲೂ, ಸುಂದರವಾದ ಬೆಟ್ಟಗಳಿಂದಲೂ ಶೋಭಿಸುತ್ತಿರುವುದು ಅಲ್ಲಿ ಮುತ್ತಿನಂತೆ ಶುಭ್ರವಾಗಿ ಹೊಳೆಯುತ್ತಾ. ಹೊಂಬಣ್ಣದ ಕಣ್ಣುಗಳಿಂದಲೂ, ಶುಭ್ರವಸ್ತ್ರದಿಂದಲೂ. ಪಾಶಾಯುಧದಿಂದಲೂ ತೇಜಸ್ವಿಯಾಗಿ ಶೋಭಿಸುವ ವರುಣದೇವನು ಸದಾ ಶಿವಧ್ಯಾನದಲ್ಲಿ ನಿರತನಾಗಿರುವನು. ಇಂತಹ

ರೋಗಶೋಕಾರ್ತಿಸಂತಾಪಂ ವಿನಾಶಯತು ಮೇ ಸದಾ ।
ವಾಯವ್ಯೇ ತು ದಿಶೋಭಾಗೇ ಪುರೀ ಗಂಧವತೀ ಶುಭಾ ॥೪೨॥

ಋಷಿಸಿದ್ಧಗಣಾಕೀರ್ಣಾ ಹೇಮಪ್ರಾಕಾರತೋರಣಾ ।
ತಥಾ ಧೂಮ್ರೇಣ ದೇಹೇನ ಕೃಷ್ಣಪಿಂಗಲಲೋಚನಃ ॥೪೩॥

ಶ್ವೇತವಸ್ತ್ರಪರೀಧಾನಃ ಪಾಶಹಸ್ತೋ ಮಹಾದ್ಯುತಿಃ ।
ಪಟವ್ಯಾಪ್ತಾಂತರಾಲೀನೋ ಧ್ವಜಯಷ್ಟ್ಯಾಯುಧೋಜ್ಜ್ವಲಃ ॥೪೪॥

ಪವನಃ ಪರಮೋ ದೇವಃ ಪರಮೇಶ್ವರಭಾವನಃ ।
ಕ್ಷೇಮಾರೋಗ್ಯಂ ಬಲಂ ಶಾಂತಿಂ ಕರೋತು ಮಮ ಸರ್ವದಾ ॥೪೫॥

ಮಹೋದಯಾ ನಾಮ ಪುರೀ ಉತ್ತರೇಣ ವ್ಯವಸ್ಥಿತಾ ।
ಅನೇಕಯಕ್ಷಸಂಕೀರ್ಣಾ ನಾನಾರತ್ನೋಪಶೋಭಿತಾ ॥೪೬॥

ತತ್ರ ದೇವೋ ಗದಾಹಸ್ತಶ್ಚಿತ್ರಸ್ರಗ್ವಸ್ತ್ರಭೂಷಣಃ ।
ಹ್ರಸ್ವಬಾಹುರ್ಮಹಾತೇಜಾಃ ಪರಿಪಿಂಗಲಲೋಚನಃ ॥೪೭॥

---

ವರುಣನು, ನನಗೆ ಆಗಾಗ ಒದಗುವ ರೋಗ, ಶೋಕ, ಪೀಡೆ, ಸಂತಾಪ ಇವೇ ಮೊದಲಾದುವುಗಳನ್ನು ನಿವಾರಿಸಿ ಶಾಂತಿಯನ್ನು ಕರುಣಿಸಲಿ. ॥೩೯-೪೦-೪೧॥

ವಾಯವ್ಯದಿಗ್ಭಾಗದಲ್ಲಿ ಗಂಧವತಿಯೆಂಬ ನಗರವಿರುವುದು. ಅದು ಋಷಿಜನರಿಂದಲೂ, ಸಿದ್ಧಗಂಧರ್ವಾದಿಗಳಿಂದಲೂ, ರತ್ನಮಯವಾದ ತೋರಣಪ್ರಾಕಾರಾದಿಗಳಿಂದಲೂ ವಿರಾಜಿಸುತ್ತಿರುವುದು. ಅಲ್ಲಿ ಧೂಮ್ರವರ್ಣದ ದೇಹದಿಂದಲೂ, ಕೃಷ್ಣ ಮತ್ತು ಪಿಂಗಲವರ್ಣದ ಲೋಚನಗಳಿಂದಲೂ ಪ್ರಕಾಶಿಸುತ್ತಾ, ಶುಭ್ರವಸ್ತ್ರಧಾರಿಯಾಗಿ ಪಾಶಾಯುಧವನ್ನು ಹಿಡಿದು, ಪಟವ್ಯಾಪ್ತವಾದ ಪ್ರದೇಶದಲ್ಲಿ ಅಡಗಿದವನಾಗಿ ಧ್ವಜ, ಯಷ್ಟಿ ಮುಂತಾದ ಆಯುಧಗಳಿಂದ ಶೋಭಿಸುವವನಾಗಿ ವಾಯುವು ಸದಾ ಪರಶಿವಧ್ಯಾನಾಸಕ್ತನಾಗಿರುವನು. ಅಂತಹ ವಾಯುದೇವನು ನನಗೆ ಸಕಲ ಕ್ಷೇಮಾರೋಗ್ಯಾದಿ ಶಾಂತಿಯನ್ನೂ ಕರುಣಿಸಲಿ. ॥೪೨-೪೩-೪೪-೪೫॥

ಉತ್ತರದಿಕ್ಕಿನಲ್ಲಿ ಮಹೋದಯವೆಂಬ ನಗರವಿರುವುದು. ಅದರಲ್ಲಿ ಅನೇಕ ಯಕ್ಷರು ವಾಸಿಸುವರು. ನಾನಾರತ್ನಗಳಿಂದ ಅದು ಪ್ರಕಾಶಿಸುತ್ತಿರುವುದು. ಗದೆಯನ್ನು ಕೈಯಲ್ಲಿ ಹಿಡಿದು, ವಸ್ತ್ರಮಾಲ್ಯಾದಿಭೂಷಣವಿಶಿಷ್ಟನಾಗಿ, ಚಿಕ್ಕತೋಳು

ಕುಬೇರಃ ಶ್ರೀಮುಖಃ ಶ್ರೀಮಾನ್ ಹರಪಾದಾರ್ಚನೇ ರತಃ ।
ಶಾಂತಿಂ ಕರೋತು ಮೇ ಪ್ರೀತಃ ಶಾಂತಃ ಶಾಂತ್ಯೈವ ತೇಜಸಾ ॥೪೮॥

ಯಶೋವತೀ ಪುರೀ ರಮ್ಯಾ ಈಶಾನ್ಯಾಂ ದಿಶಿ ಸಂಸ್ಥಿತಾ ।
ನಾನಾಗಣಸಮಾಕೀರ್ಣಾ ನಾನಾಕೃತಸುರಾಲಯಾ ॥೪೯॥

ತೇಜಃ ಪ್ರಾಕಾರಪರ್ಯಂತಾ ನಿರೌಪಮ್ಯಗುಣಾನ್ವಿತಾ ।
ತತ್ರ ಮೌಕ್ತಿಕಸಂಕಾಶಃ ಶಶಾಂಕಕೃತಶೇಖರಃ ॥೫೦॥

ತ್ರಿನೇತ್ರಃ ಶಾಂತರೂಪಾತ್ಮಾ ಹ್ಯಕ್ಷಮಾಲಾಧರೋ ಹರಃ ।
ಈಶಾನಃ ಪರಮೋ ದೇವಃ ಶಿವಧ್ಯಾನೈಕತತ್ಪರಃ ॥೫೧॥

ಸೋಽಪಿ ಸರ್ವಾತ್ಮಭಾವೇನ ಶಾಂತಿಮಾಶು ಕರೋತು ಮೇ ॥೫೨॥

ಶಾಂತಾಶ್ಶಿವಾರ್ಚನರತಾಃ ಶಿವಪಾದಭಕ್ತಾಃ
ಶಕ್ತಾಸ್ತ ಏವ ಭುವನೇಷು ಸದೈವಮುಕ್ತಾಃ ।

---

ಗಳಿಂದಲೂ, ಪಿಂಗಳವರ್ಣದ ನೇತ್ರದಿಂದಲೂ ಕುಬೇರನು ಅತ್ಯಂತ ಶ್ರೀಮಂತನಾಗಿ ಶಿವಪಾದಾರ್ಚನೆಯಲ್ಲಿಯೇ ನಿರತನಾಗಿರುವನು. ಇಂತಹ ಕುಬೇರದೇವನು ನನಗೆ ಸ್ಥಿರಶಾಂತ್ಯಾದಿಗಳನ್ನು ಕರುಣಿಸಲಿ. ||೪೬-೪೭-೪೮||

ಈಶಾನ್ಯ ದಿಕ್ಕಿನಲ್ಲಿ ಯಶೋವತಿಯೆಂಬ ನಗರವಿರುವುದು. ಅದು ಅನೇಕ ಶಿವಗಣಗಳಿಂದಲೂ, ನಾನಾವಿಧವಾದ ಸುರಗಣಗಳಿಂದಲೂ, ತೇಜಸ್ಸುಳ್ಳ ಪ್ರಾಕಾರಗಳಿಂದಲೂ, ಹೋಲಿಕೆಯಿಲ್ಲದ ಗುಣಗಣಗಳಿಂದಲೂ ಯಾವಾಗಲೂ ಪ್ರಕಾಶಿಸುತ್ತಿರುವುದು. ಆ ನಗರದಲ್ಲಿ ಮುತ್ತಿನಂತೆ ಹೊಳೆಯುತ್ತಾ, ಚಂದ್ರಕಲೆಯಿಂದ ಪ್ರಕಾಶಿಸುವ ಶಿರೋಭಾಗವುಳ್ಳವನಾಗಿ, ಮೂರುಕಣ್ಣುಗಳಿಂದ ವಿರಾಜಿಸುತ್ತಾ ಈಶಾನದೇವನು ಶೋಭಿಸುತ್ತಿರುವನು. ||೪೯-೫೦||

ಶಾಂತರೂಪಿಯಾಗಿ, ರುದ್ರಾಕ್ಷಿಮಾಲೆಯನ್ನು ಧರಿಸಿಕೊಂಡಿರುವ ಈಶಾನದೇವನು ಸದಾ ಶಿವಧ್ಯಾನತತ್ಪರನಾಗಿ ಕಾಣುವನು. ಅಂತಹ ಈಶಾನದೇವನು ನನಗೆ ಸರ್ವಾತ್ಮಭಾವದಿಂದ ಶಾಂತಿಯನ್ನು ಕರುಣಿಸಲಿ, ಎಂದು ಅಷ್ಟದಿಕ್ಪಾಲಕರನ್ನೂ ಶಾಂತಿಗಾಗಿ ಪ್ರಾರ್ಥನೆಮಾಡಬೇಕು. ದೇವಿಯೇ, ಕೇಳು. ಒಟ್ಟಿನಲ್ಲಿ ಶಿವಪಾದಸೇವನೆಯಲ್ಲಿ ಶಿವಪಾದಪೂಜೆಯಲ್ಲಿ ನಿರತರಾಗಿ, ಭಸ್ಮರುದ್ರಾಕ್ಷಗಳಿಂದ

ಯುಕ್ತಾ ಮಹಾಯುತಫಲೈರ್ದರಭಸ್ಮಭೂಷಾ
ರುದ್ರಾಕ್ಷವಕ್ಷಸ ಇಮೇ ಶಿವಲಿಂಗಭಕ್ತಾಃ ॥೫೩॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಶಾಂತ್ಯಧ್ಯಾಯಕಥನಂ
ನಾಮ ಅಷ್ಟತ್ರಿಂಶೋಽಧ್ಯಾಯಃ

---

ಶೋಭಿಸುವ ವಕ್ಷಸ್ಸುಳ್ಳ ಮಹಾತ್ಮರೇ, ಸರ್ವಪಾಪನಿವಾರಕರಾಗಿ ಸದಾ ಶಿವಪೂಜಾ ಸಕ್ತರಿಗೆ ಶಾಂತ್ಯಾದಿಗಳನ್ನು ಕರುಣಿಸುವುದರಲ್ಲಿ ಸಮರ್ಥರೆನಿಸುವರು. ಎಂದು ಪರಶಿವನು ಪಾರ್ವತಿಗೆ ತನ್ನ ಭಕ್ತರ ಮಹಿಮಾಪ್ರಾಶಸ್ತ್ಯವನ್ನು ಬೋಧಿಸಿದನು. ಎಂದು ಸೂತಮಹರ್ಷಿಗಳು ಶೌನಕಾದಿಗಳಿಗೆ ತಿಳಿಯಪಡಿಸಿದರು. ॥೫೧-೫೨-೫೩॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಾಂತ್ಯಧ್ಯಾಯ
ನಿರೂಪಣೆಯೆಂಬ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಏಕೋನಚತ್ವಾರಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

**ಭೂಲೋಕೇ ಚ ಭುವರ್ಲೋಕೇ ಸ್ವರ್ಲೋಕೇ ಚ ವಸಂತಿ ಯೇ ।**
**ದೇವದಿವ್ಯಪ್ರಭಾಯುಕ್ತಾಃ ಶಾಂತಿಂ ಕುರ್ವಂತು ಮೇ ಸದಾ ॥೧॥**

**ಮಹರ್ಲೋಕೇ ಜನೋಲೋಕೇ ತಪೋಲೋಕೇ ಚ ಯೇಸ್ಥಿತಾಃ ।**
**ತೇ ತು ಪ್ರಮುದಿತಾ ದೇವಾಃ ಶಾಂತಿಂ ಕುರ್ವಂತು ಮೇ ಸದಾ ॥೨॥**

**ಸತ್ಯಲೋಕೇ ಚ ಯೇ ದೇವಾಃ ಪ್ರಭಾಜ್ವಲಿತವಿಗ್ರಹಾಃ ।**
**ಶಿವಭಕ್ತಾಃ ಸುಮನಸೋ ಭಯಾರ್ತಿರ್ನಾಶಯಂತು ಮೇ ॥೩॥**

## ಮೂವತ್ತೊಂಬತ್ತನೆಯ ಅಧ್ಯಾಯ

ಪರಮೇಶ್ವರನು ದೇವಿಯೊಡನೆ ಶಾಂತ್ಯಧ್ಯಾಯವನ್ನು ಮುಂದುವರಿಸುತ್ತಾ ಈರೀತಿ ನುಡಿದನು:— ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳಲ್ಲಿಯೂ, ಹಾಗೆಯೇ ಮಹರ್ಲೋಕ, ಜನಲೋಕ, ತಪೋಲೋಕಗಳಲ್ಲಿಯೂ ದಿವ್ಯತೇಜಸ್ಸಿನಿಂದ ಸಂಚರಿಸುವ ಸಮಸ್ತದೇವತೆಗಳೂ ನನಗೆ ಸರ್ವದಾ ಶಾಂತಿಯನ್ನು ಕರುಣಿಸಲಿ. ಎಂದು ಪ್ರಾರ್ಥಿಸಬೇಕು. ॥೧-೨॥

ಸತ್ಯಲೋಕದಲ್ಲಿ ಅತಿಶಯವಾದ ಕಾಂತಿಯಿಂದ ಜ್ವಲಿಸುವ ದೇಹವುಳ್ಳ ಈಶ್ವರಭಕ್ತರಾದ ದೇವತೆಗಳೂ, ಹಾಗೆಯೇ ತಪೋಲೋಕದಲ್ಲಿ ಶುದ್ಧಸ್ಫಟಿಕದಂತೆ ಶುಭ್ರವಾಗಿ ಹೊಳೆಯುತ್ತಾ, ಜನಲೋಕದಲ್ಲಿ ಸುವರ್ಣಛಾಯೆಯಿಂದ ವಿರಾಜಿಸುತ್ತಾ

ತಪೋಲೋಕೇ ಚ ಯೇ ದೇವಾಃ ಶುದ್ಧಸ್ಫಟಿಕವಿಗ್ರಹಾಃ ।
ರುದ್ರಭಕ್ತಾ ಮಹಾತ್ಮಾನಃ ಶಿವಂ ಕುರ್ವಂತು ಮೇ ಸದಾ ॥೪॥

ಜನೋಲೋಕೇ ಚ ಯೇ ದೇವಾಃ ಧೌತಚಾಮೀಕರಪ್ರಭಾಃ ।
ಈಶಾನಪ್ರಣತಾ ನಿತ್ಯಂ ಶಾಂತಿಂ ಕುರ್ವಂತು ಮೇ ಸದಾ ॥೫॥

ಮಹರ್ಲೋಕೇ ಚ ಯೇ ದೇವಾ ವಿಮಾನೋಜ್ಜ್ವಲಸಂಸ್ಥಿತಾಃ ।
ಭವಪ್ರಣಾಮಪರಮಾ ನಾಶಯಂತು ಭಯಂ ಸದಾ ॥೬॥

ಭುವರ್ಲೋಕೇ ಚ ಯೇ ದೇವಾ ದೀಪ್ತಿಮಂತೋ ಮಹಾಬಲಾಃ ।
ಶಂಕರಪ್ರಣತಾ ನಿತ್ಯಂ ಕುರ್ವಂತು ವಿಜಯಂ ಮಮ ॥೭॥

ಭೂರ್ಲೋಕೇ ಚ ಯೇ ದೇವಾ ಭಾಸಯಂತಿ ದಿಶೋದಶ ।
ಶಿವೈಕಶರಣಾ ದೇವಾಃ ಪಾಪಂ ಪ್ರಶಮಯಂತು ಮೇ ॥೮॥

ಗಿರಿಕಂದರದುರ್ಗೇಷು ಮುನಯೋ ನಿವಸಂತಿ ಯೇ ।
ರುದ್ರಾರ್ಚನರತಾ ನಿತ್ಯಂ ಶಾಂತಿಂ ಕುರ್ವಂತು ಮೇ ಸದಾ ॥೯॥

ಶರಚ್ಚಂದ್ರಾಂಶುಗೌರೇಣ ದೇಹೇನಾಮಿತತೇಜಸಾ ।
ಸರಸ್ವತೀ ಶಿವೇ ಭಕ್ತಾ ಶಾಂತಿಮಾಶು ಕರೋತು ಮೇ ॥೧೦॥

ಈಶ್ವರಾರಾಧಕರಾಗಿರುವ ದೇವತೆಗಳು ನನಗೆ ಶಾಶ್ವತವಾದ ಶಾಂತಿಸುಖಗಳನ್ನು ದಯಪಾಲಿಸಲಿ. ॥೩-೪-೫॥

ದಿವ್ಯವಿಮಾನದಲ್ಲಿ ಕುಳಿತು ಈಶ್ವರನಮಸ್ಕಾರಾದಿಗಳಿಂದ ಚರಿಸುವ ಮಹರ್ಲೋಕವಾಸಿಗಳೂ, ಮಹಾಬಲಿಷ್ಠರಾಗಿ ತೇಜಸ್ಸಿನಿಂದ ಶೋಭಿಸುವ ಭುವರ್ಲೋಕನಿವಾಸಿಗಳಾದ ಸಕಲದೇವತೆಗಳೂ ನನಗೆ ವಿಜಯವನ್ನುಂಟುಮಾಡಲಿ. ॥೬-೭॥

ಹತ್ತುದಿಕ್ಕುಗಳನ್ನು ಬೆಳಗಿಸುವಷ್ಟು ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಭೂಲೋಕದ ಸಕಲದೇವತೆಗಳೂ ನನ್ನ ದುರಿತರಾಶಿಯನ್ನು ನಾಶಗೊಳಿಸಲಿ. ಗಿರಿ, ಗುಹೆ, ದುರ್ಗ ಇವುಗಳಲ್ಲಿ ವಾಸಿಸುತ್ತಾ ರುದ್ರಾರ್ಚನೆಯಲ್ಲಿ ನಿರತರಾದ ಸಕಲ ಮುನಿಗಳೂ ನನಗೆ ಶಾಂತಿಯನ್ನು ಕರುಣಿಸಲಿ. ಶರತ್ಕಾಲದ ಚಂದ್ರನಂತೆ ಶುಭ್ರವರ್ಣದಿಂದ ವಿರಾಜಿಸುವ ದೇಹವುಳ್ಳ, ಶಿವಭಕ್ತಿಯುಕ್ತಳಾದ ಸರಸ್ವತೀ ದೇವಿಯು ನಮಗೆ ಸ್ಥಿರಶಾಂತಿಯನ್ನು ಕರುಣಿಸಲಿ. ॥೮-೯-೧೦॥

ಚಾರುಚಾಮೀಕರಪ್ರಖ್ಯಾ ಸರೋಜಕರಪಲ್ಲವಾ ।
ಶಿವಭಕ್ತಾ ಚ ಶ್ರೀರ್ದೇವೀ ಶ್ರೀಮದ್ಭೂತಿಂ ದದಾತು ಮೇ ॥೧೧॥

ಚಾರುಣಾ ಮುಖಚಂದ್ರೇಣ ವಿಚಿತ್ರಕನಕೋಜ್ಜ್ವಲಾ ।
ಜಯಾ ದೇವೀ ಶಿವೇ ಭಕ್ತಾ ಸರ್ವಾನ್ ಕಾಮಾನ್ ದದಾತು ಮೇ ॥೧೨॥

ಹಾರೇಣ ಸುವಿಚಿತ್ರೇಣ ಭಾಸ್ವತ್ಕನಕಮೇಖಲಾ ।
ಪರಾಜಿತಾ ರುದ್ರಭಕ್ತಾ ಕರೋತು ವಿಜಯಂ ಸದಾ ॥೧೩॥

ಸಿಂದೂರಾರುಣವರ್ಣೇನ ದೇಹೇನಾಯುತಲೋಚನಾ ।
ಸಹಸ್ರಕಿರಣಶ್ಶ್ರೀಮಾನ್ ಸಪ್ತಸಪ್ತಿಕವಾಹನಃ ॥೧೪॥

ಗಭಸ್ತಿಮಾಲೀ ಭಗವಾಂಛಿವಪಾದಾರ್ಚನೇ ರತಃ ।
ಕರೋತು ಮೇ ಮಹಾಶಾಂತಿಂ ಗ್ರಹಪೀಡಾನಿವಾರಣಾಂ ॥೧೫॥

ಜಗದಾಪ್ಯಾಯನಕರೋಽಪ್ಯಮೃತಾಂಶುಸ್ಸುಶೀತಲಃ ।
ಸೋಮಃ ಸೌಮ್ಯೇನ ಭಾವೇನ ಗ್ರಹಪೀಡಾಂ ವ್ಯಪೋಹತು ॥೧೬॥

ಸುಂದರವಾದ ಸುವರ್ಣದಂತೆ ಶೋಭಿಸುವ, ಕಮಲವನ್ನು ಕೈಯಲ್ಲಿ ಧರಿಸಿರುವ, ಈಶ್ವರಪೂಜಕಳಾದ ಲಕ್ಷ್ಮೀದೇವಿಯು ನನಗೆ ಸಕಲಮಂಗಳವನ್ನೂ ಉಂಟುಮಾಡಲಿ. ಮುಖಚಂದ್ರದಿಂದ ರಂಜಿಸುತ್ತಾ, ವಿಚಿತ್ರವಾದ ಕನಕಭೂಷಣಗಳಿಂದ ಪ್ರಕಾಶಿಸುವ ಜಯಾದೇವಿಯು ನನಗೆ ಸಕಲ ಇಷ್ಟಾರ್ಥಗಳನ್ನೂ ಸರ್ವದಾ ಒದಗಿಸಿ ಸಲಹಲಿ. ॥೧೧-೧೨॥

ಪ್ರಕಾಶಮಾನವಾದ ಚಿನ್ನದ ಡಾಬನ್ನು ಧರಿಸಿ, ವಿಚಿತ್ರವಾದ ಹಾರವನ್ನು ತಾಳಿಕೊಂಡು ರುದ್ರಭಕ್ತಳಾದ ಪರಾಜಿತಾ ಶಕ್ತಿಯು ಸಿಂಧೂರವರ್ಣದಿಂದ ವಿರಾಜಿಸುವ ದೇಹದಿಂದಲೂ, ವಿಶಾಲವಾದ ಕಣ್ಣುಗಳಿಂದಲೂ ಕೂಡಿ ನನಗೆ ಶಾಂತಿಯನ್ನು ನೀಡಲಿ. ಆದೇರೀತಿ ಕಿರಣಮಾಲಿಯಾಗಿ, ಸಪ್ತಾಶ್ವರಥಯುಕ್ತನಾದ ಸೂರ್ಯಭಗವಂತನು ಶಿವಪಾದಾರ್ಚನಾಸಕ್ತನಾಗಿ ಗ್ರಹಪೀಡಾನಿವಾರಣಾತ್ಮಕವಾದ ಶಾಂತಿಯನ್ನು ಕರುಣಿಸಿ ನನ್ನನ್ನು ರಕ್ಷಿಸಲಿ. ॥೧೩-೧೪-೧೫॥

ಅಮೃತಮಯವಾದ ಕಿರಣಗಳಿಂದ ಜಗತ್ತನ್ನೇ ಆಹ್ಲಾದಗೊಳಿಸಿ ತಂಪನ್ನುಂಟುಮಾಡುವ ಚಂದ್ರನು ಸೌಮ್ಯಭಾವದಿಂದ ಗ್ರಹಪೀಡೆಯನ್ನು ಪರಿಹರಿಸಲಿ.

ಪದ್ಮರಾಗೇಣ ದೇಹೇನ ದೇವಃ ಪಿಂಗಲಲೋಚನಃ ।
ಅಂಗಾರಕಸ್ತು ಸತತಂ ರುದ್ರಪೂಜಾಪರಾಯಣಃ ॥೧೭॥

ರುದ್ರಸದ್ಭಾವಸಂಪನ್ನೋ ರುದ್ರಧ್ಯಾನೈಕತತ್ಪರಃ ।
ಗ್ರಹಪೀಡಾಭಯಂ ಸರ್ವಂ ವಿನಾಶಯತು ಮೇ ಸದಾ ॥೧೮॥

ಕುಂಕುಮಾಭನಿಭಃ ಶ್ರೀಮಾನ್ ಶ್ರೀಮಾನ್ ದೇಹೇನ ಶೀತಲಃ ।
ಬುಧೋಽಪಿ ಶಿವಧ್ಯಾನಾತ್ಮಾ ಗ್ರಹಪೀಡಾಂ ವ್ಯಪೋಹತು ॥೧೯॥

ತಪ್ತಚಾಮೀಕರಾಭಾಸಃ ಸರ್ವಜ್ಞಾನಸುಧಾಲಯಃ ।
ಬೃಹಸ್ಪತಿಃ ಸದಾ ಕಾಲಮೀಶ್ವರಾರ್ಚನತತ್ಪರಃ ॥೨೦॥

ಸೋಽಪಿ ಶಾಂತಾತ್ಮಚಿತ್ತೇನ ಪರಮೇಣ ಸಮಾಧಿನಾ ।
ಗ್ರಹಪೀಡಾಂ ವಿನಿರ್ಜಿತ್ಯ ಕರೋತು ವಿಜಯಂ ಮಮ ॥೨೧॥

ಹಿಮಕುಂದೇಂದುತುಲ್ಯಾಭೋ ಸುರದೈತ್ಯೇಂದ್ರಪೂಜಿತಃ ।
ಶುಕ್ರಶ್ಶಿವಾರ್ಚಕೋ ನಿತ್ಯಂ ಗ್ರಹಪೀಡಾಂ ವ್ಯಪೋಹತು ॥೨೨॥

ಪದ್ಮರಾಗದಂತೆ ಕೆಂಪಾದ ದೇಹದಿಂದಲೂ, ಪಿಂಗಳವರ್ಣದ ಕಣ್ಣುಗಳಿಂದಲೂ ಕೂಡಿ ಶಿವಪೂಜಾಪಾರಾಯಣನಾದ ಅಂಗಾರಕನು ನಮಗೆ ಶುಭವನ್ನುಂಟುಮಾಡಲಿ. ॥೧೬-೧೭॥

ಸದಾ ರುದ್ರನನ್ನೇ ಪೂಜಿಸುತ್ತಾ, ಧ್ಯಾನಿಸುತ್ತಿರುವ ಅಂಗಾರಕನು ನಮಗೆ ಶಾಂತಿಯನ್ನು ನೀಡಲಿ. ಕುಂಕುಮವರ್ಣದಿಂದ ವಿರಾಜಿಸುವ ಶೀತಲಾಂಗನಾದ ಶಿವಧ್ಯಾನಮಗ್ನನಾದ ಬುಧನೂ ಗ್ರಹಪೀಡೆಯನ್ನು ನಿವಾರಿಸಲಿ ॥೧೮-೧೯॥

ಅಪರಂಜಿಯಂತೆ ಹೊಳೆಯುವ ದೇಹಕಾಂತಿಯುಳ್ಳವನಾಗಿ, ಸರ್ವಜ್ಞನೆನಿಸಿ, ಸದಾಶಿವಾರ್ಚನಾತತ್ಪರನಾಗಿರುವ ಬೃಹಸ್ಪತಿಯು ಶಾಂತಸ್ವಭಾವವುಳ್ಳವನಾಗಿ ಸ್ಥಿರಬುದ್ಧಿಯಿಂದ ಕೂಡಿ ಸಕಲ ಗ್ರಹಪೀಡೆಯನ್ನೂ ನಿವಾರಿಸಲಿ ಮತ್ತು ನನಗೆ ವಿಜಯವನ್ನು ಕೊಡಲಿ. ॥೨೦-೨೧॥

ಹಿಮದಂತೆಯೂ, ಕೋಲುಮಲ್ಲಿಗೆಯ ಹೂವಿನಂತೆಯೂ ಶುಭ್ರವಾಗಿ ಹೊಳೆಯುತ್ತಾ, ಸದಾ ದೇವರಾಕ್ಷಸಶ್ರೇಷ್ಠರಿಂದಲೂ ಪೂಜಿತನಾದ ಶಿವಭಕ್ತಿಯುಕ್ತ

ಭಿನ್ನಾಂಜನಸಮಚ್ಛಾಯಃ ಸುರಕ್ತನಯನದ್ಯುತಿಃ ।
ಶನೈಶ್ಚರಃ ಶಿವೇ ಭಕ್ತೋ ಗ್ರಹಪೀಡಾಂ ವ್ಯಪೋಹತು ॥೨೩॥

ಧೂಮ್ರಾಯಮಾಣಸ್ಸತತಂ ಸರ್ವೋತ್ಪಾತಸಮನ್ವಿತಃ ।
ನೀಲಾಂಜನಸಮಶ್ರೀಮಾನ್ ಸೈಂಹಿಕೇಯೋ ಮಹಾದ್ಯುತಿಃ ॥೨೪॥

ಶಿವಪೂಜಾರತೋ ರಾಹುರ್ಗ್ರಹಪೀಡಾಂ ವ್ಯಪೋಹತು ।
ಧೂಮ್ರಾಯಮಾಣಸ್ಸತತಂ ಸರ್ವೋತ್ಪಾತಸಮನ್ವಿತಃ ॥೨೫॥

ನೀಲಾಂಜನನಿಭಶ್ರೀಮಾನ್ ಸೈಂಹಿಕೇಯೋ ಮಹಾದ್ಯುತಿಃ ।
ಶಿವಾರ್ಚನರತಃ ಕೇತುರ್ಗ್ರಹಪೀಡಾಂ ವ್ಯಪೋಹತು ॥೨೬॥

ಏತೇ ಗ್ರಹಾ ಮಹಾತ್ಮಾನಃ ಶಿವಾರ್ಚನಪರಾಯಣಾಃ ।
ಶಾಂತಿಂ ಕುರ್ವಂತು ಮೇ ಹೃಷ್ಟಾಃ ಸದಾ ಕಾಲಂ ಹಿತೈಷಿಣಃ ॥೨೭॥

ಮುಖೇ ಯಸ್ಯ ಸ್ಥಿತೋ ಮೃತ್ಯುಃ ಪುಷ್ಟಿರ್ನಾಮ ಮಹಾಬಲಃ ।
ಸುಮುಖೀ ವಿಘ್ನಕಾರೀ ಚ ಪುಚ್ಛೇ ಚ ವಿಜಯಂಕರೀ ॥೨೮॥

---

ವಾದ ಶುಕ್ರಗ್ರಹವು ಗ್ರಹಪೀಡೆಯನ್ನು ನಿವಾರಿಸಲಿ. ಕಾಡಿಗೆಯಂತೆ ಕಪ್ಪಾದ ದೇಹದಿಂದಲೂ, ಕೆಂಪಾದಕಣ್ಣುಗಳಿಂದಲೂ ವಿರಾಜಿಸುವ ಶನೈಶ್ಚರನು ಗ್ರಹಪೀಡೆಯನ್ನು ನಿವಾರಿಸಿ ನಮಗೆ ಸೌಖ್ಯವನ್ನು ಕರುಣಿಸಲಿ. ॥೨೨-೨೩॥

ಧೂಮ್ರವರ್ಣದಿಂದ ರಂಜಿಸುತ್ತಾ, ಅನೇಕ ಉತ್ಪಾತಾದಿಗಳಿಂದ ಕೂಡಿ ನೀಲವರ್ಣದ ಕಾಡಿಗೆಯಂತೆ ಕಪ್ಪಾದ ದೇಹವುಳ್ಳ ಸಿಂಹಿಕಾಪುತ್ರರಾದ, ಹಾಗೆಯೇ ಶಿವಪೂಜಾಧುರಂಧರರಾದ ರಾಹುಕೇತುಗಳು, ಸಮಸ್ತಗ್ರಹಗಳ ಪೀಡೆಯನ್ನೂ ಪರಿಹರಿಸಲಿ. ಹೀಗೆಂದು ಆದಿತ್ಯಾದಿ ನವಗ್ರಹಗಳ ಪ್ರಾರ್ಥನೆಯನ್ನು ಮುಂದುವರಿಸಿ ಶಾಂತಿಯನ್ನು ಪ್ರಾರ್ಥಿಸಬೇಕು. ॥೨೪-೨೫-೨೬॥

ಈ ಗ್ರಹಗಳು ಸದಾ ಶಿವಾರ್ಚನೆಯಲ್ಲಿ ಮಗ್ನರಾಗಿದ್ದು ಸರ್ವದಾ ನಮಗೆ ಶಾಂತಿಯನ್ನು ಕರುಣಿಸಲಿ. ಪುಷ್ಟಿಯೆಂಬ ಹೆಸರುಳ್ಳ ಅತಿಬಲಿಷ್ಠವಾದ ಮೃತ್ಯು ದೇವತೆಯೂ ರುದ್ರಪ್ರಣಾಮನಿರತಳಾಗಿ ನಮಗೆ ಸ್ಥಿರಶಾಂತಿಯನ್ನು ಕರುಣಿಸಲಿ. ದ್ವಿತಿಯಾ ತಿಥಿಗೆ ದೇವತೆಯಾದ ವಿಜಯಾದೇವಿಯೂ ಶಾಂತಿಪ್ರದಳಾಗಲಿ. ॥೨೭-೨೮॥

ರುದ್ರಪ್ರಣಾಮಪರಮಾ ಶಾಂತಿಮಾಶು ಕರೋತು ಮೇ ।
ತೃತೀಯಾ ಸಪ್ತಮೀ ಚೈವ ದಶಮೀ ಚ ಚತುರ್ದಶೀ ॥೨೯॥

ಚತುರ್ಥೀ ಚಾಷ್ಟಮೀ ಚೈವ ಏಕಾದಶೀ ಚ ಪೂರ್ಣಿಮಾ ।
ಏತಾ ವಿಘ್ನಕರಾ ಭಕ್ತಾ ಶುಕ್ಲಕೃಷ್ಣಸಮುದ್ಭವಾಃ ॥೩೦॥

ಭವಂತು ಮೇ ಶ್ರಿಯೈ ನಿತ್ಯಂ ಕುರ್ವಂತು ವಿಜಯಂ ಸದಾ ।
ಅಮಾವಾಸ್ಯಾ ಮಹಾಪುಣ್ಯಾ ಪಿತೃದೇವಸಮನ್ವಿತಾ ॥೩೦॥

ಪ್ರಿಯಾಹ್ಯೇಷಾ ತು ಪರಮಾ ಶಿವಸ್ಯ ಪರಮಾತ್ಮನಃ ।
ಶಿವತೇಜಃಸಮಾಯುಕ್ತಾ ಕರೋತು ಮಮ ಶಾಂತಿಕಂ ॥೩೨॥

ಪ್ರತಿಪದ್ವಹ್ನಿಸಂಯುಕ್ತಾ ದ್ವಿತೀಯಾ ವಿಧಿದೇವತಾ ।
ತೃತೀಯಾ ಚ ಮಹಾಭಾಗಾ ಧನದೇನ ಸಮನ್ವಿತಾ ॥೩೩॥

ಚತುರ್ಥೀ ಚ ಮಹಾಪುಣ್ಯಾ ಗಜವಕ್ತ್ರಾಧಿದೈವತಾ ।
ಪಂಚಮೀ ನಾಗದೈವತ್ಯಾ ಷಷ್ಠೀಸ್ಕಂದಾಧಿದೈವತಾ ॥೩೪॥

---

ಶುಕ್ಲ ಮತ್ತು ಕೃಷ್ಣಪಕ್ಷಗಳಲ್ಲಿ ಸೇರಿರುವ, ತದಿಗೆ, ಸಪ್ತಮೀ, ದಶಮೀ, ಚತುರ್ದಶೀ, ಚೌತಿ, ಅಷ್ಟಮೀ, ಏಕಾದಶೀ, ಪೂರ್ಣಿಮಾ ಮುಂತಾದ ವಿಘ್ನಕಾರಿಗಳಾದ ತಿಥಿಗಳು ನಮಗೆ ಶಾಂತಿಯನ್ನು ಕರುಣಿಸಲಿ. ॥೨೯-೩೦॥

ಪಿತೃದೇವತೆಗಳಿಗೆ ಅತ್ಯಂತಪ್ರಿಯವೆನಿಸಿದ ಅಮಾವಾಸ್ಯಾ ತಿಥಿಯು ನಮಗೆ ವಿಜಯವನ್ನುಂಟುಮಾಡಲಿ ಆ ತಿಥಿಯು ಶಿವತೇಜಸ್ಸಿನಿಂದ ಕೂಡಿದ್ದು. ಪರಮಾತ್ಮನಾದ ಶಂಕರನಿಗೆ ಅತ್ಯಂತ ಪ್ರಿಯವೆನಿಸಿದುದು. ಇಂತಹ ಶಿವತಿಥಿಯು ನನಗೆ ಸದಾ ಶುಭವನ್ನುಂಟುಮಾಡಲಿ. ॥೩೧-೩೨॥

ಅಗ್ನಿದೇವತಾಕವಾದ ಪ್ರತಿಪತ್ತಿಥಿಯೂ, ಬ್ರಹ್ಮದೇವತಾಕವಾದ ಬಿದಿಗೆ ತಿಥಿಯೂ, ಧನಪ್ರದಾತೆಯಾದ ಗೌರೀ ದೇವತಾಕವಾದ ತದಿಗೆ ತಿಥಿಯೂ, ವಿನಾಯಕ ದೇವತಾಕವಾದ ಚೌತಿ ತಿಥಿಯೂ, ನಾಗದೇವತಾಪ್ರೀತಿಪ್ರದವಾದ ಪಂಚಮಿಯೂ, ಸ್ಕಂದಪ್ರೀತಿಕರವಾದ ಷಷ್ಠೀ ತಿಥಿಯೂ, ಸೂರ್ಯಾಭಿಮಾನ ಪಾತ್ರವಾದ ಪಂಚಮಿಯೂ, ಸ್ಕಂದಪ್ರೀತಿಕರವಾದ ಷಷ್ಠೀತಿಥಿಯೂ, ಸೂರ್ಯಾಭಿಮಾನಪಾತ್ರವಾದ ಸಪ್ತಮಿಯೂ, ರುದ್ರದೇವತಾಕವಾದ ಅಷ್ಟಮಿಯೂ, ಉಗ್ರದುರ್ಗಾದೇವತಾ

ಸಪ್ತಮೀ ರವಿಸಂಯುಕ್ತಾ ಅಷ್ಟಮೀ ರುದ್ರಸಂಯುತಾ ।
ನವಮೀ ತಿಥಿರತ್ಯುಗ್ರಾ ದುರ್ಗಾದೇವ್ಯಧಿದೈವತಾ ॥೩೫॥

ದಶಮೀ ಧರ್ಮಸಂಯುಕ್ತಾ ರುದ್ರೇಣೈಕಾದಶೀ ಯುತಾ ।
ದ್ವಾದಶೀ ವಿಷ್ಣುಸಂಯುಕ್ತಾ ಮದನೇನ ತ್ರಯೋದಶೀ ॥೩೬॥

ಚತುರ್ದಶೀ ಮಹೇಶೇನ ಪೂರ್ಣಿಮಾ ತು ಹಿಮಾಂಶುನಾ ।
ಏತಾಸ್ತು ತಿಥಯಸ್ಸರ್ವಾಃ ಈಶಾನಾರ್ಜನತತ್ಪರಾಃ ॥೩೭॥

ಶಾಂತಿಂ ಕುರ್ವಂತು ಮೇ ನಿತ್ಯಂ ಸದಾಕಾಲಂ ಹಿತೈಷಿಣಃ ।
ವಿಷ್ಕಂಭಃ ಪ್ರೀತಿರಾಯುಷ್ಮಾನ್ ಸೌಭಾಗ್ಯಶ್ಶೋಭನಸ್ತಥಾ ॥೩೮॥

ಅತಿಗಂಡಸ್ಸುಕರ್ಮಾ ಚ ಧೃತಿಶ್ಶೂಲಸ್ತಥೈವ ಚ ।
ಗಂಡೋವೃದ್ಧಿರ್ಧ್ರುವಶ್ಚೈವ ವ್ಯಾಘಾತೋ ಹರ್ಷಣಸ್ತಥಾ ॥೩೯॥

ವಜ್ರಂ ಸಿದ್ಧಿರ್ವ್ಯತೀಪಾತೋ ವರೀಯಾನ್ ಪರಿಘಶ್ಶಿವಃ ।
ಸಿದ್ಧಸ್ಸಾಧ್ಯಶ್ಶುಭಂ ಶುಕ್ಲಂ [1] ಬ್ರಹ್ಮಐಂದ್ರಂ ಚ ವೈಧೃತೀ ॥೪೦॥

---

ಪ್ರೀತಿಕರವಾದ ನವಮೀ ತಿಥಿಯೂ ನನಗೆ ಸಕಲ ಸನ್ಮಂಗಳಗಳನ್ನೂ ಕರುಣಿಸಲಿ. ॥೩೩-೩೪-೩೫॥

ಧರ್ಮದೇವತಾಪ್ರಧಾನವಾದ ದಶಮೀ ತಿಥಿಯೂ, ರುದ್ರಾಭಿಮಾನಿಯಾದ ಏಕಾದಶಿಯೂ, ವಿಷ್ಣುಪ್ರೀತಿಕರವಾದ ದ್ವಾದಶಿಯೂ, ಮನ್ಮಥಪ್ರೀತಿಪ್ರದವಾದ ತ್ರಯೋದಶಿಯೂ, ಈಶ್ವರದೇವತಾಕವಾದ ಚತುರ್ದಶಿಯೂ, ಚಂದ್ರಪ್ರೀತಿಪ್ರದವಾದ ಪೂರ್ಣಿಮೆಯೂ ನನಗೆ ಸದಾ ಹಿತವನ್ನೇ ಕೋರುತ್ತಾ ಶಾಂತಿಯನ್ನು ಅನುಗ್ರಹಿಸಲಿ. ॥೩೬-೩೭॥

ವಿಷ್ಕಂಭ, ಪ್ರೀತಿ, ಆಯುಷ್ಮಾನ್, ಸೌಭಾಗ್ಯ, ಶೋಭನ, ಅತಿಗಂಡ, ಸುಕರ್ಮ, ಧೃತಿ, ಶೂಲ, ಗಂಡ, ವೃದ್ಧಿ, ಧ್ರುವ, ವ್ಯಾಘಾತ, ಹರ್ಷಣ, ವಜ್ರ, ಸಿದ್ಧಿ, ವ್ಯತೀಪಾತ, ವರೀಯಾನ್, ಪರಿಘ, ಶಿವ, ಸಿದ್ಧ, ಸಾಧ್ಯ, ಶುಭ, ಶುಕ್ಲ, ಬ್ರಹ್ಮ, ಐಂದ್ರ (ಮಾಹೇಂದ್ರ) ವೈಧೃತಿ ಎಂಬ ಈ ಇಪ್ಪತ್ತೇಳು ಯೋಗಗಳೂ

---

1 ಬ್ರಾಹ್ಮೋ ಮಾಹೇಂದ್ರ ಇತಿ ಪಾಠಾಂತರ.

ಇಂದ್ರಸ್ಯ ಭಾನೋರುತ್ಪನ್ನಾಹ್ಯೇತೇ ಯೋಗಾ ಮಹಾಬಲಾಃ ।
ಶಿವಶಕ್ತಿಯುತಾಸ್ಸರ್ವೇ ಶಿವಭಕ್ತಿವಿಧಾಯಿನಃ ॥೪೧॥

ಶಾಂತಿಂ ಕುರ್ವಂತು ಮೇ ನಿತ್ಯಂ ಶಿವಧ್ಯಾನಪರಾಯಣಾಃ ।
ಕೃತ್ತಿಕಾ ಪರಮಾ ದೇವೀ ರೋಹಿಣೀ ರುಚಿರಾನನಾ ॥೪೨॥

ಶ್ರೀಮಾನ್ ಮೃಗಶಿರಾ ಭದ್ರಾ ಆರ್ದ್ರಾ ಚ ಪರಮೋಜ್ವಲಾ ।
ಪುನರ್ವಸುಸ್ತಥಾ ಪುಷ್ಯಾ ಆಶ್ಲೇಷಾ ಚ ಮಹೋಜ್ಜ್ವಲಾ ॥೪೩॥

ನಕ್ಷತ್ರಮಾತರೋ ಹ್ಯೇತಾಃ ಪ್ರಭಾಮಾಲಾವಭಾಸ್ವರಾಃ ।
ಮಹಾದೇವಾರ್ಚನರತಾ ಮಹಾದೇವಾನುಭಾವಿತಾಃ ॥೪೪॥

ಪೂರ್ವಭಾಗೇ ಸ್ಥಿತಾಶ್ಚೇತಾಃ ಶಾಂತಿಂ ಕುರ್ವಂತು ಮೇ ಸದಾ ।
ಮಖಾ ಸರ್ವಗುಣೋಪೇತಾ ಪೂರ್ವಾ ಚೈವ ತು ಫಲ್ಗುನೀ ॥೪೫॥

ಉತ್ತರಾಫಲ್ಗುನೀಶ್ರೇಷ್ಠಾ ಹಸ್ತಾ ಚಿತ್ರಾ ತಥೋತ್ತಮಾ ।
ಸ್ವಾತೀ ವಿಶಾಖಾ ವರದಾ ದಕ್ಷಿಣಸ್ಥಾನಸಂಸ್ಥಿತಾಃ ॥೪೬॥

ಅರ್ಚಯಂತ್ಯಸ್ಸದಾಕಾಲಂ ದೇವಂ ತ್ರಿನಯನಂ ಪ್ರಭುಂ ।
ಮಮಾಪಿ ಶಾಂತಿಂ ಚೈವೈತಾಃ ಕುರ್ವಂತು ಶಿವಚೋದಿತಾಃ ॥೪೭॥

---

ಶಿವಶಕ್ತಿಯುತಗಳಾಗಿ, ನನಗೆ ಶಿವಭಕ್ತಿಯನ್ನು ಹೆಚ್ಚಿಸುತ್ತಾ ಶಾಂತಿಯನ್ನು ಅನುಗ್ರಹಿಸಲಿ. ॥೩೮-೩೯-೪೦-೪೧॥

ಮಹಾಪ್ರಭೆಯಿಂದ ಪ್ರಕಾಶಿಸುತ್ತಾ, ನಕ್ಷತ್ರಮಾತೃಗಳೆನಿಸಿದ ಕೃತ್ತಿಕಾ, ರೋಹಿಣೀ, ಮೃಗಶಿರ, ಆರ್ದ್ರಾ, ಪುನರ್ವಸು, ಪುಷ್ಯ, ಆಶ್ಲೇಷ, ಈ ಏಳು ನಕ್ಷತ್ರಗಳು ಪೂರ್ವಭಾಗದಲ್ಲಿ ಹೊಳೆಯುತ್ತಾ ಸದಾ ಈಶ್ವರಸೇವಾತತ್ಪರರಾಗಿರುವುವು. ಇಂತಹ ಮಹಾದೇವ ಪ್ರೀತಿಕರಗಳಾದ ಸಪ್ತನಕ್ಷತ್ರಗಳೂ ನನಗೆ ಶಾಂತಿಯನ್ನು ಕರುಣಿಸಲಿ. ॥೪೨-೪೩-೪೪-೪೫॥

ಹಾಗೆಯೇ ದಕ್ಷಿಣಸ್ಥಾನದಲ್ಲಿದ್ದು ಶಿವಾರ್ಚನೆಮಾಡುತ್ತಾ ಮಹಾತೇಜಸ್ವಿಗಳೆನಿಸಿದ, ಮಖಾ, ಪೂರ್ವಫಲ್ಗುನೀ, ಉತ್ತರಫಲ್ಗುನೀ, ಹಸ್ತ, ಚಿತ್ರಾ, ಸ್ವಾತೀ, ವಿಶಾಖಾ ಈ ಸಪ್ತನಕ್ಷತ್ರಗಳು ನನಗೆ ಶಾಂತಿಯನ್ನು ಅನುಗ್ರಹಿಸಲಿ. ॥೪೬-೪೭॥

ಅನೂರಾಧಾ ತಥಾ ಜ್ಯೇಷ್ಠಾ ಮೂಲಾ ಬುದ್ಧಿಸಮನ್ವಿತಾ ।
ಪೂರ್ವಾಷಾಢಾ ಮಹಾವೀರ್ಯಾ ಆಷಾಢಾ ಚೋತ್ತರಾ ಶುಭಾ ॥೪೮॥

ಅಭಿಜಿನ್ನಾಮ ನಕ್ಷತ್ರಂ ಶ್ರವಣಃ ಪರಮೋತ್ತಮಂ ।
ಏತಾಃ ಪಶ್ಚಿಮತೋ ದೀಪ್ತಾ ರಾಜಂತ್ಯಶ್ಚಾರುಮೂರ್ತಯಃ ॥೪೯॥

ಈಶಾನಂ ಪೂಜಯಂತ್ಯಸ್ತಾಃ ಸಾರ್ವಕಾಲಂ ಸುಮ್ಯೈಶ್ಶಿವೇ ।
ಪ್ರಶಾಂತಿಂ ಮಮ ಕುರ್ವಂತು ವಿಭೂತಿಂ ಚ ಸಮಾಹಿತಾಃ ॥೫೦॥

ಶ್ರವಿಷ್ಠಾ ಶತತಾರಾ ಚ ಪೂರ್ವಾಭಾದ್ರಪದಾ ತಥಾ ।
ಉತ್ತರಾಭಾದ್ರಾರೇವತ್ಯಶ್ವಿನೀ ಚಾಥ ಮಹಾರ್ಥಿಕಾ ॥೫೧॥

ಭರಣೀ ಚ ಮಹಾವೀರ್ಯಾ ನಿತ್ಯಮುತ್ತರತಸ್ಸ್ಥಿತಾಃ ।
ಶಿವಾರ್ಚನರತಾ ನಿತ್ಯಂ ಶಿವಧ್ಯಾನೈಕಮಾನಸಾಃ ॥೫೨॥

ಶಾಂತಿಂ ಕುರ್ವಂತು ಮೇ ನಿತ್ಯಂ ಸಾರ್ವಕಾಲಂ ಸುಖೋದಯಾಃ ।
ಅಥ ಮೇಷೋ ಮೃಗಾಧೀಶೋ ಧನುರ್ದೀಪ್ತಿಮತಾಂ ವರಃ ॥೫೩॥

ಪೂರ್ವೇಣ ಭಾಸಯಂತ್ಯನ್ಯೇ ಶಿವಪೂಜಾಪರಾಯಣಾಃ ।
ಶಾಂತಿಂ ಕುರ್ವಂತು ಮೇ ನಿತ್ಯಂ ಬಲಸೌಭಾಗ್ಯಮೇವ ಚ ॥೫೪॥

---

ಇದೇರೀತಿ ಸದಾ ಶಿವಾರ್ಚನೆಯಲ್ಲಿಯೇ ನಿರತರಾಗಿ, ಬಹುತೇಜಸ್ಸಿನಿಂದ ಶೋಭಿಸುವ, ಪಶ್ಚಿಮದಿಕ್ಕಿನಲ್ಲಿ ನೆಲಸಿ ಶಿವಾರಾಧನೆ ನಡೆಸುತ್ತಿರುವ, ಅನೂರಾಧ, ಜ್ಯೇಷ್ಠ, ಮೂಲ, ಪೂರ್ವಾಷಾಢ, ಉತ್ತರಾಷಾಢ, ಅಭಿಜಿತ್, ಶ್ರವಣ, ಈ ಏಳು ನಕ್ಷತ್ರಗಳು ನನಗೆ ಐಶ್ವರ್ಯವನ್ನೂ ಶಾಂತಿಯನ್ನೂ ದಯಪಾಲಿಸಲಿ. ॥೪೮-೪೯-೫೦॥

ಉತ್ತರದಿಕ್ಕಿನಲ್ಲಿ ಮಹಾತೇಜಸ್ಸಿನಿಂದ ಹೊಳೆಯುತ್ತಾ ಶಿವಾರ್ಚನೆಯಲ್ಲಿಯೇ ನಿರತರಾಗಿ, ಶಿವಧ್ಯಾನಾಸಕ್ತಗಳಾಗಿರುವ ಧನಿಷ್ಠಾ, ಶತಭಿಷಾ, ಪೂರ್ವಾಭಾದ್ರಾ, ಉತ್ತರಾಭಾದ್ರ, ರೇವತಿ, ಅಶ್ವಿನೀ, ಭರಣೀ ಎಂಬ ಈ ಏಳುನಕ್ಷತ್ರಗಳು ನನಗೆ ಸಾರ್ವಕಾಲಿಕವಾದ ಶಾಂತಿಯನ್ನು ಕರುಣಿಸಲಿ. ॥೫೧-೫೨॥

ಮೇಷಾದಿ ದ್ವಾದಶರಾಶಿಗಳಲ್ಲಿ, ಮೇಷ, ಸಿಂಹ, ಧನುಸ್ಸೆಂಬ ಮೂರು ರಾಶಿಗಳು ಪೂರ್ವದಿಕ್ಕಿನಲ್ಲಿ ನೆಲಸಿ ಸದಾ ಶಿವಪೂಜಾನಿರತಗಳಾಗಿರುವುವು. ಇಂತಹ ರಾಶಿತ್ರಯಗಳು ನನಗೆ ಬಲವನ್ನೂ ಪುಷ್ಟಿಯನ್ನೂ ದಯಪಾಲಿಸಲಿ. ॥೫೩-೫೪॥

ವೃಷಃ ಕನ್ಯಾ ಚ ವರದಾ ಮಕರಶ್ಚ ಮಹಾರ್ಥಿಕಃ ।
ಹರಪಾದರತಾ ನಿತ್ಯಂ ಶಿವಭಾವೇನ ಭಾವಿತಾಃ ॥೫೫॥

ಏತೇ ದಕ್ಷಿಣದಿಕ್ಸಂಸ್ಥಾಃ ಪೂಜಯಂತಿ ಸದಾಶಿವಂ ।
ಭಕ್ತ್ಯಾ ಚ ಪರಯಾ ನಿತ್ಯಂ ಶಾಂತಿಂ ಕುರ್ವಂತು ಮೇ ಸದಾ ॥೫೬॥

ಮಿಥುನಂ ಚ ತುಲಾಕುಂಭೌ ಪಶ್ಚಿಮಸ್ಯಾಂ ದಿಶಿ ಸ್ಥಿತಾಃ ।
ಶಿವಪಾದಾರ್ಚನರತಾಃ ಶಾಂತಿಂ ಕುರ್ವಂತು ಮೇ ಸದಾ ॥೫೭॥

ಕರ್ಕಟೋ ವೃಶ್ಚಿಕೋ ಮೀನೋ ಹ್ಯೇತಾ ಉತ್ತರತಸ್ಸ್ಥಿತಾಃ ।
ಯಜಂತ್ಯೇತೇ ಸದಾ ಕಾಲಂ ರುದ್ರಂ ಭುವನನಾಯಕಂ ॥೫೮॥

ಶಾಂತಿಂ ಕುರ್ವಂತು ಮೇ ನಿತ್ಯಂ ಶಿವಜ್ಞಾನವಿಧಾಯಿನಃ ।
ಋಷಯಸ್ಸಪ್ತ ವಿಖ್ಯಾತಾ ಧ್ರುವಾಂತಾಃ ಪಠನೋಜ್ಜ್ವಲಾಃ ॥೫೯॥

ಭಸ್ಮರುದ್ರಾಕ್ಷಭೂಷಾಢ್ಯಾಸ್ತ್ರಿಪುಂಡ್ರಪರಿಮಂಡಿತಾಃ ।
ಶಿವಲಿಂಗಾರ್ಚನಪರಾಸ್ತ್ರಿಕಾಲಮಮಿತೌಜಸಃ ॥೬೦॥

---

ಇದೇ ರೀತಿ, ವೃಷಭ, ಕನ್ಯಾ, ಮಕರ ಎಂಬ ಮೂರು ರಾಶಿಗಳು ದಕ್ಷಿಣ ದಿಗ್ಭಾಗದಲ್ಲಿ ನೆಲಸಿ ಹರಪಾದಾರ್ಚನಾಸಕ್ತಗಳಾಗಿವೆ. ಈ ರಾಶಿಗಳು ನನಗೆ ಸರ್ವದಾ ಸುಖಶಾಂತಿಗಳನ್ನು ಅನುಗ್ರಹಿಸಲಿ. ||೫೫-೫೬||

ಮಿಥುನ, ತುಲಾ, ಕುಂಭರಾಶಿಗಳು ಪಶ್ಚಿಮದಿಕ್ಕಿನಲ್ಲಿಯೂ, ಕರ್ಕಾಟಕ ವೃಶ್ಚಿಕ, ಮೀನರಾಶಿಗಳು ಉತ್ತರದಿಕ್ಕಿನಲ್ಲಿಯೂ, ಶಿವಪೂಜಾಬಲದಿಂದ ತೇಜಸ್ವಿಗಳಾಗಿ ಶೋಭಿಸುತ್ತಿರುವುವು. ಇಂತಹ ಶಿವಪೂಜಾಧುರಂಧರರಾದ ದ್ವಾದಶರಾಶಿಗಳೂ ನನಗೆ ಚಿರಶಾಂತಿಯನ್ನು ಕರುಣಿಸಲಿ. ||೫೭-೫೮||

ಧ್ರುವನಕ್ಷತ್ರದ ಸುತ್ತಮುತ್ತಲೂ ನಕ್ಷತ್ರರೂಪದಿಂದ ಸಂಚರಿಸುವ ಸಪ್ತಋಷಿಗಳೇ ಮೊದಲಾದ ಋಷಿಗಳು, ಭಸ್ಮರುದ್ರಾಕ್ಷಧಾರಿಗಳಾಗಿಯೂ ಭಸ್ಮತ್ರಿಪುಂಡ್ರಧಾರಣೆಯಿಂದ ವಿರಾಜಿಸುವವರಾಗಿಯೂ ಕಂಡುಬರುವರು. ಅವರು ಸದಾ ಶಿವಲಿಂಗಾರ್ಚನೆಯಲ್ಲಿಯೇ ತ್ರಿಕಾಲಗಳನ್ನೂ ಕಳೆಯುತ್ತಿರುವರು. ಅವರಲ್ಲಿ ಅತಿ ಮಹಿಮಾಶಾಲಿಗಳಾದ ಋಷಿಗಳೆಂದರೆ, ಕಶ್ಯಪ, ಗಾಲವ, ಗಾರ್ಗ್ಯ, ವಿಶ್ವಾಮಿತ್ರ, ಮಹಾಮುನಿ, ಭೃಗು, ದಕ್ಷ, ವಸಿಷ್ಠ, ಮೃಕಂಡು, ಪುಲಹ, ಕ್ರತು, ನಾರದ, ಮನು,

ಕಶ್ಯಪೋ ಗಾಲವೋ ಗಾರ್ಗ್ಯೋ ವಿಶ್ವಾಮಿತ್ರೋ ಮಹಾಮುನಿಃ ।
ಭೃಗುರ್ದಕ್ಷೋ ವಸಿಷ್ಠಶ್ಚ ಮೃಕಂಡುಃ ಪುಲಹಃ ಕ್ರತುಃ ॥೬೧॥

ನಾರದೋ ಮನುರತ್ರಿಶ್ಚ ಭರದ್ವಾಜೋಂಗಿರಾಮುನಿಃ ।
ವಾಲ್ಮೀಕಿಃ ಕೌಶಿಕಃ ಕಣ್ವಶ್ಶಾಕಲ್ಯೋಥ ಪುನರ್ವಸುಃ ॥೬೨॥

ಶಾಲಂಕಾಯನ ಇತ್ಯಾದ್ಯಾ ಮುನಯೋಥ ತಪಸ್ವಿನಃ ।
ಶಿವಾರ್ಚನರತಾ ನಿತ್ಯಂ ಶಾಂತಿಂ ಕುರ್ವಂತು ಮೇ ಸದಾ ॥೬೩॥

ಋಷಿಪತ್ನ್ಯೋ ಮಹಾಭಾಗಾಃ ಋಷಿಕನ್ಯಾಃ ಕುಮಾರಕಾಃ ।
ಶಿವಾರ್ಚನರತಾ ನಿತ್ಯಂ ಶಾಂತಿಂ ಕುರ್ವಂತು ಮೇ ಸದಾ ॥೬೪॥

ಕುರ್ವಂತು ಶಾಂತಿಂ ವಿವಿಧಾಃ ಸುರೋತ್ತಮಾಃ
ಶಿವಾರ್ಚಕಾ ಭಸ್ಮತ್ರಿಪುಂಡ್ರಭೂಷಿತಾಃ ।
ಲಿಂಗಾರ್ಚಕಾಶ್ಶಾಶ್ವತಧರ್ಮಯುಕ್ತಾಃ
ಪೂಜ್ಯಾ ಭವಂತ್ಯೇವ ಶಿವಪ್ರಸಾದಾತ್ ॥೬೫॥

---

ಅತ್ರಿ, ಭರದ್ವಾಜ, ಅಂಗಿರಸ್ಸು, ವಾಲ್ಮೀಕಿ, ಕೌಶಿಕ, ಕಣ್ವ, ಶಾಕಲ್ಯ, ಪುನರ್ವಸು, ಶಾಲಂಕಾಯನ ಇವರೇ ಮೊದಲಾದವರು. ಇಂತಹ ಶಿವಪೂಜಾಪರಾಯಣರೂ, ತಪಸ್ವಿಗಳೂ ಆದ ಋಷಿಜನರು ನನಗೆ ಸುಜ್ಞಾನವನ್ನೂ, ದಿವ್ಯತೇಜಸ್ಸನ್ನೂ, ಶಾಂತಿಯನ್ನೂ ಕರುಣಿಸಲಿ. (ಅ-೬೧-೬೨-೬೩-೬೪)

ಇದೇ ಶಿವಾರ್ಚನೆಯಿಂದಲೂ, ಶಿವಧ್ಯಾನದಿಂದಲೂ, ಶಾಂಭವರ ಸತ್ಕಾರಾದಿಗಳಿಂದಲೂ ಮಹಾಮಹಿಮರೆನಿಸಿಕೊಂಡಿರುವ ಋಷಿಪತ್ನಿಯರೂ, ಋಷಿಕನ್ನಿಕೆಯರೂ, ಋಷಿಕುಮಾರಕರೂ ನನಗೆ ಸರ್ವದಾ ಶಾಂತಿಯನ್ನು ಅನುಗ್ರಹಿಸುತ್ತಿರಲಿ. ಮೇಲೆ ಹೇಳಿದ ಗ್ರಹ, ನಕ್ಷತ್ರ, ರಾಶಿ, ಋಷಿಗಣಗಳಲ್ಲದೆ ದೇವಯೋನಿಗಳೆನಿಸಿ, ಸದಾ ಭಸ್ಮತ್ರಿಪುಂಡ್ರಗಳಿಂದಲೂ, ಶಿವಲಿಂಗಾರ್ಚನೆಯಿಂದಲೂ, ಶಾಶ್ವತವಾದ ಧರ್ಮಾಚರಣೆಯಿಂದಲೂ, ಶಿವಾನುಗ್ರಹವನ್ನು ಸಂಪಾದಿಸಿ, ತನ್ಮೂಲಕ ಮಹಾತ್ಮರೆನಿಸಿಕೊಂಡಿರುವ ಸಕಲರೂ, ನಮಗೆ ಶಾಶ್ವತವೂ ಮಂಗಳಕರವೂ ಆದ ನಿತ್ಯಾನಂದವನ್ನು ಕರುಣಿಸಿ, ನಮ್ಮ ಪಾಪರಾಶಿಯನ್ನೆಲ್ಲಾ ನಿವಾರಿಸಲಿ ಎಂದು ಸಕಲ ಶೈವ

**ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಶಾಂತ್ಯಧ್ಯಾಯ ನಿರೂಪಣಂ ನಾಮ ಏಕೋನ ಚತ್ವಾರಿಂಶೋಽಧ್ಯಾಯಃ**

---

ದೇವತೆಗಳನ್ನೆಲ್ಲಾ ಮಾನವರು ಶಾಂತಿಪ್ರಾಪ್ತಿಗಾಗಿ ಪ್ರಾರ್ಥಿಸಬೇಕು" ಎಂದು ಶಂಕರನು ಪಾರ್ವತಿಗೆ ಶಾಂತ್ಯಧ್ಯಾಯಭಾಗವನ್ನು ವಿವರಿಸಿ ತಿಳಿಸಿದನು. ||೬೪-೬೫||

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಾಂತ್ಯಧ್ಯಾಯ ನಿರೂಪಣೆಯೆಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಚತ್ವಾರಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

**ಸಿದ್ಧಾಶ್ಚ ಶುದ್ಧತಪಸೋ ಗಂಧರ್ವಾಪ್ಸರಸಾಂ ಗಣಾಃ ।**
**ವಿದ್ಯಾಧರಾ ಮಹಾತ್ಮಾನೋ ಗರುಡಶ್ಚ ಮಹಾರ್ಥಿಕಾಃ ॥೧॥**

**ಸಿದ್ಧಿಮಾಶು ಪ್ರಯಚ್ಛಂತು ಶಿವಧರ್ಮಪರಾಯಣಾಃ ॥೨॥**

**ನಮುಚಿರ್ದೈತ್ಯರಾಜೇಂದ್ರಃ ಶಂಭುಪೂಜಾಪರಾಯಣಃ ।**
**ಮಹಾನಾದೋಽಪಿ ವಿಖ್ಯಾತೋ ದೈತ್ಯಃ ಪರಮವೀರ್ಯವಾನ್ ॥೩॥**

**ಹಾಟಕೇಶ್ವರದೇವಸ್ಯ ನಿತ್ಯಂ ಪೂಜಾಪರಾಯಣಃ ।**
**ಬಲಂ ವೀರ್ಯಂ ಚ ಮೇ ಕ್ಷಿಪ್ರಂ ಪ್ರಯಚ್ಛಂತು ಮಹಾರ್ಥಿಕಾಃ ॥೪॥**

---

## ನಲವತ್ತನೆಯ ಅಧ್ಯಾಯ

ಪರಶಿವನು ಮತ್ತೆ ಪಾರ್ವತಿಗೆ ಶಾಂತ್ಯಧ್ಯಾಯ ಭಾಗವನ್ನು ಮುಂದುವರಿಸುತ್ತಾ ಹೀಗೆ ನುಡಿದನು. “ಶುದ್ಧವಾದ ತಪಸ್ಸಿನಿಂದ ತಪಸ್ಸಿದ್ಧಿಯನ್ನು ಪಡೆದು ಮಹಿಮಾಶಾಲಿಗಳಾದ ಸಿದ್ಧಪುರುಷರೂ, ಗಂಧರ್ವರೂ, ಅಪ್ಸರಸ್ಸುಗಳೂ, ವಿದ್ಯಾಧರರೂ, ಗರುಡರೂ, ಇನ್ನೂ ಮಹೇಶ್ವರಾರ್ಚಕರಾದ ಮಾಹೇಶ್ವರರೂ, ಶಿವಧರ್ಮಪರಾಯಣರಾದವರೆಲ್ಲರೂ ನನಗೆ ಚಿರಶಾಂತಿಯನ್ನು ಕರುಣಿಸಲಿ. ॥೧-೨॥

ರಾಕ್ಷಸರಲ್ಲಿ ಶಂಭುಪೂಜಾಪರಾಯಣನಾದ ನಮುಚಿಯೆಂಬ ರಾಕ್ಷಸರೂ, ದೈತ್ಯವೀರನಾದ ಮತ್ತು ಹಾಟಕೇಶ್ವರ ಪೂಜಾಸಕ್ತನಾದ ಮಹಾನಾದನೂ, ನನಗೆ

ಮಹಾಜಂಭೋ ಹಯಗ್ರೀವೋ ಪ್ರಹ್ಲಾದೋ ದೈತ್ಯಪುಂಗವಃ ।
ತಾರಕಾಗ್ನಿಮುಖಾ ದೈತ್ಯಾಃ ಕಾಲನೇಮಿರ್ಮಹಾಬಲಃ ॥೫॥

ಏತೇ ದೈತ್ಯಾ ಮಹಾತ್ಮಾನಃ ಶಿವಸದ್ಭಾವಭಾವಿತಾಃ ।
ಪುಷ್ಟಿಂ ಬಲಂ ತಥಾ ವೀರ್ಯಂ ಪ್ರಯಚ್ಛಂತು ಚ ಮೇ ಸುಖಂ ॥೬॥

ವೈರೋಚನೋ ಹಿರಣ್ಯಾಕ್ಷಃ ಸುಪರ್ಣಾ ಚ ಸುಲೋಮಕಃ ।
ಮುಚುಕುಂದ ಸ್ಸುಕಂಸಶ್ಚ ದೈತ್ಯೋ ರೋಚನಕಸ್ತಥಾ ॥೭॥

ಭಾವೇನ ಪರಮೇಣಾಶು ಯಜಂತಸ್ಸರ್ವದಾ ಶಿವಂ ।
ಸತತಂ ಶಿವಭಾವೇನ ಪುಷ್ಟಿಂ ಕುರ್ವಂತು ಮೇ ಸದಾ ॥೮॥

ಆರಕ್ತೇನ ಶರೀರೇಣ ರಕ್ತಾಂತಾಯತಲೋಚನಃ ।
ಮಹಾಭಾಗಕೃತಾಟೋಪಶಂಖಾಬ್ಜಕೃತಲಾಂಛನಃ ॥೯॥

ಅನಂತೋ ನಾಗರಾಜೇಂದ್ರಃ ಶಿವಪಾದಾರ್ಚನೇ ರತಃ ।
ಮಹಾಪಾಪವಿಷಂ ಹತ್ವಾ ಶಾಂತಿಮಾಶು ಕರೋತು ಮೇ ॥೧೦॥

---

ಬಲ, ಶೌರ್ಯ ಮುಂತಾದ ಇಷ್ಟಾರ್ಥಗಳನ್ನೆಲ್ಲಾ ಕೊಟ್ಟು ಸಲಹಲಿ, ಎಂದು ಶಾಂಭವ ರಾದ ದೈತ್ಯರನ್ನೂ ಪ್ರಾರ್ಥಿಸಬೇಕು. ॥೩-೪॥

ಮಹಾಜಂಬ, ಹಯಗ್ರೀವ, ಪ್ರಹ್ಲಾದ, ತಾರಕಾಸುರರು, ಕಾಲನೇಮಿ, ಮಹಾಬಲ ಇವರೇ ಮೊದಲಾದ ಶಿವಸದ್ಭಾವನೆಯನ್ನು ಹೊಂದಿರುವ ಮಹಾತ್ಮರು ನನಗೆ ಪುಷ್ಟಿ, ಬಲ, ಶೌರ್ಯ, ಸುಖ ಇವುಗಳನ್ನು ದಯಪಾಲಿಸಲಿ. ॥೫-೬॥

ವೈರೋಚನ, ಹಿರಣ್ಯಾಕ್ಷ, ಸುಪರ್ಣಾ, ಸುಲೋಮ, ಮುಚುಕುಂದ, ಸುಕಂಸ, ರೋಚನಕ ಇವರೇ ಮೊದಲಾದ ಶಿವಪೂಜಕರಾದ ರಾಕ್ಷಸಶ್ರೇಷ್ಠರು ನನಗೆ ಸರ್ವದಾ ಹೃಷ್ಟಪುಷ್ಟ್ಯಾದಿಗಳನ್ನು ಕರುಣಿಸಲಿ ॥೭-೮॥

ಕೆಂಪಾದ ದೇಹದಿಂದಲೂ, ರಕ್ತವರ್ಣದ ಲೋಚನಗಳಿಂದಲೂ, ಶಂಖ, ಕಮಲ ಇವೇ ಮೊದಲಾದ ಚಿಹ್ನೆಗಳಿಂದಲೂ ಶೋಭಿಸುತ್ತಾ ಪಾತಾಳಲೋಕದಲ್ಲಿ ಸದಾ ಶಿವನನ್ನೇ ಪೂಜಿಸುತ್ತಿರುವ ನಾಗರಾಜನಾದ ಆದಿಶೇಷನು, ಮಹಾಪಾಪವೆಂಬ ವಿಷವೇಗವನ್ನು ನಾಶಗೊಳಿಸಿ ನಮಗೆ ಮನಶ್ಶಾಂತಿಯನ್ನು ಕರುಣಿಸಲಿ. ॥೯-೧೦॥

ಸುಶ್ವೇತೇನ ಶರೀರೇಣ ಸಂಶ್ವೇತೋತ್ಪಲಶೇಖರಃ ।
ಚಾರುಭೋಗಕೃತಾಟೋಪಶ್ಚಾರುಹಾರವಿಭೂಷಣಃ ॥೧೧॥

ವಾಸುಕಿರ್ನಾಗರಾಜೇಂದ್ರಃ ಶಿವಪಾದಾರ್ಚನೇ ರತಃ ।
ಸರ್ವರೋಗವಿಷಂ ಹತ್ವಾ ಕ್ಷೇಮಾರೋಗ್ಯಂ ದದಾತು ಮೇ ॥೧೨॥

ಅತಿಪೀತೇನ ದೇಹೇನ ಪ್ರಸ್ಫುರದ್ಭೋಗಸಂಪದಾ ।
ತೇಜಸಾ ಚಾತಿದೀಪ್ತೇನ ಕೃತಸ್ವಸ್ತಿಕಲಕ್ಷಣಃ ೧೩॥

ನಾಗೇಂದ್ರಸ್ತಕ್ಷಕಃ ಶ್ರೀಮಾನ್ ನಾಗಕೋಟ್ಯಾ ಸಮನ್ವಿತಃ ।
ಕರೋತು ಮೇ ಮಹಾಶಾಂತಿಂ ಸರ್ವಸರ್ಪವಿಷಾಪಹಂ ॥೧೪॥

ಅತಿಕೃಷ್ಣೇನ ದೇಹೇನ ಸ್ಫುರದ್ವಿಕಟಮಸ್ತಕಃ ।
ಕಂಠರೇಖಾತ್ರಯೋಪೇತೋ ಘೋರದಂಷ್ಟ್ರಾಯುಧೋದ್ಧತಃ ॥೧೫॥

ಕರ್ಕೋಟಕೋ ಮಹಾತೇಜಾ ವಿಷದರ್ಪಸಮನ್ವಿತಃ ।
ವಿಷ ಶಸ್ತ್ರಾದಿಸಂತಾಪಂ ಹತ್ವಾ ಶಾಂತಿಂ ಕರೋತು ಮೇ ॥೧೬॥

---

ಶುಭ್ರವಾದ ಶರೀರದಿಂದಲೂ, ಬಿಳಿಯ ನೈದಿಲೆಹೂವನ್ನು ಧರಿಸಿರುವುದರಿಂದಲೂ ಅತ್ಯಂತ ಸುಂದರನಾದ ನಾಗರಾಜನಾದ ವಾಸುಕಿಯು ಹಾರಾದಿಗಳಿಂದ ಅಲಂಕೃತನಾಗಿ, ಶಿವಪಾದಾರ್ಚನೆಮಾಡುತ್ತಾ ಮಹಾತ್ಮನೆನಿಸಿರುವನು. ಅಂತಹ ವಾಸುಕಿಯು ಸರ್ವರೋಗವಿಷವನ್ನು ನಿವಾರಿಸಿ ನನಗೆ ಕ್ಷೇಮಾರೋಗ್ಯಾದಿಗಳನ್ನು ಕರುಣಿಸಲಿ. ॥೧೧-೧೨॥

ಹೊಂಬಣ್ಣದ ನೀಳವಾದ ದೇಹದಿಂದ ಕೂಡಿ ಬಹಳವಾಗಿ ಹೊಳೆಯುತ್ತಾ ಸ್ವಸ್ತಿಕ ಚಿಹ್ನೆಯನ್ನು ಪಡೆದಿರುವ ತಕ್ಷಕನೆಂಬ ನಾಗರಾಜನು ತನ್ನ ಅನೇಕ ನಾಗದೇವತೆಗಳಿಂದ ಕೂಡಿ ಮಹಾವಿಷನಿವಾರಣಾತ್ಮಕವಾದ ಮಹಾಶಾಂತಿಯನ್ನು ಕರುಣಿಸಲಿ. ॥೧೩-೧೪॥

ಕಪ್ಪಾದ ಶರೀರದಿಂದಲೂ, ಭಯಂಕರವಾದ ಮುಖದಿಂದಲೂ, ಕತ್ತಿನಲ್ಲಿ ರೇಖಾತ್ರಯದಿಂದಲೂ ಆಯುಧಗಳಂತಿರುವ ಕೋರೆ ಹಲ್ಲುಗಳಿಂದಲೂ, ಭಯಂಕರವಾಗಿ ಕಾಣುತ್ತಲಿರುವ ಕರ್ಕೋಟಕವೆಂಬ ಮಹಾವಿಷಸರ್ಪವು ನನಗೆ ವಿಷಶಸ್ತ್ರಾದಿಗಳ ಸಂತಾಪವನ್ನು ಹೋಗಲಾಡಿಸಿ ಶಾಂತಿಯನ್ನು ಕರುಣಿಸಲಿ. ॥೧೫-೧೬॥

ಪದ್ಮವರ್ಣೇನ ದೇಹೇನ ಪದ್ಮಪತ್ರಾಯತೇಕ್ಷಣಃ ।
ಪದ್ಮಬಿಂದುಕೃತಾಭಾಸೋ ಗ್ರೀವಾಯಾಮೇಕರೇಖಯಾ ॥೧೭॥

ಖ್ಯಾತಃ ಪದ್ಮೋ ಮಹಾನಾಗೋ ಹರಪಾದಾರ್ಚನೇ ರತಃ ।
ಕರೋತು ಮೇ ಮಹಾಶಾಂತಿಂ ಮಹಾಪಾಪವಿಪಕ್ಷಯಂ ॥೧೮॥

ಪುಂಡರೀಕನಿಭೇನಾಪಿ ದೇಹೇನಾಮಿತತೇಜಸಾ ।
ಶಂಖಶೂಲಾಬ್ಜರುಚಿರೈರ್ಭೂಷಿತೋ ಮೂರ್ಧ್ನಿ ಬಿಂದುಭಿಃ ॥೧೯॥

ಮಹಾಪದ್ಮೋ ಮಹಾನಾಗೋ ಹರಪಾದಾರ್ಚನೇ ರತಃ ।
ವಿನಿಹತ್ಯ ವಿಷಂ ಘೋರಂ ಶಾಂತಿಮಾಶು ಕರೋತು ಮೇ ॥೨೦॥

ಅತಿಗೌರೇಣ ದೇಹೇನ ಚಂದ್ರಾರ್ಧಕೃತಶೇಖರಃ ।
ದೀಪ್ತಭೋಗಕೃತಾಟೋಪಃ ಶಂಭುಲಕ್ಷಣಲಕ್ಷಿತಃ ॥೨೧॥

ಸುಬ್ರಹ್ಮಣ್ಯೋ ಮಹಾನಾಗಶ್ಚಾನ್ನದಾನಧುರಂಧರಃ ।
ಪಾಪಾಪಹಾಲೋಕಪೂಜ್ಯಃ ಸದಾಶಿವಪದಾರ್ಚಕಃ ॥೨೨॥

ಕಮಲದಂತೆ ಕೆಂಪಾಗಿ, ಕಮಲದ ಎಲೆಯಂತೆ ಕಣ್ಣುಗಳುಳ್ಳ, ಪದ್ಮದ ಬಿಂದುಗಳಂತೆ ಹೊಳೆಯುವ, ಕತ್ತಿನಲ್ಲಿ ಒಂದೇ ಒಂದು ರೇಖೆಯುಳ್ಳ ಪದ್ಮನಾಮಕವಾದ ಮಹಾನಾಗವು ಶಿವಪಾದಾರ್ಚನೆಯಲ್ಲಿ ನಿರತನಾಗಿ ನನಗೆ ಮಹಾಪಾಪನಾಶಕವಾದ ಸ್ಥಿರಶಾಂತಿಯನ್ನು ಒದಗಿಸಿ ರಕ್ಷಿಸಲಿ. ॥೧೭-೧೮॥

ಬಿಳಿಯ ಕಮಲದಂತೆ ಶುಭ್ರದೇಹದಿಂದ ಹೊಳೆಯುತ್ತಾ, ಶಂಖ, ತ್ರಿಶೂಲ, ಕಮಲ ಇವುಗಳ ಚಿಹ್ನೆಯನ್ನು ಶಿರಸ್ಸಿನಲ್ಲಿ ತಳೆದು, ಬಿಂದುಭರಿತವಾದ ದೇಹದಿಂದ ಪ್ರಕಾಶಿಸುವ ಮಹಾಪದ್ಮನಾಮಕನಾದ ನಾಗಶ್ರೇಷ್ಠವು ಪಾಪವೆಂಬ ಘೋರವಿಷವನ್ನು ಪರಿಹರಿಸಿ ನನಗೆ ಶಾಂತಿಯನ್ನು ಕರುಣಿಸಲಿ. ॥೧೯-೨೦॥

ಶುಭ್ರವಾಗಿ ಬಿಳುಪಾಗಿರುವ ಅರ್ಧಚಂದ್ರಧಾರಿಯಾಗಿ, ಪ್ರಕಾಶದಿಂದ ಶೋಭಿಸುವ, ಶಿವಲಿಂಗದ ಲಕ್ಷಣವುಳ್ಳ ಮತ್ತು ಅನ್ನದಾನದಲ್ಲಿ ಅಗ್ರೇಸರನೆನಿಸಿದ ಸುಬ್ರಹ್ಮಣ್ಯನಾಮಕನಾದ ನಾಗರಾಜನು ಪಾಪನಿವಾರಣೆಯಲ್ಲಿ ಸಮರ್ಥನಾಗಿ ಶಿವಪಾದಾರ್ಚನೆಯಿಂದ ಶ್ರೇಷ್ಠನೆನಿಸಿ ನನ್ನ ಘೋರ ಪಾಪವನ್ನು ನಿವಾರಿಸಿ ಶಾಂತಿಯನ್ನುಂಟುಮಾಡಲಿ. ॥೨೧-೨೨॥

ವಿನಿಹತ್ಯ ವಿಷಂ ಘೋರಂ ಶಾಂತಿಂ ಮಮ ಕರೋತ್ವಲಂ ।
ಶ್ಯಾಮೇನ ದೇಹರಾಗೇಣ ಶ್ರೀಮಾನ್ ಕಮಲಲೋಚನಃ ।
ವಿಷದರ್ಪಬಲೋಪೇತೋ ಗ್ರೀವಾಯಾಮೇಕರೇಖಯಾ ॥೨೩॥

ಶಂಖಪಾಲಃ ಶ್ರಿಯಾ ದೀಪ್ತ್ಯಾ ಶಿವಪಾದಾಬ್ಜಪೂಜಕಃ ।
ಮಹಾವಿಷಂ ಮಹಾಘೋರಂ ಶಾಂತಿಮಾಶು ಕರೋತು ಮೇ ॥೨೪॥

ಗುಳಿಕೋ ನಾಗರಾಜೇಂದ್ರೋ ನಿತ್ಯಂ ಹರಪರಾಯಣಃ ।
ಅಪಹೃತ್ಯ ವಿಷಂ ಘೋರಂ ಕರೋತು ವಿಷಶಾಂತಿಕಂ ॥೨೫॥

ಅಂತರಿಕ್ಷಚರಾ ನಾಗಾಃ ಯೇ ನಾಗಾ ಭುವಿ ಸಂಸ್ಥಿತಾಃ ।
ಪಾತಾಲೇ ಸಂಸ್ಥಿತಾ ನಾಗಾಃ ಸರ್ವೇಽಪ್ಯತ್ರ ಸಮನ್ವಿತಾಃ ॥೨೬॥

ರುದ್ರಪಾದಾರ್ಚನೋದ್ಯುಕ್ತಾಃ ಶಾಂತಿಂ ಕುರ್ವಂತು ಮೇ ಸದಾ ।
ನಾಗಿನ್ಯೋ ನಾಗಕನ್ಯಾಶ್ಚ ತಥಾ ನಾಗಕುಮಾರಕಾಃ ॥೨೭॥

ಶಿವಭಕ್ತಾಃ ಸುಮನಸಃ ಶಾಂತಿಂ ಕುರ್ವಂತು ಮೇ ಸದಾ ।
ಯ ಇದಂ ನಾಗಸಂಸ್ಥಾನಂ ಕೀರ್ತಯೇದ್ವಾ ಶ್ರುತೋ ತು ವಾ॥೨೮॥

---

ಶ್ಯಾಮಲವರ್ಣದ ಶರೀರರಾಗದಿಂದಲೂ, ಕಮಲದಂತೆ ವಿಶಾಲವಾದ ನೇತ್ರದಿಂದಲೂ, ಕತ್ತಿನಲ್ಲಿ ಕಂಡುಬರುವ ಏಕರೇಖೆಯಿಂದಲೂ, ವಿಷದರ್ಪಬಲದಿಂದಲೂ ಶೋಭಿಸುವ ಶಂಖಪಾಲನು ಶಿವಪಾದಪೂಜೆಯಿಂದ ಪೂಜ್ಯನೆನಿಸಿ ಘೋರವಿಷಭಯವನ್ನು ತಪ್ಪಿಸಿ ನನ್ನನ್ನುದ್ಧರಿಸಲಿ. ॥೨೩, ೨೪॥

ಗುಲಿಕವೆಂಬ ನಾಗರಾಜನು ನಿತ್ಯವೂ ಶಿವಪೂಜಾಪರಾಯಣನೆನಿಸಿರುವನು. ಅಂತಹ ದೇವದೇವನು ನನಗೆ ವಿಷಭಯವನ್ನು ತಪ್ಪಿಸಿ ಶಾಂತಿಯನ್ನು ಕಲ್ಪಿಸಲಿ. ಇದಲ್ಲದೆ ಭೂಮ್ಯಂತರಿಕ್ಷಪಾತಾಳಲೋಕಗಳಲ್ಲಿ ಸಂಚರಿಸುವ ಸಮಸ್ತ ನಾಗದೇವತೆಗಳೂ ಶಿವಪಾದಸೇವೆಗೈಯ್ಯುತ್ತಾ, ಮಹಾಮಹಿಮೆಯನ್ನು ಪಡೆದು ನನಗೆ ಸ್ಥಿರವಾದ ಶಾಂತಿಯನ್ನು ಕರುಣಿಸಲಿ. ॥೨೫-೨೬॥

ಹಾಗೆಯೇ ನಾಗಲೋಕದಸ್ತ್ರೀಯರೂ, ಕುಮಾರಕರೂ, ಸದಾ ಪ್ರಶಸ್ತವಾದ ಮನಸ್ಸಿನಿಂದ ಕೂಡಿ ಶಿವಸೇವೆಗೈಯ್ಯುತ್ತಾ ನನಗೆ ಚಿರಶಾಂತಿಯನ್ನು ದೊರಕಿಸಲಿ. ಅದೂಅಲ್ಲದೆ ಈ ನಾಗಪ್ರಾರ್ಥನಾರೂಪವಾದ ಈ ಸ್ತುತಿರತ್ನವನ್ನು ಯಾವನು

ನ ತಂ ನಾಗಾ ವಿಹಿಂಸಂತಿ ವಿಷಂ ನಾಕ್ರಮತೇ ತಥಾ ।
ಗಂಗಾ ಪುಣ್ಯಾ ಮಹಾದೇವೀ ಯಮುನಾ ನರ್ಮದಾ ನದೀ ॥೨೯॥

ಗೋಮತೀ ಚಾಪಿ ಕಾವೇರೀ ವರುಣಾ ದೇವಿಕಾ ತಥಾ
ಸರ್ವಭೂತಪತಿಂ ದೇವಂ ಪರಮೇಶಂ ಮಹೇಶ್ವರಂ ।
ಪೂಜಯಂತಿ ಸದಾ ನದ್ಯಃ ಸದಾ ತದ್ಧ್ಯಾನಮಾಸ್ಥಿತಾಃ
ಶಾಂತಿಂ ಕುರ್ವಂತು ಮೇ ನಿತ್ಯಂ ಸದಾ ಪಾಪಪರಿಕ್ಷಯಂ ॥೩೦॥

ಚಂದ್ರಭಾಗಾ ಮಹಾಪುಣ್ಯಾ ನದೀ ಗೋದಾವರೀ ಶುಭಾ ।
ಸರಯೂರ್ಗಂಡಕೀ ಶ್ರೇಷ್ಠಾ ಕೌಶಿಕೀ ಚ ಸರಸ್ವತೀ ॥೩೧॥

ಪಂಪಾ ವೇಗವತೀ ಪುಣ್ಯಾ ಶ್ರೇಷ್ಠಾ ವಿಷ್ಣುನದೀ ತಥಾ ।
ಏತಾ ನದ್ಯೋ ಮಹಾಭಾಗಾ ಶಿವಪಾದಾರ್ಚನೇ ರತಾಃ ॥೩೨॥

ಶಾಂತಿಂ ಕುರ್ವಂತು ಮೇ ಪ್ರೀತಾಃ ಶಿವಧ್ಯಾನೈಕಮಾನಸಾಃ ।
ನೈರಂಜನಾ ನಾಮ ನದೀ ಶೋಣಶ್ಚಾಪಿ ಮಹಾನದಃ ॥೩೩॥

ಮಂದಾಕಿನೀ ಚ ಪರಮಾ ತಥಾ ಸನ್ನಿಹಿತಾಶ್ಶುಭಾಃ ।
ಏತಾಶ್ಚಾನ್ಯಾ ಮಹಾನದ್ಯೋ ಭೂಮಿದಿವ್ಯಂತರಿಕ್ಷಗಾಃ ॥೩೪॥

ಪಠಿಸಿದರೂ, ಅಥವಾ ಕೇಳಿದರೂ ಅವನಿಗೆ ಸರ್ಪಭಯವಾಗಲಿ, ವಿಷಭಯವಾಗಲಿ ಇರುವುದಿಲ್ಲ. ಇದು ನಿಜ ॥೨೭-೨೮-೨೯॥

ಇದರಂತೆಯೇ, ಗಂಗಾ, ಮಹಾನದಿ, ಯಮುನಾ, ನರ್ಮದಾ, ಗೋಮತೀ, ಕಾವೇರೀ, ವರುಣಾ ಮುಂತಾದ ಮಹಾನದಿಗಳು ಶಂಕರನನ್ನು ಭಕ್ತಿಯಿಂದ ಪೂಜಿಸಿ ಪವಿತ್ರವಾಗಿರುವುವು. ಇಂತಹ ಭಕ್ತಿಶುದ್ಧಗಳಾದ ನದಿಗಳು ನನ್ನ ಸರ್ವ ಪಾಪವನ್ನೂ ನಿವಾರಿಸಿ ನನಗೆ ಚಿರಶಾಂತಿಯನ್ನು ಅನುಗ್ರಹಿಸಲಿ. ॥೩೦॥

ಚಂದ್ರಭಾಗಾ, ಗೋದಾವರಿ, ಸರಯೂ, ಗಂಡಕೀ, ಕೌಶಿಕೀ, ಸರಸ್ವತಿ, ಪಂಪಾ, ವೇಗವತೀ, ವಿಷ್ಣುನದೀ, ಇಂತಹ ಶಿವಪಾದಾರ್ಚಕಗಳಾದ ಮಹಾನದಿಗಳು ನನಗೆ ಶಾಂತಿಯನ್ನು ಕಲ್ಪಿಸಲಿ. ॥೩೧-೩೨॥

ನಿರಂಜನಾನದಿ, ಶೋಣಾ, ಮಂದಾಕಿನಿ, ಮುಂತಾದ ಭೂಮ್ಯಂತರಿಕ್ಷಗಾಮಿಗಳಾದ ಸಕಲ ಮಹಾನದಿಗಳೂ ರುದ್ರಾರ್ಚನೆಯಿಂದ ಪವಿತ್ರಗಳಾಗಿ ನನಗೆ

ರುದ್ರಾರ್ಚನಪರಾ ನದ್ಯಃ ಕುರ್ವಂತು ಮಮ ಶಾಂತಿಕಂ ।
ಗುಪ್ತಾನಿ ಯಾನಿ ತೀರ್ಥಾನಿ ಆಕಸಮುದ್ರಾತ್ಸರಾಂಸಿ ಚ ॥೩೫॥

ಕುರ್ವಂತು ಶಾಂತಿಕಂ ತಾನಿ ಶೀಕಕಟಾಧಿಷ್ಠಿತಾನಿ ಚ ।
ಮಹಾನ್ವೈಶ್ರವಣೋ ದೇವೋ ಯಕ್ಷರಾಜೋ ಮಹಾರ್ಧಿಕಃ ॥೩೬॥

ಯಕ್ಷಕೋಟಿಪರೀವಾರೋ ಯಕ್ಷಸಂಖ್ಯೇಯಸಂಯುತಃ ।
ಮಹಾವಿಭವಸಂಪನ್ನೋ ಹರಪಾದಾರ್ಚನೇ ರತಃ ॥೩೭॥

ಶಾಂತಿಂ ಕರೋತು ಮೇ ಪ್ರೀತಃ ಪದ್ಮಪತ್ರಾಯತೇಕ್ಷಣಃ ।
ಮಣಿಭದ್ರೋ ಮಹಾಯಕ್ಷೋ ಮಣಿರತ್ನವಿಭೂಷಿತಃ ॥೩೮॥

ಮನೋಹರೇಣ ಹಾರೇಣ ಕಂಠಲಗ್ನೇನ ರಾಜತೇ ।
ಶಿವಧ್ಯಾನಪರೋ ನಿತ್ಯಂ ಶಿವಸಾಂಬಪೂಜಕಃ ॥೩೯॥

ಶಾಂತಿಂ ಕರೋತು ಮೇ ನಿತ್ಯಂ ಸರ್ವರೋಗನಿವಾರಣಂ ।
ಯಕ್ಷಿಣೀ ಯಕ್ಷಕನ್ಯಾಭಿಃ ಪರಿವಾರಿತವಿಗ್ರಹಾ ॥೪೦॥

ರುದ್ರಾರ್ಚನರತಾ ನಿತ್ಯಂ ಕರೋತು ಮಮ ಶಾಂತಿಕಂ ।
ಸುವೀರೋ ನಾಮ ಯಕ್ಷೇಂದ್ರೋ ಮಣಿಕುಂಡಲಭೂಷಣಃ ॥೪೧॥

---

ಕಲ್ಯಾಣವನ್ನುಂಟುಮಾಡಲಿ. ಹಾಗೆಯೇ ಸಮುದ್ರ, ಸರೋವರ, ಕ್ಷೇತ್ರಾದಿಗಳು, ಇವುಗಳಲ್ಲಿ ಗೂಢವಾಗಿ ಅಡಗಿರುವ ಸಕಲ ತೀರ್ಥಗಳೂ ನನಗೆ ಸೌಭಾಗ್ಯವನ್ನು ಒದಗಿಸಲಿ. ನನ್ನ ಪಾಪರಾಶಿಯನ್ನೆಲ್ಲಾ ಅವು ನಿರ್ಮೂಲಗೊಳಿಸಲಿ. ॥೩೩-೩೪-೩೫-೩೬-೩೭॥

ಮಣಿಮಯವಾದ ಆಭರಣಗಳಿಂದಲೂ, ರತ್ನಹಾರಗಳಿಂದಲೂ ರಂಜಿಸುವ ಮಣಿಭದ್ರನೆಂಬ ಮಹಾಯಕ್ಷನು ಸದಾಶಿವಧ್ಯಾನದಿಂದ ಕೂಡಿ, ಸರ್ವರೋಗ ನಿವಾರಣಾತ್ಮಕವಾದ ಶಾಂತಿಯನ್ನು ನನಗೆ ಕರುಣಿಸಲಿ. ॥೩೮-೩೯॥

ಯಕ್ಷಸ್ತ್ರೀಯರಿಂದ ಪರಿವೃತಳಾದ ಯಕ್ಷಿಣಿಯು ರುದ್ರಾರ್ಚನನಿರತಳಾಗಿ ನನಗೆ ಶಾಂತಿಪ್ರದಳಾಗಲಿ. ಹಾಗೆಯೇ, ರತ್ನಕುಂಡಲಾದಿಗಳಿಂದ ಅಲಂಕೃತನಾಗಿ ಚಿನ್ನದಪಟ್ಟಿಯನ್ನು ಹಣೆಗೆ ಕಟ್ಟಿಕೊಂಡು, ಅನೇಕ ಯಕ್ಷರಿಂದ ವಂದಿಸಲ್ಪಡುತ್ತಾ

ಲಲಾಲಹೇಮಪಟ್ಟೇನ ಶೋಭನೇನ ವಿರಾಜಿತಃ
ಬಹುಯಕ್ಷಸಮಾಕೀರ್ಣೋ ಯಕ್ಷೈರ್ನಮಿತವಿಗ್ರಹಃ ॥೪೨॥

ಶಿವಪೂಜಾರತೋ ನಿತ್ಯಂ ಕರೋತು ಮಮ ಶಾಂತಿಕಂ
ಪಂಚಗೋನಾಮ ಯಕ್ಷೇಂದ್ರಃ ಕರ್ಣಿಕಾಕಟಕೋಜ್ಜ್ವಲಃ ॥೪೩॥

ಮುಕುಟೇನ ವಿಚಿತ್ರೇಣ ಕೇಯೂರಾಭ್ಯಾಂ ವಿರಾಜಿತಃ ।
ಯಕ್ಷಕನ್ಯಾಸಮಾಯುಕ್ತೋ ಯಕ್ಷಕೋಟಿಸಮನ್ವಿತಃ ॥೪೪॥

ಹರಾರ್ಚನರತಶ್ಶ್ರೀಮಾನ್ ಕರೋತು ಮಮ ಶಾಂತಿಕಂ ।
ಶ್ರೀಮಾನ್ವಿಭಾಂಡಕೋ ಯಕ್ಷೋ ನಾನಾರತ್ನವಿಭೂಷಿತಃ ॥೪೫॥

ಚಾರುಕುಂಡಲಯುಗ್ಮೇನ ಕರ್ಣೇ ನಿತ್ಯಂ ವಿರಾಜಿತಃ ।
ಯಕ್ಷೇಂದ್ರೋ ಯಕ್ಷನಮಿತೋ ಯಕ್ಷಸೇನಾಪತಿರ್ಬುಧಃ ॥೪೬॥

ಹರಪಾದಾರ್ಚನರತಃ ಕರೋತು ಮಮ ಶಾಂತಿಕಂ ।
ಧೃತರಾಷ್ಟ್ರೋ ಮಹಾತೇಜಾ ಯಕ್ಷೋ ಯಕ್ಷಾಧಿಪಃ ಪ್ರಭುಃ ॥೪೭॥

ದಿವ್ಯಪಟ್ಟಾಂಶುಕಚ್ಛನ್ನೋ ಮಣಿಕಾಂಚನಭೂಷಣಃ ।
ಶಿವಭಕ್ತಶ್ಶಿವಧ್ಯಾನಶಿವಪೂಜಾಪರಾಯಣಃ ॥೪೮॥

---

ಯಕ್ಷಗಣಮಧ್ಯವರ್ತಿಯಾಗಿ ಶಿವಪೂಜಾನಿರತನಾದ ಸುವೀರನೆಂಬ ಯಕ್ಷರಾಜನು ನನಗೆ ಪಾಪನಿವಾರಕನಾದ ಶಾಂತಿಯನ್ನು ಒದಗಿಸಲಿ. ॥೪೦-೪೧-೪೨॥

ಕರ್ಣಿಕಾ (ವೊಗ್ಗು) ರೂಪವಾದ ಬಳೆಯಿಂದಲೂ, ಕಿರೀಟ, ತೋಳುಬಳೆ ಇವುಗಳಿಂದಲೂ ವಿರಾಜಿಸುವ ಪಂಚಗೋ ಎಂಬ ಹೆಸರಿನ ಯಕ್ಷರಾಜನು ಯಕ್ಷ ಕನ್ಯೆಯರೊಡಗೂಡಿ ಹರಾರ್ಚನ ಮತ್ತು ಹರಧ್ಯಾನಪರನಾಗಿ ನನಗೆ ಸರ್ವಶಾಂತಿ ಯನ್ನೂ ಒದಗಿಸಲಿ. ॥೪೩-೪೪-೪೫॥

ವಿಭಾಂಡಕನೆಂಬ ಯಕ್ಷರಾಜನು ನಾನಾರತ್ನಗಳಿಂದಲೂ ಚಾರುಕುಂಡಲ ಯುತವಾದ ಕರ್ಣಗಳಿಂದಲೂ ಅಲಂಕೃತನಾಗಿ ಯಕ್ಷಸೇನಾಪತಿಯೆನಿಸಿ ಪರ ಮೇಶ್ವರನ ಭಕ್ತನಾಗಿರುವನು. ಅಂತಹ ವಿಭಾಂಡಕನು ನನಗೆ ಸಕಲಶಾಂತಿಯನ್ನೂ ಕರುಣಿಸಲಿ. ॥೪೬॥

ದಿವ್ಯಪೀತಾಂಬರಧಾರಿಯಾಗಿ ರತ್ನಮಯವಾದ ಸುವರ್ಣಾಭರಣಗಳಿಂದ

ಶಿವಪ್ರಸಾದಸಂಪನ್ನಃ ಕರೋತು ಮಮ ಶಾಂತಿಕಂ ।
ಪೂರ್ಣಭದ್ರೋ ಮಹಾಯಕ್ಷಸ್ಸರ್ವಾಲಂಕಾರಭೂಷಿತಃ ॥೪೯॥

ರಕ್ತದೀಪ್ತೇನ ದೇಹೇನ ಪಟ್ಟೇನಾತಿವಿರಾಜಿತಃ ।
ಯಕ್ಷಕೋಟಿಸಹಸ್ರೇಣ ಪರಿವಾರಿತವಿಗ್ರಹಃ ॥೫೦॥

ರುದ್ರಪ್ರಣಾಮಪರಮೋ ರುದ್ರಭಕ್ತಿರತಸ್ಸದಾ ।
ರುದ್ರಾರ್ಚನಸಮುದ್ಯುಕ್ತಃ ಕರೋತು ಮಮ ಶಾಂತಿಕಂ ॥೫೧॥

॥ ಸೂತ ಉವಾಚ ॥

ಶಾಂತಿಂ ಕುರ್ವಂತು ಸರ್ವೇ ಹರಪದಕಮಲೋದಾರಭಾವೈಕಭೃಂಗಾ
ಯಕ್ಷಾಸ್ತ್ರಕ್ಷಪದಾಂಬುಜಾರ್ಚನರತಾಃ ನಾಗಾ ನಗಾಃ ಪಾಂತು ಮಾಂ ।
ಸದ್ಯೋಜಾತಪ್ರಿಯಾಸ್ತಾ ವರಗಿರಿಜನಿತಾಃ ಪುಣ್ಯನದ್ಯೋಪಿ ಸದ್ಯಃ
ಪಾಪಂ ಮೇ ಪ್ರವಿನಾಶಯಂತು ಸತತಂ ಶರ್ವಾರ್ಚನಾಸೂದ್ಯತಾಃ ॥೫೨॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಶಾಂತ್ಯಧ್ಯಾಯನಿರೂಪಣಂ
ನಾಮ ಚತ್ವಾರಿಂಶೋಽಧ್ಯಾಯಃ

ರಂಜಿಸುತ್ತಾ, ಶಿವಭಕ್ತಿ, ಶಿವಧ್ಯಾನ, ಶಿವಪೂಜೆ, ಶಿವಪ್ರಸಾದಭಕ್ಷಣ ಇವುಗಳಲ್ಲಿ ನಿರತನಾದ ಧೃತರಾಷ್ಟ್ರನೆಂಬ ಯಕ್ಷರಾಜನು ನನಗೆ ಶಾಂತಿಪ್ರದನಾಗಲಿ. ॥೪೭-೪೮॥

ಕೆಂಪು ದೇಹದಿಂದಲೂ, ರಕ್ತವಸ್ತ್ರದಿಂದಲೂ, ಸರ್ವಾಲಂಕಾರಗಳಿಂದಲೂ ಶೋಭಿಸುತ್ತಾ, ಯಕ್ಷಕೋಟಿಗಳಿಂದ ಆವೃತನಾಗಿ ರುದ್ರಪೂಜಾದಿಗಳಲ್ಲಿ ಉದ್ಯುಕ್ತನಾಗಿರುವ ಪೂರ್ಣಭದ್ರನೆಂಬ ಯಕ್ಷನು ನನಗೆ ಸರ್ವಮಂಗಳವನ್ನೂ ಅನುಗ್ರಹಿಸಲಿ. ॥೪೯-೫೦-೫೧॥

ಒಟ್ಟಿನಲ್ಲಿ ಶೌನಕಾದಿಗಳೇ, ಈಶ್ವರಪಾದಕಮಲದಲ್ಲಿ ಭೃಂಗಗಳಂತೆ ಹಾರಾಡುತ್ತಿರುವ, ಅಂದರೆ ಶಿವಪೂಜಾಪರಾಯಣರಾದ ಸಕಲ ಯಕ್ಷರೂ, ಶಿವಪ್ರೀತಿಕರಗಳಾದ ಸಕಲ ಪುಣ್ಯನದಿಗಳೂ, ಪರಶಿವಪಾದಸೇವಕರೂ ನಾಗದೇವತೆಗಳೂ ಇವರೆಲ್ಲರೂ ನನಗೆ ಸರ್ವದಾ ಶಾಂತಿಯನ್ನು ಕರುಣಿಸುತ್ತಿರಲೆಂದು ಸರ್ವದಾ

ಪ್ರಾರ್ಥಿಸುತ್ತಿರಬೇಕು. ಇವೇ ಶಾಂತಿಯನ್ನು ಕೇಳಿಕೊಳ್ಳುವ ಕ್ರಮ ಎಂದು ಶಿವ ಪ್ರತಿಪಾದಿತವಾದ ಶಾಂತ್ಯಧ್ಯಾಯವನ್ನು ಸೂತಮಹರ್ಷಿಗಳು ಶೌನಕಾದಿಗಳಿಗೆ ವಿವರಿಸಿ ಹೇಳಿದರು. ||೫೨||

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಾಂತ್ಯಧ್ಯಾಯವನ್ನು ನಿರೂಪಿಸುವ ನಲವತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಏಕಚತ್ವಾರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಪೂರ್ಣಭದ್ರೋ ಮಹಾಯಕ್ಷಸ್ಸರ್ವಾಲಂಕಾರಭೂಷಿತಃ ।
ರಕ್ತದೀಪ್ತೇನ ದೇಹೇನ ಪಟ್ಟೇನಾತಿವಿರಾಜಿತಃ ॥೧॥

ಯಕ್ಷಕೋಟಿಸಹಸ್ರೇಣ ಪರಿವಾರಿತವಿಗ್ರಹಃ ।
ರುದ್ರಪ್ರಣಾಮಪರಮೋ ರುದ್ರಭಕ್ತಿರತಸ್ಸದಾ ॥೨॥

ರುದ್ರಾರ್ಚನಸಮುದ್ಯುಕ್ತಃ ಕರೋತು ಮಮ ಶಾಂತಿಕಂ ।
ವಿರೂಪಾಕ್ಷಶ್ಚ ಯಕ್ಷೇಂದ್ರಃ ಶ್ವೇತವಾಸಾ ಮಹಾದ್ಯುತಿಃ ॥೩॥

ಚಾರುಕಾಂಚನಮಾಲಾಭಿಃ ಕಿಂಕಿಣೀರವಕಾಂಚಿತಃ ।
ವಿಭೂಷಿತಸ್ಸದಾ ಕಾಲಂ ವರದಾನೈಕತತ್ಪರಃ ॥೪॥

---

## ನಲವತ್ತೊಂದನೆಯ ಅಧ್ಯಾಯ

ಕುಮಾರಸ್ವಾಮಿಯು ಶಿವಪ್ರೋಕ್ತವಾದ ಶಾಂತ್ಯಧ್ಯಾಯವನ್ನು ಮುಂದು ವರಿಸಿ ಹೀಗೆಂದನು — ಸರ್ವಾಲಂಕಾರಭೂಷಿತನಾಗಿ ರಕ್ತವರ್ಣದ ದೇಹದಿಂದಲೂ, ಕೋಟಿಸಂಖ್ಯೆಯ ಯಕ್ಷರಿಂದಲೂ ಪರಿವೃತನಾಗಿ, ಸದಾ ರುದ್ರನಮಸ್ಕಾರ, ರುದ್ರ ಭಕ್ತಿ, ರುದ್ರಾರ್ಚನ ಇವುಗಳಲ್ಲಿ ಆಸಕ್ತನಾಗಿರುವ ಪೂರ್ಣಭದ್ರನೆಂಬ ಮಹಾಯಕ್ಷನು ನಮಗೆ ಶಾಂತಿಯನ್ನು ಕರುಣಿಸಲಿ. ॥೧-೩॥

ಬಿಳಿಯ ವಸ್ತ್ರವುಟ್ಟು, ಸುವರ್ಣಮಯವಾದ ಗೆಜ್ಜೆಗಳ ಸರದಿಂದ ಅಲಂಕೃತ

ರುದ್ರಪೂಜಾಕರೋ ನಿತ್ಯಂ ಕರೋತು ಮಮ ಶಾಂತಿಕಂ ।
ಅಂತರಿಕ್ಷೇ ಚ ಯೇ ಯಕ್ಷಾ ಯೇ ಯಕ್ಷಾಸ್ಸರ್ವಸಂಸ್ಥಿತಾಃ ॥೫॥

ಗಿರಿಕಂದರದುರ್ಗೇಷು ಯೇ ಯಕ್ಷಾ ಭುವಿ ವಾಸಿನಃ ।
ಪಾತಾಲವಾಸಿನೋ ಯಕ್ಷಾಃ ನಾನಾರೂಪಾಯುಧೋದ್ಯತಾಃ ॥೬॥

ಶಿವಭಕ್ತಾಃ ಸುಮನಸಃ ಶಿವಪೂಜಾಸಮುತ್ಸುಕಾಃ ।
ಶಾಂತಿಂ ಕುರ್ವಂತು ಮೇ ಹೃಷ್ಟಾಃ ಶಾಂತಾಶ್ಶಾಂತೇನ ಚೇತಸಾ ॥೭॥

ಯಕ್ಷಿಣ್ಯೋ ವಿವಿಧಾಕಾರಾಸ್ತಥಾ ಯಕ್ಷಕುಮಾರಕಾಃ ।
ಯಕ್ಷಕನ್ಯಾಮಹಾಭಾಗಾಃ ಶಿವಧ್ಯಾನೈಕತತ್ಪರಾಃ ॥೮॥

ಶಾಂತಿಂ ಸ್ವಸ್ತ್ಯಯನಂ ಕ್ಷೇಮಂ ಬಲಂ ಕಲ್ಯಾಣಮೇವ ಚ ।
ಸಿದ್ಧಿಮಾಶು ಪ್ರಯಚ್ಛಂತು ನಿತ್ಯಮೇವ ಸಮಾಹಿತಾಃ ॥೯॥

ಪರ್ವತಾಃ ಸರ್ವತಸ್ಸರ್ವೇ ಪಾರ್ವತ್ಯಶ್ಚ ಮಹಾರ್ಥಕಾಃ ।
ಶಿವಭಕ್ತಾಃ ಸುಮನಸಃ ಶಾಂತಿಂ ಕುರ್ವಂತು ಮೇ ಸದಾ ॥೧೦॥

ಸಮುದ್ರಾಸ್ಸರಿತಸ್ಸರ್ವೇ ಸಾಗರಾಶ್ಚ ಮಹಾರ್ಥಿಕಾಃ ।
ರತ್ನಗರ್ಭಾಶ್ಚ ವಿವಿಧಾ ಯೇ ಚಾನ್ಯೇ ಸಾಗರಾ ಭುವಿ ॥೧೧॥

---

ನಾಗಿ ಮಹಾತೇಜಸ್ಸಿನಿಂದ ಮೆರೆಯುತ್ತಾ, ವರ ಕೊಡುವುದರಲ್ಲಿ ಸಮರ್ಥನಾಗಿ ಶಿವ ಪಾದಸೇವಾನಿರತನಾಗಿರುವ ವಿರೂಪಾಕ್ಷನೆಂಬ ಯಕ್ಷನು ಶಾಂತಿಪ್ರದನಾಗಲಿ. ॥೩-೪॥

ಭೂವ್ಯಂತರಿಕ್ಷಪಾತಾಲಗಳಲ್ಲಿಯೂ, ಗಿರಿದುರ್ಗಾದಿಗಳಲ್ಲಿಯೂ, ನಾನಾರೂಪ ವಿಕಾರದಿಂದಲೂ, ನಾನಾವಿಧವಾದ ಆಯುಧಗಳಿಂದಲೂ ಸಂಚರಿಸುತ್ತಲಿರುವ ಶಿವ ಪೂಜಾಸಕ್ತರಾದ ಶಾಂತಯಕ್ಷದೇವತೆಗಳು ನನಗೆ ಶಾಂತಮನಸ್ಸನ್ನು ಕರುಣಿಸಲಿ. ॥೫-೬-೭॥

ಹಾಗೆಯೇ ನಾನಾ ಆಕಾರದ ಯಕ್ಷಿಣೀ ದೇವತೆಗಳೂ, ಯಕ್ಷಕುಮಾರಕರೂ, ಕುಮಾರಿಯರೂ ಶಿವಧ್ಯಾನತತ್ಪರರಾಗಿದ್ದು ನಮಗೆ ಶಾಂತಿ, ಕ್ಷೇಮ, ಸಿದ್ಧಿ ಇವು ಗಳನ್ನು ನಿತ್ಯವೂ ದಯಪಾಲಿಸಲಿ. ॥೮-೯॥

ಪರ್ವತರಾಜರೂ, ಪರ್ವತಸ್ತ್ರೀಯರೂ, ಸಮುದ್ರಗಳೂ, ಮಹಾನದಿಗಳೂ,

ರುದ್ರಪೂಜಾಪರಾ ನಿತ್ಯಂ ಕುರ್ವಂತು ಮಮ ಶಾಂತಿಕಂ ।
ರಾಕ್ಷಸಾಃ ಸರ್ವತಃ ಸರ್ವೇ ರಾಕ್ಷಸಾ ಘೋರರೂಪಿಣಃ ॥೧೨॥

ರಾಕ್ಷಸಾ ಯೇ ಮಹಾವೀರ್ಯಾ ರಾಕ್ಷಸಾಶ್ಚ ಮಹಾಬಲಾಃ ।
ಸ್ಥಲಸ್ಥಾ ರಾಕ್ಷಸಾ ಯೇ ಚ ಅಂತರಿಕ್ಷೇ ಚ ರಾಕ್ಷಸಾಃ ॥೧೩॥

ಪಾತಾಲೇ ರಾಕ್ಷಸಾ ಯೇ ತು ನಿತ್ಯಂ ರುದ್ರಾರ್ಚನೇ ರತಾಃ ।
ಭೈರವಂ ಯಸ್ಯ ರೂಪಂ ತು ಪ್ರೇತಭಸ್ಮಾವಗುಂಠಿತಂ ॥೧೪॥

ತೇಜಸಾ ತಸ್ಯ ದೇವಸ್ಯ ಶಾಂತಿಂ ಕುರ್ವಂತು ಮೇ ಸದಾ
ಅನೇಕರೂಪಧಾರಿಣ್ಯೋ ಡಾಕಿನ್ಯಶ್ಚ ಮಹಾಬಲಾಃ ।

ಅಂತರಿಕ್ಷಗತಾಯಾಶ್ಚ ಡಾಕಿನ್ಯಃ ಸ್ವರ್ಗಸಂಸ್ಥಿತಾಃ ॥೧೫॥

ಪಾತಾಲೇ ಭೂತಲೇ ಯಾಶ್ಚ ಗಿರಿದುರ್ಗೇಷು ಯಾ ಸ್ಥಿತಾಃ ।
ರುದ್ರಪ್ರಣಾಮಪರಮಾ ರುದ್ರಪೂಜಾಪರಾಃ ಸ್ಥಿತಾಃ ॥೧೬॥

ತುರೀಯಂ ಲೋಚನಂ ಯಸ್ಯ ತ್ರಿಶೂಲಂ ಕರಪಲ್ಲವೇ ।
ತೇಜಸಾ ತಸ್ಯ ದೇವಸ್ಯ ಶಾಂತಿಂ ಕುರ್ವಂತು ಮೇ ಸದಾ ॥೧೭॥

ಅಗಾಧಸಾಗರಗಳೂ ಇವರೆಲ್ಲರೂ ಸುಮನಸ್ಕರಾಗಿ ಶಿವಭಕ್ತವರ್ಯರಾದುದರಿಂದ ನಮಗೆ ಇವರೆಲ್ಲರಿಂದಲೂ ಸ್ಥಿರಶಾಂತಿಯು ದೊರಕಲಿ. ॥೧೦-೧೧॥

ಸರ್ವವ್ಯಾಪಿಗಳಾಗಿ, ಮಹಾವೀರ್ಯರಾದ, ಮಹಾಘೋರಾಕಾರದಿಂದಿರುವ, ಭೂಮಿ, ಅಂತರಿಕ್ಷ, ಪಾತಾಲ ಮುಂತಾದ ಸ್ಥಳಗಳಲ್ಲಿ ಸ್ವತಂತ್ರವಾಗಿ ಸಂಚರಿಸುವ ಸಕಲ ರಾಕ್ಷಸರೂ, ರುದ್ರಪೂಜಾಸಕ್ತರಾಗಿದ್ದು ನನಗೆ ಚಿರಶಾಂತಿಯನ್ನು ಕರುಣಿಸಲಿ. ಪ್ರೇತಭಸ್ಮಧಾರಿಯಾಗಿ ಭಯಂಕರಾಕಾರದಿಂದಿರುವ ಭೈರವನು ನನಗೆ ಶಾಂತಿಯನ್ನು ನೀಡಲಿ. ॥೧೨-೧೩-೧೪॥

ನಾನಾರೂಪದಿಂದ ತಿರುಗುತ್ತಾ, ಮಹಾಬಲಿಷ್ಠರಾಗಿರುವ ಭೂಮ್ಯಂತರಿಕ್ಷ ಪಾತಾಳಗಳಲ್ಲಿ ಸಂಚರಿಸುವ ಡಾಕಿನೀ ದೇವತೆಗಳು ರುದ್ರಪೂಜಾಸಕ್ತರಾಗಿದ್ದು ನಾಲ್ಕು ಕಣ್ಣುಗಳಿಂದಲೂ, ಹಸ್ತಗತವಾದ ತ್ರಿಶೂಲದಿಂದಲೂ ವಿರಾಜಿಸುತ್ತಾ ತಮ್ಮ ದಿವ್ಯತೇಜಸ್ಸಿನಿಂದ ನಮಗೆ ಸ್ಥಿರವಾದ ಶಾಂತಿಯನ್ನು ಅನುಗ್ರಹಿಸುತ್ತಿರಲಿ. ॥೧೫-೧೬-೧೭॥

ಸರ್ವತೋ ಭೂತರೂಪಾಢ್ಯಾಃ ಮಹಾಭೂತಾ ಮಹೋಜ್ಜ್ವಲಾಃ ।
ಸರ್ವಭೂತಸ್ಥಿತಾಃ ಸೌಮ್ಯಾಃ ಸರ್ವೇ ಭೂತಾ ಮನೋಹರಾಃ ॥೧೮॥

ಅಂತರಿಕ್ಷೇ ಚ ಯೇ ಭೂತಾ ಯೇ ಭೂತಾ ದಿವಿ ಸಂಸ್ಥಿತಾಃ ।
ಪಾತಾಲೇ ಭೂತಲೇ ಭೂತಾಃ ಯೇ ಚ ಭೂತಾ ಸ್ತ್ರಿಧಾಮುಕಾಃ ॥೧೯॥

ಖಟ್ವಾಂಗಂ ಯಸ್ಯ ವಿಮಲಂ ಕಪಾಲಂ ಕರಪಲ್ಲವೇ ।
ತೇಜಸಾ ತಸ್ಯ ದೇವಸ್ಯ ಶಾಂತಿಂ ಕುರ್ವಂತು ಮೇ ಸದಾ ॥೨೦॥

ಪ್ರೇತಾಃ ಪ್ರೇತಗಣಾಸ್ಸರ್ವೇ ಯೇ ಪ್ರೇತಾಸ್ಸರ್ವತೋಮುಖೇ ।
ಅಂತರಿಕ್ಷೇ ಚ ಯೇ ಪ್ರೇತಾಃ ಯೇ ಪ್ರೇತಾ ದಿವಿ ಸಂಸ್ಥಿತಾಃ ॥೨೧॥

ಪಾತಾಲೇ ಭೂತಲೇ ಚೈವ ಯೇ ಪ್ರೇತಾಃ ಕಾಮರೂಪಿಣಃ ।
ಶ್ಮಶಾನಂ ನಿಲಯೋ ಯಸ್ಯ ವೃಷಭೋ ಯಸ್ಯ ವಾಹನಃ ॥೨೨॥

ತೇಜಸಾ ತಸ್ಯ ದೇವಸ್ಯ ಶಾಂತಿಂ ಕುರ್ವಂತು ಮೇ ಸದಾ ॥೨೩॥

ಯೇ ಪಿಶಾಚಾ ಮಹಾವೀರ್ಯಾ ಯೇ ಪಿಶಾಚಾ ಮಹರ್ಧಿಕಾಃ ।
ಯೇ ಪಿಶಾಚಾ ಮಹಾವೀರ್ಯಾಃ ಪಿಶಾಚಾಃ ಕಾಮರೂಪಿಣಃ ॥೨೪॥

ಭೂಮಿ, ಅಂತರಿಕ್ಷ, ಪಾತಾಲ ಮುಂತಾದ ಸಕಲ ಭೂತಗಳೂ ಮಹಾತೇಜಸ್ವಿಗಳಾಗಿದ್ದು, ಮನೋಹರಾಕಾರದಿಂದಿರುತ್ತಾ, ಶಿವಪೂಜಾಪರಾಯಣರಾಗಿ, ಹೊಳೆಯುವ ಖಟ್ವಾಂಗವನ್ನು ಧರಿಸಿ, ಕೈಯ್ಯಲ್ಲಿ ಕಪಾಲವನ್ನು ಹಿಡಿದು ಶೋಭಿಸುವ ಭೂತಾಭಿಮಾನದೇವತೆಗಳು ನಮಗೆ ಸ್ಥಿರಶಾಂತಿಯನ್ನು ಕರುಣಿಸಲಿ. ||೧೮-೧೯-೨೦||

ಭೂಮಿ, ಅಂತರಿಕ್ಷ, ಪಾತಾಲ ಮುಂತಾದ ಸ್ಥಳಗಳಲ್ಲಿ ತಾನೇತಾನಾಗಿ ನಾನಾಕಾರಣಗಳಿಂದ ಸುತ್ತುತ್ತಲಿರುವ ಪ್ರೇತಗಣಗಳು ಸ್ಮಶಾನವಾಸಿಯೂ, ವೃಷಭವಾಹನನೂ ಆದ ಪರಶಿವನ ತೇಜಸ್ಸಿನ ಪ್ರಭಾವದಿಂದ ನನಗೆ ಶಾಂತಿಯನ್ನು ಕರುಣಿಸಲಿ. ||೨೧-೨೨-೨೩||

ಮಹಾಬಲಿಷ್ಠರಾಗಿ, ಪ್ರಭಾವಶಾಲಿಗಳಾಗಿ, ಇಷ್ಟಬಂದ ರೂಪವನ್ನು ಧರಿಸುವಂತಹ ಸ್ವರ್ಗ, ಮರ್ತ್ಯ, ಪಾತಾಲವಾಸಿಗಳಾದ ಪಿಶಾಚಗಣಗಳು, ಅರ್ಧಚಂದ್ರ

ನಾನಾರೂಪಧರಾಃ ಸರ್ವೇ ಸರ್ವೇ ತತ್ವಗುಣೋತ್ತರಾಃ ।
ಅಂತರಿಕ್ಷೇ ಪಿಶಾಚಾ ಯೇ ಸ್ವರ್ಗೇ ಯೇ ಚ ಪಿಶಾಚಕಾಃ ॥೨೫॥

ಭೂತಲೇ ಯೇ ಪಿಶಾಚಾ ಯೇ ಪಾತಾಲತಲವಾಸಿನಃ ।
ಚಂದ್ರಾರ್ಧಮಸ್ತಕೇ ಯಸ್ಯ ಭಸ್ಮ ಯಸ್ಯ ವಿಭೂಷಣಂ ॥೨೬॥

ತೇಜಸಾ ತಸ್ಯ ದೇವಸ್ಯ ಶಾಂತಿಂ ಕುರ್ವಂತು ಮೇ ಸದಾ ।
ಅಪಸ್ಮಾರಗ್ರಹಾಸ್ಸರ್ವೇ ಸರ್ವೇ ಚಾಪಿ ಜ್ವರಗ್ರಹಾಃ ॥೨೭॥

ಗರ್ಭಬಾಲಗ್ರಹಾ ಯೇ ತು ನಾನಾರೋಗಗ್ರಹಾಶ್ಚ ಯೇ ।
ಅಂತರಿಕ್ಷೇ ಗ್ರಹಾ ಯೇ ಚ ಸ್ವರ್ಗೇ ಯೇ ಚ ಗ್ರಹೋತ್ತರಾಃ ॥೨೮॥

ಪಾತಾಲೇ ಭೂತಲೇ ಯೇ ಚ ಯೇ ಗ್ರಹಾಸ್ಸರ್ವತೋದಿಶಃ ।
ಕಂಠೇ ಯಸ್ಯ ಮಹಾನೀಲಂ ಭೂಷಣಂ ಯಸ್ಯ ಪನ್ನಗಃ ॥೨೯॥

ತೇಜಸಾ ತಸ್ಯ ದೇವಸ್ಯ ಶಾಂತಿಂ ಕುರ್ವಂತು ಮೇ ಸದಾ ।
ಇತಿ ದೇವಾದಯಸ್ಸರ್ವೇ ಶಿವಜ್ಞಾನವಿಧಾಯಿನಃ ॥೩೦॥

ಕುರ್ವಂತು ಶಾಂತಿಂ ಜಗತಃ ಶಿವಭಕ್ತೇಷು ಸರ್ವದಾ ।
ಶಿವಜ್ಞಾನಪರಾ ಭೂತ್ವಾ ಸ್ತುತ್ವೈವಂ ಶಿವಭಕ್ತಕಾನ್ ॥೩೦॥

ಶಿವಧ್ಯಾನಪರೋ ಭೂತ್ವಾ ಏತತ್ಸ್ತೋತ್ರಮುದೀರಯೇತ್ ।
ಇತ್ಯುಕ್ತ್ವಾ ದೇವದೇವಸ್ಯ ಸನ್ನಿಧೌ ನಂದಿಕೇಶ್ವರಃ ॥೩೧॥

---

ಧಾರಿಯೂ, ಭಸ್ಮವಿಭೂಷಣನೂ ಆದ ಪರಮೇಶ್ವರನ ಅನುಗ್ರಹಕ್ಕೆ ಪಾತ್ರರಾಗಿ ನಮಗೆ ಸರ್ವದಾ ಮಂಗಳವನ್ನುಂಟುಮಾಡಲಿ. ||೨೪-೨೫-೨೬||

ಅಪಸ್ಮಾರಗ್ರಹಗಳೂ, ಜ್ವರಪ್ರದವಾದ ಗ್ರಹಗಳೂ, ಗರ್ಭವಿನಾಶಕರಗಳಾದ ಬಾಲಗ್ರಹಗಳೂ, ಇನ್ನೂ ಇತರ ಗ್ರಹಗಳೂ, ಭೂಮ್ಯಂತರಿಕ್ಷಪಾತಾಲವಾಸಿಗಳಾದ ಇತರ ಸಕಲ ಗ್ರಹಗಳೂ, ನೀಲಕಂಠನಾದ, ನಾಗಾಭರಣನಾದ ಪರಶಿವನ ಅನುಗ್ರಹ ಬಲದಿಂದ ನನಗೆ ಚಿರಶಾಂತಿಯನ್ನು ಕರುಣಿಸಲಿ. ||೨೭-೨೮-೨೯||

ಹೀಗೆ ಶಿವಜ್ಞಾನವನ್ನು ಕರುಣಿಸುವ ಸಕಲ ದೇವತೆಗಳೂ ಲೋಕಕ್ಕೂ ಈಶ್ವರಭಕ್ತರಿಗೂ ಸಮಸ್ತ ಮಂಗಳವನ್ನೂ ಕರುಣಿಸಲಿ. ಈ ವಿಧವಾದ ಶಾಂತಿ

ಕೃತಾಂಜಲಿಪುಟೋ ಭೂತ್ವಾ ದೇವಂ ತುಷ್ಟಾವ ಹೃಷ್ಟಧೀಃ ॥೩೩॥

ಜಯಾತ್ಮಯೋಗಸಂಸ್ಥಾಯ ಜಯಸಂಶುದ್ಧಚೇತಸೇ ।
ಜಯ ದಾನೈಕರೂಪಾಯ ಜಯೇಶಾಯ ನಮೋಽಸ್ತು ತೇ ॥೩೪॥

ಜಯೋತ್ತಮಾಯ ದೇವಾಯ ಜಯಕಲ್ಯಾಣರೂಪಿಣೇ ।
ಜಯ ಪ್ರನಷ್ಟಮೋಹಾಯ ಜಯಾಜಯ್ಯಾಯ ತೇ ನಮಃ ॥೩೫॥

ಜಯ ಶರ್ವಾಯ ದೇವಾಯ ಸರ್ವೇಶಾಯ ಮಹಾತ್ಮನೇ ।
ಜಯ ಲಕ್ಷ್ಮೀವಿಧಾನಾಯ ಜಯ ಕಾಂತಿವಿಧಾಯಿನೇ ॥೩೬॥

ಜಯ ವಾಕ್ಯವಿಶುದ್ಧಾಯ ಅತೀತಾಯ ನಮೋನಮಃ ।
ಜಯ ವಿಷ್ಣ್ವಿಂದ್ರವಂದ್ಯಾಯ ಶಿವಶಾಂತಾಯ ತೇ ನಮಃ ॥೩೭॥

---

ಸ್ತೋತ್ರಗಳನ್ನು ಈಶ್ವರಭಕ್ತರಾದವರು, ತದೇಕಧ್ಯಾನಚಿತ್ತರಾಗಿ ಶಿವಸನ್ನಿಧಿಯಲ್ಲಿ ಪಠಿಸಬೇಕು. ಇದನ್ನೆಲ್ಲಾ ಹೇಳಿ ನಂದೀಶ್ವರನು ಮತ್ತೆ ಅಂಜಲಿಬದ್ಧನಾಗಿ ನಿಂತು ಸಂತುಷ್ಟಾಂತರಂಗವುಳ್ಳವನಾಗಿ ಪರಶಿವನ ಮುಂದೆ ಭಕ್ತಿಯಿಂದ ಈರೀತಿ ಸ್ತುತಿಸಲಾರಂಭಿಸಿದನು. ॥೩೦-೩೧-೩೨-೩೩॥

"ಮಹೇಶ್ವರನೇ, ನೀನು ಆತ್ಮಯೋಗಗಮ್ಯನು. ಶುದ್ಧವಾದ ಅಂದರೆ ಮಾಯಾಸಂಬಂಧವಿಲ್ಲದ ಚೇತಸ್ಸ್ವರೂಪಿಯು. ಭಕ್ತರಿಗೆ ವರವನ್ನು ನೀಡುವ ಮಹಾಪ್ರಭುವು, ದೇವದೇವನೂ, ಕಲ್ಯಾಣಗುಣಪರಿಪೂರ್ಣನೂ, ಅಜ್ಞಾನದೂರನೂ, ಯಾರಿಂದಲೂ ಜಯಿಸಲಸಾಧ್ಯನೂ ಆಗಿರುವ ನಿನಗೆ ಜಯವಾಗಲಿ. ॥೩೪-೩೫॥

ಸುಖಪ್ರದನೂ, ಸರ್ವಲೋಕಾಧಿಪತಿಯೂ, ಮಹಾತ್ಮನೂ ಆದ ಮಹಾದೇವನೇ, ನೀನು ಲಕ್ಷ್ಮೀದೇವಿಗೆ ನಿಯಾಮಕನು. ಸರ್ವರಿಗೂ ಕಾಂತಿಯನ್ನು ಕೊಡುವವನು. ವಿಶುದ್ಧವಾದ ವಾಕ್ಸ್ವರೂಪಿಯು. ಸಕಲ ಗುಣಾತೀತನು, ಹರಿ, ಇಂದ್ರ ಇವರೇ ಮೊದಲಾದವರಿಗೆ ಅಧಿಪತಿಯೆನಿಸಿ ಜಗತ್ತಿಗೇ ಮಂಗಳವನ್ನು ಕೋರುವವನು. ಅಂತಹ ನೀನು ಸರ್ವೋತ್ಕೃಷ್ಟನೆನಿಸು. ॥೩೬-೩೭॥

ಜಯ ವಿಜ್ಞಾನಶುದ್ಧಾಯ ಸರ್ವವ್ಯಾಪಿನ್ ನಮೋನಮಃ ।
ಜಯ ಕಾಂತಾರ್ಧದೇಹಾಯ ಜಯ ಚಂದ್ರಾರ್ಧಧಾರಿಣೇ ॥೩೮॥

ಜಯ ದೇವಾದಿದೇವಾಯ ಜಯ ರುದ್ರಾಯ ತೇ ನಮಃ ।
ಜಯ ತ್ರಿಭುವನೇಶಾಯ ಜಯ ವಿಖ್ಯಾತಮೂರ್ತಯೇ ॥೩೯॥

ಜಯಾಧಾರಾಯ ಶರ್ವಾಯ ಜಗತ್ಕರ್ತ್ರೇ ನಮೋಽಸ್ತು ತೇ ।
ಜಯ ನಿರ್ಮಲದೇಹಾಯ ಜಯ ಸರ್ವಾರ್ಥದಾಯಿನೇ ॥೪೦॥

ಜಯ ಭರ್ತ್ರೇ ಚ ಹಂತ್ರೇ ಚ ಜಯ ತ್ರಿಪುರಭೇದಿನೇ ।
ಜಯ ಮನ್ಮಥನಾಶಾಯ ಈಶಾನಾಯ ನಮೋನಮಃ ॥೪೧॥

॥ ಶ್ರೀ ಸ್ಕಂದ ಉವಾಚ ॥

ಜೈಗೀಷವ್ಯ ಮಹಾಭಾಗ ಶಿವಪ್ರೋಕ್ತಾಶ್ಚ ಶಾಂತಯೇ ।
ಸರ್ವೇಷಾಂ ಶಾಂತಿಕಾಧ್ಯಾಯಾಃ ಶ್ರುತ್ವಾ ಭಕ್ತಿಯುತಾಶ್ಚಯೇ॥೪೨॥

ಇತ್ಯೇವಂ ಶಾಂತಿಕಾಧ್ಯಾಯಂ ಯಃ ಪಠೇಚ್ಛೃಣುಯಾದಪಿ ।
ವಿಧೂಯ ಸರ್ವಪಾಪಾನಿ ಶಿವಲೋಕೇ ಮಹೀಯತೇ ॥೪೩॥

---

ಶುದ್ಧಜ್ಞಾನಸ್ವರೂಪನೂ, ಸರ್ವವ್ಯಾಪಿಯೂ ಆದ ಉಮಾರ್ಧದೇಹಿಯೇ, ಅರ್ಧಚಂದ್ರಶೇಖರನೇ, ನಿನಗೆ ವಂದನೆ. "ದೇವತೆಗಳಿಗೆ ಆದಿದೇವನೆನಿಸಿ, ಲೋಕ ಭಯಂಕರನಾಗಿ, ತ್ರಿಭುವನೇಶ್ವರನೆನಿಸಿ ಪ್ರಸಿದ್ಧಿಗೊಂಡಿರುವ ಮಹಾಪ್ರಭುವೇ, ನಿನಗೆ ಜಯವಾಗಲಿ. ಸಕಲಲೋಕಕರ್ತನೂ, ಲೋಕಾಶ್ರಯನೂ, ನಿರ್ಮಲ ದೇಹಿಯೂ ಆಗಿರುವವನು ನೀನು. ಸರ್ವಾರ್ಥಗಳನ್ನೂ ಒದಗಿಸಿಕೊಡುವವನು ನೀನು. ಲೋಕರಕ್ಷಕನಾಗಿಯೂ, ಲೋಕಶಿಕ್ಷಕನಾಗಿಯೂ, ತ್ರಿಪುರಾಸುರರನ್ನೂ ಮನ್ಮಥನನ್ನೂ ನಾಶಗೊಳಿಸಿದವನಾಗಿರುವ ಮಹಾದೇವನೇ ನಿನಗೆ ವಂದನೆಗಳು. ನೀನು ಸರ್ವೋತ್ಕೃಷ್ಟನಾಗಿರು. ನಿನ್ನನ್ನೇ ಮೊರೆಹೊಕ್ಕಿರುವೆನು." ॥೩೮-೩೯-೪೦-೪೧॥

ಈ ಶಿವಪ್ರೋಕ್ತವಾದ ಶಾಂತ್ಯಧ್ಯಾಯವನ್ನು ಕುಮಾರಸ್ವಾಮಿಯು ಜೈಗೀಷವ್ಯನಿಗೆ ಬೋಧಿಸುತ್ತಾ ಇದರ ಫಲವನ್ನು ಉಪದೇಶಿಸಿದನು. ಈ ಲೋಕಶಾಂತಿ

ಕನ್ಯಾರ್ಥೀ ಲಭತೇ ಕನ್ಯಾಂ ಜಯಾರ್ಥೀ ಜಯಮಾಪ್ನುಯಾತ್ ।
ಅರ್ಥಕಾಮೋ ಲಭೇದರ್ಥಂ ಪುತ್ರಕಾಮೋ ಬಹೂನ್ ಸುತಾನ್ ॥೪೪॥

ವಿದ್ಯಾರ್ಥೀ ಲಭತೇ ವಿದ್ಯಾಂ ಯೋಗಾರ್ಥೀ ಯೋಗಮಾಪ್ನುಯಾತ್ ।
ರಾಜ್ಯಾರ್ಥೀ ಲಭತೇ ರಾಜ್ಯಂ ಗ್ರಾಮಾರ್ಥೀ ಗ್ರಾಮಮಾಪ್ನುಯಾತ್ ॥೪೫॥

ಗರ್ಭಿಣೀ ಲಭತೇ ಪುತ್ರಂ ಕನ್ಯಾ ವಿಂದತಿ ಸತ್ಪತಿಂ ।
ಯೋ ಯಾನ್ ಕಾಮಯತೇ ಕಾಮಾನ್ ಮಾನವಶ್ಶ್ರವಣಾದಿಹ ॥೪೬॥

ತತ್ಸರ್ವಂ ಶೀಘ್ರಮಾಪ್ನೋತಿ ದೇವಾನಾಂ ಚ ಪ್ರಿಯೋ ಭವೇತ್ ।
ಶ್ರುತ್ವಾಧ್ಯಾಯಮಿಮಂ ಪುಣ್ಯಂ ಸಂಗ್ರಾಮಂ ಪ್ರವಿಶೇನ್ನರಃ ॥೪೭॥

ಸ ನಿರ್ಜಿತ್ಯ ಭಯಂ ಶತ್ರೂನ್ ಕಲ್ಯಾಣೈಃ ಪರಿಪುಣ್ಯತೇ ।
ಅಕ್ಷಯ್ಯಂ ಮೋದತೇ ಕಾಲಂ ಅತಿರಸ್ಕೃತಶಾಸನಃ ॥೪೮॥

---

ನಾಗಿ ಈಶ್ವರನಿಂದ ವಿವೃತವಾದ ಶಾಂತ್ಯಧ್ಯಾಯವನ್ನು ಯಾವನು ಓದುತ್ತಾನೆಯೋ, ಕೇಳುತ್ತಾನೆಯೋ ಅವನು ಸರ್ವಪಾಪಮುಕ್ತನಾಗಿ ಶಿವಲೋಕವನ್ನು ಸೇರುವನು. ||೪೨-೪೩||

ಈ ಸ್ತೋತ್ರಪಠನೆಯಿಂದ ಕನ್ಯಾಪೇಕ್ಷಿಯು ಸುಲಕ್ಷಣಕನ್ಯೆಯನ್ನೂ, ಜಯಾಭಿಲಾಷಿಯು ವಿಜಯವನ್ನೂ, ಅರ್ಥಾಪೇಕ್ಷಿಯು ದ್ರವ್ಯರಾಶಿಯನ್ನೂ, ಪುತ್ರಕಾಮಿಯು ಸುಪುತ್ರಗಣವನ್ನೂ ಪಡೆಯುವನು. ವಿದ್ಯೆಯನ್ನು ಬಯಸುವವನಿಗೆ ವಿದ್ಯೆಯೂ, ಯೋಗಫಲವನ್ನು ನಿರೀಕ್ಷಿಸುವವನು ಯೋಗಿಯಾಗಿಯೂ, ರಾಜ್ಯ, ಗ್ರಾಮ ಇವುಗಳನ್ನು ಹೊಂದಬೇಕೆಂದಿರುವವನು ಅವುಗಳನ್ನೂ ತಪ್ಪದೆ ಹೊಂದುವರು. ||೪೪-೪೫||

ಈ ಶಾಂತ್ಯಧ್ಯಾಯ, ಶಿವಸ್ತುತಿಗಳನ್ನು ಶ್ರವಣಮಾಡಿದರೆ ಗರ್ಭಿಣಿಯು ಸುಪುತ್ರನನ್ನೂ, ಅವಿವಾಹಿತಕನ್ಯೆಯು ಸತ್ಪತಿಯನ್ನೂ ಪಡೆಯುವಳು. ಒಟ್ಟಿನಲ್ಲಿ ಯಾರು ಯಾವಯಾವ ಅಭಿಲಾಷೆಯಿಂದ ಇದನ್ನು ಪಠಿಸಿದರೂ, ಅವರಿಗೆ ಅವು ಸುಲಭಸಾಧ್ಯವಾಗುವುವು. ಈ ಸ್ತೋತ್ರಪಾಠಕನು ದೇವತೆಗಳಿಗೆ ಪ್ರಿಯನೆನಿಸುವನು. ಯುದ್ಧಕ್ಕೆ ಹೋಗಲಿಚ್ಛಿಸುವ ಯೋಧನು ಈ ಸ್ತೋತ್ರವನ್ನು ಪಠಿಸಿ ರಣರಂಗವನ್ನು ಹೊಕ್ಕರೆ, ಅಲ್ಲಿ ಶತ್ರುಗಳನ್ನು ನಿರ್ಮೂಲಗೊಳಿಸಿ ಸ್ಥಿರವಾದ ಜಯವನ್ನು

ಸರ್ವವ್ಯಾಧಿವಿನಿರ್ಮುಕ್ತಃ ಪುತ್ರಪೌತ್ರೈಃ ಪ್ರತಿಷ್ಠಿತಃ ।
ಶಾಂತ್ಯಧ್ಯಾಯಮಿಮಂ ಪುಣ್ಯಂ ಯಮುದ್ದಿಶ್ಯ ಸಕೃತ್ಪಠೇತ್ ॥೪೯॥

ತಸ್ಯ ರೋಗಾ ನ ಬಾಧಂತೇ ವಾತಪಿತ್ತಾದಿಸಂಭವಾಃ ।
ನಾಕಾಲಮರಣಂ ತಸ್ಯ ಸರ್ಪೈರ್ದಶ್ಯಾಪಿ ನ ದಂಶ್ಯತೇ ॥೫೦॥

ವಿಷಂ ನಾಕ್ರಮತೇ ದೇಹೇ ನ ಜಡತ್ವಂ ನ ಮೂಕತಾ ।
ನೋಪಸರ್ಗಭಯಂ ತಸ್ಯ ನ ಚೋತ್ಪಾತಭಯಂ ತಥಾ ॥೫೧॥

ನಾಭಿಚಾರಕೃತೈರ್ದೋಷೈರ್ಲಿಪ್ಯತೇ ಸ ಕದಾಚನ ।
ಸರ್ವಕಾಮಸಮೃದ್ಧ್ಯರ್ಥಂ ಯಃ ಪಠೇತ್ತು ದಿನೇದಿನೇ ॥೫೨॥

ನಿತ್ಯಮೂರ್ಜಿತಭಕ್ತ್ಯಾ ಚ ದುರ್ವ್ಯಾಘಾತಾದಿವರ್ಜಿತಃ ।
ಯತ್ಪುಣ್ಯಂ ಸರ್ವತೀರ್ಥಾನಾಂ ಗಂಗಾದೀನಾಂ ವಿಶೇಷತಃ ॥೫೩॥

ತತ್ಪುಣ್ಯಂ ಕೋಟಿಗುಣಿತಂ ಪ್ರಾಪ್ನೋತಿ ಶ್ರವಣಾದಿಹ ।
ದಶಾನಾಂ ರಾಜಸೂಯಾನಾಮಗ್ನಿಷ್ಟೋಮಶತಾನಿ ಚ ॥೫೪॥

---

ಅವನು ಸಂಪಾದಿಸುವನು. ಹಾಗೆಯೇ ಬಹುಕಾಲ ರಾಜ್ಯವನ್ನಾಳಿ ರಾಜಾಧಿರಾಜನಾಗಿ ಖ್ಯಾತಿಗಳಿಸುವನು. ||೪೬-೪೭-೪೮||

ಈ ಶಾಂತ್ಯಧ್ಯಾಯಪಾಠಕರಿಗೆ ಯಾವ ವ್ಯಾಧಿಗಳೂ ತೊಂದರೆಪಡಿಸಲಾರವು. ಅಕಾಲಮರಣವು ಸಂಭವಿಸುವುದಿಲ್ಲ. ಸರ್ಪಗಳೂ ಸಹ ಅವನನ್ನು ಕಚ್ಚುವುದಿಲ್ಲ. ಪುತ್ರಪೌತ್ರಾದಿಗಳೊಡನೆ ಅವನು ಚಿರಕಾಲ ಬಾಳುವನು. ||೪೯-೫೦||

ಅಂತಹವರಿಗೆ ವಿಷಭಯವಾಗಲಿ, ಜಡತ್ವ, ಮೂಕತ್ವ ಮುಂತಾದ ಅಂಗವೈಕಲ್ಯಗಳಾಗಲಿ, ಮತ್ತಾವ ಈತಿಬಾಧೆಗಳೂ ಉತ್ಪಾತಭಯಗಳೂ ಒದಗಲಾರವು. ಅಭಿಚಾರಿಕದೋಷವಂತೂ ಅವನಿಗೆ ಎಂದೂ ಸಂಭವಿಸಲಾರದು. ಸರ್ವಕಾಮ್ಯಗಳನ್ನೂ ಅವನು ಪಡೆದು ಸುಖಿಯಾಗುವನು. ನಿತ್ಯದಲ್ಲಿ ಇದನ್ನು ಪಠಿಸುವುದು ಸರ್ವಶ್ರೇಷ್ಠವೆನಿಸುವುದು. ||೫೧-೫೨||

ಈ ಶಾಂತ್ಯಧ್ಯಾಯವನ್ನು ಶ್ರವಣಮಾಡಿದವನಿಗೆ, ನಿತ್ಯದಲ್ಲಿಯೂ ಏಳಿಗೆಯೂ ಭಕ್ತಿವೃದ್ಧಿಯೂ, ಗ್ರಹೋಪಪ್ಲವಾದಿಗಳೂ ನಿಲ್ಲಲಾರವು. ಗಂಗಾದಿ ಸರ್ವತೀರ್ಥಗಳ ಪ್ರಾಶನದಿಂದಲೂ, ರಾಜಸೂಯ, ಅಗ್ನಿಷ್ಟೋಮ ಮುಂತಾದ ಯಾಗಗಳ ಆಚರಣೆ

ಶ್ರವಣಾತ್ಫಲಮಾಪ್ನೋತಿ ಕೋಟಿಕೋಟಿಗುಣೋತ್ತರಂ ।
ಕೋಟಿಜನ್ಮಸು ಯತ್ಪುಣ್ಯಂ ಜನಾರ್ದನಸುಪೂಜಯಾ ॥೫೫॥

ತತ್ಪುಣ್ಯಂ ಕೋಟಿಗುಣಿತಂ ಪ್ರಾಪ್ನೋತಿ ಶ್ರವಣಾದಿಹ ।
ಅವಧ್ಯಸ್ಸರ್ವಭೂತಾನಾಂ ಅನ್ಯೇಷಾಂ ಚ ವಿಶೇಷತಃ ॥೫೬॥

ಜೀವೇದ್ವರ್ಷಶತಂ ಸಾಗ್ರಂ ಸರ್ವವ್ಯಾಧಿವಿವರ್ಜಿತಃ ।
ಗೋಘ್ನಶ್ಚೈವ ಕೃತಘ್ನಶ್ಚ ಭ್ರೂಣಹಾ ಗುರುತಲ್ಪಗಃ ।೫೭॥

ಶರಣಾಗತಘಾತೀ ಚ ಮಿತ್ರವಿಶ್ವಾಸಘಾತಕಃ ।
ದುಷ್ಟಪಾಪಸಮಾಚಾರೋ ಮಾತೃಹಾ ಪಿತೃಹಾ ತಥಾ ।೫೮।

ಶ್ರವಣಾದಸ್ಯ ಭಾವೇನ ಮುಚ್ಯತೇ ಸರ್ವಪಾತಕೈಃ ।
ಶಾಂತ್ಯಧ್ಯಾಯಮಿಮಂ ಪುಣ್ಯಂ ನ ದೇಯಂ ಯಸ್ಯ ಕಸ್ಯಚಿತ್ ॥೫೯॥

ಶಿವಭಕ್ತಾಯ ದಾತವ್ಯಂ ಶಿವೇನ ಕಥಿತಂ ಪುರಾ ।
ನಿತ್ಯಮೂರ್ಜಿತಭಕ್ತಿಶ್ಚ ಭಕ್ತಿವ್ಯಾಘಾತವರ್ಜಿತಃ ॥೬೦॥

---

ಯಿಂದಲೂ ಜನಾರ್ದನನ ಪೂಜೆಯಿಂದಲೂ ಎಷ್ಟು ಸುಕೃತವು ಲಭಿಸುವುದೋ, ಅದಕ್ಕೆ ಕೋಟಿಪಾಲು ಅಧಿಕವಾಗಿ ಈ ಶಾಂತ್ಯಧ್ಯಾಯಶ್ರವಣದಿಂದ ಪುಣ್ಯರಾಶಿಯು ದೊರಕುವುದು ॥೫೩-೫೪-೫೫॥

ಮತ್ತೂ ಇದರ ಶ್ರವಣದಿಂದ ಯಾವ ಪ್ರಾಣಿಗಳಿಂದಲೂ ವಧಿಸಲಾಗದಂತಹ ಶಕ್ತಿಯನ್ನು ಪಡೆದು ರೋಗಾದ್ಯುಪದ್ರವಗಳಿಲ್ಲದೆ ಪೂರ್ಣಾಯುಷ್ಯವನ್ನು ಪಡೆಯುವನು. ಗೋಹತ್ಯೆ, ಉಪಕಾರಸ್ಮರಿಸದಿರುವುದು, ಭ್ರೂಣಹತ್ಯೆ, ಗುರುಪತ್ನಿಗಮನ, ಶರಣಾಗತರನ್ನು ಕೊಲ್ಲುವಿಕೆ, ವಿಶ್ವಾಸಘಾತುಕತನ, ಪಾಪಕಾರ್ಯಪ್ರವರ್ತನೆ, ಮಾತಾಪಿತೃವಧೆ ಮುಂತಾದ ಸಕಲ ಮಹಾಪಾಪಗಳಿಂದಲೂ ಬಿಡುಗಡೆ ಹೊಂದುವನು. ॥೫೬-೫೭-೫೮॥

ಈ ಶಾಂತ್ಯಧ್ಯಾಯಶ್ರವಣಾದಿಗಳಿಂದ ಸರ್ವಪಾಪವೂ ನಿವೃತ್ತಿಹೊಂದುವುದು. ಇಂತಹ ಪವಿತ್ರವಾದ ಈ ಭಾಗವನ್ನು ಶಿವಭಕ್ತನಲ್ಲದವನಿಗೆ ಎಂದಿಗೂ ಕೊಡಬಾರದು. ಇದು ಈಶ್ವರನ ಕಟ್ಟಪ್ಪಣೆ. ಪ್ರತಿದಿನವೂ ಇದನ್ನು ಓದಿ ಅಥವಾ ಕೇಳಿದವನಿಗೆ ಸರ್ವಕಾಮ್ಯಗಳೂ ಸಿದ್ಧಿಸಿ, ಅವ್ಯಾಹತವಾದ ಶಿವಭಕ್ತಿಯುದಯಿಸುವುದು.

ಸರ್ವಕಾಮಸಮೃದ್ಧಾರ್ಥೋ ಯಃ ಪಠೇತ್ತು ದಿನೇದಿನೇ ।
ತಸ್ಮಾದ್ಭಕ್ತ್ಯಾ ಪುಣ್ಯಮಿದಂ ಶ್ರೋತವ್ಯಂ ಶಿವಮಿಚ್ಛಯಾ ॥೬೦॥

॥ ಈಶ್ವರ ಉವಾಚ ॥

ಯಶ್ಶಾಂತ್ಯಧ್ಯಾಯವರಾ ಶಿವೇ ಹೃದಿಗತಾ ಕುರ್ವಂತ್ಸಶಾಂತಿಂ ಲಭೇತ್
ರೋಗಾಣಾಮಯುತಾತ್ ತಥಾ ನೃಪಭಯಾತ್ ಭೂಯೋಽಪಿ ಮುಕ್ತೋ ಭವೇತ್ ।
ಚೋರಾರಿಪ್ರಭವಾದಯೋ ಗ್ರಹಭವಾಪಸ್ಮಾರಬಾಲಗ್ರಹೈಃ
ಸದ್ಯೋ ಮುಚ್ಯತ ಏವ ಶಾಂತಿಕಜಪಾದ್ಭಕ್ತೋಽಥ ಮುಕ್ತೋ ಭವೇತ್ ॥೬೨॥

ಯುಕ್ತಾ ಏವ ಭವಂತಿ ಸಕ್ತಹೃದಯಾ ಮಯ್ಯೇವಭಕ್ತಾ ಶಿವೇ
ಶಾಂತಾಸ್ತೇ ಭುವನಾವನೇ ದ್ವಿಜವರಾ ಸ್ತ್ವಾಲೋಕನೇ ಕಿಂ ಪುನಃ ।
ವ್ಯಕ್ತಾವ್ಯಕ್ತಗತೇಷು ತೇಷು ಸುಲಭೋ ಮೋಕ್ಷೋಕ್ಷಶಾಂಗೇಷು ವೈ
ವಕ್ತವ್ಯಂ ಕಿಮುಮಾಸಹಾಯಚರಣಾಂಭೋಜಪ್ರಭಾ ಭಾಸುರೇ ॥೬೩॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಮಹಾದೇವಾಖ್ಯೇ
ಶಾಂತ್ಯಧ್ಯಾಯಕಥನಂ ನಾಮ ಏಕಚತ್ವಾರಿಂಶೋಽಧ್ಯಾಯಃ

---

ಆದ್ದರಿಂದ ಸರ್ವರೂ ಇದನ್ನು ತಪ್ಪದೆ ಶ್ರವಣ ಮತ್ತು ಮನನ ಮಾಡಬೇಕು. ॥೫೯-೬೦-೬೧॥

ಎಲೌ ಪಾರ್ವತಿಯೆ, ನಿಜವಾಗಿಯೂ ಈ ಶಾಂತ್ಯಧ್ಯಾಯಪಾಠಕನು, ಆತ್ಮಶಾಂತಿಯನ್ನೂ, ರೋಗ, ಚೋರ, ರಾಜ, ಶತ್ರು, ಬಾಲಗ್ರಹಾದಿ ಸಕಲ ವ್ಯಾಧಿಪ್ರದವಾದ ಗ್ರಹಗಳು, ಇವರುಗಳಿಂದ ಆಗಾಗ ಒದಗುವ ಯಾವ ತೊಂದರೆಗಳನ್ನೂ ಪಡೆಯಲಾರನು. ಕೊನೆಗೆ ಇವರಿಂದ ಸುಜ್ಞಾನರಾಶಿಯು ಲಭಿಸಿ ಸದ್ಯೋಮುಕ್ತನಾಗುವನು. ಇದರಲ್ಲಿ ಸಂಶಯವಿಲ್ಲ. ॥೬೨॥

ಗೌರೀದೇವಿಯೇ, ಕೇಳು. ಈ ಶಾಂತ್ಯಧ್ಯಾಯವನ್ನು ಸ್ಥಿರಮನಸ್ಸಿನಿಂದ ಪಠಿಸಿ ಮನನಮಾಡುವವನು ನನ್ನಲ್ಲಿ ಸ್ಥಿರವಾದ ಭಕ್ತಿಯನ್ನು ಸಂಪಾದಿಸುವನು. ಅದರಿಂದ ಅವನಿಗೆ ಲೋಕರಕ್ಷಣ ಸಾಮರ್ಥ್ಯವೂ, ಆತ್ಮಜ್ಞಾನವೂ ಲಭಿಸಿ, ಐಹಿಕಾಮುಷ್ಮಿಕಗಳೆರಡು ಸುಖಗಳೂ ಪ್ರಾಪ್ತವಾಗುವುವು. ಅವರು ವ್ಯಕ್ತವಾಗಿಯೋ

ಅವ್ಯಕ್ತವಾಗಿಯೋ ಜೀವಿಸಿದ್ದು, ಅಕ್ಷತಾಂಗವುಳ್ಳವರಾಗಿ ಕೊನೆಗೆ ಶಾಶ್ವತವಾದ ಮೋಕ್ಷವನ್ನು ಪಡೆಯುವರು. ಹೀಗಿರುವ (ನನ್ನ) ಈಶ್ವರನ ಪಾದಕಮಲದ ಪ್ರಭೆಯ ಮಹಿಮೆಯನ್ನು ನಿನಗೆ ಎಷ್ಟೆಂದು ವಿವರಿಸಲಿ ಎಂದು ಪರಶಿವನೇ ಸಾಕ್ಷಾತ್ತಾಗಿ ಪಾರ್ವತಿಗೆ ತಿಳಿಸಿದ ವಿಷಯವನ್ನು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಬೋಧಿಸಿದನು. ||೬೩||

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ
ನಲವತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ದ್ವಿಚತ್ವಾರಿಂಶೋಽಧ್ಯಾಯಃ

॥ ಶ್ರೀ ಸ್ಕಂದ ಉವಾಚ ॥

ಯೇ ಸ್ಮರಂತಿ ಸದಾ ಕಾಲಂ ಈಶಾನಂ ಪೂಜಯಂತಿ ವಾ ।
ರುದ್ರಲೋಕಾತ್ಪರಿಭ್ರಷ್ಟಾಃ ವಿಜ್ಞೇಯಾಸ್ತೇ ಗಣೇಶ್ವರಾಃ ॥೧॥

ಅಗ್ನಿಹೋತ್ರಾಶ್ಚ ವೇದಾಶ್ಚ ಯಜ್ಞಾಶ್ಚ ಬಹುದಕ್ಷಿಣಾಃ ।
ಶಿವಲಿಂಗಾರ್ಚನಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ॥೨॥

ಸದಾ ಯಜತಿ ಯಜ್ಞೇನ ಸದಾ ದಾನಂ ಪ್ರಯಚ್ಛತಿ ।
ಸದಾ ಸ ವಾಯುಭಕ್ಷಸ್ಸ್ಯಾತ್ಸದಾ ಯೋಽರ್ಚಯತೇ ಶಿವಂ ॥೩॥

## ನಲವತ್ತೆರಡನೆಯ ಅಧ್ಯಾಯ

ಜೈಗೀಷವ್ಯಾದಿಗಳನ್ನು ಕುರಿತು ಕುಮಾರಸ್ವಾಮಿಯು ಹೀಗೆಂದನು. ಮಹರ್ಷಿಯೇ, ಭೂಲೋಕದಲ್ಲಿ ಯಾರು ಸರ್ವದಾ ಶಿವಲಿಂಗಾರಾಧನೆಮಾಡುತ್ತಾ, ಸದಾ ಶಿವಧ್ಯಾನದಿಂದಲೇ ಕಾಲಕಳೆಯುವರೋ, ಅಂತಹವರು ರುದ್ರಲೋಕವನ್ನು ಬಿಟ್ಟು ಶಿವಸಾಮೀಪ್ಯರೂಪವಾದ ಗಣಾಧೀಶರಾಗಿ ನೆಲಸುವರು. ಭೂಲೋಕದಲ್ಲಿ ನಡೆಸುವ ಅಗ್ನಿಹೋತ್ರ, ವೇದಪಠನೆ, ಯಾಗಾಚರಣೆ ಇವೆಲ್ಲವೂ ಪುಣ್ಯಪ್ರದಗಳಾದರೂ ಶಿವಲಿಂಗಾರ್ಚನೆಯಿಂದ ಲಭಿಸುವ ಪುಣ್ಯರಾಶಿಯಲ್ಲಿ ಕೋಟ್ಯಂಶವೂ ಅವುಗಳಿಂದ ಲಭಿಸಲಾರದು. ॥೧-೨॥

ಯಾವನು ತಪ್ಪದೆ ಶಿವಾರ್ಚನೆ ಮಾಡುವನೋ, ಅವನು ಯಜ್ಞಗಳನ್ನು ಆಚರಿಸಿದಂತೆಯೂ, ದಾನಗಳನ್ನು ನಡೆಸಿದಂತೆಯೂ, ವಾಯುಭಕ್ಷಣೆಯಿಂದ ಶಿವ

ಯಶ್ಶಿವಂ ಪೂಜಯೇತ್ ನಿತ್ಯಂ ಪ್ರಣಮೇದ್ವಾಪಿ ಭಕ್ತಿತಃ ।
ತಸ್ಯ ಯೋಗಂ ಚ ಮೋಕ್ಷಂ ಚ ಶಿವಃ ಪ್ರೀತಃ ಪ್ರಯಚ್ಛತಿ ॥೪॥

ಯಃ ಕುರ್ಯಾದರ್ಚನಂ ಮಾಸಮೇಕಾಹಾರೋ ಜಿತೇಂದ್ರಿಯಃ ।
ಸ ಚ ಯತ್ಫಲಮಾಪ್ನೋತಿ ನ ತತ್ಸರ್ವೈರ್ಮಹಾಮಖೈಃ ॥೫॥

ಪೌರ್ಣಮಾಸ್ಯಾಮಮಾವಾಸ್ಯಾಂ ಚತುರ್ದಶ್ಯಷ್ಟಮೀಷು ಚ ।
ಸ್ನಾಪಯಿತ್ವಾಂಭಸಾ ಲಿಂಗಂ ಸರ್ವಯಜ್ಞಫಲಂ ಲಭೇತ್ ॥೬॥

ಕೃಷ್ಣಪಕ್ಷತ್ರಯೋದಶ್ಯಾಮುಪೋಷ್ಯ ಪರಮೇಶ್ವರಂ ।
ಪ್ರಾತರ್ಮಧ್ಯಾಹ್ನಯೋಃ ಪೂಜಾಂ ಚತುರ್ದಶ್ಯಾಂ ಸಮಾರಭೇತ್ ॥೭॥

ಪಂಚಗವ್ಯಂ ಸಕೃತ್ಪೀತ್ವಾ ಹವಿರ್ಭುಂಜೀತ ವಾಗ್ಯತಃ ।
ದಶಾನಾಮಶ್ವಮೇಧಾನಾಂ ಫಲಂ ಪ್ರಾಪ್ನೋತಿ ಮಾನವಃ ॥೮॥

ಕೃಷ್ಣಾಷ್ಟಮ್ಯಾಮುಪೋಷ್ಯಾಥ ಶಂಕರಂ ಯೋಽರ್ಚಯೇತ್ತು ಸಃ ।
ಪ್ರಾಪ್ನೋತಿ ಪರಮಂ ಸ್ಥಾನಂ ಯತ್ರ ದೇವೋ ಮಹೇಶ್ವರಃ ॥೯॥

---

ನನ್ನು ಮೆಚ್ಚಿಸಿದಂತೆಯೂ ಆಗುವುದು. ಶಂಕರನನ್ನು ಪೂಜಿಸುವವನ ಅಥವಾ ಆವ ನನ್ನು ವಂದಿಸುವವನ ಸಕಲ ಯೋಗಕ್ಷೇಮವನ್ನೂ ಸಾಕ್ಷಾಚ್ಛಿವನೇ ನೋಡಿ ಕೊಳ್ಳುವನು. ॥೩-೪॥

ಒಂದು ತಿಂಗಳು ಪೂರ್ತಿ ಏಕಭುಕ್ತದಿಂದಿದ್ದು ಈಶ್ವರನನ್ನು ಪೂಜಿಸಿದವರಿಗೆ ಸಕಲ ಯಜ್ಞಾಚರಣೆಯ ಫಲವೂ ಲಭಿಸುವುದು. ಪೂರ್ಣಿಮಾ, ಅಮಾವಾಸ್ಯೆ, ಚತುರ್ದಶೀ, ಅಷ್ಟಮೀ ಈ ತಿಥಿಗಳಲ್ಲಿ ಶಿವಲಿಂಗಕ್ಕೆ ಅಭಿಷೇಕಾದಿಗಳನ್ನು ನೆರ ವೇರಿಸುವವರು ಸರ್ವಯಜ್ಞಗಳ ಫಲವನ್ನೂ ಪಡೆಯುವರು. ॥೫-೬॥

ಕೃಷ್ಣಪಕ್ಷದ ತ್ರಯೋದಶಿಯ ದಿನ ಉಪವಾಸದಿಂದಿದ್ದು ಚತುರ್ದಶಿಯ ದಿನ ಪ್ರಾತಃಕಾಲ, ಮತ್ತು ಮಧ್ಯಾಹ್ನ ಕಾಲದಲ್ಲಿ ಶಿವಾರಾಧನೆಮಾಡಿ, ಅನಂತರ ಪಂಚಗವ್ಯ ಭಕ್ಷಣೆಮಾಡಿ ಶಿವನೈವೇದ್ಯವನ್ನು ಭುಂಜಿಸಿದವರಿಗೆ ದಶಾಶ್ವಮೇಧ ಯಾಗದ ಫಲವು ಲಭಿಸುವುದು. ॥೭-೮॥

ಹಾಗೆಯೇ ಕೃಷ್ಣಾಷ್ಟಮಿಯ ದಿವಸ ಉಪವಾಸವಿದ್ದು ಶಂಕರಾರ್ಚನೆಮಾಡಿ ದವನಿಗೂ ಪರಮಪದವು ಲಭಿಸುವುದು. ಬ್ರಹ್ಮಚಾರಿಯಾದವನು ತಪ್ಪದೆ ತ್ರಿಕಾಲ

ಬ್ರಹ್ಮಚಾರೀ ಶುಚಿರ್ಭೂತ್ವಾ ತ್ರಿಸಂಧ್ಯಂ ಯೋಽರ್ಚಯೇಚ್ಛಿವಂ ।
ತ್ರಿಸ್ಸಪ್ತಕುಲಮುದ್ಧೃತ್ಯ ಶಿವಲೋಕೇ ಮಹೀಯತೇ ॥೧೦॥

ದಾನೋಪವಾಸನಿಯಮೈಃ ಪೂಜಾ ಜಾಗರಭೋಜನೈಃ ।
ಮಹಾಸ್ನಾನಾದಿವಿಧಿನಾ ಶಿವಂ ಪರ್ವಸು ಪೂಜಯೇತ್ ॥೧೧॥

ಯಾವಚ್ಚ ಸರ್ವಕಾಲೇಷು ಯಾವದರ್ಚಯತೇ ಶಿವಂ ।
ತಾವತ್ಕಾಲಾರ್ಚನಂ ಪುಣ್ಯಂ ಯಾವತ್ಪರ್ವಾರ್ಚಕೋ ಲಭೇತ್ ॥೧೨॥

ಸ್ನಾತ್ವಾ ಪರ್ವಸು ಯತ್ನೇನ ಯಥಾ ವಿಭವವಿಸ್ತರೈಃ ।
ಪೂಜನೀಯಶ್ಶಿವೋ ನಿತ್ಯಂ ಮಹಾಪುಣ್ಯಜಿಗೀಷಯಾ ॥೧೩॥

ನೈರಂತರ್ಯೇಣ ಷಣ್ಮಾಸಾನ್ವಿಧಿನಾ ಪೂಜ್ಯ ಶಂಕರಂ ।
ಪುಣ್ಯಂ ತದೇವ ಲಭತೇ ಸಕಾಲಂ ವಿಧಿನಾರ್ಚನಾತ್ ॥೧೪॥

ಏವಮೇವ ಫಲಂ ಜ್ಞೇಯಂ ಗ್ರಹಣಾಯನಯೋರಪಿ ।
ಸಂಕ್ರಾಂತೌ ಚ ದಿನೇ ಛಿದ್ರೇ ಷಡಶೀತಿಮುಖೇಷು ಚ ॥೧೫॥

---

ಗಳಲ್ಲಿಯೂ ವಿಧಿವತ್ತಾಗಿ ಶಿವಾರ್ಚನೆಮಾಡಿದರೆ ಅವನ ಇಪ್ಪತ್ತೊಂದು ಕುಲದವರೂ ನರಕದಿಂದ ಉದ್ಧಾರಹೊಂದುವರು. ||೯-೧೦||

ಪರ್ವತಿಥಿಗಳಲ್ಲಿ ಶಿವಪ್ರೀತ್ಯರ್ಥವಾಗಿ ದಾನ, ಉಪವಾಸ, ಪೂಜೆ, ನಿದ್ರೆ ಮಾಡದೆ ಧ್ಯಾನಿಸುವುದು, ಪಾರಣೆಮಾಡುವುದು, ಇವುಗಳನ್ನು ನಡೆಸುತ್ತಾ ಶಿವಪ್ರೀತಿಯನ್ನು ಸಂಪಾದಿಸಬೇಕು. ಯಾವಕಾಲವೇ ಆಗಲಿ ಶಿವಾರ್ಚನೆಮಾಡುವ ಪರ್ಯಂತವೂ ಅದು ಪರ್ವಕಾಲವೇ ಸರಿ. ಶಿವಾರ್ಚನೆ ಮುಗಿಯುವವರೆಗೂ ಆ ಕಾಲವು ಪುಣ್ಯಪ್ರದವೆಂದೇ ಭಾವನೆಯಿರಬೇಕು. ||೧೧-೧೨||

ಆದರೆ ಪರ್ವಕಾಲದಲ್ಲಿ ಪ್ರಯತ್ನಪೂರ್ವಕವಾಗಿ ಅನಂತವೈಭವದಿಂದ ಶಿವಾರ್ಚನೆ ನಡೆಸಿದುದೇ ಆದರೆ ಅತಿಶಯವಾದ ಪುಣ್ಯಪ್ರಾಪ್ತಿಯುಂಟು. ಆರುತಿಂಗಳು ಅವಿಚ್ಛಿನ್ನವಾಗಿ ಶಿವಾರಾಧನೆಮಾಡುವುದರಿಂದ ಎಷ್ಟು ಸುಕೃತವು ಲಭಿಸುವುದೋ, ಅಷ್ಟೇ ಪುಣ್ಯವು ಆ ಪರ್ವಕಾಲದ ಶಿವಾರ್ಚನೆಯಿಂದ ಒದಗುವುದು. ಪರ್ವಕಾಲದ ಶಿವಾರ್ಚನೆಯು ಅಷ್ಟು ಪುಣ್ಯಫಲಪ್ರದವಾದುದು. ||೧೩-೧೪||

ಗ್ರಹಣಕಾಲ, ಅಯನದಿನಗಳು, ಸಂಕ್ರಾಂತಿದಿನಗಳು, ವಿಶೇಷವಾಗಿ ಮಿಥುನ,

ಮಾಸೈಕ್ಷತುರ್ಭಿರ್ಯತ್ಪುಣ್ಯಂ ವಿಧಿನಾ ಪೂಜ್ಯ ಶಂಕರಂ ।
ತತ್ಕಾರ್ತಿಕ್ಯಾಂ ಭವೇತ್ಪುಣ್ಯಂ ಪೌರ್ಣಮಾಸ್ಯಾಂ ಶಿವಾರ್ಚನಾತ್ ॥೧೬॥

ಪುಣ್ಯಂ ತದೇತತ್ಫಾಲ್ಗುನ್ಯಾಮಾಷಾಢ್ಯಾಮೇವಮೇವ ಚ ।
ಚಾತುರ್ಮಾಸ್ಯಾರ್ಚನಾದೇತನ್ಮಹಾಪುಣ್ಯಫಲಂ ಲಭೇತ್ ॥೧೭॥

ಮಾಘಮಾಸೇ ಸಮುದ್ದಿಶ್ಯ ತ್ರಿಸಂಧ್ಯಂ ಯೋಽರ್ಚಯೇಚ್ಛಿವಂ ।
ಲಭೇತ್ ಷಾಣ್ಮಾಸಿಕಂ ಪುಣ್ಯಂ ಮಾಸೇನೈವ ನ ಸಂಶಯಃ ॥೧೮॥

ಯಥಾ ಮಾಘೇ ತಥಾಷಾಢೇ ಮಾಘೇ ಚೈವ ತು ಕಾರ್ತಿಕೇ ।
ತ್ರಿಷು ಪುಣ್ಯಂ ಸಮಂ ಜ್ಞೇಯಂ ಮಾಸೇಷ್ವೇಷೇಷು ಯತ್ಕೃತಂ ॥೧೯॥

ಚಾತುರ್ಮಾಸ್ಯಕೃತಂ ಪುಣ್ಯಂ ಪುಷ್ಯಮಾಸಾರ್ಚನೇ ಭವೇತ್ ।
ಚೈತ್ರಫಾಲ್ಗುನಯೋಃ ಪುಣ್ಯಂ ದ್ವಿಮಾಸಜನಿತಂ ಭವೇತ್ ॥೨೦॥

---

ಕನ್ಯಾ, ಧನುಸ್ಸು, ಮೀನಸಂಕ್ರಮಣಗಳೆಂಬ ಷಡಶೀತಿ ಪುಣ್ಯಕಾಲಗಳು ಇವು ಪರ್ವತಿಥಿಗಳೆನಿಸುವುವು. ಕಾರ್ತಿಕಮಾಸದ ಪೂರ್ಣಿಮಾತಿಥಿಯಲ್ಲಿ ಶಿವಾರ್ಚನೆ ಮಾಡುವುದರಿಂದ ನಾಲ್ಕುತಿಂಗಳು ಅವಿಚ್ಛಿನ್ನವಾಗಿ ಶಿವಾರ್ಚನೆಮಾಡಿದ ಫಲವು ಲಭಿಸುವುದು. ||೧೫-೧೬||

ಫಾಲ್ಗುಣ, ಆಷಾಢ ಈತಿಂಗಳಿನ ಪೂರ್ಣಿಮಾತಿಥಿಗಳಲ್ಲಿ ಶಿವಾರ್ಚನೆ ಮಾಡಿದರೆ ಚಾತುರ್ಮಾಸ್ಯ ಶಿವಾರ್ಚನೆಯ ಫಲವೆಲ್ಲಾ ದೊರಕುವುದು. ಮಾಘ ಮಾಸದಲ್ಲಿ ತ್ರಿಕಾಲಗಳಲ್ಲಿಯೂ ಶಿವಾರಾಧನೆಮಾಡುವುದರಿಂದ ಆರುತಿಂಗಳು ಶಿವಾರ್ಚನೆಮಾಡಿದ ಸುಕೃತವು ಲಭಿಸುವುದು. ಇದರಲ್ಲಿ ಸಂಶಯವಿಲ್ಲ. ||೧೭-೧೮||

ಶಿವಾರ್ಚನೆಗೆ ಮಾಘ, ಆಷಾಢ, ಕಾರ್ತಿಕ ಈ ಮೂರು ತಿಂಗಳೂ ಪ್ರಶಸ್ತವಾದವುಗಳು. ಈ ಮೂರು ತಿಂಗಳಲ್ಲಿ ಶಿವಾರ್ಚನೆಮಾಡುವುದರಿಂದಲೂ ಸಮವಾದ ಪುಣ್ಯವು ದೊರಕುವುದು. ಪುಷ್ಯಮಾಸದಲ್ಲಿ ಶಿವಾರ್ಚನೆಮಾಡುವುದರಿಂದ ನಾಲ್ಕು ತಿಂಗಳ ಕಾಲ ಅವಿಚ್ಛಿನ್ನವಾಗಿ ಶಿವಾರಾಧನೆಮಾಡಿದ ಸುಕೃತವು ಲಭಿಸುವುದು. ಚೈತ್ರ ಮತ್ತು ಫಾಲ್ಗುನ ಮಾಸಗಳಲ್ಲಿ ಶಿವಾರ್ಚನೆ ನಡೆಸಿದರೆ ಎರಡು ತಿಂಗಳುಗಳು ಶಿವಾರ್ಚನೆಮಾಡಿದಂತಾಗುವುದು. ||೧೯-೨೦||

ಚತುರ್ದಶ್ಯಾಮಮಾವಾಸ್ಯಾಂ ಪೌರ್ಣಮಾಸ್ಯಾಂ ಚ ಸಾಕ್ಷಿಕಂ ।
ಪುಣ್ಯಮಷ್ಟಗುಣಂ ಜ್ಞೇಯಮಷ್ಟಮ್ಯಾಮರ್ಚಯೇಚ್ಛಿವಂ ॥೨೦॥

ಯಃ ಪ್ರದದ್ಯಾದ್ಗವಾಂ ಲಕ್ಷಂ ದೋಗ್ಧ್ರೀಣಾಂ ವೇದಪಾರಗೇ ।
ಏಕಾಹಂ ಯೋಽರ್ಚಯೇಲ್ಲಿಂಗಂ ತಸ್ಯ ಪುಣ್ಯಂ ತತೋಽಧಿಕಂ ॥೨೨॥

ಮಾಸೇ ಮಾಸೇ ತು ಯೋಽಶ್ನೀಯಾದ್ಯಾವಜ್ಜೀವಂ ಸಕೃನ್ನರಃ ।
ಯಶ್ಚಾರ್ಚಯೇತ್ಸಕೃಲ್ಲಿಂಗಂ ಸಮಮೇವ ನ ಸಂಶಯಃ ॥೨೩॥

ಏತೇನ ಕ್ರಮಯೋಗೇನ ಪುಣ್ಯವೃದ್ಧಿರ್ದಿನೇದಿನೇ ।
ಜ್ಞೇಯಾ ಸಂವತ್ಸರಸ್ಯಾಪಿ ಯಾವದ್ವಾ ಕಾಲಮರ್ಚಯೇತ್ ॥೨೪॥

ಯಃ ಪುನಸ್ಸಂಗಮುತ್ಸೃಜ್ಯ ಇದಮಬ್ದಂ ಪ್ರಪೂಜಯೇತ್ ।
ನೈರಂತರ್ಯಾಚ್ಛತಗುಣಂ ತಸ್ಯ ಪುಣ್ಯಂ ವಿವರ್ಧತೇ ॥೨೫॥

---

ಪ್ರತಿಪಕ್ಷದ ಅಷ್ಟಮೀ ಚತುರ್ದಶೀ ತಿಥಿಗಳಲ್ಲಿಯೂ, ಹಾಗೆಯೇ ಪೂರ್ಣಿಮಾ, ಅಮಾತಿಥಿಗಳಲ್ಲಿಯೂ ತಪ್ಪದೆ ಶಿವಾರ್ಚನೆಮಾಡುವುದರಿಂದ ಎಂಟರಷ್ಟು ವಿಶೇಷವಾದ ಸುಕೃತವು ಲಭಿಸುವುದು. ವೇದಪಾರಂಗತನಾದ ವೈದಿಕನಿಗೆ ಒಂದು ಲಕ್ಷ ಕರೆಯುವ ಗೋವುಗಳನ್ನು ದಾನಮಾಡುವುದರಿಂದ ಎಷ್ಟು ಪುಣ್ಯವು ಲಭಿಸುವುದೋ ಅಷ್ಟೇ ಪ್ರಮಾಣದ ಪುಣ್ಯವು ಒಂದು ದಿನ ಶಿವಲಿಂಗವನ್ನು ಭಕ್ತಿಯಿಂದ ಪೂಜಿಸುವುದರಿಂದಲೇ ದೊರಕುವುದು. ॥೨೧-೨೨॥

ಮಾನವನು ತಿಂಗಳಿಗೊಂದುದಿನ ಊಟಮಾಡುತ್ತಾ ಉಳಿದ ದಿನಗಳು ಶಿವಪ್ರೀತಿಗಾಗಿ ಉಪವಾಸಮಾಡುವುದರಿಂದ ಎಷ್ಟು ಪುಣ್ಯವು ಒದಗುವುದೋ, ಅಷ್ಟೇ ಪುಣ್ಯವು ತಿಂಗಳಿಗೊಮ್ಮೆ ಶಿವಾರ್ಚನೆಮಾಡುವುದರಿಂದಲೇ ಲಭಿಸುವುದು. ಇದೇರೀತಿ ಪ್ರತಿ ತಿಂಗಳಲ್ಲಿಯೂ ಶಿವಾರ್ಚನೆಮಾಡುತ್ತಾ ಪುಣ್ಯವನ್ನು ವೃದ್ಧಿಪಡಿಸಿಕೊಂಡರೆ, ಅವನಿಗೆ ಸಂವತ್ಸರಪರ್ಯಂತವಾಗಿ ಶಿವಾರ್ಚನೆ ಮಾಡಿದ ಸುಕೃತವು ಪ್ರಾಪ್ತವಾಗುವುದು. ॥೨೩-೨೪॥

ಯಾವನು ಈ ರೀತಿ ಸರ್ವಸಂಗಪರಿತ್ಯಾಗಮಾಡಿ ಶಿವಾರ್ಚನೆಯನ್ನು ವರ್ಷದಲ್ಲಿ ಪ್ರತಿದಿನವೂ ತಪ್ಪದೆ ನಡೆಸುವನೋ, ಅವನ ಪುಣ್ಯವು ಶತಾಧಿಕವಾಗಿ ಬೆಳೆಯುವುದು. ಅಥವಾ ಆರು ತಿಂಗಳುಗಳ ಕಾಲ ತಪ್ಪದೆ ಶಿವಾರ್ಚನೆ ಮಾಡುವುದರಿಂದ ಐವತ್ತರಷ್ಟು ಅಧಿಕವಾಗಿ ಸುಕೃತವು ಲಭಿಸುವುದು. ಹಾಗೆಯೇ

ಪಂಚಾಶದ್ಗುಣಿತಂ ಪುಣ್ಯಂ ಅಬ್ದಾರ್ಧಂ ಯೋಽರ್ಚಯೇಚ್ಛಿವಂ ।
ಋತಾವೃತೌ ತದರ್ಧಂ ಸ್ಯಾನ್ಮಾಸೇ ಮಾಸೇ ತದರ್ಧಕಂ ॥೨೬॥

ಮಾಸಾರ್ಧಮಪಿ ಯೋ ಲಿಂಗಂ ನೈರಂತರ್ಯೇಣ ಪೂಜಯೇತ್ ।
ಪುರುಷೋತ್ತಮಸ್ಸ ವಿಜ್ಞೇಯೋ ನೈರಂತರ್ಯಂ ಹಿ ದುಷ್ಕರಂ ॥೨೭॥

ಪ್ರಾತರುತ್ಥಾಯ ಯೋ ಲಿಂಗಂ ಸಕೃದ್ಭಕ್ತ್ಯಾ ಪ್ರಪೂಜಯೇತ್ ।
ಕಪಿಲಾನಾಂ ಶತಂ ದತ್ವಾ ಯತ್ಪುಣ್ಯಂ ತದವಾಪ್ನುಯಾತ್ ॥೨೮॥

ಮಧ್ಯಂದಿನಕರೇ ಪ್ರಾಪ್ತೇ ಯೋ ಲಿಂಗಂ ಪೂಜಯೇನ್ನರಃ ।
ಸಂಪೂರ್ಣಾಂ ಪೃಥಿವೀಂ ದತ್ವಾ ಯತ್ಪುಣ್ಯಂ ತದವಾಪ್ನುಯಾತ್ ॥೨೯॥

ವಾರುಣೀಮಾಶ್ರಿತೇ ಸೂರ್ಯೇ ಯಶ್ಶಿವಂ ಸಂಪ್ರಪೂಜಯೇತ್ ।
ಗವಾಂ ಶತಸಹಸ್ರಸ್ಯ ದತ್ತಸ್ಯ ಫಲಮಾಪ್ನುಯಾತ್ ॥೩೦॥

ಯೋ ಲಿಂಗಮರ್ಧರಾತ್ರೇ ತು ಶುಚಿರ್ಭೂತ್ವಾ ಪ್ರಪೂಜಯೇತ್ ।
ಅಗ್ನಿಷ್ಟೋಮಸಹಸ್ರಸ್ಯ ಧರ್ಮಸ್ಯ ಲಭತೇ ಫಲಂ ॥೩೧॥

---

ಒಂದೊಂದು ಋತುವಿನಲ್ಲಿಯೂ ತಪ್ಪದೆ ಶಿವಪೂಜೆ ನಡೆಸುವುದರಿಂದಲೂ, ತದರ್ಧ ಪ್ರಮಾಣದಲ್ಲಿ ಸುಕೃತವು ದೊರೆಯುವುದು. ॥೨೫-೨೬॥

ಹದಿನೈದು ದಿನಗಳು ತಪ್ಪದೆ ಶಿವಾರ್ಚನೆಮಾಡಿದರೆ ಆತನು ಪುರುಷೋತ್ತಮನೆನಿಸಿಕೊಳ್ಳುವನು. ಹಾಗೆ ತಪ್ಪದೆ ಶಿವಾರ್ಚನೆಮಾಡಿದರೂ ಆತನು ಪುರುಷೋತ್ತಮನೆನಿಸಿಕೊಳ್ಳುವನು. ಹಾಗೆ ತಪ್ಪದೆ ಶಿವಾರ್ಚನೆಮಾಡುವುದು ಅತಿಕಷ್ಟ. ಯಾವನು ತಪ್ಪದೆ ಪ್ರಾತಃಕಾಲ ಎದ್ದು ಶಿವಲಿಂಗದರ್ಶನಮಾಡುವನೋ ಅವನಿಗೆ ನೂರು ಗೋದಾನಗಳ ಪುಣ್ಯವು ಪ್ರಾಪ್ತವಾಗುವುದು. ॥೨೭-೨೮॥

ಮಧ್ಯಾಹ್ನಕಾಲದಲ್ಲಿ ಶಿವಲಿಂಗಾರಾಧನೆ ಮಾಡುವ ಮನುಷ್ಯನಿಗೆ ಸಕಲ ಭೂದಾನಮಾಡಿದ ಫಲವು ದೊರೆಯುವುದು. ಹಾಗೆಯೇ ಸೂರ್ಯಾಸ್ತಕಾಲದಲ್ಲಿ ಶಿವಲಿಂಗಾರ್ಚನೆ ಮಾಡುವುದರಿಂದ ಕೋಟಿ ಗೋದಾನಗಳ ಸುಕೃತವು ಲಭಿಸುವುದು. ॥೨೯-೩೦॥

ಅರ್ಧರಾತ್ರಿಯಲ್ಲಿ ಶಿವಲಿಂಗಾರ್ಚನೆಮಾಡಿದರೆ ಸಹಸ್ರ ಅಗ್ನಿಷ್ಟೋಮ ಯಾಗಾಚರಣೆಯ ಫಲವು ದೊರಕುವುದು. ಹೀಗೆ ಎಲ್ಲಾ ಕಾಲದಲ್ಲಿಯೂ ಶಿವ

ಸಂಪೂಜಯನ್ನರೋ ಭಕ್ತ್ಯಾ ಸರ್ವಾನ್ಕಾಮಾನವಾಪ್ನುಯಾತ್ ॥೩೨॥

ಶಿವಲಿಂಗಂ ಮಹಾಪುಣ್ಯಂ ಸರ್ವದೇವನಮಸ್ಕೃತಂ ।
ಯಃ ಸ್ಪೃಶೇದಪಿ ಪಾಣಿಭ್ಯಾಂ ನ ಸ ಪಾಪೈಃ ಪ್ರಲಿಪ್ಯತೇ ॥೩೩॥

ನ ತೇ ಭೂಯಃ ಪ್ರಯಾಸ್ಯಂತಿ ಯೋನಿಮಾರ್ಗಂ ಸಕಂಟಕಂ ।
ಕ್ರಮಾನ್ಮೋಕ್ಷಂ ಗಮಿಷ್ಯಂತಿ ಯೇ ನರಾ ಲಿಂಗಮಾಶ್ರಿತಾಃ ॥೩೪॥

ಕಾಂಚನಂ ಮೇರುಮಾತ್ರಂ ಚ ಸರ್ವಾನ್ ದತ್ವಾ ವಸುಂಧರಾಂ ।
ಸಾಗರಾನ್ ರತ್ನಪೂರ್ಣಾಂಶ್ಚ ನ ಲಿಂಗಾರ್ಚಯಿತುಸ್ಸಮಂ ॥೩೫॥

ಮೇರುಮಂದರಮಾಪ್ನೋತಿ ರಾಶಿಃ ಪಾಪಸ್ಯ ಕರ್ಮಣಃ ।
ಈಶ್ವರಂ ವೈದ್ಯಮಾಸಾದ್ಯ ನಶ್ಯತೇ ದುಷ್ಟರೋಗವತ್ ॥೩೬॥

ಶಿವಾರ್ಚನರತೋ ನಿತ್ಯಂ ಮಹಾಪಾತಕಸಂಯುತೈಃ ।
ದೋಷೈಃ ಕೃತೈರ್ನ ಲಿಪ್ಯೇತ ಪದ್ಮಪತ್ರಮಿವಾಂಭಸಾ ॥೩೭॥

ಪೂಜೆಯನ್ನು ನಡೆಸಿ ತಮ್ಮ ಎಲ್ಲಾ ಇಷ್ಟಾರ್ಥಗಳನ್ನೂ ಪಡೆಯಬಹುದು. ॥೩೧-೩೨॥

ಶಿವಲಿಂಗವು ಸರ್ವದೇವತೆಗಳಿಂದಲೂ ಪೂಜಿತವಾದದ್ದು. ಅದನ್ನು ಕೈಗಳಿಂದ ಸ್ಪರ್ಶಮಾಡಿದರೂ ಸಾಕು; ಸಕಲ ಪಾಪಪರಿಹಾರವಾಗುವುದು. ಭಕ್ತಿಯಿಂದಾರಾಧಿಸಿದವರಂತೂ ಮತ್ತೆ ಭೂಲೋಕದಲ್ಲಿ ಜನ್ಮತಾಳದೆ ಶಾಶ್ವತವಾದ ಮೋಕ್ಷವನ್ನು ಪಡೆಯುವರು. ॥೩೩-೩೪॥

ಮೇರುಪರ್ವತಸಮಾನವಾದ ಸುವರ್ಣರಾಶಿಯನ್ನೂ, ಅಖಂಡಭೂಮಂಡಲವನ್ನೂ, ರತ್ನಭರಿತವಾದ ಸಾಗರಗಳನ್ನೂ ದಾನಮಾಡಿದರೂ ಶಿವಲಿಂಗಾರ್ಚನೆ ಮಾಡಿದ ಸುಕೃತವು ಲಭಿಸಲಾರದು. ಶಿವಾರ್ಚಕನು ಮೇರುಮಂದರಗಳಷ್ಟು ಪಾಪರಾಶಿಯನ್ನು ಹೊಂದಿದ್ದರೂ ಶಿವಾರ್ಚನೆ ಮಾಡುವುದರಿಂದ, ವೈದ್ಯನು ಸದೌಷಧಿಯಿಂದ ರೋಗವನ್ನೆಲ್ಲಾ ಪರಿಹರಿಸುವಂತೆ, ಅದು ಕ್ಷಯಿಸಿಹೋಗುವುದು. ॥೩೫-೩೬॥

ತಾವರೆಯ ಎಲೆಯಲ್ಲಿ ನೀರು ಹೇಗೆ ಅಂಟುವುದಿಲ್ಲವೋ, ಹಾಗೆ ಶಿವಾರ್ಚನಾನಿರತನಿಗೆ ಯಾವ ಮಹಾಪಾಪವೂ ಸಂಘಟಿಸುವುದಿಲ್ಲ. ಪ್ರಪಂಚದ ಸಮಸ್ತ ಪ್ರಾಣಿಗಳನ್ನೂ ಕಡಿದು, ಕತ್ತರಿಸಿ ನಾಶಮಾಡಿದರೂ, ಆ ಪಾಪಶೇಷವು ಭಕ್ತಿಯಿಂದ

ಛಿತ್ವಾ ಕ್ಷಿಪ್ತ್ವಾ ಚ ಭೂತಾನಿ ಹತ್ವಾ ಸರ್ವಮಿದಂ ಜಗತ್ ।
ಯಜೇದೇಕಂ ವಿರೂಪಾಕ್ಷಂ ನ ಸ ಪಾಪೈಃ ಪ್ರಲಿಪ್ಯತೇ ॥೩೮॥

ಸರ್ವಾವಸ್ಥಾಂಗತೋ ವಾಪಿ ಯುಕ್ತೋ ವಾ ಸರ್ವಪಾತಕೈಃ ।
ಶಿವಂ ದೃಷ್ಟ್ವಾ ನರಸ್ಸೋಽಪಿ ಪ್ರಯಾತಿ ಪರಮಾಂ ಗತಿಂ ॥೩೯॥

ಶಿವಂ ಸರ್ವತ್ರ ಸಂಪೂಜ್ಯ ಸವಿಶೇಷಂ ಸವಿಸ್ತರಂ ।
ಅಶ್ವಮೇಧಾಯುತಂ ಪುಣ್ಯಂ ಲಭತೇ ನಾತ್ರ ಸಂಶಯಃ ॥೪೦॥

ಸರಿತ್ಸಮುದ್ರತೀರೇಷು ಪರ್ವತೇಷು ವನೇಷು ಚ ।
ಗಿರಿಕಂದರದುರ್ಗೇಷು ಗಹ್ವರೇಷು ವನೇಷು ಚ ॥೪೧॥

ಪುಷ್ಕರಿಣ್ಯಾಂ ತಟಾಕೇಷು ತೀರ್ಥಾಯತನಸಂಶ್ರಯೇ ।
ಯತ್ರ ವಾ ರಮತೇ ಬುದ್ಧಿಸ್ತತ್ರೈವ ಶಿವಮರ್ಚಯೇತ್ ॥೪೨॥

ಸರ್ವಯಜ್ಞೇಷು ಯತ್ಪುಣ್ಯಂ ತಲ್ಲಭೇನ್ನಾತ್ರ ಸಂಶಯಃ ।
ಯಸ್ಸಮರ್ಚಯತೇ ಭಕ್ತ್ಯಾ ತಸ್ಯಪುಣ್ಯಂ ತತೋಽಧಿಕಂ ॥೪೩॥

---

ಒಂದು ಸಾರಿ ಶಿವಾರ್ಚನೆಮಾಡುವುದರಿಂದ ಸಂಪೂರ್ಣವಾಗಿ ನಾಶವಾಗುವುದು. ॥೩೭-೩೮॥

ಮಹಾಪಾಪಶೇಷದಿಂದ ಮಾನವನು ಎಂತಹ ಅವಸ್ಥೆಗೆ ಈಡಾಗಿದ್ದರೂ ಶಿವಪೂಜೆಯೊಂದನ್ನು ಮಾತ್ರ ಭಕ್ತಿಯಿಂದ ನೆರವೇರಿಸಿದರೆ ಅವನು ಸುಲಭವಾಗಿ ಮುಕ್ತನಾಗುವನು. ವಿಶೇಷ ವೈಭವದಿಂದ ಶಿವಪೂಜೆಯನ್ನು ನಡೆಸಿದವರು ಹತ್ತು ಸಾವಿರ ಅಶ್ವಮೇಧಯಾಗಗಳ ಫಲವನ್ನು ಪಡೆಯುವರು. ಇದರಲ್ಲಿ ಸಂಶಯವಿಲ್ಲ. ॥೩೯-೪೦॥

ನದೀತೀರ, ಸಮುದ್ರತೀರ, ಪರ್ವತಪ್ರದೇಶ, ಅರಣ್ಯ, ಬೆಟ್ಟ, ಗುಹೆ, ಕಣಿವೆ ಉದ್ಯಾನಾದಿಗಳು, ಪುಷ್ಕರಿಣೀ, ಕೆರೆ, ತೀರ್ಥಕ್ಷೇತ್ರಗಳು, ಅಥವಾ ನಯನ ಮನೋಹರವಾಗಿ ಕಂಡುಬರುವ ಮತ್ತಾವ ಪ್ರದೇಶಗಳಾಗಲಿ ಶಿವಪೂಜೆಗೆ ಯೋಗ್ಯಸ್ಥಳಗಳೆನಿಸುವುವು. ಅಂತಹ ಸ್ಥಳಗಳಲ್ಲಿ ಶಿವಾರ್ಚನೆಮಾಡಿದವರಿಗೆ ಸರ್ವಯಜ್ಞಾಚರಣೆಯ ಫಲವು ಲಭಿಸುವುದು. ಭಕ್ತಿ ವೈಭವದಿಂದ ಅರ್ಚಿಸಿದವರಿಗೆ ತತೋಽಧಿಕವಾದ ಸುಕೃತವೂ ಒದಗುವುದು. ॥೪೧-೪೨-೪೩॥

ಅರ್ಚೇದ್ವಿನಾಪಿ ಮಂತ್ರೇಣ ಪುಣ್ಯರಾಶಿಃ ಪ್ರಕೀರ್ತಿತಃ ।
ಸ್ಯಾದಯಂ ಮಂತ್ರಸಂಯುಕ್ತಃ ಪುಣ್ಯಂ ಶತಗುಣಾಧಿಕಂ ॥೪೪॥

ತಸ್ಮಾನ್ಮಂತ್ರೇಣ ಶರ್ವಾಯ ಸ್ನಾನಂ ಗಂಧಫಲಾದಿಕಂ ।
ಭೂಮ್ಯಶ್ವರಥವಸ್ತ್ರಂ ಚ ಹೇಮಾದ್ಯಪಿ ನಿವೇದಯೇತ್ ॥೪೫॥

ಜಪ್ಯೋ ನಮಶ್ಶಿವಾಯೇತಿ ಮಂತ್ರಂ ಸರ್ವಾರ್ಥಸಾಧಕಃ ।
ಸರ್ವಮಂತ್ರಾಧಿಕಶ್ಚಾಯಂ ಓಂಕಾರಾದ್ಯಷ್ಷಡಕ್ಷರಃ ॥೪೬॥

ಶಿವೇನಾಂತರ್ಬಹಿರ್ಯಸ್ಮಾದ್ವ್ಯಾಪ್ತಂ ಸರ್ವಂ ಚರಾಚರಂ ।
ಜಗದೋಮಿತಿ ಯದ್ವ್ಯಾಪ್ತಂ ತೇ ತಸ್ಮಾದೋಮಿತಿ ಸ ಸ್ಮೃತಿಃ ॥೪೭॥

ಅಯಮರ್ಥೇನ ತಿಸೃಭಿರ್ಮಾತ್ರಾಭಿಃ ಪರಿಗೀಯತೇ ।
ಬ್ರಹ್ಮಾ ಹರಿಶ್ಚ ರುದ್ರಶ್ಚ ಮಾತ್ರಾಸ್ತಿಸ್ರಃ ಪ್ರಕೀರ್ತಿತಾಃ ॥೪೮॥

ದಕ್ಷಿಣಾಂಗೇ ಭವದ್ಬ್ರಹ್ಮಾ ಹರಿರ್ವಾಮಾಂಗಸಂಭವಃ ।
ಹೃದಯೇ ನಿರ್ಗತೋ ರುದ್ರೋ ಬ್ರಹ್ಮವಿಷ್ಣುಪ್ರಬೋಧಕಃ ॥೪೯॥

---

ಅಮಂತ್ರಕವಾಗಿಯೂ ಶಿವಾರ್ಚನೆಮಾಡಬಹುದು ಆದರೆ ಮಂತ್ರಸಹಿತವಾಗಿ ಶಿವಾರ್ಚನೆಮಾಡುವುದರಿಂದ ಶತಾಧಿಕವಾಗಿ ಪುಣ್ಯವು ಸಂಭವಿಸುವುದು. ಆದ್ದರಿಂದ ಪರಶಿವನಿಗೆ ಸ್ನಾನ, ಗಂಧ, ಫಲ, ಮುಂತಾದವುಗಳನ್ನು ಸಲ್ಲಿಸುವಾಗ ಮಂತ್ರವತ್ತಾಗಿ ನಡೆಸಬೇಕು. ಭೂಮಿ, ಅಶ್ವ, ರಥ, ವಸ್ತ್ರ. ಸುವರ್ಣಾಭರಣಗಳನ್ನು ಶಿವನಿಗಾಗಿ ಸಮರ್ಪಿಸುವಾಗ ಶಿವಪಂಚಾಕ್ಷರೀ ಜಪಪುರಸ್ಸರವಾಗಿ ಅರ್ಪಣೆಮಾಡಬೇಕು. ॥೪೪-೪೫॥

ಶಿವಪಂಚಾಕ್ಷರೀಮಂತ್ರವು ಸರ್ವಾರ್ಥಸಾಧಕವಾದುದು. ಓಂಕಾರಾದಿಯಾದ ಪಂಚಾಕ್ಷರವೇ ಷಡಕ್ಷರಮಂತ್ರವೆನಿಸುವುದು. ಶಿವನನ್ನು ಚರಾಚರಾತ್ಮಕವಾದ ಜಗತ್ತು ಹೇಗೆ ವ್ಯಾಪಿಸಿ ನಿಂತಿರುವುದೋ, ಅದೇ ರೀತಿ ಪಂಚಾಕ್ಷರಮಂತ್ರವನ್ನು ಓಂಕಾರವು ಆವರಿಸಿರುವುದು. ॥೪೬-೪೭॥

ಓಂಕಾರವು ಮೂರು ಮಾತ್ರಾಕಾಲವುಳ್ಳದ್ದು. ಆ ಮಾತ್ರಾತ್ರಯಗಳಿಗೂ, ಬ್ರಹ್ಮ, ಹರಿ, ರುದ್ರ ಇವರು ಅಧಿದೇವತೆಗಳು ಓಂಕಾರಾತ್ಮಕ ಪರಬ್ರಹ್ಮವಸ್ತುವಿನ ಬಲಭಾಗದಿಂದ ಬ್ರಹ್ಮನೂ, ಎಡಭಾಗದಿಂದ ವಿಷ್ಣುವೂ, ಹೃದಯದಿಂದ ರುದ್ರನೂ

ಜಗತ್ಸೃಷ್ಟಿಕರೋ ಬ್ರಹ್ಮಾ ವಿಷ್ಣುರ್ಲೋಕವಿಮೋಹನಃ ।
ಅನುಗ್ರಹಪರೋ ನಿತ್ಯಂ ನೀಲರುದ್ರಃ ಶಿವಾತ್ಮಕಃ ॥೫೦॥

ತ್ರಿಭಿರೇತೈರ್ಜಗದ್ವ್ಯಾಪ್ತಂ ಕಾರಣೈರಾತ್ಮಮೂರ್ತಿಭಿಃ ।
ತಿಸ್ರೋ ಮಾತ್ರಾಸ್ತ್ರಿವಸ್ಯೈತಾಃ ಸರ್ವಲೋಕಪ್ರಪೂಜಿತಾಃ ॥೫೧॥

ಏತಾ ಏವ ತ್ರಯೋವೇದಾಸ್ತ್ರಯೋ ಲೋಕಾ ಸ್ತ್ರಯೋಗುಣಾಃ ।
ತ್ರಯೋಗ್ನಯಸ್ತ್ರಿವರ್ಗಾಶ್ಚ ಯಚ್ಚಾನ್ಯಜ್ಜಗತಿ ಸ್ಥಿತಂ ॥೫೨॥

ಅರ್ಥಪ್ರಾಸಪರೋ ರುದ್ರಃ ಶಿವಃ ಪರಮಕಾರಣಂ ।
ತಸ್ಮಾದೇತತ್ಸಮುತ್ಪನ್ನಂ ಜಗತಃ ಕಾರಣತ್ರಯಂ ॥೫೩॥

ಸರ್ವಯಜ್ಞಾತ್ಪರಶ್ಚಾದ್ಯೋ ನಮಸ್ಕಾರೋ ಮಹಾಮಖಃ ।
ನಮಸ್ಕಾರಾತ್ಮಯಜ್ಞೇನ ತಸ್ಮಾತ್ಸಂಪೂಜಯೇಚ್ಛಿವಂ ॥೫೪॥

---

ಉತ್ಪನ್ನರಾದರು. ಆ ಬ್ರಹ್ಮನು ಸೃಷ್ಟಿಕರ್ತನಾಗಿಯೂ, ವಿಷ್ಣುವು ಜಗತ್ತನ್ನು ಆಕರ್ಷಿಸುವವನಾಗಿಯೂ, ರುದ್ರನು ಅನುಗ್ರಹಪ್ರದನಾಗಿಯೂ ಇರುವರು. ||೪೯-೪೯-೫೦||

ಜಗತ್ಕಾರಣಗಳಾದ ಈ ಮಾತ್ರೆಗಳೇ ತ್ರಿಮೂರ್ತಿಗಳಾಗಿರುವುವು. ಇವರೇ ಲೋಕಪೂಜಿತರು. ಈ ಓಂಕಾರದ ಮಾತ್ರಾತ್ರಯವೇ ವೇದತ್ರಯಗಳು. ಲೋಕದಲ್ಲಿ ಪ್ರಸಿದ್ಧಗಳಾಗಿರುವ, ಅಗ್ನಿತ್ರಯ(ಆಹವನೀಯ ಗಾರ್ಹಪತ್ಯ ದಕ್ಷಿಣಾಗ್ನಿಗಳು) ವರ್ಗತ್ರಯ (ಧರ್ಮ, ಅರ್ಥ, ಕಾಮಗಳು) ಇವೆಲ್ಲವೂ ಈ ಓಂಕಾರದ ಮಾತ್ರಾಂಶಗಳೇ. ||೫೧||

ಈ ಜಗತ್ತಿನ ಆವಿರ್ಭಾವಕ್ಕೆ ಶಿವನೇ ಪರಮಕಾರಣನು. ಅವನಿಂದಲೇ ಈ ಕಾರಣತ್ರಯವೂ ಜನಿಸಿರುವುದು. ಈ ಜಗತ್ತಿನಲ್ಲಿ ಕಂಡುಬರುವ ಸಕಲ ವಸ್ತುಗಳಿಗೂ ಮೂಲಭೂತನಾದ ಈ ಶಿವನೇ ಸರ್ವ ಯಜ್ಞಗಳಿಗೂ ಮೂಲಸ್ಥಾನನು. ಇವನಿಗೆ ವಂದಿಸುವುದೇ ಒಂದು ಮಹಾಯಜ್ಞ. ಆದ್ದರಿಂದಲೇ ಶಂಕರನನ್ನು ಸರ್ವದಾ ಸೇವಿಸಬೇಕು. ||೫೨-೫೩-೫೪||

ಅಜ್ಞಾನಮಶಿವತ್ವಂ ಸ್ಯಾತ್ಸರ್ವದುಃಖಾಲಯಂ ಯತಃ ।
ಸ್ವಭಾವಾತ್ತದಪಾತ್ರಂ ಹಿ ತಸ್ಮಾದ್ರುದ್ರಃ ಪರಶ್ಶಿವಃ ॥೫೫॥

ನಮಶ್ಶಿವಾಯ ಶಾಂತಾಯ ಕಾರಣತ್ರಯಹೇತವೇ ।
ನಿವೇದಯಾಮಿ ಚಾತ್ಮಾನಂ ಮುಕ್ತ್ಯೈಚ ಪರಮೇಶ್ವರಂ ॥೫೬॥

ಉಕ್ತ್ವಾ ನಮಶ್ಶಿವಾಯೇತಿ ಮುಚ್ಯತೇ ಸರ್ವಬಂಧನಾತ್ ।
ಯಸ್ಮಾತ್ತಸ್ಮಾತ್ಸದಾ ಮಂತ್ರಮೋಂಕಾರಾದ್ಯಮನುಸ್ಮರೇತ್ ॥೫೭॥

ಸರ್ವದಾ ಸರ್ವಕಾರ್ಯೇಷು ಕ್ಷುತನಿಷ್ಠೀವನಾದಿಷು ।
ಧನ್ಯೋ ನಮಃ ಶಿವಾಯೇತಿ ಗಿರಮುಕ್ತ್ವಾ ಶಿವಂ ಪದಂ ॥೫೮॥

ಯತ್ಸರ್ವಪಿತ್ಪ್ರಬುದ್ಧಾತ್ಮಾ ಪ್ರಾಣಾಂತೇ ತು ಸಕೃತ್ ಸ್ಮರೇತ್ ।
ಭಕ್ತ್ಯಾ ನಮಶ್ಶಿವಾಯೇತಿ ಸ ಗಚ್ಛೇತ್ಪರಮಾಂ ಗತಿಂ ॥೫೯॥

ನಾರ್ಧ್ಯೇನಾಪಿ ನಮಸ್ಕಾರಃ ಪ್ರಯುಕ್ತಶ್ಶೂಲಪಾಣಯೇ ।
ಸಂಸಾರಸ್ಥೂಣಬಂಧಾನಾಂ ಉದ್ವೇಷ್ಟನಕರೋ ಭವೇತ್ ॥೬೦॥

---

'ಲೋಕದಲ್ಲಿ ಅಶಿವತ್ವವೇ ಅಜ್ಞಾನ ಅದೇ ಸರ್ವದುಃಖಕಾರಣ. ಶಿವಜ್ಞಾನವಿಲ್ಲದವನು ಸರ್ವಕರ್ಮಗಳಿಗೂ ಅಪಾತ್ರನು. ಆದ್ದರಿಂದಲೇ ಶಿವನು ಪರಮಕಾರಣನೆನಿಸಿದವನು. ಶಿವನೂ, ಶಾಂತನೂ, ಜಗತ್ತುಗಳ ಕಾರಣತ್ರಯಗಳಿಗೂ ಮೂಲಕಾರಣನೂ ಆದ ಪರಶಿವನಿಗೆ ನನ್ನನ್ನು ಅರ್ಪಿಸುತ್ತೇನೆ. ಆದರಿಂದ ನನಗೆ ಸ್ಥಿರಮುಕ್ತಿಯು ಸಂಭವಿಸಲಿ' ಎಂದು ಪ್ರಾರ್ಥಿಸಬೇಕು ॥೫೫-೫೬॥

'ನಮಶ್ಶಿವಾಯ' ಎಂಬ ಶಬ್ದವನ್ನು ಓಂಕಾರಾದಿಯಾಗಿ ಹೇಳಿದ್ದೇ ಆದರೆ ಸರ್ವಬಂಧನದಿಂದಲೂ ಅವನು ಮುಕ್ತನಾಗುವನು. ಹಾಗೆಯೇ ಸೀನು ಆಕಳಿಕೆ ಮುಂತಾದ ದೈಹಿಕಕಾರ್ಯಗಳು ನಡೆಯುವಾಗ 'ನಮಶ್ಶಿವಾಯ' ಎಂದು ಹೇಳುತ್ತಿರುವವರಿಗೆ ಶಿವಸಾನ್ನಿಧ್ಯವೇ ದೊರಕುವುದು. ॥೫೭-೫೮॥

ಯಾವನು ಯಾವಾಗಲೂ ಜಾಗ್ರತನಾಗಿದ್ದು ಶಿವಸ್ಮರಣೆ ಮಾಡುತ್ತಾ ಪ್ರಾಣಾಂತ್ಯಕಾಲದಲ್ಲಿಯೂ 'ನಮಶ್ಶಿವಾಯ' ಎಂದು ಶಿವಸ್ಮರಣೆ ಮಾಡುವನೋ ಅವನು ಮೋಕ್ಷಪದವಿಯನ್ನು ಹೊಂದುವನು ಶ್ರೀಮಂತನಾದವನು ಅಹಂಕಾರದಿಂದ

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂಗತೋಽಪಿ ವಾ ।
ಯಃ ಸ್ಮರೇತ್ಸಂಯುತೋ ರುದ್ರಂ ಸ ಬಾಹ್ಯಾಭ್ಯಂತರಶ್ಶುಚಿಃ ॥೬೧॥

ಸ್ಮರಣಾದೇವ ರುದ್ರಸ್ಯ ಪಾಪಸಂಘಾತಜಂ ಪರಂ ।
ಶತಧಾ ಭೇದಮಾಪ್ನೋತಿ ಗಿರಿರ್ವಜ್ರಹತೋ ಯಥಾ ॥೬೨॥

ಸರ್ವೇಷಾಂ ಶಿವಭಕ್ತಾನಾಮಶೇಷಾರ್ಥಪ್ರಸಿದ್ಧಯೇ ।
ಮಂತ್ರಮಾಹ ಶಿವಸ್ಸಾಕ್ಷಾದಶೇಷಾರ್ಥನಿಬಂಧನಂ ॥೬೩॥

ಸದ್ಬೀಜಂ ಸರ್ವವಿದ್ಯಾನಾಮಾದ್ಯಂ ಬ್ರಹ್ಮ ಪರಾತ್ಪರಂ ।
ಸರ್ವಸಾಧನಕಂ ಮಂತ್ರಂ ಶಿವಸೂತ್ರಂ ಷಡಕ್ಷರಂ ॥೬೪॥

ಭಾಷಾಮಂತ್ರೈವ ಶೂದ್ರಸ್ಯ ಸರ್ವಜ್ಞೇನಾತಿಶಂಭುನಾ ।
ಪಶ್ಚಾತ್ಪುರಾಪರಾಣೀಹ ವ್ಯಕ್ತಾರ್ಥಂ ಗದಿತಾನಿ ತು ॥೬೫॥

---

ಕೂಡಿ ಶೂಲಪಾಣಿಯಾದ ಶಂಕರನಿಗೆ ನಮಸ್ಕಾರಮಾಡದಿದ್ದರೆ ಸಾಂಸಾರಿಕವಾದ ಎಡರುತೊಡರುಗಳು ಅವನನ್ನು ಎಂದಿಗೂ ಬಿಡಲಾರವು. ॥೫೯-೬೦॥

ಯಾವನು ಸ್ಥಿರಮನಸ್ಸಿನಿಂದ ಕೂಡಿ ಸರ್ವದಾ ಈಶ್ವರನನ್ನೇ ಸ್ಮರಿಸುತ್ತಿರುವನೋ ಅವನು ಪವಿತ್ರನೇ ಆಗಲಿ, ಜಾತ್ಯಾದಿಗಳಿಂದ ಅಪವಿತ್ರನೇ ಆಗಿರಲಿ, ಎಂತಹ ದುಃಸ್ಥಿತಿಯಲ್ಲಿದ್ದರೂ ಅವನು ಪವಿತ್ರತಮನೆನಿಸುವನು ಕೇವಲ ಶಿವನಾಮಸ್ಮರಣೆಯಿಂದಲೇ ಅವನ ಪಾಪರಾಶಿಯೆಲ್ಲವೂ ವಜ್ರಾಯುಧದಿಂದ ಪರ್ವತವು ನುಚ್ಚುನೂರಾಗುವಂತೆ ನಾಶವಾಗುವುವು. ॥೬೧-೬೨॥

ಈಶ್ವರನನ್ನು ಆರಾಧಿಸಿ ಮುಕ್ತರಾಗುವ ಭಕ್ತರ ಇಷ್ಟಾರ್ಥಪ್ರಾಪ್ತಿಗಾಗಿಯೇ ನಾನಾವಿಧವಾದ ಇಷ್ಟಾರ್ಥಗಳನ್ನು ಒದಗಿಸಬಲ್ಲ ಶಿವಮಂತ್ರವನ್ನು ದೇವದೇವನು ಉಪದೇಶಿಸಿರುವನು. ಈ ಶಿವಮಂತ್ರವು ಸರ್ವವಿದ್ಯೆಗೂ ಮೂಲವೆನಿಸಿರುವುದು. ಇದೇ ಆ ಪರಬ್ರಹ್ಮಸ್ವರೂಪವು. ಓಂಕಾರಸಹಿತವಾದ ಶಿವಪಂಚಾಕ್ಷರೀ ಮಂತ್ರವಾದರೋ ಸರ್ವಸಾಧನಕರವೆನಿಸಿರುವುದು. ॥೬೩-೬೪॥

ಶೂದ್ರನಾದವನು ‘ಶಿವಾಯನಮಃ’ ಎಂಬ ವಾಕ್ಯದಿಂದಲೇ ಅಥವಾ ಅವನು ಮಾತನಾಡುವ ಭಾಷೆಯಿಂದಲೇ ಶಿವನನ್ನು ಪೂಜಿಸಬಹುದು. ಅದೇ ಅವ

ತಸ್ಮಾದನೇನ ಮಂತ್ರೇಣ ಪ್ರಕುರ್ವೀತ ಶಿವಾರ್ಚನಂ ।
ತತ್ರ ದೇಶೇನ ದುರ್ಭಿಕ್ಷಂ ನ ಚ ಮಾರೀ ಪ್ರವರ್ತತೇ ॥೬೬॥

ನಾಕಾಲೇ ಮ್ರಿಯತೇ ಕಶ್ಚಿತ್ಪೂಜ್ಯತೇ ಯತ್ರ ಶಂಕರಃ ।
ದೀಕ್ಷಿತಸ್ಸೂತ್ರಮಂತ್ರಜ್ಞೋ ಯೋಽರ್ಚಯೇತ್ತು ಸದಾಶಿವಂ ॥೬೭॥

ಸ ಚ ಯತ್ಫಲಮಾಪ್ನೋತಿ ತದೇಕಾಗ್ರಮನಾಶ್ಶೃಣು ॥೬೮॥

॥ ಈಶ್ವರ ಉವಾಚ ॥

ಯಃ ಪೂಜಯೇಚ್ಛಶಿಕಲಾಮಲಮೌಲಿಲಿಂಗಂ
ಭಸ್ಮಾಕ್ಷಧೃಕ್ಪ್ರತಿಥಪರ್ವಸು ಶರ್ವಮೇಕಂ ।
ಸರ್ವೈಶ್ಚ ಪಾತಕವರ್ಗೈಃ ಸ ತು ಮುಕ್ತ ಈಶೇ
ಸಂಸಾರಘೋರವಿಷಸರ್ಪಮುಖಾಭಿಲಗ್ನಃ ॥೬೯॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಶಿವಪೂಜಾಮಹಿಮಾನುವರ್ಣನಂ ನಾಮ ದ್ವಿಚತ್ವಾರಿಂಶೋಽಧ್ಯಾಯಃ

---

ನಿಗೆ ಮಂತ್ರಸ್ವರೂಪವು. ಹೀಗೆಂದು ಸಾಕ್ಷಾತ್ ಶಂಕರನೇ ತಿಳಿಸಿರುವನು. ಆದ್ದರಿಂದ ಎಲ್ಲರೂ ಶಿವಮಂತ್ರದಿಂದ ಈಶ್ವರನನ್ನು ಪೂಜಿಸಬೇಕು ಹೀಗೆ ಶಿವಾರ್ಚನೆಮಾಡುವ ಜನರಿಗೆ ದುರ್ಭಿಕ್ಷವಾಗಲಿ ದುರ್ವ್ಯಾಧಿಗಳ ಭಯವಾಗಲಿ ದುಷ್ಟದೇವತೆಗಳ ಪೀಡೆಯಾಗಲಿ ಇರುವುದಿಲ್ಲ. ೬೫-೬೬॥

ಹಾಗೆ ಶಿವಸೂತ್ರಮಂತ್ರವನ್ನರಿತು ಶಿವಾರ್ಚನೆಮಾಡಿದವರಿಗೆ ಅಕಾಲ ಮರಣವೂ ಸಂಭವಿಸುವುದಿಲ್ಲ. ಈರೀತಿ ಮಂತ್ರಜ್ಞನಾಗಿ ಶಂಕರಾರಾಧನೆ ಮಾಡಿದವರಿಗೆ ಯಾವ ಫಲವು ಲಭಿಸಬಹುದೆಂಬುದನ್ನು ನೀನು ಕೇಳು ಎಂದು ಹೇಳುತ್ತಾ ಕುಮಾರಸ್ವಾಮಿಯು ಮತ್ತೆ ಶಿವೋಕ್ತಿಯನ್ನೇ ಅನುವಾದಿಸುವನು. ॥೬೭-೬೮॥

ಭಸ್ಮರುದ್ರಾಕ್ಷಿಗಳನ್ನು ಧರಿಸಿಕೊಂಡು ಚಂದ್ರಶೇಖರನೂ, ಭಕ್ತರಿಗೆ ಸುಖಪ್ರದನೂ ಆಗಿರುವ ಮಹಾದೇವನನ್ನು ಯಾರು ಪರ್ವಕಾಲಗಳಲ್ಲಿ ತಪ್ಪದೆ ಆರಾಧಿಸುವರೋ, ಅಂತಹವರು ನಿಜವಾಗಿಯೂ ಸರ್ವಪಾಪರಾಶಿಯಿಂದಲೂ ಮುಕ್ತರಾಗುವರು. ಅಲ್ಲದೆ ಅಂತಹವರು ಮತ್ತೆ ಸಂಸಾರವೆಂಬ ಘೋರ ವಿಷಸರ್ಪದ ಬಾಯಿಗೆ ಸಿಕ್ಕಿ ಗೋಳಿಡುವುದಿಲ್ಲ. ಅಂದರೆ ಅವರಿಗೆ ಪುನರ್ಜನ್ಮವಿಲ್ಲದ ಶಾಶ್ವತ

ಮುಕ್ತಿಯು ಲಭಿಸುವುದು. ಈ ವಿಷಯದಲ್ಲಿ ಅನುಮಾನವಿಲ್ಲ ಎಂದು ಪರಶಿವನು ಪಾರ್ವತಿಗೆ ತಿಳಿಯಹೇಳಿದ ವಾಣಿಯನ್ನೇ ಷಣ್ಮುಖಸ್ವಾಮಿಯು ಜೈಗೀಷವ್ಯಾದಿಗಳಿಗೆ ಉಪದೇಶಿಸಿದನು. ॥೬೯॥

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವಪೂಜಾಮಹಿಮೆಯನ್ನು ವಿವರಿಸುವ ನಲವತ್ತೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ತ್ರಿಚತ್ವಾರಿಂಶೋಽಧ್ಯಾಯಃ

|| ಶ್ರೀ ಈಶ್ವರ ಉವಾಚ ||

**ಸರ್ವವೇದೇಷು ಯತ್ಪ್ರೋಕ್ತಂ ಸರ್ವಯಜ್ಞೇಷು ಯತ್ಫಲಂ ।**
**ತತ್ಫಲಂ ಕೋಟಿಗುಣಿತಂ ಲಭತೇ ಶಿವಪೂಜಯಾ ॥೧॥**

**ಯಶ್ಶಿವಂ ಪೂಜಯೇನ್ನಿತ್ಯಂ ಅಂತ್ಯಜೋಽಪಿ ಜಿತೇಂದ್ರಿಯಃ ।**
**ಭಾವೇನ ತು ಸಮಾಯುಕ್ತಃ ಸ ಗಚ್ಛೇತ್ಪರಮಾಂ ಗತಿಂ ॥೨॥**

**ಸೋಪವೀತಸಹಸ್ರೇಭ್ಯೋ ಬ್ರಹ್ಮಚಾರೀ ವಿಶಿಷ್ಯತೇ ।**
**ಬ್ರಹ್ಮಚಾರಿಸಹಸ್ರೇಭ್ಯೋ ವೇದಾಧ್ಯಾಯೀ ವಿಶಿಷ್ಯತೇ ॥೩॥**

---

## ನಲವತ್ತಮೂರನೆಯ ಅಧ್ಯಾಯ

ಈಶ್ವರನು ಪಾರ್ವತಿಗೆ ಶಿವಪೂಜಾಮಹಿಮೆಯನ್ನು ವಿವರಿಸುತ್ತಾ ಹೀಗೆಂದನು ದೇವಿಯೇ. ಕೇಳು. ಸಕಲ ಯಜ್ಞಾಚರಣೆಗಳಿಂದಲೂ ಎಂತಹ ಪುಣ್ಯರಾಶಿಯು ಲಭಿಸುವುದೆಂದು ಸಕಲ ವೇದಗಳು ಸರ್ವದಾ ಘೋಷಿಸುತ್ತಿವೆಯೋ, ಅಷ್ಟು ಸುಕೃತವು ಕೇವಲ ಶಿವಪೂಜಾಚರಣೆಯೊಂದರಿಂದಲೇ ಲಭಿಸುವುದು ಜಾತಿಯಿಂದ ಅವನು ಅಂತ್ಯಜನೇ ಆಗಿದ್ದರೂ ಜಿತೇಂದ್ರಿಯನಾಗಿದ್ದು ಭಕ್ತಿಭಾವದಿಂದ ಶಿವಾರಾಧನೆಯನ್ನು ನಡೆಸಿದುದೇ ಆದರೆ ಅವನಿಗೆ ಪರಮಪದವು ಒದಗುವುದರಲ್ಲಿ ಸಂಶಯವಿಲ್ಲ. ||೧-೨||

ಯಜ್ಞೋಪವೀತಧಾರಿಗಳಾದ ಗೃಹಸ್ಥರಿಗಿಂತ ಬ್ರಹ್ಮಚಾರಿಯು ಶ್ರೇಷ್ಠನು. ಸಹಸ್ರಮಂದಿ ಬ್ರಹ್ಮಚಾರಿಗಳಿಗೆ ಒಬ್ಬ ಅಧ್ಯಯನಮಾಡಿದವನು ಸಮನೆನಿಸುವನು.

ವೇದಾಧ್ಯಾಯಿಸಹಸ್ರೇಭ್ಯೋಽಪ್ಯಗ್ನಿಹೋತ್ರೀ ವಿಶಿಷ್ಯತೇ ।
ಅಗ್ನಿಹೋತ್ರಿಸಹಸ್ರೇಭ್ಯೋ ಯಜ್ಞಯಾಜೀ ವಿಶಿಷ್ಯತೇ ॥೪॥

ಯಜ್ಞಯಾಜಿಸಹಸ್ರೇಭ್ಯಃ ಸರ್ವವಿದ್ಯಾರ್ಥಪಾರಗಃ ।
ಸರ್ವವಿದ್ಯಾರ್ಥವಿತ್ಕ್ರೇಭ್ಯಃ ಶಿವಭಕ್ತೋ ವಿಶಿಷ್ಯತೇ ॥೫॥

ತಸ್ಮಾದೇವಂ ಶಿವಂ ಭಕ್ತ್ಯಾ ಪೂಜಯೇಚ್ಛಾಂತಮಾನಸಃ ।
ಶಿವಭಕ್ತೋ ಜಿತಕ್ರೋಧಃ ಶಿವಭಕ್ತಿಪರಾಯಣಃ ॥೬॥

ಮೈತ್ರೀ ಕಾರುಣಿಕೋಽಜಸ್ರಂ ಪ್ರಾಪ್ನೋತಿ ಸತತಂ ಶಿವಂ ।
ಕ್ಷಣಾರ್ಧೇನಾಪಿ ಯತ್ಪುಣ್ಯಂ ಕುರ್ಯಾನ್ಮೈತ್ರೀಷು ಭಾವಿತಃ ॥೭॥

ನ ತದ್ವರ್ಷಶತೇನಾಪಿ ತಪೋಯಜ್ಞಶತೈರಪಿ ।
ಸರ್ವಪ್ರಾಣಿಷು ಕಾರುಣ್ಯಂ ದೀನಾನಾಥೇಷು ಭಾವಯೇತ್ ॥೮॥

---

ಅಂತಹ ಸಹಸ್ರಮಂದಿ ಅಧ್ಯಾಪಕರಲ್ಲಿ ಯಾಗಮಾಡುವ ಸೋಮಯಾಜಿಯು ಪೂಜ್ಯನೆನಿಸುವನು. ಅಂತಹ ಸಾವಿರಮಂದಿ ಸೋಮಯಾಜಿಗಳಿಗಿಂತ ಆತ್ಮವಿದ್ಯೆಯನ್ನರಿತವನೊಬ್ಬನು ಪರಮ ಪೂಜ್ಯನು. ಇಂತಹವರ ಗುಂಪಿಗೆ ಪೂಜ್ಯತಮನೆಂದರೆ ಶಿವಪೂಜೆಯನ್ನು ಭಕ್ತಿಯಿಂದ ನಡೆಸುವವನು. ॥೩ ೪-೫॥

ಹೀಗಿರುವುದರಿಂದ ಎಲೌ ದೇವಿಯೇ, ಮಾನವನು ಎಲ್ಲವನ್ನೂ ದೂರ ಮಾಡಿದರೂ, ಭಕ್ತಿಯುಕ್ತನಾಗಿ ಶಾಂತಮನಸ್ಸಿನಿಂದ ಶಿವಾರಾಧನೆಯನ್ನು ಮಾತ್ರ ಬಿಡಬಾರದು ಈಶ್ವರಭಕ್ತನೆನಿಸಿದವನು, ದೃಢಮನಸ್ಸನಾಗಿ, ಕೋಪತಾಪಗಳನ್ನು ಬಿಟ್ಟು ಶಿವಭಕ್ತಿಯನ್ನವಲಂಬಿಸಿ, ಸಮಸ್ತ ಪ್ರಾಣಿಗಳಲ್ಲಿಯೂ ಮೈತ್ರಿಯಿಂದ ವರ್ತಿಸಬೇಕು ಏಕೆಂದರೆ ಕಷ್ಟಕ್ಕೆ ಸಿಕ್ಕಿದವರ ವಿಷಯದಲ್ಲಿ ಅರ್ಧಕ್ಷಣ ಸ್ನೇಹದಿಂದ ವರ್ತಿಸಿ ಅವರಿಗೆ ಸ್ವಲ್ಪ ಉಪಕಾರಮಾಡಿದರೂ, ಅದು ಅನಂತಪುಣ್ಯಪ್ರದವಾಗುವುದು. ತಪಸ್ಸು, ಯಜ್ಞ ಮುಂತಾದವುಗಳನ್ನು ನೂರಾರು ವರ್ಷ ಪರ್ಯಂತ ನಡೆಸಿದರೂ ಅಷ್ಟು ಸುಕೃತವು ಲಭಿಸಲಾರದು. ॥೬-೭॥

ದೀನರೂ, ಅನಾಥರೂ ಆದವರಲ್ಲಿ ದಯೆಯಿಡುವುದು, ಸುಖದಿಂದಿರುವವರಲ್ಲಿ ಸ್ನೇಹವನ್ನು ಬೆಳೆಸುವುದು, ಪುಣ್ಯಶಾಲಿಗಳಲ್ಲಿ ಸಂತೋಷವನ್ನು ಪ್ರಕಾಶಪಡಿಸುವುದು, ಪಾಪಿಷ್ಠರನ್ನು ದೂರಮಾಡುವುದು, ಎಲ್ಲರಿಗೂ ಶಿವಧರ್ಮವನ್ನು ಬೋಧಿಸುವುದು,

ಸುಖಿಸ್ಪ್ರಾಣಿಷು ಮೈತ್ರೀಸ್ಯಾನ್ಮುದಿತಾ ಪುಣ್ಯಶಾಲಿಷು ।
ಅಪುಣ್ಯವತ್ಸು ಚೋಪೇಕ್ಷಾ ಸರ್ವೇಷಾಂ ಚ ವದೇಚ್ಛಿವಂ ॥೯॥

ಇತ್ಯೇವಂ ಪಂಚಧಾ ಚಿತ್ತಂ ಭಾವಯಿತ್ವಾ ಯಜೇಚ್ಛಿವೇ ।
ಸಂಪೂಜ್ಯ ಪಶುಭರ್ತಾರಂ ಪ್ರಹೃಷ್ಟೇನಾಂತರಾತ್ಮನಾ ॥೧೦॥

ಧ್ಯಾನಂ ಕುರ್ಯಾದ್ಯಥಾದಿಷ್ಟಂ ಸರ್ವಪಾಪನಿಕೃಂತನಂ ।
ಕೃತಾಂಜಲಿಪುಟೋ ಭೂತ್ವಾ ಸ್ತೋತ್ರಮೇತಜ್ಜಪೇನ್ನರಃ ॥೧೧॥

ಸ್ತುತಾಯ ಸ್ತುತಿರೂಪಾಯ ಸ್ತೂಯಮಾನಾಯ ಸರ್ವದಾ ।
ಸ್ತುತಿಹೇತುನಿಧಾನಾಯ ನಮಸ್ತ್ರಿನಯನಾಯ ತೇ ॥೧೨॥

ದೇವಾಯ ದಿವ್ಯರೂಪಾಯ ಸರ್ವದೇವೈಕಹೇತವೇ ।
ಸೂಕ್ಷ್ಮಾಣಾಮಪಿ ಸೂಕ್ಷ್ಮಾಯ ನಮಸ್ಸೂಕ್ಷ್ಮತಮಾಯ ತೇ ॥೧೩॥

ದಿವ್ಯಾಯ ದಿವ್ಯರೂಪಾಯ ದಿವ್ಯರೂಪೈಕಹೇತವೇ ।
ದಿವ್ಯಾನಾಮಪಿ ದಿವ್ಯಾಯ ನಮೋ ದಿವ್ಯತಮಾಯ ತೇ ॥೧೪॥

---

ಈ ಐದು ಕರ್ಮಗಳು ನಿಜವಾದ ಈಶ್ವರಭಕ್ತನ ಕರ್ತವ್ಯಾಂಶಗಳು. ಇವನ್ನು ಆಚರಿಸುವುದರಿಂದ ನನಗೆ (ಈಶ್ವರನಿಗೆ) ತೃಪ್ತಿಯುಂಟಾಗುವುದು. ಇಷ್ಟಾದ ಮೇಲೂ ಆ ಭಕ್ತನು ಅಂಜಲಿಬದ್ಧನಾಗಿದ್ದು ಸರ್ವಪಾಪನಾಶಕರವಾದ ಈ ಸ್ತೋತ್ರವನ್ನು ಸದಾ ಪಠಿಸುತ್ತಿರಬೇಕು. ॥೮-೯-೧೦-೧೧॥

ಮೂರುಕಣ್ಣುಗಳಿಂದ ವಿರಾಜಿಸುವ ಪರಶಿವನೇ, ನೀನು ಸರ್ವರಿಂದಲೂ ಸ್ತುತ್ಯನೆನಿಸಿದವನು. ಸ್ತುತಿರೂಪನು ನಾನಾರೀತಿ ಹೊಗಳಿಸಲ್ಪಡುವವನು ಸಕಲವಿಧವಾದ ಸ್ತೋತ್ರಕ್ಕೂ ಕಾರಣನೆನಿಸಿದವನು. ಇಂತಹ ದಿವ್ಯರೂಪದಿಂದಲೂ, ಸಕಲ ದೇವತಾಸೃಷ್ಟಿಗೆ ಮೂಲಭೂತವಾದ ಶಕ್ತಿರೂಪದಿಂದಲೂ, ಸೂಕ್ಷ್ಮವಸ್ತುಗಳಿಂದಲೂ ಅತ್ಯಂತ ಸೂಕ್ಷ್ಮನೆನಿಸಿ, ಪರಮಾಣುರೂಪದಿಂದಿರುವ ಮಹೇಶ್ವರನೇ, ನಿನಗೆ ನಮಸ್ಕರಿಸುವೆನು. ॥೧೨-೧೩॥

ದೇವರೂಪದಿಂದಲೂ, ದೇವತೆಗಳ ರೂಪಕ್ಕೆ ಶಕ್ತಿವರ್ಧಕನಾಗಿಯೂ, ದಿವ್ಯವಸ್ತುಗಳಿಗೂ ಶ್ರೇಷ್ಠನೆಂದೆನಿಸಿರುವ ಮಹೇಶ್ವರನೇ, ನಿನಗೆ ವಂದನೆ ಪರಮೇಶ್ವ

ಪರಾಯ ಪರಮೇಶಾಯ ಪರಮಾರ್ಥೈಕಹೇತವೇ ।
ಪರಾಪರವಿಮುಕ್ತಾಯ ನಮಃ ಪರತರಾಯ ತೇ ॥೧೫॥

ಪೂಜ್ಯಾಯ ಪೂಜ್ಯಪೂಜ್ಯಾಯ ಸರ್ವಪೂಜ್ಯೈಕಹೇತವೇ ।
ಪೂಜ್ಯಾನಾಮಪಿ ಪೂಜ್ಯಾಯ ನಮಃ ಪೂಜ್ಯತಮಾಯ ತೇ ॥೧೬॥

ನಿತ್ಯಾಯ ನಿತ್ಯನಿತ್ಯಾಯ ಸರ್ವನಿತ್ಯೈಕಹೇತವೇ ।
ನಿತ್ಯಾನಾಮಪಿ ನಿತ್ಯಾಯ ನಮೋ ನಿತ್ಯತಮಾಯ ತೇ ॥೧೭॥

ದೀಪ್ತಾಯ ದೀಪ್ತದೀಪ್ತಾಯ ಸರ್ವದೀಪ್ತ್ಯೈಕಹೇತವೇ ।
ದೀಪ್ತಾನಾಮಪಿ ದೀಪ್ತಾಯ ನಮೋ ದೀಪ್ತತಮಾಯ ತೇ ॥೧೮॥

ಸಾರಾಯ ಸಾರರೂಪಾಯ ಸರ್ವಸಾರೈಕಹೇತವೇ ।
ಸಾರಾಣಾಮಪಿ ಸಾರಾಯ ನಮಸ್ಸಾರತರಾಯ ತೇ ॥೧೯॥

ಶಾಂತಾಯ ಶಾಂತರೂಪಾಯ ಸರ್ವಶಾಂತ್ಯೈಕಹೇತವೇ ।
ಶಾಂತಾನಾಮಪಿ ಶಾಂತಾಯ ನಮಶ್ಶಾಂತತಮಾಯ ತೇ ॥೨೦॥

---

ರನೇ, ನೀನು ಪರಮೋತ್ಕೃಷ್ಟರೂಪಿಯು ಪೂಜ್ಯರಿಗೂ ಪೂಜ್ಯತಮನೆನಿಸಿದವನು. ಸರ್ವರಿಗೂ ಪೂಜ್ಯನೆನಿಸಿಕೊಳ್ಳುವ ಮಹಿಮೆಯುಳ್ಳವನು. ಲೋಕೈಕಪೂಜ್ಯನಾದ ಮಹಾದೇವನೇ, ನಿನಗೆ ನಮಸ್ಕಾರ. ॥೧೪-೧೫-೧೬॥

ದೇವದೇವನೇ, ನೀನು ನಿತ್ಯವಸ್ತುವು ನಿತ್ಯವಸ್ತುಗಳೆಂದು ತೋರಿಬರುವುವು ಗಳಿಗೆಲ್ಲಾ ನೀನು ನಿತ್ಯತ್ವವನ್ನು ಕೊಡುವೆ. ಆದ್ದರಿಂದಲೇ ನಿನ್ನನ್ನು ನಿತ್ಯತಮನೆನ್ನುವರು. ಹಾಗೆಯೇ ನೀನು ಸ್ವಪ್ರಕಾಶನು. ನಿನ್ನ ಪ್ರಕಾಶದಿಂದಲೇ ಈಗ ಪ್ರಕಾಶಿಸುತ್ತಿರುವ ವಸ್ತುಗಳೆಲ್ಲಾ ಶೋಭಿಸುತ್ತಿರುವುವು. ಸಮಸ್ತವಸ್ತುಗಳಿಗೂ ಕಾಂತಿಯನ್ನು ಕೊಡುತ್ತಾ, ದೀಪ್ತವಾಗಿರುವ ವಸ್ತುಗಳಿಗೂ ದೀಪದಂತಿರುವ ನಿನ್ನನ್ನು ನಾನು ಸದಾ ವಂದಿಸುವೆನು. ॥೧೭-೧೮॥

ಸಮಸ್ತ ವಸ್ತುಗಳ ಸಾರರೂಪಿಯಾಗಿ, ಸಾರವಸ್ತುಗಳಿಗೂ ಜನಕನಾಗಿ, ಸಾರಕ್ಕೂ ಸಾರವಾಗಿ, ಕಂಡುಬರುವ ಮಹಾಸಾರವಸ್ತುವೇ ನೀನು. ಅಂತಹ ನಿನಗೆ ವಂದನೆ. ಇದೇ ರೀತಿ ಶಾಂತಿಕರಗಳಾದ ವಸ್ತುಗಳಲ್ಲಿ ಶ್ರೇಷ್ಠನಾಗಿ, ಶಾಂತಿಗೂ

ಶುದ್ಧಾಯ ಶುದ್ಧರೂಪಾಯ ಸರ್ವಶುದ್ಧ್ಯೈಕಹೇತವೇ ।
ಶುದ್ಧಾನಾಮಪಿ ಶುದ್ಧಾಯ ನಮಶ್ಶುದ್ಧತಮಾಯ ತೇ ॥೨೦॥

ಕಾಲಾಯ ಕಾಲರೂಪಾಯ ಸರ್ವಕಾಲೈಕಹೇತವೇ ।
ಕಾಲಾನಾಮಪಿ ಕಾಲಾಯ ನಮಃ ಕಾಲತಮಾಯ ತೇ ॥೨೧॥

ಸರ್ವಮಂತ್ರಶರೀರಾಯ ಸರ್ವಮಾತ್ರೈಕಹೇತವೇ ।
ಮಂತ್ರಾಣಾಮಪಿ ಮಂತ್ರಾಯ ನಮೋ ಮಂತ್ರತಮಾಯ ತೇ ॥೨೩॥

ವ್ಯೋಮಪ್ರಮಾಣರೂಪಾಯ ಈಶಾನಾಯ ನಮೋನಮಃ ।
ವ್ಯೋಮಪ್ರಮಾಣಯೋಗಾಯ ಪುರುಷಾಯ ನಮೋನಮಃ ॥೨೪॥

ವ್ಯೋಮಪ್ರಮಾಣರೂಪಾಯ ಅಘೋರಾಯ ನಮೋನಮಃ ।
ವ್ಯೋಮಪ್ರಮಾಣವಾಮಾಯ ವಾಮೇಶಾಯ ನಮೋನಮಃ ॥೨೫॥

ವ್ಯೋಮಪ್ರಮಾಣಸತ್ಯಾಯ ಸದ್ಯೋಜಾತಾಯ ತೇ ನಮಃ ।
ವ್ಯೋಮಪ್ರಮಾಣವಿದ್ಯಾಯ ವಿದ್ಯೇಶಾಯ ನಮೋನಮಃ ॥೨೬॥

---

ಶಾಂತಿಪ್ರದನಾಗಿ, ಶಾಂತಿಗುಣಕ್ಕೆ ಮೂಲಕಾರಣನಾಗಿ ಶಾಂತವಸ್ತುಗಳಲ್ಲಿ ಶ್ರೇಷ್ಠನಾದ ಶಾಂತಮೂರ್ತಿಯಾದ ನಿನಗೆ ಸದಾ ನಮಸ್ಕಾರವು. ॥೧೯-೨೦॥

ಶುದ್ಧನೂ, ಶುದ್ಧಾಕಾರನೂ, ಶುದ್ಧಿಕಾರಣನೂ, ಶುದ್ಧವಸ್ತುಗಳಿಗೂ ಪರಿಶುದ್ಧನೆನಿಸಿರುವ ಶುದ್ಧತಮನಾಗಿರುವ ದೇವದೇವನಿಗೆ ವಂದನೆ. ಹಾಗೆಯೇ, ಕಾಲಸ್ವರೂಪನೂ, ಕಾಲರೂಪನೂ, ಸಕಲ ಕಾಲಕ್ಕೂ ಕಾರಣಕರ್ತನೂ, ಯಮನಿಗೂ ಯಮನೆಂತಿರುವವನೂ ಆದ ಮಹಾಕಾಲನೇ, ನಿನಗೆ ನಮಸ್ಕಾರ. ॥೨೧-೨೨॥

ಸರ್ವಮಂತ್ರಶರೀರಿಯೂ, ನಿಖಿಲಮಂತ್ರಕ್ಕೂ ಮೂಲಕಾರಣನೂ, ಗುಹ್ಯತರವಾದ್ದರಿಂದ ಮಂತ್ರವೆನಿಸಿಕೊಳ್ಳುವ ಸಕಲ ವಸ್ತುಗಳಿಗೂ ಮಂತ್ರಶಕ್ತಿರೂಪದಿಂದಿರುವ, ಮಂತ್ರಾತ್ಮನೇ, ನಿನಗೆ ವಂದನೆ. ಅಂತರಿಕ್ಷವ್ಯಾಪಿಯಾಗಿ ಈಶಾನಾತ್ಮಕನಾಗಿರುವ, ಜಗದ್ವ್ಯಾಪಕನಾದ ತತ್ಪುರುಷರೂಪದಿಂದಿರುವ ಮಹಾದೇವನೇ, ನಿನಗೆ ವಂದನೆ. ॥೨೩-೨೪॥

ಶಾಂತವಾದ ಅಘೋರ, ಪಾರ್ವತಿಯ ಸಂಬಂಧವಾದ ವಾಮದೇವ, ಸತ್ಯ, ವಿದ್ಯೆ ಕಾಲ, ಧರ್ಮ, ಭೋಗ, ಮೋಕ್ಷ, ಪ್ರಪಂಚ ಮುಂತಾದ ಗುಣವಸ್ತುಗಳಲ್ಲಿ ಆ

ವ್ಯೋಮಪ್ರಮಾಣಕಾಲಾಯ ಕಾಲೇಶಾಯ ನಮೋನಮಃ ।
ವ್ಯೋಮಪ್ರಮಾಣಧರ್ಮಾಯ ಧರ್ಮೇಶಾಯ ನಮೋನಮಃ ॥೨೭॥

ವ್ಯೋಮಪ್ರಮಾಣಭೋಗಾಯ ಭೋಗೇಶಾಯ ನಮೋನಮಃ ।
ವ್ಯೋಮಪ್ರಮಾಣಮೋಕ್ಷಾಯ ಮೋಕ್ಷೇಶಾಯ ನಮೋನಮಃ ॥೨೮॥

ವ್ಯೋಮಪ್ರಮಾಣವಿಶ್ವಾಯ ವಿಶ್ವೇಶ್ವರ ನಮೋಽಸ್ತು ತೇ ।
ಏಕದೇಹದ್ವಿದೇಹಾಯ ಬಹುದೇಹಾಯ ತೇ ನಮಃ ॥೨೯॥

ದೇಹಾಸಂಖ್ಯೇಯರೂಪಾಯ ವಿಶ್ವೇಶಾಯ ನಮೋನಮಃ ।
ಏಕಕಾಲದ್ವಿಕಾಲಾಯ ಬಹುಕಾಲಾಯ ತೇ ನಮಃ ॥೩೦॥

ಕಾಲಾಸಂಖ್ಯೇಯರೂಪಾಯ ತ್ರಿನೇತ್ರಾಯ ನಮೋನಮಃ ।
ಏಕವಕ್ತ್ರದ್ವಿವಕ್ತ್ರಾಯ ಬಹುವಕ್ತ್ರಾಯ ತೇ ನಮಃ ॥೩೧॥

ವಕ್ತ್ರಾಸಂಖ್ಯೇಯಯುಕ್ತಾಯ ವರೇಶಾಯ ನಮೋನಮಃ ।
ಏಕನೇತ್ರದ್ವಿನೇತ್ರಾಯ ಬಹುನೇತ್ರಾಯ ತೇ ನಮಃ ॥೩೨॥

ವ್ಯೋಮದಷ್ಟು ವಿಶಾಲತೆಯನ್ನು ಪಡೆದು ನೆಲಸಿರುವವನೂ, ಹಾಗೆಯೇ, ಮೇಲೆ ಹೇಳಿದ ಧರ್ಮಗಳನ್ನೂ ವಸ್ತುಗಳನ್ನೂ ಭಕ್ತರಿಗೆ ಕರುಣಿಸುವುದರಲ್ಲಿ ಸಮರ್ಥನೂ ಆಗಿರುವ ಮಹಾದೇವನೇ, ನಿನಗೆ ಶಾಶ್ವತವಾದ ಒಂದೇ ಒಂದು ದೇಹವಿದ್ದರೂ, ಅನೇಕ ದೇಹಗಳನ್ನು ಲೀಲಾರ್ಥವಾಗಿ ಧರಿಸಿರುವ ನಿನಗೆ ಸರ್ವದಾ ವಂದನೆಯನ್ನು ಸಲ್ಲಿಸುವೆನು. ॥೨೫-೨೬-೨೭-೨೮-೨೯॥

ಎಣಿಕೆಯಿಲ್ಲದಷ್ಟು ದೇಹಗಳನ್ನು ಪಡೆದು ವಿಶ್ವಾಧಿಪತಿಯಾಗಿ, ಅಖಂಡ ಕಾಲಸ್ವರೂಪಿಯಾಗಿದ್ದರೂ ಅಹೋರಾತ್ರರೂಪದಿಂದಲೂ, ವರ್ಷಮಾಸಾತ್ಮಕ ರೂಪದಿಂದಲೂ ನಾನಾವಿಧವಾಗಿ ಕಾಣುವ, ಅಪರಿಮಿತ ಕಾಲರೂಪನೆನಿಸಿ, ನೇತ್ರ ತ್ರಯಗಳಿಂದ ವಿರಾಜಿಸುತ್ತಾ, ಒಂದು, ಎರಡು, ಬಹುಮುಖಗಳಿಂದ ಶೋಭಿಸುವ ಮಹಾದೇವನೇ, ನಿನಗೆ ನಮಸ್ಕಾರಗಳು. ॥೩೦-೩೧॥

ಅನೇಕ ಆಕಾರದ ಮುಖಗಳಿಂದಲೂ, ಒಂದರಿಂದ ಹಿಡಿದು ಅಸಂಖ್ಯಾತ ವಾಗುವಷ್ಟು ನೇತ್ರ, ಕಂಠ, ನಾಸಿಕ ಈ ಅವಯವಗಳನ್ನು ಪಡೆದು ಬಹುನೇತ್ರ

ನೇತ್ರಾಸಂಖ್ಯೇಯಯುಕ್ತಾಯ ತ್ರ್ಯಂಬಕಾಯ ನಮೋನಮಃ ।
ಏಕಕಂಠದ್ವಿಕಂಠಾಯ ಬಹುಕಂಠಾಯ ತೇ ನಮಃ ॥೩೩॥

ಕಂಠಾಸಂಖ್ಯೇಯಯುಕ್ತಾಯ ನೀಲಕಂಠಾಯ ತೇ ನಮಃ ।
ಏಕನಾಸದ್ವಿನಾಸಾಯ ಬಹುನಾಸಾಯ ತೇ ನಮಃ ॥೩೪॥

ನಾಸಾಸಂಖ್ಯೇಯಯುಕ್ತಾಯ ನಿತ್ಯಂ ಶರ್ವಾಯ ತೇ ನಮಃ ।
ಏಕಜಿಹ್ವದ್ವಿಜಿಹ್ವಾಯ ಬಹುಜಿಹ್ವಾಯ ತೇ ನಮಃ ॥೩೫॥

ಜಿಹ್ವಾಸಂಖ್ಯೇಯಯುಕ್ತಾಯ ವೇದಜಿಹ್ವಾಯ ತೇ ನಮಃ ।
ಏಕಹಸ್ತದ್ವಿಹಸ್ತಾಯ ಬಹುಹಸ್ತಾಯ ತೇ ನಮಃ ॥೩೬॥

ಹಸ್ತಾಸಂಖ್ಯೇಯಯುಕ್ತಾಯ ಶಂಕರಾಯ ನಮೋನಮಃ ।
ಏಕಶಾಸ್ತ್ರದ್ವಿಶಾಸ್ತ್ರಾಯ ಬಹುಶಾಸ್ತ್ರಾಯ ತೇ ನಮಃ ॥೩೭॥

ಶಸ್ತ್ರಾಸಂಖ್ಯೇಯಯುಕ್ತಾಯ ಈಶಾನಾಯ ನಮೋನಮಃ ।
ಏಕಪಾದದ್ವಿಪಾದಾಯ ಬಹುಪಾದಾಯ ತೇ ನಮಃ ॥೩೮॥

ಪಾದಾಸಂಖ್ಯೇಯಯುಕ್ತಾಯ ಮಹಾದೇವಾಯ ತೇ ನಮಃ ।
ಅವ್ಯಕ್ತಾಯ ನಮಸ್ತುಭ್ಯಂ ಶಾಶ್ವತಾಯ ನಮೋನಮಃ ॥೩೯॥

---

ರೂಪಿಯಾಗಿಯೂ, ತ್ರ್ಯಂಬಕನಾಗಿಯೂ, ನೀಲಕಂಠನಾಗಿಯೂ, ಬಹುನಾಸಿಕ ನಾಗಿಯೂ ತೋರಿಬರುವ ಮಹಾಮಹಿಮನೇ, ನಿನಗೆ ನಾನಾವಂದನೆಗಳು. ||೩೨-೩೩-೩೪||

ನಾಲಗೆ, ಹಸ್ತ, ಶಸ್ತ್ರಸಮೂಹ ಇವು ಒಂದು, ಎರಡು, ಬಹುಸಂಖ್ಯೆಗಳಿಂದ ನಿನ್ನ ದೇಹದಲ್ಲಿ ನಮಗೆ ತೋರಿಬರುವುವು. ಇದರಿಂದ ನಿಜವಾದ ಅವಯವ ಸ್ವರೂಪವೇ ನಮಗೆ ತಿಳಿಯಲಾರದು. ಶರ್ವನೇ, ಸುಖಕರನೆ, ಶಸ್ತ್ರಸಮುದಾಯಾತ್ಮಕನೇ, ನೀನು ವೇದರಾಶಿಗೆ ನಾಲಿಗೆಯಂತಿರುವೆ. ಇದೋ ನಿನಗೆ ಅನಂತಾನಂತ ವಂದನೆಗಳು. ||೩೫-೩೬-೩೭||

ಒಂದು, ಎರಡು, ಮತ್ತು ಬಹು ಪಾದಗಳಿಂದಲೂ, ಅವ್ಯಕ್ತವಾದ ರೂಪಗಳಿಂದಲೂ, ಕೂಡಿರುವ ಈಶಾನನೇ, ಮಹಾದೇವನೇ, ಶಾಶ್ವತನೇ, ಮಹಾಯೋಗಿಯೇ, ನಿನಗೆ ಅನಂತ ವಂದನೆಗಳು, ನಿನ್ನ ಆಕಾರವೋ ಮಹೋತ್ಕಮವೆನಿ

ಮಹೇಶ್ವರ ನಮಸ್ತುಭ್ಯಂ ಮಹಾಯೋಗಿನ್ನಮೋಽಸ್ತುತೇ ।
ಮಹೋತ್ತಮನಮಸ್ತೇಽಸ್ತು ಮಹಾರೂಪನಮೋಽಸ್ತುತೇ ॥೪೦॥

ಸದಾಶಿವ ನಮಸ್ತೇಽಸ್ತು ಸದಾಶುದ್ಧ ನಮೋಽಸ್ತುತೇ ।
ಸದೋಜ್ಜ್ವಲ ನಮಸ್ತೇಽಸ್ತು ಮಹಾದೇವ ನಮೋಽಸ್ತುತೇ ॥೪೧॥

ನಮಸ್ತೇ ಭಗವಂಛಾಂತ ನಮಸ್ತೇ ಭಗವನ್ ಧ್ರುವ ।
ನಮಸ್ತೇ ಭಗವನ್ ದೀಪ್ತ ನಮಸ್ತೇ ಭಗವನ್ ಹರ ॥೪೨॥

ಅಜಿತಾಯ ನಮಸ್ತುಭ್ಯಂ ಭಸ್ಮಾಂಗಾಯ ನಮೋಽಸ್ತುತೇ ।
ಅನಂತಾಯ ನಮಸ್ತುಭ್ಯಂ ಸರ್ವಗಾಯ ನಮೋಽಸ್ತುತೇ ॥೪೩॥

ಸ್ತವೇನಾನೇನ ದಿವ್ಯೇನ ಯಃಸ್ತೌತಿ ಪರಮೇಶ್ವರಂ ।
ಸ ವಿಧೂಯಾಶು ಪಾಪಾನಿ ಶಿವಲೋಕೇ ಮಹೀಯತೇ ॥೪೪॥

ಭೋಗಾರ್ಥೀ ಲಭತೇ ಭೋಗಾನ್ ರಾಜ್ಯಾರ್ಥೀ ರಾಜ್ಯಮಾಪ್ನುಯಾತ್ ।
ಕನ್ಯಾರ್ಥೀ ಲಭತೇ ಕನ್ಯಾಂ ಯೋಗಾರ್ಥೀ ಯೋಗಮಾಪ್ನುಯಾತ್॥೪೫॥

---

ಸಿರುವುದು. ನಿನ್ನ ಧ್ಯೇಯವಾದರೋ ಉತ್ತಮೋತ್ತಮವಾಗಿದೆ. ಇಂತಹ ಮಹಾ ಮಹಿಮನಾದ ನಿನಗೆ ವಂದನೆಗಳು. ||೩೮-೩೯-೪೦||

ಮಂಗಳಸ್ವರೂಪನೂ. ಶುದ್ಧಾತ್ಮನೂ, ತೇಜೋರಾಶಿಯೂ ಆದ ಮಹಾದೇವನೇ, ನಿನಗೆ ಅನಂತಾನಂತವಂದನೆಗಳು. ಶಾಂತಮೂರ್ತಿಯಾದ ಪರಶಿವನೇ ನೀನು ಷಡ್ಗುಣೈಶ್ವರ್ಯಸಂಪನ್ನನು. ಸ್ಥಿರನಾದವನು. ತೇಜೋರೂಪಿಯು. ಸರ್ವ ಪಾಪಹರನು. ||೪೧-೪೨||

ಯಾರಿಗೂ ಸೋಲದಿರುವ, ಭಸ್ಮಭೂಷಿತಗಾತ್ರನಾಗಿರುವ, ನಾಶರಹಿತನಾದ ಸರ್ವವ್ಯಾಪಿಯೇ ನಿನಗೆ ನಮಸ್ಕಾರ, ಎಂದು ಈ ರೀತಿ ಯಾರು ನಿನ್ನನ್ನು ಸದಾ ಸ್ತುತಿಸುವರೋ ಅಂತಹವರು ಸಕಲ ಪಾಪರಾಶಿಯನ್ನೂ ಕಳೆದುಕೊಂಡು(ನಿನ್ನ) ಶಿವ ಲೋಕವನ್ನು ಹೊಂದುವರು. ಅಲ್ಲದೆ ಭೂಲೋಕದಲ್ಲಿ ವಾಸಿಸುವವರೆಗೆ ಭೋಗವನ್ನಪೇಕ್ಷಿಸುವವರೆಗೆ ಸಕಲ ಸುಖವೂ, ರಾಜ್ಯಾಪೇಕ್ಷಿಗಳಿಗೆ ವಿಶಾಲರಾಜ್ಯವೂ, ಕನ್ಯಾಪೇಕ್ಷಿಗಳಿಗೆ ಸುಲಕ್ಷಣಯುತರಾದ ಕನ್ಯೆಯೂ, ಯೋಗಫಲಾಪೇಕ್ಷಿಗೆ ಸಕಲ ಸಿದ್ಧಿಗಳೂ ಸುಲಭವಾಗಿ ದೊರೆಯುವುವು. ||೪೩-೪೪-೪೫||

ಮುಚ್ಯತೇ ವ್ಯಾಧಿತೋ ವ್ಯಾಧೇಃ ದುಃಖೀ ದುಃಖಾತ್ಪ್ರಮುಚ್ಯತೇ ।
ಬಂಧನಾನ್ಮುಚ್ಯತೇ ಬಂಧೀ ಯಶೋಽರ್ಥೀ ಚ ಯಶೋಲಭೇತ್ ॥೪೬॥

ಯಾನ್ ಯಾಂಶ್ಚಿಂತಯತೇ ಕಾಮಾಂಸ್ತಾಂಸ್ತಾನ್ ಪ್ರಾಪ್ನೋತಿ ಮಾನವಃ।
ಶಿವಸ್ಯ ಪದಮಾಪ್ನೋತಿ ನಿತ್ಯಂ ಪಠತಿ ಯೋ ನರಃ ॥೪೭॥

ತಸ್ಯಾರ್ಚನಾದಪಿ ಕಥಾ ಶ್ರವಣಾದಪಿ ಮಾನವಃ ॥೪೮॥

ಇತ್ಥಂ ಸ್ತುವೀತ ಭಗವಂತಮುಮಾಸಹಾಯಂ
ದುಃಖಂ ವಿಹಾಯ ಸತತಂ ಉರುಗಾಯಮೀಶಂ ।
ತಸ್ಯಾಯಮೀಶ್ವರಪದಂ ಪ್ರದದಾತಿ ದೇವಿ
ಪಾಪೌಘತಾಪಮಪಹಾಯ ಗತಿಂ ಲಭೇತ ॥೪೯॥

ಅಧ್ಯಾಯಂ ಯಸ್ತು ಪಠತೇ ಶೃಣೋತಿ ಶಿವಭಕ್ತಿಮಾನ್ ।
ಸೋಽಪಿ ಶೈವಂ ಪದಂ ಲಬ್ಧ್ವಾ ಪ್ರಯಾತಿ ಪರಮಾಂಗತಿಂ ॥೫೦॥

---

ರೋಗಗ್ರಸ್ತನಾದವನಿಗೆ ಆರೋಗ್ಯವೂ, ದುಃಖಿಗೆ ಸಂತೋಷವೂ, ಬಂಧನದಲ್ಲಿರುವವನಿಗೆ ಬಿಡುಗಡೆಯೂ, ಯಶಸ್ಕಾಮಿಗೆ ಚಿರಕೀರ್ತಿಯೂ ಮತ್ತು ಇತರ ಯಾವ ವಸ್ತುಗಳನ್ನು ಅಪೇಕ್ಷಿಸಿದರೂ ಅವರಿಗೆ ಅವೆಲ್ಲವೂ ಈ ಸ್ತೋತ್ರಪಠನೆಯಿಂದಲೇ ಲಭಿಸುವುದು. ನಿತ್ಯವೂ ಈ ಸ್ತೋತ್ರವನ್ನು ಪಠಿಸುವವರಿಗೆ ಕೊನೆಯಲ್ಲಿ ಶಿವಲೋಕಪ್ರಾಪ್ತವಾಗುವುದು. ॥೪೬-೪೭॥

ಶಿವಾರ್ಚನೆಯಿಂದ ಯಾವ ಸುಕೃತವು ಲಭಿಸುವುದೋ ಅದೇ ಸುಕೃತ ವಿಶೇಷವು ಈ ಸ್ತುತಿಶ್ರವಣದಿಂದಲೂ ದೊರಕುವುದು. ಎಲೌ ದೇವಿಯೇ, ಈ ರೀತಿ ನಿನ್ನಿಂದೊಡಗೂಡಿ. ಷಡ್ಗುಣೈಶ್ವರ್ಯಸಂಪನ್ನನಾದ ನನ್ನ ಸ್ವರೂಪವನ್ನು ಸರಿಯಾಗಿ ಅರಿತು ಭಕ್ತಿಯಿಂದ ಯಾರು ಧ್ಯಾನಿಸುವರೋ, ಅವರಿಗೆ ನಿಜವಾಗಿಯೂ ನನ್ನ ಸ್ಥಾನವನ್ನೇ ಅನುಗ್ರಹಿಸಿಕೊಡುವೆನು. ಮತ್ತು ಅವರು ಬಹುಕಾಲದಿಂದ ಸಂಪಾದಿಸಿದ್ದ ಪಾಪರಾಶಿಯನ್ನೆಲ್ಲಾ ನಾಶಗೊಳಿಸುವೆನು. ಅವರಿಗೆ ಸದ್ಗತಿಯನ್ನೂ ಕರುಣಿಸುವೆನು. ॥೪೮-೪೯॥

ಯಾರು ಶಿವಭಕ್ತಿಯುತರಾಗಿ ಈ ಸ್ತೋತ್ರವನ್ನು ಓದುತ್ತಾರೋ, ಅಥವಾ ಕೇಳುತ್ತಾರೋ, ಅಂತಹವರು ಸುಲಭವಾಗಿ ಶಾಶ್ವತವಾಗಿರುವ ಶಿವಸನ್ನಿಧಿಯನ್ನು

**ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಶಿವದಿವ್ಯಸ್ತುತಿನಿರೂಪಣಂ ನಾಮ ತ್ರಿಚತ್ವಾರಿಂಶೋಽಧ್ಯಾಯಃ**

---

ಹೊಂದುವರಲ್ಲದೆ ಸ್ಥಿರಮುಕ್ತಿಯನ್ನೂ, ಶಾಶ್ವತಾನಂದವನ್ನೂ ಪಡೆಯುವರು, ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ವಿವರಿಸಿದನೆಂದು ಸೂತರು ವಾಜಶ್ರವಸಾದಿಗಳಿಗೆ ಉಪದೇಶಿಸಿದರು. ||೫೦||

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವದಿವ್ಯಸ್ತೋತ್ರವನ್ನು ವಿವರಿಸುವ ನಲವತ್ತುಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಚತುಶ್ಚತ್ವಾರಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

**ಪೃಥಿವ್ಯಾಂ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।**
**ಲೀಯಂತೇ ತಾನಿ ಲಿಂಗೇ ತು ತಸ್ಮಾಲ್ಲಿಂಗಂ ಪ್ರಪೂಜಯೇತ್ ॥೧॥**

**ತಸ್ಮಾತ್ತತ್ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।**
**ಪೂಜಯೇಚ್ಚ ಮಹಾಪುಣ್ಯಂ ಲಿಂಗಂ ಸರ್ವಾರ್ಥಸಿದ್ಧಿದಂ ॥೨॥**

**ಶತೇನ ಸ್ಥಾಪಿತಂ ದೇವಂ ಸಹಸ್ರೇಣ ತು ಚಾಲಯೇತ್ ।**
**ದುಃಸ್ಥಿತಂ ಸುಸ್ಥಿತಂ ವಾಪಿ ಶಿವಲಿಂಗಂ ನ ಚಾಲಯೇತ್ ॥೩॥**

---

## ನಲವತ್ತುನಾಲ್ಕನೆಯ ಅಧ್ಯಾಯ

ಪರಶಿವನು ಪಾರ್ವತಿಗೆ ಶಿವಲಿಂಗಮಹಿಮೆಯನ್ನೂ ಅಭಿಷೇಕದಿಂದ ಲಭಿಸುವ ಸುಕೃತವಿಶೇಷವನ್ನೂ ಪ್ರತಿಪಾದಿಸುತ್ತಾ ಹೀಗೆಂದನು. ಪ್ರಪಂಚದಲ್ಲಿ ಕಂಡುಬರುವ ಸಮಸ್ತ ಪವಿತ್ರ ತೀರ್ಥಗಳೂ ಶಿವಲಿಂಗದಲ್ಲಿ ಅಡಗಿರುವುದರಿಂದ ಅದಕ್ಕೆ ಲಿಂಗವೆಂದು ಹೆಸರು ಬಂದಿದೆ. (ಲೀಯಂತೇ ಸರ್ವ ತೀರ್ಥಾನಿ ಅಸ್ಮಿನ್ನಿತಿ ಲಿಂಗಂ) ಆದ್ದರಿಂದಲೇ ಶಿವಲಿಂಗವನ್ನು ಸಮಸ್ತಪುಣ್ಯಕ್ಷೇತ್ರಗಳಲ್ಲಿಯೂ, ಸರ್ವಯಜ್ಞಕಾರ್ಯಗಳಲ್ಲಿಯೂ ಮಹಾಪುಣ್ಯಪ್ರದವೆಂದೂ, ಸರ್ವಾರ್ಥಸಿದ್ಧಿಪ್ರದವೆಂದೂ ಭಾವಿಸಿ ಪೂಜಿಸುತ್ತಿರಬೇಕು. ॥೧-೨॥

ಶಿವಲಿಂಗವೊಂದನ್ನು ಬಿಟ್ಟು ಇತರ ದೇವತಾ ವಿಗ್ರಹಗಳನ್ನು ಸ್ಥಾಪನೆ ಮಾಡಿದ ನೂರು ಅಥವಾ ಸಾವಿರ ವರ್ಷಗಳಾದನಂತರ ಅಲುಗಿಸಿ ಬದಲಾಯಿಸಿದ್ದ

ಘೃತಾಭಿಷೇಕಂ ಯಃ ಕುರ್ಯಾದಹೋರಾತ್ರಂ ಶಿವಸ್ಯ ತು ।
ಪುಷ್ಯಮಾಸೇ ಸಮುದ್ಯುಕ್ತೈರ್ನಿಯತಂ ಶ್ಲಕ್ಷ್ಣಧಾರಯಾ ॥೪॥

ಗೀತನೃತ್ಯೋಪಹಾರೇಣ ಶಂಖವಾದಿತ್ರನಿಸ್ವನೈಃ ।
ಕುರ್ಯಾಜ್ಜಾಗರಣಂ ತತ್ರ ಪ್ರದೀಪಾದಿಸಮಾಕುಲಂ ॥೫॥

ಸಮಸ್ತಪಾಪನಿರ್ಮುಕ್ತಃ ಸಮಸ್ತಗುಣಸಂಯುತಃ ।
ಸಮಸ್ತಕಾಮಸಂಪೂರ್ಣಃ ಸಮಸ್ತಕುಲಸಂಯುತಃ ॥೬॥

ಚಲದ್ಭಿಸ್ಸುಮಹಾಯಾನೈರಸಂಖ್ಯೇಯೈರನೂಪಮೈಃ ।
ಯುಕ್ತಶ್ಶಿವಪುರೇ ನಿತ್ಯಂ ಮೋದತೇ ಶಿವವತ್ಸುಖೀ ॥೭॥

ಗ್ರಹಣೇ ವಿಷುವೇ ಚೈವ ಪುಣ್ಯೇಷು ದಿವಸೇಷು ಚ ।
ಘೃತಾಭಿಷೇಕಂ ಯಃ ಕುರ್ಯಾನ್ಮಹಾಪುಣ್ಯಮವಾಪ್ನುಯಾತ್ ॥೮॥

ಘೃತಾಭಿಷೇಕಂ ಯಃ ಪಶ್ಯೇದಾಸಮಾಪ್ತೇರುಪೋಷ್ಯ ತು ।
ವಿಧೂಯ ಸರ್ವಪಾಪಾನಿ ಶಿವಲೋಕೇ ಮಹೀಯತೇ ॥೯॥

---

ಬಹುದು. ಆದರೆ ಶಿವಲಿಂಗವನ್ನು ಮಾತ್ರ ಅದು ಸ್ಥಿರವಾಗಿರಲಿ ಅಥವಾ ಭದ್ರವಿಲ್ಲದಿರಲಿ, ಎಂದೂ ಯಾವ ರೀತಿಯಲ್ಲಿಯೂ ಚಲಿಸುವಂತೆ ಮಾಡಬಾರದು. ಪುಷ್ಯಮಾಸದಲ್ಲಿ ಶಿವಲಿಂಗಕ್ಕೆ ಧಾರಾಪೂರ್ವಕವಾಗಿ ತುಪ್ಪದಿಂದ ಹಗಲು ರಾತ್ರಿ ಅಭಿಷೇಕ ಮಾಡಿಸುತ್ತಾ, ಗೀತವಾದ್ಯಾದಿಗಳಿಂದಲೂ, ನೈವೇದ್ಯನೀರಾಜನಾದಿಗಳಿಂದಲೂ ಪೂಜಿಸುತ್ತಾ ಶಿವಲಿಂಗವನ್ನು ಅರ್ಚಿಸಿದರೆ ಅವನ ಸಕಲವಿಧವಾದ ಪಾಪಗಳೂ ನಿವೃತ್ತಿಯಾಗುವುವು. ॥೩-೪-೫॥

ಅಲ್ಲದೆ ಅನೇಕ ಸದ್ಗುಣಗಳು ಅವನಿಗೆ ದೊರಕುವುವು. ಸಕಲೇಷ್ಟಾರ್ಥಗಳೂ ಲಭಿಸುವುವು. ಸತ್ಕುಲಪ್ರಸೂತಿತ್ವವೂ ಕುಲಾಭಿವೃದ್ಧಿಯೂ ಒದಗುವುದು. ಕೊನೆಯಲ್ಲಿ ಅವನು ಅಸಂಖ್ಯಾತವಾದ ವಿಮಾನಗಳ ನಡುವೆ ಶೋಭಿಸುತ್ತಾ ಸುಕೃತರಾಶಿಯನ್ನು ಪಡೆದು ಶಿವಪುರವನ್ನು ಸೇರಿ ಅಲ್ಲಿ ಸಾಕ್ಷಾಚ್ಛಿವನಂತೆಯೇ ಪ್ರಕಾಶಿಸತೊಡಗುವನು. ॥೬-೭॥

ಸೂರ್ಯ ಚಂದ್ರರ ಗ್ರಹಣಕಾಲ, ಮೇಷ ತುಲಾಸಂಕ್ರಮಣ ದಿನಗಳು ಇನ್ನೂ ಪುಣ್ಯಪ್ರದವಾದ ದಿನಗಳು, ಇಂತಹ ಸಮಯದಲ್ಲಿ ಯಾರು ತಪ್ಪದೆ ಶಿವಲಿಂಗಕೆ

ಏಕಃ ಪೂಜಯತೇ ಭಕ್ತ್ಯಾ ಭಕ್ತ್ಯಾ ಚಾನ್ಯಃ ಪ್ರಪಶ್ಯತಿ ।
ತುಲ್ಯಮೇವ ಫಲಂ ತಾಭ್ಯಾಂ ಭಕ್ತಿರೇವಾತ್ರ ಕಾರಣಂ ॥೧೦॥

ಯಃ ಕುರ್ಯಾತ್ಪರ್ವಕಾಲೇಷು ಮಹಾಪೂಜಾಪ್ರವರ್ತನಂ ।
ಶಿವಸ್ಯ ರಥಯಾತ್ರಾಂ ವಾ ನಗರಾಂತಃ ಪರಿಭ್ರಮಾತ್ ॥೧೧॥

ಮಹಾಚಿತ್ರಧ್ವಜೈಶ್ಛತ್ರೈಃ ಕಿಂಕಿಣೀರವಕಾನ್ವಿತೈಃ ।
ವಿತಾನಧ್ವಜಮಾಲಾಭಿರ್ಘಂಟಾಚಾಮರದರ್ಪಣೈಃ ॥೧೨॥

ಶಂಖಭೇರ್ಯಾದಿನಿರ್ಘೋಷೈರ್ಗೀತವಾದಿತ್ರಸಂಕುಲೈಃ ।
ಲೇಖ್ಯದಾರುಮಯೈರ್ಯಂತ್ರೈರ್ಮಾತೃವೃಕ್ಷಗಣಾದಿಭಿಃ ॥೧೩॥

ಪದಗಾಯನಪಾತ್ರೈಶ್ಚ ಬಹ್ವಾಶ್ಚರ್ಯೈರನೇಕಶಃ ।
ಸ್ತ್ರೀಡೋಲಾಚಕ್ರಯಂತ್ರೈಶ್ಚ ರಥಮಂದಿರಶೋಭಿತೈಃ ॥೧೪॥

---

ಘೃತಾಭಿಷೇಕ ನಡೆಸುವರೋ ಅವರಿಗೆ ಮಹಾಪುಣ್ಯವು ಲಭಿಸುವುದು. ಮತ್ತು ಶಿವಲಿಂಗಕ್ಕೆ ಮಾಡುವ ಘೃತಾಭಿಷೇಕವನ್ನು ಯಾರು ಉಪವಾಸವಿದ್ದು ಕಣ್ಣಿಂದ ನೋಡುವರೋ ಅವರಿಗೂ ಸರ್ವಪಾಪನಿವೃತ್ತಿಯಾಗಿ ಶಿವಲೋಕವು ದೊರಕುವುದು. ||೮-೯||

ಭಕ್ತಿಯಿಂದ ಶಿವಾರ್ಚನೆ ಮಾಡುವವನಿಗೂ, ಅದೇ ರೀತಿ ಭಕ್ತಿಯಿಂದ ಅರ್ಚಿತವಾದ ಶಿವಲಿಂಗವನ್ನು ದರ್ಶನಮಾಡುವವನಿಗೂ ಒಂದೇ ರೀತಿಯಾದ ಪುಣ್ಯವು ಲಭಿಸುವುದು. ಇದರಲ್ಲಿ ಭಕ್ತಿಗೇ ವಿಶೇಷ ಪ್ರಾಧಾನ್ಯ. ಪರ್ವಕಾಲಗಳಲ್ಲಿ ಶಿವಪೂಜೆ ಮಾಡುವುದು, ಪೂಜಿತವಾದ ಶಿವಲಿಂಗವನ್ನು ದರ್ಶನಮಾಡುವುದೂ, ನಗರದ ಮಧ್ಯಭಾಗದಲ್ಲಿ ಸಂಚರಿಸುವ ಚಿತ್ರಧ್ವಜಪತಾಕೆಗಳಿಂದಲೂ, ಗಂಟೆ, ಗೆಜ್ಜೆ, ತೋರಣ, ಮೇಲ್ಕಟ್ಟು, ಚಾಮರ, ಕನ್ನಡಿ ಮುಂತಾದ ಅಲಂಕಾರಗಳಿಂದಲೂ ಶೋಭಿಸುವ ರಥದಲ್ಲಿ ಶಿವವಿಗ್ರಹವನ್ನು ದರ್ಶನಮಾಡುವುದೂ ಮಹಾಶ್ರೇಯಸ್ಕರವು. ||೧೦-೧೧-೧೨||

ಶಿವರಥದ ಮುಂದೆ ಶಂಖ, ಭೇರಿ ಮುಂತಾದ ವಾದ್ಯಧ್ವನಿಯೂ, ಸಂಗೀತ, ನಾಟ್ಯಾದಿಗಳೂ, ಮರದಿಂದ ಮತ್ತು ಚಿತ್ರದಿಂದ ನಿರ್ಮಿತವಾಗಿರುವ ಶಿವಗಣಗಳ ಬೊಂಬೆಗಳೂ, ಇನ್ನೂ ವಿಧವಿಧವಾದ ಶಿವಮರ್ಯಾದಾಸೂಚಕಗಳಾದ ವಸ್ತುಗಳೂ, ಆಶ್ಚರ್ಯಕರಗಳಾದ ಚಕ್ರಯಂತ್ರಾದಿಗಳೂ ಸುತ್ತುವರಿದು, ಶಿವೋತ್ಸವವು ನಡೆಯು

ದಧ್ಯನ್ನಪಾನಕಾದ್ಯೈಶ್ಚ ಮಹಾಸತ್ರಸಮಾಹಿತೈಃ ।
ಮಹಾಜನ ಸಮಾಕೀರ್ಣಂ ಯಥಾವಿಭವವಿಸ್ತರಂ ॥೧೫॥

ಸರ್ವದಾನಾನಿ ಪುಣ್ಯಾನಿ ಸರ್ವಯಜ್ಞಫಲಾನಿ ಚ ।
ಅತ್ಯುಗ್ರತಪಸಾ ಪೂರ್ಣಂ ಸರ್ವತೀರ್ಥಫಲಾನಿ ಚ ॥೧೬॥

ಲಬ್ಧ್ವಾ ನರವರಶ್ರೀಮಾನ್ ಶಿವಯಾತ್ರಾಪ್ರವರ್ತನಾತ್ ।
ಶಿವಲೋಕೇ ಮಹಾಭೋಗೈಃ ಶಿವವನ್ಮೋದತೇ ಚಿರಂ ॥೧೭॥

ತಸ್ಯಾಂತೇ ದೇವರಾಜತ್ವಂ ಸ್ಥಿರಕಾಲಮವಾಪ್ನುಯಾತ್ ।
ಜಂಬೂದ್ವೀಪಾದಯಸ್ಸರ್ವಾನ್ ತಸ್ಯಾಂತೇ ಚ ಮಹೀಪತಿಃ ॥೧೮॥

ತ್ರಿಲಿಂಗವೇದಿಪರ್ಯಂತಂ ಯೋ ದದ್ಯಾದ್ಘೃತಕಂಬಲಂ ।
ಘೃತಧಾರಾಫಲಂ ತಸ್ಯ ಮಾಘೇ ಪೂರ್ಣೇತು ಪರ್ವಣಿ ॥೧೯॥

ಜಾಗರಂ ಗೀತನೃತ್ಯಾದ್ಯೈಃ ಸಕೃತ್ ಕೃತ್ವಾ ತು ಪರ್ವಣಿ ।
ಮನ್ವಂತರಶತಂ ಸಾಗ್ರಂ ಶಿವಲೋಕೇ ಮಹೀಯತೇ ॥೨೦॥

---

ತ್ತಿರುವಾಗ, ಧರ್ಮಾತ್ಮರು ದೊಡ್ಡ ದೊಡ್ಡ ಸತ್ರಗಳಲ್ಲಿ ಮೊಸರನ್ನ, ಪಾನಕ ಮುಂತಾದುವುಗಳನ್ನು ಕೊಡುತ್ತಾ ಮಹಾವೈಭವದಿಂದ ಉತ್ಸವವನ್ನು ನಡೆಸುತ್ತಿರುವುದನ್ನು ಭಕ್ತಿಯಿಂದ ನೋಡಬೇಕು. ಮತ್ತು ತಾನೂ ಅದರಲ್ಲಿ ಭಾಗಿಯಾಗಬೇಕು. ||೧೩-೧೪-೧೫||

ಅಂತಹ ಶಿವೋತ್ಸವವನ್ನು ದರ್ಶನಮಾಡಿದವರಿಗೆ ಸರ್ವಯಜ್ಞಾಚರಣೆಯ ಫಲವೂ, ಸರ್ವದಾನಗಳನ್ನು ನೆರವೇರಿಸಿದ ಸುಕೃತವೂ ಲಭಿಸುವುದು. ಶಿವಯಾತ್ರೆಗಾಗಿ ಪ್ರಯಾಣಮಾಡಿದವರಿಗೆ ಸಕಲ ಸಂಪತ್ತುಗಳೂ ಒದಗಿ ಕೊನೆಗೆ ಶಿವಸಾಯುಜ್ಯವು ದೊರೆತು ಅವನು ಶಿವರೂಪದಿಂದಲೇ ಆನಂದಪಡುವನು. ||೧೬-೧೭||

ಅಂತಹ ಶಿವಯಾತ್ರೋತ್ಸವಾದಿಗಳ ದರ್ಶನಮಾಡಿದವರಿಗೂ ದೇವರಾಜಪದವಿಯು ಲಭಿಸುವುದು. ಶಿವಲಿಂಗಕ್ಕೆ ಪಾಣಿಬಟ್ಟಲು ಪೂರ್ತಿಯಾಗಿ ಮುಚ್ಚುವಂತಹ ಘೃತಕಂಬಲ(ತುಪ್ಪದ ಹೊದಿಕೆ) ವನ್ನು ಮಾಘಮಾಸದ ಪರ್ವತಿಥಿಗಳಲ್ಲಿ ಸಮರ್ಪಿಸುವುದರಿಂದ ವರ್ಷಾಕಾಲ ಶಿವಲಿಂಗಕ್ಕೆ ನಡೆಸಿದ ಘೃತಾಭಿಷೇಕದ ಫಲವೇ ಅವರಿಗೆ ಲಭಿಸುವುದು. ||೧೮-೧೯-೨೦||

ಚಿತ್ರಾಭಿರಾಮನಾಟ್ಯಾಢ್ಯಂ ಶಿವಸ್ಯಾಯತನಾಗ್ರತಂ ।
ಸಮ್ಯಕ್ಪ್ರೇಕ್ಷಣಕಂ ದತ್ವಾ ರುದ್ರಲೋಕಮವಾಪ್ನುಯಾತ್ ॥೧೦॥

ಸುರೂಪಸ್ಸುಭಗಶ್ಶ್ರೀಮಾನ್ ಪರಿಭ್ರಷ್ಟೋತ್ರ ಜಾಯತೇ ।
ಸಪ್ತದ್ವೀಪಸಮುದ್ರಾಯಾಃ ಕ್ಷಿತೇರಧಿಪತಿರ್ಭವೇತ್ ॥೧೧॥

ರೂಪಂ ಪಿಷ್ಟಮಯಂ ಕೃತ್ವಾ ತ್ರಿನೇತ್ರಂ ರತ್ನಭೂಷಿತಂ ।
ಶುಕ್ಲೋಪವೀತಸಂಯುಕ್ತಮೇಕಪಾದಂ ವಿಭೂಷಿತಂ ॥೧೩॥

ದಂತೇಷು ಮೌಕ್ತಿಕಂ ತಸ್ಯ ಪ್ರವಾಲಂ ಚ ತಥೋಷ್ಠಯೋಃ ।
ದದ್ಯಾದ್ವಕ್ತ್ರೇ ಚ ನೇತ್ರಾಭ್ಯಾಂ ವೈಡೂರ್ಯಂ ಚಾಪಿ ಮಸ್ತಕೇ ॥೧೪॥

ಹೇಮರೂಪ್ಯಂ ಚ ಹಸ್ತಾಭ್ಯಾಂ ತಾಮ್ರಂ ಪಾದೇ ಚ ಕಲ್ಪಯೇತ್ ।
ಆಂಡಜೈರ್ವಿವಿಧೈರ್ವಸ್ತ್ರೈರ್ವಿಚಿತ್ರೈಃ ಪರಿವೇಷ್ಟಯೇತ್ ॥೧೫॥

---

ಘೃತಕಂಬಲವನ್ನು ಶಿವಲಿಂಗಕ್ಕೆ ಅರ್ಪಿಸಿ ಆ ರಾತ್ರಿ ಅಲ್ಲಿಯೇ ಗೀತ ನರ್ತನಾದಿಗಳಿಂದ ಜಾಗರಣೆಮಾಡಿದವರು, ನೂರಾರು ಮನ್ವಂತರಪರ್ಯಂತ ಶಿವ ಲೋಕದಲ್ಲಿ ವಾಸಮಾಡುವರು. ಶಿವಾಲಯದ ಮುಂದೆ ನಡೆಯುವ ಚಿತ್ರವಿಚಿತ್ರ ವಾದ ನಾಟ್ಯಾದಿಗಳನ್ನು ನೋಡಿದವರಿಗೂ ರುದ್ರಲೋಕಪ್ರಾಪ್ತಿಯಾಗುವುದು. ಮತ್ತು ಅವನು ರೂಪ, ಗುಣ, ಐಶ್ವರ್ಯ ಇವುಗಳಿಂದ ಕೂಡಿದವನಾಗಿ ಸಪ್ತದ್ವೀಪಾಧಿ ಪತಿಯೆನಿಸುವನು. ॥೧೦-೧೧॥

ಶಿವಾಲಯದ ಮುಂದೆ ಒಂದು ಶಿವರೂಪವನ್ನು ಹಿಟ್ಟಿನಿಂದ ರಚಿಸಬೇಕು. ಅದಕ್ಕೆ ಮೂರು ಕಣ್ಣುಗಳನ್ನು ಮಾಡಿ ಆ ಮೂರರಲ್ಲಿಯೂ ಒಂದೊಂದು ರತ್ನಗಳ ನ್ನಿಡಬೇಕು. ಶುದ್ಧವಾದ ಯಜ್ಞೋಪವೀತಾದಿಗಳಿಂದ ಅದನ್ನು ಅಲಂಕರಿಸಿ ಪಾದವನ್ನು ಒಡವೆಗಳಿಂದ ಅಲಂಕರಿಸಬೇಕು. ದಂತಸ್ಥಾನಗಳಲ್ಲಿ ಮುತ್ತುಗಳನ್ನೂ, ತುಟಿಯಭಾಗದಲ್ಲಿ ಹವಳವನ್ನೂ, ಮುಖ, ಕಣ್ಣು, ಹಣೆ ಇವುಗಳಲ್ಲಿ ವೈಡೂರ್ಯವನ್ನೂ ಇರಿಸಬೇಕು. ಚಿನ್ನ ಮತ್ತು ಬೆಳ್ಳಿಯಿಂದ ಎರಡು ಕೈಗಳನ್ನೂ, ತಾಮ್ರದಿಂದ ಕಾಲನ್ನೂ ಅಲಂಕರಿಸಬೇಕು. ನಾನಾವಿಧವಾದ ಬಣ್ಣಬಣ್ಣದ ವಸ್ತ್ರಗಳಿಂದ ದೇಹವನ್ನು ಮುಚ್ಚಬೇಕು ॥೧೩-೧೪॥

ಸುಗಂಧೈಶ್ಚಿತ್ರವರ್ಣೈಶ್ಚ ಪುಷ್ಪೈಶ್ಚಾಪಿ ವಿಭೂಷಯೇತ್ ।
ವಿವಿಧೈರ್ಭಕ್ಷ್ಯಭೋಜ್ಯೈಶ್ಚ ಬಲಿಂ ತತ್ರೋಪಕಲ್ಪಯೇತ್ ॥೨೬॥

ಭೋಜಯೇಚ್ಛಿವಭಕ್ತಾಂಶ್ಚ ವಿಪ್ರಾಂಶ್ಚಕ್ತ್ಯಾ ಚ ತರ್ಪಯೇತ್ ।
ಪ್ರಿಯತಾಮಃ ಶಿವೋ ನಿತ್ಯಮಿತ್ಯುಕ್ತ್ವಾ ತ್ಯಾಪಯೇದ್ದ್ವಿಜಾನ್ ॥೨೭॥

ತೈರೇವ ಸಾರ್ಧಂ ವಿಪ್ರೇಂದ್ರೈಸ್ತದ್ರೂಪಂ ತು ಶಿವಾಲಯೇ ।
ನೀತ್ವಾ ಸಮರ್ಪಯೇದ್ದೇವ್ಯಾಂ ಶಿವಲಿಂಗಸಮೀಪತಃ ॥೨೮॥

ಸರ್ವಯಜ್ಞಫಲಂ ಪ್ರಾಪ್ಯ ಸರ್ವದಾನಫಲಾನಿ ಚ ।
ಸುರೂಪೋ ರೂಪದಾನೇನ ಶಿವಲೋಕೇ ಮಹೀಯತೇ ॥೨೯॥

ಭೋಜನಂ ಘೃತಸಂಕೀರ್ಣಂ ಮಧುನಾ ಪರಿಶೋಭಿತಂ ।
ದದ್ಯಾತ್ಕೃಷ್ಣತಿಲಾನಾಂ ತು ಪ್ರಸ್ಥಮೇಕಂ ತು ಮಾಗಧಂ ॥೩೦॥

ದ್ವಿಗುಣಂ ತಂಡುಲಾನಾಂ ತು ಪೃಥಕ್ಪ್ರಸ್ಥಂ ಪ್ರಕಲ್ಪಯೇತ್ ।
ಅಂಡಜೈಃ ಕ್ರಿಮಿಜೈರ್ವಸ್ತ್ರೈರ್ವಿಚಿತ್ರೈಃ ಪರಿವೇಷ್ಟಯೇತ್ ॥೩೧॥

---

ನಾನಾಬಣ್ಣದ ಹೂವುಗಳಿಂದ ಅಲಂಕರಿಸಿ. ವಿಧವಿಧವಾದ ಭಕ್ಷ್ಯಭೋಜ್ಯಾದಿಗಳನ್ನು ಬಲಿಯಾಗಿ ಕೊಡಬೇಕು. ಅದೇ ಸಂದರ್ಭದಲ್ಲಿ ಈಶ್ವರಭಕ್ತರಾದ ವಿಪ್ರರಿಗೆ ಯಥೋಚಿತವಾದ ಭಕ್ಷ್ಯಭೋಜನಾದಿಗಳಿಂದ ತೃಪ್ತಿಯನ್ನುಂಟುಮಾಡಬೇಕು. ಇದರಿಂದ ಪರಶಿವನು ತೃಪ್ತನಾಗಲಿ ಎಂದು ಪ್ರಾರ್ಥಿಸಿ ಶಿವಪ್ರೀತಿಯನ್ನು ಕೋರಬೇಕು ॥೨೫-೨೬-೨೭॥

ಅನಂತರ ಆ ಶಿವಾಕಾರವನ್ನು ಬ್ರಾಹ್ಮಣರೊಡಗೂಡಿ ಶಿವಾಲಯದಲ್ಲಿ ಶಿವಸಮೀಪಕ್ಕೆ ಒಯ್ದು ಶಿವನಿಗೆ ಅರ್ಪಿಸಬೇಕು. ಇದರಿಂದ ಸರ್ವಯಜ್ಞದ ಫಲವೂ ಸರ್ವದಾನದ ಫಲವೂ ಲಭಿಸುವುದು. ಇಂತಹ ಶಿವರೂಪದಾನದಿಂದ ಮನುಷ್ಯನು ಸುರೂಪಿಯಾಗಿ ಜನಿಸುವನು. ಮತ್ತು ತದಂಗವಾಗಿ ಮಧು, ಘೃತ ಮಿಶ್ರಿತವಾದ ಭೋಜನಾದಿಗಳಿಂದ ವಿಪ್ರರನ್ನು ತೃಪ್ತಿಗೊಳಿಸಬೇಕು. ಒಂದು ಬಳ್ಳ ಕರೀಎಳ್ಳು, ಎರಡು ಬಳ್ಳ ಅಕ್ಕಿ ಇವನ್ನು ಪ್ರತ್ಯೇಕಪ್ರತ್ಯೇಕವಾಗಿಟ್ಟು ದಾನಮಾಡಬೇಕು. ॥೨೮-೨೯-೩೦॥

ಶಿವಲಿಂಗಕ್ಕೆ ಪಕ್ಷಿಗಳ ಗರಿಗಳಿಂದಲೂ, ರೇಷ್ಮೆಯ ಹುಳುವೇ ಮೊದಲಾದ ಹುಳುಗಳಿಂದಲೂ ನಿರ್ಮಿತವಾದ ಚಿತ್ರವಿಚಿತ್ರವಾದ ವಸ್ತ್ರಾದಿಗಳಿಂದ ಅಲಂಕಾರ

ಸುಗಂಧೈಶ್ಚಿತ್ರವರ್ಣೈಶ್ಚ ಪುಷ್ಪೈಶ್ಚಾಪಿ ವಿಭೂಷಯೇತ್ ।
ಲಿಂಗಂ ಸಂವೇಷ್ಟ್ಯ ವಸ್ತ್ರಾಭ್ಯಾಂ ಬಲಿಮೇತಂ ನಿವೇದಯೇತ್ ॥೩೨॥

ಅರ್ಚಯಿತ್ವಾ ವಿಮಾನೇನ ಪೌರ್ಣಮಾಸ್ಯಾಂ ವಿಶೇಷತಃ ।
ಯುಗಕೋಟಿಸಹಸ್ರಾಣಿ ಶಿವಲೋಕೇ ಮಹೀಯತೇ ॥೩೩॥

ಪುಣ್ಯಕ್ಷಯಾದಿಹಾಗತ್ಯ ಸಮೃದ್ಧೇ ಜಾಯತೇ ಕುಲೇ ।
ಮೇಧಾವೀ ಸುಭಗಃ ಶ್ರೀಮಾನ್ ವೇದವೇದಾಂಗಪಾರಗಃ ॥೩೪॥

ತಾಮ್ರಪಾತ್ರೇ ಪಯಃಪೂರ್ಣಂ ಕೃತ್ವಾ ಚಾಂತಸ್ಥಕಾಂಚನಂ ।
ಪ್ರಚ್ಛಾದ್ಯೋಪರಿ ಯತ್ನೇನ ಗಂಧಪುಷ್ಪಾರ್ಚಿತಂ ಮಹತ್ ॥೩೫॥

ಶಿವಭಕ್ತಂ ದ್ವಿಜಂ ಸಮ್ಯಗ್ಭೋಜಯಿತ್ವಾ ಸದಕ್ಷಿಣಂ ।
ಪ್ರಾಚ್ಯಾಂ ಸಮುದ್ಗತೇ ಸೋಮೇ ಪ್ರತೀಚೀಂ ಚ ರವೌ ಗತೇ ॥೩೬॥

ಪೌರ್ಣಮಾಸ್ಯಾಂ ಸ ವೈಶಾಖ್ಯಾಂ ನೀತ್ವಾ ಪಾತ್ರಂ ಶಿವಾಗ್ರತಃ ।
ಪ್ರೀಯತಾಂ ಮೇ ಮಹಾದೇವಃ ಸೋಮಮೂರ್ತಿರ್ಜಗತ್ಪತಿಃ ॥೩೭॥

---

ಮಾಡಬೇಕು. ಸುಗಂಧಮಯವಾದ ಪುಷ್ಪಗಳಿಂದಲೂ ವಸ್ತ್ರಯುಗ್ಮಗಳಿಂದಲೂ ಶಿವಲಿಂಗವನ್ನು ಅಲಂಕರಿಸಿ ಬಲಿಪ್ರದಾನ ಮಾಡಬೇಕು. ॥೩೧-೩೨॥

ಮತ್ತು ಈರೀತಿ ಶಿವಲಿಂಗವನ್ನು ವಿಮಾನಮಂಟಪದಲ್ಲಿ ಪೂರ್ಣಿಮಾ ದಿವಸ ಅರ್ಚಿಸಿದರೆ ಕೋಟಿಯುಗಪರ್ಯಂತ ಶಿವಲೋಕದಲ್ಲಿ ವಾಸವು ಲಭಿಸುವುದು. ಮತ್ತು ಕ್ಷೀಣಪುಣ್ಯನಾಗಿ ಬಂದು ಭೂಲೋಕದಲ್ಲಿ ಶ್ರೀಮಂತನಾಗಿಯೂ, ವೇದ ವೇದಾಂಗಪಾರಂಗತನಾಗಿಯೂ ಜನಿಸುವನು. ॥೩೩-೩೪॥

ತಾಮ್ರದ ಪಾತ್ರೆಯಲ್ಲಿ ಶುದ್ಧವಾದ ನೀರನ್ನು ತುಂಬಿ ಅದರಲ್ಲಿ ಸುವರ್ಣವನ್ನಿಟ್ಟು, ಅದನ್ನು ವಸ್ತ್ರಾದಿಗಳಿಂದ ಮುಚ್ಚಿ ಗಂಧಪುಷ್ಪಾದಿಗಳಿಂದ ಅರ್ಚಿಸಿ, ಈಶ್ವರಭಕ್ತನನ್ನು ಭೋಜನಾದಿಗಳಿಂದ ತೃಪ್ತಿಗೊಳಿಸಿ ವೈಶಾಖಮಾಸದ ಪೂರ್ಣಿಮಾ ದಿನ ಅವನಿಗೆ ದಾನಮಾಡಬೇಕು. ಶಿವಲಿಂಗದ ಸಮೀಪದಲ್ಲಿ ಆ ಪಾತ್ರೆಯನ್ನಿಟ್ಟು, ಸೋಮಮೂರ್ತಿಯಾದ ಪರಮೇಶ್ವರನು ತೃಪ್ತನಾಗಲಿ ಎಂದು ಹೇಳುತ್ತಾ ಶಿವಭಕ್ತಾರ್ಪಣೆ ಮಾಡಬೇಕು. ॥೩೫-೩೬-೩೭॥

ಇತ್ಯುಕ್ತ್ವಾ ವಚನಂ ಧ್ಯಾಯೇದ್ದೇವದೇವಮುಮಾಪತಿಂ ।
ತಸ್ಮೈ ವಿಪ್ರಾಯ ತತ್ಪಾತ್ರಂ ಅರ್ಪಯೇದ್ಭಕ್ತಿತಃ ಶನೈಃ ॥೩೮॥

ಏತತ್ಸೋಮವ್ರತಂ ನಾಮ ಕೃತ್ವಾ ರುದ್ರಾಂತಿಕಂ ವ್ರಜೇತ್ ।
ರುದ್ರಲೋಕಾತ್ಪರಿಭ್ರಷ್ಟೋ ಭವೇಜ್ಜಾತಿಸ್ಮರೋ ನರಃ ॥೩೯॥

ಪೂರ್ವಾಭ್ಯಾಸೇನ ತೇನೈವ ಪುನಸ್ತ್ವೈವಪದಂ ವ್ರಜೇತ್ ।
ಪೌರ್ಣಮಾಯಾಮಮಾವಾಸ್ಯಾಂ ಶಿವಂ ಸಂಪೂಜ್ಯ ಯತ್ನತಃ ॥೪೦॥

ಉಪವೀತಂ ಶಿವೇ ದದ್ಯಾಚ್ಛಿವಭಕ್ತಾಂಶ್ಚ ಪೂಜಯೇತ್ ।
ಪುನರೇವ ತು ಕಾರ್ತಿಕ್ಯಾಂ ಪೂಜ್ಯ ಶಂಭುಂ ಕ್ಷಮಾಪಯೇತ್ ॥೪೧॥

ಯತೀನಾಂ ದಕ್ಷಿಣಾಂ ದದ್ಯಾತ್ಸೂತ್ರವಸ್ತ್ರಾದಿಪೂರ್ವಕಾಂ ।
ಯಃ ಕುರ್ಯಾತ್ಸಕೃದಪ್ಯೇವಂ ಚಾತುರ್ಮಾಸ್ಯೇ ಪವಿತ್ರಕಂ ॥೪೨॥

---

ಈ ರೀತಿ ಶಿವಪ್ರೀತಿಯನ್ನು ಅಪೇಕ್ಷಿಸಿ ತಾಮ್ರಪಾತ್ರೆಯನ್ನು ವಿಪ್ರನಿಗೆ ದಾನ ಮಾಡುವ ವ್ರತವನ್ನು ಸೋಮವ್ರತವೆಂದು ಹೇಳುವರು. ಈ ಸೋಮವ್ರತ ಮಾಡಿದವರಿಗೆ ಶಿವಸಾಮೀಪ್ಯವು ದೊರೆಯುವುದು. ಕ್ಷೀಣಪುಣ್ಯನಾಗಿ ಭೂಲೋಕಕ್ಕೆ ಬಂದರೂ ಅವನಿಗೆ ಜನ್ಮಾಂತರದ ಸ್ಮರಣೆಯು ತಪ್ಪುವುದಿಲ್ಲ ॥೩೮-೩೯॥

ಹಾಗೆ ಪೂರ್ವಜನ್ಮಸ್ಮರಣೆಯೊದಗಿದರೆ ಮತ್ತೆ ಶಿವಪೂಜಾದಿಗಳಲ್ಲಿ ಮನಸ್ಸು ಮೂಡಿ, ಅದರಿಂದ ಪುನಃ ಶಿವಸಾಮೀಪ್ಯವನ್ನು ಪಡೆಯುವನು. ಪೂರ್ಣಿಮಾ ಮತ್ತು ಅಮಾವಾಸ್ಯಾ ತಿಥಿಗಳಲ್ಲಿ ಶಿವನನ್ನೂ, ಈಶ್ವರಭಕ್ತರನ್ನೂ ಪೂಜಿಸಿ ಯಜ್ಞೋಪವೀತ ದಾನಮಾಡಬಹುದು. ಕಾರ್ತಿಕಮಾಸದ ಪೂರ್ಣಿಮಾ ತಿಥಿಯಲ್ಲಿ ಈಶ್ವರನನ್ನು ಮತ್ತೆ ಸ್ತುತಿಸಿ ಯತಿಗಳಿಗೆ ವಸ್ತ್ರ, ಸೂತ್ರ ಇವುಗಳನ್ನು ದಕ್ಷಿಣೆ ಸಹಿತವಾಗಿ ದಾನಮಾಡಬೇಕು. ಮತ್ತು ಆಷಾಢಾದಿ ಚಾತುರ್ಮಾಸ್ಯವ್ರತಸಮಯದಲ್ಲಿಯೂ ಶಿವಪ್ರೀತ್ಯರ್ಥವಾಗಿ ಯತಿಗಳಿಗೆ ದಾನಧರ್ಮಾದಿಗಳನ್ನು ನಡೆಸಬೇಕು. ॥೪೦-೪೧॥

ಈ ರೀತಿ ಚಾತುರ್ಮಾಸ್ಯವ್ರತಾಚರಣೆಯಲ್ಲಿರುವ ಸಂನ್ಯಾಸಾದಿಗಳಿಗೆ ಯಾರು ಶಿವಪ್ರೀತ್ಯರ್ಥವಾಗಿ ದಾನಮಾಡುವರೋ, ಅವರು ಕಲ್ಪಕೋಟಿಪರ್ಯಂತ

ಕಲ್ಪಕೋಟಿಶತಂ ದಿವ್ಯಂ ರುದ್ರಲೋಕೇ ಮಹೀಯತೇ ।
ಪುಣ್ಯಕ್ಷಯಾತ್ಪರಿಭ್ರಷ್ಟಶ್ಚಾತುರ್ವೇದೀ ಚ ಜಾಯತೇ ॥೪೩॥

ಇಚ್ಛಯಾ ವಾ ಭವೇದ್ರಾಜಾ ಗುಣರೂಪಸಮನ್ವಿತಃ ।
ಭೂಮಿದಾನಸ್ಯ ಯತ್ಪುಣ್ಯಂ ಕನ್ಯಾದಾನಸ್ಯ ಯತ್ಫಲಂ ॥೪೪॥

ಮುಖವಾದ್ಯೇನ ಯತ್ಪುಣ್ಯಂ ಉಭಯಂ ಲಭತೇ ನರಃ ।
ತದೇವ ಪುಣ್ಯಂ ಗೀತಸ್ಯ ನೃತ್ತಸ್ಯ ಚ ವಿಶೇಷತಃ ॥೪೫॥

ತದೇವ ಜಾಯತೇ ಶಬ್ದಃ ಹಸ್ತತಾಲಧ್ವನೇಸ್ತಥಾ ।
ಯೋ ಗಾಂ ಪಯಸ್ವಿನೀಂ ದದ್ಯಾತ್ತರುಣೀಂ ವೃಷಸಂಯುತಾಂ ॥೪೬॥

ಶಿವಾಯ ತೇನ ದತ್ತಂ ಸ್ಯಾಜ್ಜಗತ್ಸರ್ವಂ ಚರಾಚರಂ ।
ವೃಷಂ ಚ ಪರಿಪೂರ್ಣಾಂಗಂ ಉದಾರಂ ಚ ಶಶಿಪ್ರಭಂ ॥೪೭॥

ಗೋಪತಿಂ ಧೂರ್ವಹಂ ವಾಪಿ ಶಿವಾಯ ವಿನಿವೇದಯೇತ್ ।
ಯಾವಂತಿ ದೇಹೇ ರೋಮಾಣಿ ತತ್ಪ್ರಸೂತಿಕುಲೇಷು ಚ ॥೪೮॥

ವಾಗಿ ರುದ್ರಲೋಕದಲ್ಲಿ ವಾಸಮಾಡುವರು. ಪುಣ್ಯಕ್ಷಯದಿಂದ ಮತ್ತೆ ಅವರು ಭೂಲೋಕಕ್ಕೆ ಬಂದು ಚತುರ್ವೇದಿಯೆನಿಸಿ ಬ್ರಾಹ್ಮಣಜನ್ಮ ತಾಳುವರು. ॥೪೨-೪೩॥

ಒಂದು ವೇಳೆ ಅವನು ಇಷ್ಟಪಡುವುದಾದರೆ ಗುಣರೂಪಗಳಿಂದ ಕೂಡಿದ ರಾಜನಾಗುವನು. ಮುಖವಾದ್ಯದಿಂದ ಶಿವಸ್ತುತಿಮಾಡುತ್ತಾ ಶಿವನನ್ನು ಪೂಜಿಸಿದವನು, ಭೂದಾನ ಮತ್ತು ಕನ್ಯಾದಾನಗಳ ಫಲವನ್ನು ಪಡೆಯುವನು. ಹಾಗೆಯೇ ಗೀತವಾದ್ಯನರ್ತನಾದಿಗಳಿಂದ ಶಿವನನ್ನು ಪೂಜಿಸಿದವರಿಗೆ ಅಷ್ಟೇ ವಿಧವಾದ ಸುಕೃತವು ಲಭಿಸುವುದು. ॥೪೪-೪೫॥

ಕೈಚಪ್ಪಾಳೆಯಿಂದ ನರ್ತನವಾಡಿದವನಿಗೂ ಇದೇ ಸುಕೃತವು ಲಭಿಸುವುದು. ಹಾಲು ಕೊಡುವ ಹಸುವನ್ನು ಒಂದು ಗೂಳಿಯೊಡನೆ, ಶಿವಪ್ರೀತಿಗಾಗಿ ಶಿವಾರ್ಪಣೆಮಾಡಿದರೆ ಜಗತ್ತನ್ನೇ ಪರಮೇಶ್ವರನಿಗೆ ಒಪ್ಪಿಸಿದಂತಹ ಸುಕೃತವು ಲಭಿಸುವುದು. ॥೪೬-೪೭॥

ಹಾಗೆ ಒಂದು ವೃಷಭವನ್ನು ಶಿವನಿಗೆ ಅರ್ಪಿಸಿದುದೇ ಆದರೆ ಆ ವೃಷಭದಲ್ಲಿ ಎಷ್ಟು ರೋಮಗಳಿವೆಯೋ ಮತ್ತು ಅದರ ಸಂತಾನವು ಎಷ್ಟು ರೋಮಾದಿಗಳಿಂದ

ತಾವದ್ಯುಗಸಹಸ್ರಾಣಿ ರುದ್ರಲೋಕೇ ಮಹೀಯತೇ ॥೪೯॥

॥ ಸೂತ ಉವಾಚ ॥

ಯೋ ಧರ್ಮವಾಹಂ ಪರಮೇಶ್ವರಮೀಶಿತಾರಂ
ಸಂಪೂಜಯೇದ್ಯ ಇಹ ಭೂಮಿಗತಃ ಸುಭಕ್ತ್ಯಾ ।
ತಸ್ಯಾಯುರುತ್ತಮಸುಸೌಧ ಕಲತ್ರಪುತ್ರ
ಮಿತ್ರಾತಿರಾತ್ರಕರಣಂ ಲಭತೇ ಶಿವೇತ್ರ ॥೫೦॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ರೂಪದಾನಸೋಮವ್ರತಾದಿ
ಶಿವಸದ್ಧರ್ಮಕಥನಂ ನಾಮ ಚತುಶ್ಚತ್ವಾರಿಂಶೋಽಧ್ಯಾಯಃ

---

ವೃದ್ಧಿಹೊಂದುವುದೋ ಅಷ್ಟು ಯುಗಸಹಸ್ರಪರ್ಯಂತ ರುದ್ರಲೋಕದಲ್ಲಿ ಸ್ಥಿರವಾಸವು ಲಭಿಸುವುದು. ॥೪೮-೪೯॥

ಯಾವನು ಈ ರೀತಿ ಧರ್ಮರೂಪಿಯೂ, ಇಷ್ಟಾರ್ಥಪ್ರದನೂ ಆದ ಪರಶಿವನನ್ನು ಸ್ಥಿರಭಕ್ತಿಯಿಂದ ಪೂಜಿಸುವನೋ, ಅಂತಹವನಿಗೆ ಆಯುಸ್ಸು, ಪತ್ನೀಪುತ್ರಾದಿಗಳು, ಗೃಹಾರಾಮಾದಿ ಸಕಲ ಭೋಗಸಾಧನಗಳೂ ದೊರೆತು ಭೂಲೋಕದಲ್ಲಿ ಅತ್ಯಂತ ಸುಖದಿಂದ ಜೀವಿಸುವನೆಂಬುದರಲ್ಲಿ ಸಂಶಯಲೇಶವೂ ಇಲ್ಲ. ಎಂದು ಸೂತಮಹರ್ಷಿಗಳು ವಾಜಶ್ರವಸಾದಿಗಳಿಗೆ ಶಿವಪೂಜಾಮಹಿಮೆಯನ್ನು ವಿವರಿಸಿ ಹೇಳಿದರು. ॥೫೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ
ನಲವತ್ತನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಪಂಚಚತ್ವಾರಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ಶಿವಾಗ್ನಿಕಾರ್ಯಮುದ್ದಿಶ್ಯ ಸುರೂಪಾಂ ಚ ಪಯಸ್ವಿನೀಂ ।
ಕುಲೀನಾಂ ಕಪಿಲಾಂ ದತ್ವಾ ದತ್ತಂ ಭವತಿ ಗೋಶತಂ ॥೧॥

ಗಿರಿಕಾಂತಾರದುರ್ಗೇಷು ಸದಾ ಮಾತೇವ ರಕ್ಷತಿ ।
ಯತ್ನೇನ ಕಪಿಲಾಂ ಯತ್ನಾಚ್ಛಿವಾಯ ವಿನಿವೇದಯೇತ್ ॥೨॥

ಶಿವಸ್ನಾನಾಗ್ನಿಕಾರ್ಯಾರ್ಥಮುತ್ಪನ್ನಾ ಕಪಿಲಾ ಯಥಾ ।
ತಸ್ಮಾತ್ತತ್ರೈವ ಸಾ ಯೋಜ್ಯಾ ಕಪಿಲಾ ಶುಭಮಿಚ್ಛತಾ ॥೩॥

---

ನಲವತ್ತೈದನೆಯ ಅಧ್ಯಾಯ

ಪರಮೇಶ್ವರನು ಪಾರ್ವತಿಯೊಡನೆ ಹೀಗೆಂದನು :—ಶಿವಹೋಮಾರ್ಥವಾಗಿ ಬೇಕಾಗುವ ಘೃತಾದಿಗಳಿಗಾಗಿ ಕಪಿಲವರ್ಣದ ಒಂದು ಸಲ್ಲಕ್ಷಣಯುತವಾದ ಹಸುವನ್ನು ಶಿವಾರ್ಪಣೆ ಮಾಡಬೇಕು ಹಾಗೆ ಒಂದು ಗೋವನ್ನು ದಾನಮಾಡುವುದರಿಂದ ನೂರಾರು ಗೋದಾನಮಾಡಿದಷ್ಟು ಸುಕೃತವು ಲಭಿಸುವುದು. ಅಂತಹ ಗೋದಾನಪುಣ್ಯವು ಗಿರಿಕಾನನಾದಿ ಅಪಾಯಪ್ರದವಾದ ಸ್ಥಳಗಳಲ್ಲಿ ತಾಯಿಯಂತೆ ಕಾಪಾಡುವುದು. ಆದ್ದರಿಂದ ಶಿವಪ್ರೀತ್ಯರ್ಥವಾಗಿ ಕಪಿಲವರ್ಣದ ಹಸುವನ್ನು ದಾನಮಾಡಬೇಕು. ॥೧-೩॥

ಶಿವೋದ್ದೇಶಕವಾದ ಹೋಮದ್ರವ್ಯಗಳಿಗಾಗಿಯೇ ಲೋಕದಲ್ಲಿ ಕಪಿಲವರ್ಣದ ಗೋವು ಸೃಷ್ಟವಾಗಿರುವುದು. ಅಂತಹ ಕಪಿಲವರ್ಣದ ಗೋವನ್ನು

ಕಪಿಲಾಯಾಃ ಪಿಬೇಚ್ಛೂದ್ರಃ ಶಿವಸಂಸಾರವರ್ಜಿತಃ ।
ಸ ಪ್ರಯಾತಿ ಮಹಾಘೋರಂ ನರಕಂ ನಾತ್ರ ಸಂಶಯಃ ॥೪॥

ಹುತಶೇಷಂ ಪಿಬೇದ್ವಿಪ್ರಃ ಸ್ವರ್ಗೀ ಸ್ಯಾದನ್ಯಥಾ ಪಶುಃ ।
ಸಂಸ್ಕಾರೇಣ ವಿಮುಕ್ತಶ್ಚೇತ್ಸಂಸ್ಕಾರೋ ದುರ್ಲಭಶ್ಶಿವಃ ॥೫॥

ಗಾವಾಲಭ್ಯ ನಮಸ್ಕೃತ್ಯ ಯಃ ಕುರ್ಯಾತ್ತಾಂ ಪ್ರದಕ್ಷಿಣಾಂ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ॥೬॥

ಗವಾಂ ಹುಂಕಾರಶಬ್ದೇನ ದರ್ಶನಸ್ಪರ್ಶನೇನ ಚ ।
ಪಾಪಂ ಪ್ರಣಶ್ಯತೇ ಯಸ್ಮಾತ್ತಸ್ಮಾತ್ಸ್ಪರ್ಶಂ ಚ ಗೋಃ ಸ್ಪೃಶೇತ್ ॥೭॥

ಕುತಸ್ತೇಷಾಂ ಹಿ ಪಾಪಾನಿ ಯೇಷಾಂ ಗೃಹಮಲಂಕೃತಂ ।
ಸತತಂ ಬಾಲವತ್ಸಾಭಿರ್ಗೋಭಿಶ್ಶ್ರೀಭಿರಿವ ಸ್ವಯಂ ॥೮॥

ಶೂದ್ರನು ಸ್ವಂತಸುಖಕ್ಕಾಗಿ ಉಪಯೋಗಿಸಕೂಡದು. ಹಾಗೆ ಕಪಿಲವರ್ಣದ ಗೋವಿನಿಂದ ತಾನು ಪ್ರಯೋಜನಪಡೆದನಾದರೆ, ಅವನು ಭಯಂಕರವಾದ ನರಕವನ್ನು ಪಡೆಯುವನು. ||೩-೪||

ಬ್ರಾಹ್ಮಣನಾದರೂ ಕಪಿಲವರ್ಣದ ಗೋವಿನ ಕ್ಷೀರಾದಿಗಳನ್ನು ಶಿವಹೋಮಾನಂತರದಲ್ಲಿಯೇ ತಾನು ಸೇವಿಸಬೇಕು. ಆದರಿಂದ ಅವನಿಗೆ ಸ್ವರ್ಗಪ್ರಾಪ್ತಿಯಾಗುವುದು. ಹಾಗೆ ಶಿವನಿಗೆ ಅರ್ಪಿಸದೆ ತಾನು ಆ ಹಸುವಿನಿಂದ ಪ್ರಯೋಜನ ಹೊಂದಿದರೆ ಅವನಿಗೆ ಪಶುಜನ್ಮವು ಲಭಿಸುವುದು. ಅಸಂಸ್ಕಾರಿಯಾದವನಿಗೆ ಸಂಸ್ಕಾರವು ಮತ್ತೆ ಸುಲಭವಾಗಿ ದೊರೆಯಲಾರದು. ಯಾರು ಭಕ್ತಿಪೂರ್ವಕವಾಗಿ ಒಂದು ಸಾರಿ ಗೋಪ್ರದಕ್ಷಿಣೆಮಾಡುವರೋ ಅವರು ಅಖಂಡ ಭೂಪ್ರದಕ್ಷಿಣೆಯ ಸುಕೃತವನ್ನು ಪಡೆಯುವರು. ||೫-೬||

ಗೋವುಗಳ ಹುಂಕಾರಶ್ರವಣದಿಂದಲೂ, ಅವುಗಳ ದರ್ಶನಸ್ಪರ್ಶನಾದಿಗಳಿಂದಲೂ ಸಕಲ ಪಾಪರಾಶಿಯೂ ನಿವಾರಣೆಯಾಗುವುದು. ಹೀಗಿರುವಾಗ ಹಸುಕರುಗಳ ಸಮೂಹದಿಂದ ಯಾರ ಮನೆಯು ಅಲಂಕೃತವಾಗಿರುವುದೋ ಅವರೆಂತಹ ಧನ್ಯರು! ಸಾಕ್ಷಾತ್ ಲಕ್ಷ್ಮಿಯೇ ಅಲ್ಲಿ ನೆಲಸಿರುವಳಲ್ಲವೆ? ||೭-೮||

ಯಾನಿ ತೀರ್ಥಾನಿ ಮೇದಿನ್ಯಾಮಾಸಮುದ್ರಾತ್ಸರಾಂಸಿ ಚ ।
ಗವಾಂ ಶೃಂಗೋದಕಸ್ನಾನಾತ್ಕಲಾಂ ನಾರ್ಹಂತಿ ಷೋಡಶೀಂ ॥೯॥

ನ ಲಂಘಯೇದ್ಗವಾಮಸ್ಥಿ ಮೃತಂ ಗಂಧಂ ನ ವರ್ಜಯೇತ್ ।
ಯಾವಜ್ಜಿಘ್ರತಿ ತದ್ಗಂಧಂ ತಾವತ್ಪುಣ್ಯೈಃ ಸ ಪೂರ್ಯತೇ ॥೧೦॥

ಗವಾಂ ಕಂಡೂಯನಂ ಧೂಪಂ ಗೋಪ್ರದಾನಸಮಂ ಭವೇತ್ ।
ತುಲ್ಯಂ ಚ ಗೋಪ್ರದಾನೇನ ಹೇಯರೋಗಾದಿಪಾಲನಂ ॥೧೧॥

ತೃಣೋದಕಾದಿ ಸಂಯುಕ್ತಾಂ ಯಃ ಪ್ರದದ್ಯಾದ್ಗವಾಂ ಮಹೀಂ ।
ಸ ಗೋಮೇಧಫಲಂ ಪುಣ್ಯಂ ಲಭತೇ ನಾತ್ರ ಸಂಶಯಃ ॥೧೨॥

ಬಹುನಾತ್ರ ಕಿಮುಕ್ತೇನ ಗಾವಃ ಪಾಲ್ಯಾಃ ಪ್ರಯತ್ನತಃ ।
ಗಾವೋ ದೇಯಾಃ ಸದಾ ರಕ್ಷ್ಯಾಃ ಸ್ಪೃಶ್ಯಾ ದೃಶ್ಯಾಶ್ಚ ಸರ್ವದಾ ॥೧೩॥

ಯಸ್ತಾಡಯತಿ ಗಾಂ ಪಾದಾತ್ಸರ್ವಲೋಕಸ್ಯ ಮಾತರಂ ।
ಆಕ್ರೋಶಯತಿ ಯೋ ಮೋಹಾದಾಕೃಷ್ಟಂ ತಾಡಿತಂ ಜಗತ್ ॥೧೪॥

---

ಭೂಮಿಯು, ಹಾಗೂ ನದೀ ಸಮುದ್ರಗಳಲ್ಲಿ ಅಡಗಿರುವ ಸಕಲ ತೀರ್ಥಸ್ನಾನದಿಂದ ಎಂತಹ ಪುಣ್ಯರಾಶಿಯು ಲಭಿಸುವುದೋ, ಅದಕ್ಕಿಂತ ಎಷ್ಟೋ ಅತಿಶಯವಾಗಿ ಗೋಶೃಂಗೋದಕ ಸ್ನಾನದಿಂದ ಸುಕೃತವು ಲಭಿಸುವುದು. ಹಸುವಿನ ಸಗಣಿಯನ್ನು ಎಂದೂ ದಾಟಬಾರದು. ಅದರ ವಾಸನೆಯಲ್ಲಿ ಜುಗುಪ್ಸೆ ತೋರಬಾರದು. ಗೋಮಯ ಗಂಧ ಸೇವನೆಯಿಂದ ಹೆಚ್ಚಾದ ಪುಣ್ಯಪ್ರಾಪ್ತಿಯಾಗುವುದು. ॥೯-೧೦॥

ಗೋವಿನ ಮೈಯ್ಯನ್ನು ತುರಿಸೋಣದಿಂದ ಗೋದಾನಮಾಡಿದ ಪುಣ್ಯವೇ ಲಭಿಸುವುದು. ಅದರಿಂದ ಸಕಲ ವ್ಯಾಧಿಗಳೂ ನಾಶವಾಗುವುವು. ಹುಲ್ಲು ನೀರಿನಿಂದ ತುಂಬಿದ ಭೂಮಿಯನ್ನು ಗೋವುಗಳಿಗಾಗಿ ದಾನಮಾಡುವವನು ಗೋಮೇಧಯಾಗದ ಫಲವನ್ನು ಪಡೆಯುವುದರಲ್ಲಿ ಸಂಶಯವಿಲ್ಲ. ॥೧೧-೧೨॥

ಒಟ್ಟಿನಲ್ಲಿ ಹೇಳುವುದಾದರೆ ಪ್ರತಿಯೊಬ್ಬರೂ ಹಸುವನ್ನು ಪ್ರೀತಿಯಿಂದ ಕಾಪಾಡಬೇಕು. ಅವನ್ನು ಸದಾ ದರ್ಶನಮಾಡುತ್ತಿರಬೇಕು. ಆಗಾಗ ಗೋದಾನಗಳನ್ನು ನಡೆಸುತ್ತಿರಬೇಕು. ಯಾರು ಅಜ್ಞಾನದಿಂದ ಲೋಕಮಾತೆಯೆನಿಸಿದ ಗೋ

ತಾಡಯೇದ್ಯದಿ ಗಾಂ ಮೋಹಾದ್ಯೋ ಗಾಂ ಕ್ರೋಶೇನ್ನರಾಧಮಃ ।
ನರಕಾಗ್ನೌ ಸ ಪಚ್ಯೇತ ಗೋನಿಶ್ವಾಸಪ್ರಪೀಡಿತಃ ॥೧೫॥

ಸ ಪಾಲಾಶದಂಡೇನ ತಾಡಯಂಸ್ತಾಂ ನಿವಾರಯೇತ್ ।
ಗಚ್ಛ ಗಚ್ಛೇತಿ ತಾಂ ಬ್ರೂಯಾತ್ ಮಾ ಮಾ ತಾಮಿತಿವಾರಯೇತ್ ॥೧೬॥

ವೃಷೋತ್ಸರ್ಗಂ ತು ಯಃ ಕುರ್ಯಾತ್ಪಕ್ಷಯೋ ರುಭಯೋರಪಿ ।
ದ್ವಾದಶ್ಯಾಂ ಪೌರ್ಣಮಾಸ್ಯಾಂ ವಾ ಚತುರ್ದಶ್ಯಷ್ಟಮೀಷು ಚ ॥೧೭॥

ತಸ್ಯ ಗಾವೋ ವೃಷೋ ವಿಷ್ಣುಃ ಶಿವೋಮಾ ಸರ್ವದೇವತಾಃ ।
ಶಾಂತಿಂ ಕುರ್ವಂತಿ ಸುಪ್ರೀತಾಃ ಸ್ವರ್ಗಮಾಯುಶ್ಶ್ರಿಯಂ ಬಲಂ ॥೧೮॥

ದಾಸ್ಯಂತಿ ಚ ಸದಾ ನಿತ್ಯಂ ಕಲ್ಯಾಣಂ ಭದ್ರಮೇವ ಚ ।
ಯೋ ನರೋ ವರ್ತತೇ ಗೋಷು ತಾಡನಾಕ್ರೋಧವರ್ಜಿತಃ ॥೧೯॥

ವನ್ನು ಕಾಲಿನಿಂದ ಒದೆಯುವರೋ ಅವರು ಸಕಲಪ್ರಪಂಚವನ್ನೇ ಕಾಲಿನಿಂದ ಒದ್ದಂತೆ ಆಗಿ ಪರಮಪಾಪಿಷ್ಠರೆನಿಸುವರು. ||೧೩-೧೪||

ಗೋವುಗಳನ್ನು ಹೊಡೆಯುವುದರಿಂದಲೂ, ಗದರಿಸುವುದರಿಂದಲೂ ಮಾನವರಿಗೆ ನರಕವು ಲಭಿಸುವುದು. ದುಃಖದಿಂದ ಹಸುವು ನಿಟ್ಟುಸಿರಿಟ್ಟರೆ ಅದು ನರಕಪ್ರದವಾದೀತು. ಒಂದುವೇಳೆ ಗೋವನ್ನು ಹೆದರಿಸಬೇಕಾದರೆ ಮುತ್ತುಗದ ಕೋಲಿನಿಂದ ತಡೆದು ನಿಲ್ಲಿಸಬೇಕು. ಹೋಗು, ಹೋಗು, ಬೇಡ, ಬೇಡ, ಎಂಬ ಉಪಚಾರೋಕ್ತಿಗಳಿಂದ ಹಸುವನ್ನು ಹಿಂದಿರುಗಿಸಬೇಕು. ||೧೫-೧೬||

ಯಾರು ಎರಡುಪಕ್ಷಗಳ ದ್ವಾದಶೀ, ಪೂರ್ಣಿಮಾ, ಅಮಾವಾಸ್ಯೆ, ಅಷ್ಟಮೀ ಚತುರ್ದಶೀ ಮುಂತಾದ ತಿಥಿಗಳಲ್ಲಿ ವಿಧಿವತ್ತಾಗಿ ವೃಷೋತ್ಸರ್ಗಮಾಡುವರೋ, ಅವರಿಗೆ ವಿಷ್ಣು, ಶಿವ, ಪಾರ್ವತಿ, ಲಕ್ಷ್ಮಿ, ಮುಂತಾದ ದೇವತೆಗಳು ಸುಪ್ರೀತರಾಗಿ ಸ್ವರ್ಗಾದಿ ಸಕಲ ಸೌಖ್ಯಗಳನ್ನೂ ಕ್ಷಿಪ್ರದಲ್ಲಿ ಅನುಗ್ರಹಿಸುವರು. ||೧೭-೧೮||

ಅಂತಹವನಿಗೆ ಸಕಲ ದೇವತೆಗಳೂ ಸದಾ ಸನ್ಮಂಗಳವನ್ನೇ ಕರುಣಿಸುವರು. ಯಾರು ಹಸುಗಳನ್ನು ಹೊಡೆಯದೆ, ಕೋಪಿಸಿಕೊಳ್ಳದೆ ರಕ್ಷಿಸುವರೋ ಅಂತಹವರು ಸಕಲೈಶ್ವರ್ಯಪರಿವೃತನಾಗಿ ರುದ್ರಲೋಕವನ್ನು ಹೊಂದುವರು. ಗೋವು, ಮತ್ತು

ಮಹತೀಂ ಶ್ರಿಯಮಾಪ್ನೋತಿ ರುದ್ರಲೋಕಂ ಸ ಗಚ್ಛತಿ ।
ಗೋಬ್ರಾಹ್ಮಣಾರ್ಥಮುದ್ಯುಕ್ತಂ ಪ್ರಾಣೈರ್ಯದಿ ಪ್ರಮುಚ್ಯತೇ ॥೨೦॥

ಪ್ರಾಪ್ನೋತಿ ಪರಮಂ ಸ್ಥಾನಂ ಯತ್ರ ದೇವೋ ಮಹೇಶ್ವರಃ ।
ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾ ಕೃತಂ ॥೨೧॥

ಏಕತ್ರ ಮಂತ್ರಾಸ್ತಿಷ್ಠಂತಿ ಹವಿರನ್ಯತ್ರ ತಿಷ್ಠತಿ ।
ನ ಚ ಮಂತ್ರೈರ್ವಿನಾ ಯಜ್ಞೋ ಹವಿಷಾ ಚ ಪ್ರವರ್ತತೇ ॥೨೨॥

ತಸ್ಮಾದ್ವಿಪ್ರಾಶ್ಚ ಗಾವಶ್ಚ ಪುಣ್ಯಾತ್ಪುಣ್ಯತರಾವುಭೌ ।
ಗೋಭಿರ್ಯಜ್ಞಾಃ ಪ್ರವರ್ತಂತೇ ಗೋಷು ದೇವಾ ಪ್ರತಿಷ್ಠಿತಾಃ ॥೨೩॥

ಗೋಭಿರ್ವೇದಾಃ ಸಮುತ್ಕೀರ್ಣಾಃ ಸ್ವರ್ಷಿಸಂಘಾಃ ಪದಕ್ರಮಾಃ ।
ಶೃಂಗಮೂಲೇ ಗವಾಂ ನಿತ್ಯಂ ಬ್ರಹ್ಮಾ ವಿಷ್ಣುಶ್ಚ ಸಂಸ್ಥಿತೌ ॥೨೪॥

---

ಬ್ರಾಹ್ಮಣರ ಸೇವೆಗಾಗಿ ಯಾರು ತಮ್ಮ ಪ್ರಾಣಗಳನ್ನೇ ಅರ್ಪಿಸುವರೋ ಅಂತಹವರು ಪರಮಪದವನ್ನು ಪಡೆದು ಕೊನೆಗೆ ಶಿವಸಾಮೀಪ್ಯವನ್ನು ಹೊಂದುವರು. ಪ್ರಪಂಚದಲ್ಲಿ ಒಂದೇ ಒಂದು ಪವಿತ್ರಕುಲವು ಗೋ ಮತ್ತು ಬ್ರಾಹ್ಮಣರೆಂಬ ಭಾವನೆಯಿಂದ ಎರಡಾಗಿ ಕಾಣುತ್ತಿದೆ. ॥೧೯-೨೦-೨೧॥

ಯಜ್ಞಕರ್ಮಗಳಿಗೆ ಅತ್ಯವಶ್ಯಕವಾದ ಮಂತ್ರವು ಬ್ರಾಹ್ಮಣಾಧೀನವಾಗಿಯೂ ಮುಖ್ಯವಸ್ತುಗಳಾದ ಹವಿರ್ದ್ರವ್ಯಗಳು ಗೋವುಗಳ ಅಧೀನವಾಗಿಯೂ ಇರುತ್ತವೆ. ಈ ಹವಿಸ್ಸು, ಮಂತ್ರಗಳಿಲ್ಲದೆ ಯಾವ ಯಜ್ಞವೂ ಸಾಂಗವಾಗಲಾರದು. ಅಂತಹ ಪವಿತ್ರವಸ್ತುಗಳಿಗೆ ಆಶ್ರಯವಿತ್ತ ಈ ಎರಡು ವಸ್ತುಗಳೂ ಅಮೂಲ್ಯವಾದವುಗಳೇ. ಮತ್ತು ಪುಣ್ಯತರವಾದವುಗಳೇ. ಅದರಲ್ಲಿಯೂ ಗೋವುಗಳಿಂದ ಯಾಗಾದಿಗಳು ಮುಖ್ಯವಾಗಿ ನಡೆಯಲೇಬೇಕು. ಸಕಲ ದೇವತೆಗಳೂ ಗೋವುಗಳಲ್ಲಿಯೇ ನೆಲಸಿರುವುವು. ॥೨೨-೨೩॥

ಸಮಸ್ತ ವೇದಗಳೂ, ಋಷಿಜನರೂ ಗೋವುಗಳಿಂದಲೇ ಜನಿಸಿರುವರು. ಪದ, ಕ್ರಮ ಮುಂತಾದ ವೇದಭಾಗಗಳೂ ಇಲ್ಲಿಂದಲೇ ತೋರಿಬಂದಿವೆ. ಗೋಶೃಂಗ ಮಧ್ಯದಲ್ಲಿ ನಿತ್ಯವೂ ಬ್ರಹ್ಮ, ವಿಷ್ಣು ಇವರು ವಾಸಮಾಡುವರು. ಗೋವಿನ

ಶೃಂಗಾಗ್ರೇ ಸರ್ವತೀರ್ಥಾನಿ ಸ್ಥಾವರಾಣಿ ಚರಾಣಿ ಚ ।
ಶಿರೋಮಧ್ಯೇ ಮಹಾದೇವೋ ಮುಖೇ ಸರ್ವಪತಿಃ ಸ್ಥಿತಃ ॥೨೫॥

ಸರಸ್ವತೀ ಚ ಹುಂಕಾರೇ ಯಮನಿರ್ಋತೀ ಚ ಗಂಡಯೋಃ ।
ಸಂಧ್ಯಾದ್ವಯಂ ತಥೈವೋಷ್ಠೌ ಗ್ರೀವಾಮಿಂದ್ರಸ್ಸಮಾಶ್ರಯತ್ ॥೨೬॥

ಲಲಾಟಾಗ್ರೇ ಸ್ಥಿತಾ ದೇವೀ ನಾಸಾವಂಸೇ ಚ ಷಣ್ಮುಖಃ ।
ಕಂಬಲಾಶ್ವತರೌ ನಾಗೌ ನಾಸಾಪುಟಸಮಾಸ್ಥಿತೌ ॥೨೭॥

ಕರ್ಣಯೋರಶ್ವಿನೌ ದೇವೌ ಚಕ್ಷುಷೀ ಶಶಿಭಾಸ್ಕರೌ ।
ದಂತೇಷು ವಾಯವಸ್ಸರ್ವೇ ಜಿಹ್ವಾಯಾಂ ವರುಣಸ್ಸ್ಥಿತಃ ॥೨೮॥

ಋಕ್ಷಾಣಿ ಚ ಕಕುದ್ದೇಶೇ ಸಾಧ್ಯಾಶ್ಚೋರಸಿ ಸಂಸ್ಥಿತಾಃ ।
ಚತುಷ್ಪಾದಾಸ್ತಥಾಗ್ನಿಶ್ಚ ಧರ್ಮೋ ಜಂಘಾವನಸ್ಥಿತಃ ॥೨೯॥

ಖುರಮಧ್ಯೇಷು ಗಂಧರ್ವಾಃ ಖುರಾಗ್ರೇಷು ಚ ಪನ್ನಗಾಃ ।
ಖುರಾಣಾಂ ಪಶ್ಚಿಮಾಂಗೇಷು ಗಣಾಶ್ಚಾಪ್ಸರಸಾಂ ಸ್ಥಿತಾಃ ॥೩೦॥

ಕೊಂಬಿನ ತುದಿಯಲ್ಲಿ ಸಕಲ ತೀರ್ಥಗಳೂ ನೆಲಸಿವೆ. ಮತ್ತು ಚರಸ್ಥಾವರ ಪ್ರಾಣಿಗಳೆಲ್ಲವೂ ಗೋವಿನ ಕೊಂಬಿನಲ್ಲಿ ಆಶ್ರಯಪಡೆದಿವೆ. ಮಹಾದೇವನು ಗೋವಿನ ಶಿರೋಮಧ್ಯದಲ್ಲಿರುವನು. ಮುಖದಲ್ಲಿ ಸರ್ವೇಶ್ವರನು ಕಂಡುಬರುವನು.॥೨೪-೨೫॥

ಗೋವಿನ ಹುಂಕಾರಧ್ವನಿಯಲ್ಲಿ ಸರಸ್ವತಿಯೂ, ಕೆನ್ನೆಯ ಪ್ರದೇಶಗಳಲ್ಲಿ ಯಮ ಮತ್ತು ನಿರ್ಋತಿಗಳೂ, ತುಟಿಯಲ್ಲಿ ಪ್ರಾತಃ ಮತ್ತು ಸಾಯಂ ಸಂಧ್ಯೆಗಳೂ, ಕತ್ತಿನಲ್ಲಿ ಇಂದ್ರನೂ, ಹಣೆಯಭಾಗದಲ್ಲಿ ಪಾರ್ವತಿಯೂ, ನಾಸಿಕದಲ್ಲಿ ಷಣ್ಮುಖನೂ, ಮೂಗಿನ ಹೊಳ್ಳೆಗಳಲ್ಲಿ ಕಂಬಲ ಮತ್ತು ಅಶ್ವತರರೆಂಬ ಇಬ್ಬರು ನಾಗದೇವತೆಗಳೂ, ಕಿವಿಗಳೆರಡರಲ್ಲಿ ಅಶ್ವಿನೀ ದೇವತೆಗಳೂ, ಕಣ್ಣುಗಳಲ್ಲಿ ಸೂರ್ಯ ಚಂದ್ರರೂ, ಹಲ್ಲುಗಳಲ್ಲಿ ವಾಯುದೇವರೂ, ನಾಲಿಗೆಯಲ್ಲಿ ವರುಣನೂ ನೆಲಸಿರುವರು. ॥೨೬-೨೭-೨೮॥

ಸಮಸ್ತ ನಕ್ಷತ್ರಗಳೂ ಹಸುವಿನ ಹಿಳಲಿನ ಪ್ರದೇಶದಲ್ಲಿಯೂ, ಸಾಧ್ಯರು ಉರೋಭಾಗದಲ್ಲಿಯೂ, ಅಗ್ನಿಯು ನಾಲ್ಕುಪಾದಗಳಲ್ಲಿಯೂ, ಧರ್ಮವು ಮೊಳಕಾಲುಗಳಲ್ಲಿಯೂ, ಗಂಧರ್ವರು ಗೊರಸುಗಳ ಮಧ್ಯಭಾಗದಲ್ಲಿಯೂ, ಸರ್ಪದೇವತೆ

ಸಾಕ್ಷಾದ್ಗಂಗಾ ಚ ಗೋಮೂತ್ರಂ ಗೋಮಯೇ ಯಮುನಾ ಸ್ಥಿತಾ ।
ಋಷಯಶ್ಚ ಸದಾ ಸರ್ವೇ ರೋಮಕೂಪೇಷು ಸಂಸ್ಥಿತಾಃ ॥೩೦॥

ಉದರೇ ಪೃಥಿವೀ ದೇವೀ ಸ ಶೈಲವನಕಾನನಾ ।
ಚತ್ವಾರಸ್ಸಾಗರಾಃ ಪೂರ್ಣಾಃ ಗವಾಂಗೇ ಚ ಪಯೋಧರಾಃ ॥೩೨॥

ಜಠರೇ ಗಾರ್ಹಪತ್ಯೋಗ್ನಿರ್ಹೃದಯೇ ದಕ್ಷಿಣಾಗ್ನಿಕಃ ।
ಮುಖೇ ಚಾಹವನೀಯಾಗ್ನಿಸ್ತಥಾ ಚಾಂಗೇ ಪತಿವ್ರತಾಃ ॥೩೩॥

ಅಸ್ಥಿಶುಕ್ಲೇಸ್ಥಿಸಂಘೇಷು ಹ್ಯಶ್ವಮೇಧಶತಿಕ್ರತುಃ ।
ಯಜ್ಞ ತೇ ಕಥಿತಂ ಪೂರ್ವಂ ಯಜ್ಞ ಗೋಷು ಪ್ರತಿಷ್ಠಿತಂ ॥೩೪॥

ಗೋಷು ದತ್ತಂ ಹುತಂ ಭುಕ್ತಂ ಗೋಷು ಸರ್ವಚರಾಚರಂ ।
ತಸ್ಮಾದ್ಗಾವೋ ನ ಹಿಂಸ್ಯಾಸ್ಸ್ಯುಃ ಪಾಲನೀಯಾಶ್ಚ ಸರ್ವದಾ ॥೩೫॥

ಗಳು ಗೊರಸುಗಳ ತುದಿಯಲ್ಲಿಯೂ, ಅಪ್ಸರಸ್ಸುಗಳು ಗೊರಸುಗಳ ಹಿಂಭಾಗ ದಲ್ಲಿಯೂ ನೆಲಸಿರುವರು. ॥೨೯-೩೦॥

ಗೋಮೂತ್ರದಲ್ಲಿ ಗಂಗೆಯೂ, ಗೋಮಯದಲ್ಲಿ ಯಮುನೆಯೂ, ರೋಮ ಕೂಪಗಳಲ್ಲಿ ಸಮಸ್ತ ಋಷಿಗಳೂ, ಉದರದಲ್ಲಿಯೂ ನಾಲ್ಕು ಸ್ತನಗಳಲ್ಲಿಯೂ ನಾಲ್ಕು ಸಾಗರಗಳೂ ಅಡಗಿರುವುವು. ॥೩೧-೩೨॥

ಗೋವಿನ ಜಠರಭಾಗದಲ್ಲಿ ಗಾರ್ಹಪತ್ಯಾಗ್ನಿಯೂ, ಹೃದಯದಲ್ಲಿ, ಮುಖದಲ್ಲಿ, ದಕ್ಷಿಣಾಗ್ನಿ, ಆಹವನೀಯಾಗ್ನಿಗಳೂ, ಉಳಿದ ಅಂಗಗಳಲ್ಲಿ ಪತಿವ್ರತಾಶಿರೋಮಣಿ ಯರೂ, ಮೂಳೆ, ಮಜ್ಜ, ಮಾಂಸ ಇವುಗಳಲ್ಲಿ ಅಶ್ವಮೇಧಾದಿ ಯಜ್ಞಾಭಿಮಾನಿ ದೇವತೆಗಳೂ, ವಾಸವಾಗಿರುವುವು. ಒಂದು ಗೋಸೇವೆಯನ್ನು ನಡೆಸಿದರೆ ಹಿಂದೆ ಹೇಳಿದ ಸಕಲ ದೇವತೆಗಳಿಗೂ ಸತ್ಕಾರಮಾಡಿದಂತಾಗುವುದು. ॥೩೩-೩೪

ಗೋವುಗಳಿಗಿತ್ತ ಆಹಾರವೆಲ್ಲಾ ಹೋಮದ್ರವ್ಯವಾಗುವುದು. ಸಕಲ ಚರಾ ಚರವಸ್ತುಗಳೂ ಗೋವುಗಳಲ್ಲಿ ಅಡಗಿರುವುವು. ಆದ್ದರಿಂದ ಹಸುಗಳನ್ನು ಯಾವ ರೀತಿಯಿಂದಲೂ ಹಿಂಸಿಸಕೂಡದು, ಸರ್ವವಿಧದಲ್ಲಿಯೂ ರಕ್ಷಿಸುತ್ತಿರಬೇಕು. ಗೋವುಗಳು ಸರ್ವದಾ ನಮ್ಮನ್ನು ಸಲಹುತ್ತಿರಲೆಂದು ನಾವು ನಾನಾಸ್ತುತಿವಚನ ಗಳಿಂದ ಪ್ರಾರ್ಥಿಸುತ್ತಿರಬೇಕು ಬ್ರಾಹ್ಮಣನೆನಿಸಿ ಬ್ರಹ್ಮಶಬ್ದದಿಂದ ಸ್ತುತಿಸಲ್ಪಡುತ್ತಾ,

ಗಾವಸ್ಸ್ತುತ್ಯಾಶ್ಚ ವಂದ್ಯಾಶ್ಚ ಗಾವೋ ಮಾಂ ಪಾಂತು ನಿತ್ಯಶಃ ।
ಬ್ರಾಹ್ಮಣೋ ಬ್ರಹ್ಮಶಬ್ದೇನ ಸ್ತೂಯತೇ ಪ್ರಣವೇನ ಯಃ ॥೩೬॥

ಸ ಶಿವಶ್ಶಾಶ್ವತೋ ದೇವೋ ಗೋಷು ಮಾರೀಂ ವ್ಯಪೋಹತು ।
ಲಂಬೋದರೇಣ ದೇವೇನ ಗಜವಕ್ತ್ರೇಣ ಯೋಽರ್ಚಿತಃ ॥೩೭॥

ಶ್ರೀಮತಾ ರುಚಿರಾಂಗೇಣ ಘಂಟಾಕರ್ಣನರೇಶ್ವರಃ ।
ನಿತ್ಯಂ ಪ್ರಣಮ್ಯತೇ ಭಕ್ತ್ಯಾ ಹೃಷ್ಟೇನಾದ್ಯೇನ ಚೇತಸಾ ॥೩೮॥

ಸ ಶಿವಶ್ಶಾಶ್ವತೋ ದೇವೋ ಗೋಷು ಮಾರೀಂ ವ್ಯಪೋಹತು ।
ನಿತ್ಯಂ ರುದ್ರಬಲೋಪೇತೋ ರುದ್ರಶಕ್ತಿಸಮನ್ವಿತಃ ॥೩೯॥

ಘಂಟಾಕರ್ಣಗಣೋದ್ದೇಶಃ ಶಿವಧ್ಯಾನವಿಧಾಯಕಃ ।
ಶಿವತೇಜೋನುಭಾವೇನ ಗೋಷು ಮಾರೀಂ ವ್ಯಪೋಹತು ॥೪೦॥

ಶಿವಾಯ ದೇವದೇವಾಯ ಮಹಾದೇವಾಯ ಯೋಗಿನೇ ।
ರುದ್ರಾಯ ಸ್ಥಾಣವೇ ನಿತ್ಯಂ ಹರಾಯೋಗ್ರಾಯ ತೇ ನಮಃ ॥೪೧॥

---

ಪ್ರಣವಜಾಪಿಯಾಗಿ ಮಹಾತ್ಮನೆನಿಸಿದವನಿಗೂ ಗೋವು ಪರಮಪೂಜ್ಯವಸ್ತುವು. ಶಾಶ್ವತನೂ ದೇವದೇವನೂ ಆದ ಪರಶಿವನು ಗೋವುಗಳಿಗೆ ಬರುವ ತೊಂದರೆಗಳನ್ನು ಸರ್ವದಾ ಪರಿಹರಿಸಲಿ. ||೩೫-೩೬||

ಲಂಬೋದರನೂ, ಗಜಾನನನೂ ಆದ ವಿನಾಯಕನು ನಿತ್ಯವೂ ಗೋಸೇವೆ ಮಾಡುತ್ತಾ ಧನ್ಯನಾಗಿರುವನು. ಅಂತಹ ಗಜಮುಖನೂ, ಘಂಟಾಕರ್ಣನೆಂಬ ಶಿವಗಣನಾಯಕನೂ ಸದಾ ಸಂತುಷ್ಟಾಂತರಂಗರಾಗಿ ಗೋಪೂಜೆ ಸಲ್ಲಿಸುತ್ತಿರುವರು. ಅಂತಹ ಗೋವುಗಳಿಗೆ ಒದಗುವ ಉಪದ್ರವಾದಿಗಳನ್ನು ಪರಮೇಶ್ವರನು ಪರಿಹರಿಸಲಿ. ||೩೭-೩೮||

ರುದ್ರಬಲದಿಂದಲೂ, ರುದ್ರಶಕ್ತಿಯಿಂದಲೂ ಕೂಡಿ, ಸದಾ ಶಿವಧ್ಯಾನಪರನಾದ ಘಂಟಾಕರ್ಣನು ಶಿವತೇಜಸ್ಸಿನ ಮಹಿಮೆಯಿಂದ ಕೂಡಿ ಗೋವುಗಳಿಗೆ ಒದಗುವ ತೊಂದರೆಗಳನ್ನು ಪರಿಹರಿಸುವನಾಗಲಿ. ||೩೯-೪೦||

“ ದೇವ ದೇವನೂ, ಮಹಾದೇವನೂ, ಯೋಗನಿಷ್ಠನೂ ಆದ ರುದ್ರನಿಗೂ, ಉಗ್ರರೂಪಿಯಾದ ಮಹಾಪಾಪನಾಶಕವಾದ ಸ್ಥಾಣುವಿಗೂ ನಮಸ್ಕಾರವು. ಸಕಲ

ಪರಮೇಶಾಯ ಸಿದ್ಧಾಯ ಸರ್ವಸಿದ್ಧಿಪ್ರದಾಯಿನೇ ।
ತ್ರ್ಯಂಬಕಾಯ ಮಹೇಶಾಯ ಅತಿಶಾಂತಾಯ ತೇ ನಮಃ ॥೪೨॥

ಅಭಿಮಂತ್ರ್ಯ ಸದಾ ತೋಯಂ ಏತೈರ್ಮಂತ್ರೈರ್ಯಥಾಕ್ರಮಂ ।
ಪ್ರೋಕ್ಷಯೇತ್ತು ಗವಾಂ ದೇಹಂ ತತಶ್ಶಾಂತಿರ್ಭವಿಷ್ಯತಿ ॥೪೩॥

ಯ ಇಮಾಂ ಪಠತೇ ಗೋಷು ರೋಗಾರ್ತಾಸು ವಿಶೇಷತಃ ।
ಗೋಸಾವಿತ್ರೀಂ ಮಹಾಪುಣ್ಯಾಂ ಗವಾಂ ಶಾಂತಿರ್ಭವಿಷ್ಯತಿ ॥೪೪॥

ಯಃ ಸಮುತ್ಥಾಯ ಸತತಂ ಗೋಸಾವಿತ್ರೀಮಿಮಾಂ ಪಠೇತ್ ।
ಗವಾಂ ಚೋತ್ಸರ್ಗಕಾಲೇಷು ಪ್ರಸ್ಥಾನೇ ವಾ ಸಮಾಗಮೇ ॥೪೫॥

ಆಯುಷ್ಮಾನ್ ಬಲವಾನ್ ಶ್ರೀಮಾನ್ ಗೋಮಾನರ್ಥಪತಿರ್ಭವೇತ್ ।
ದೇಹಾಂತೇ ಶಿವಸಾರೂಪ್ಯಂ ಲಭತೇ ನಾತ್ರ ಸಂಶಯಃ ॥೪೬॥

॥ ಶ್ರೀ ಈಶ್ವರ ಉವಾಚ ॥

ಯೋಲಂಕೃತ್ಯ ಶಿವೇ ಗಾಂ ವೈ ಸವತ್ಸಾಂ ಚ ನಿವೇದಯೇತ್ ।
ಗೋಶ್ವಮೇಧಸ್ಯ ಯಜ್ಞಸ್ಯ ಫಲಮಾಪ್ನೋತಿ ಪುಷ್ಕಲಂ ॥೪೭॥

---

ಜಗತ್ಪತಿಯೂ, ಸರ್ವಸಿದ್ಧಿಪ್ರದನೂ, ಸಿದ್ಧಿಪುರುಷನೂ, ಮೂರುಕಣ್ಣುಗಳಿಂದ ವಿರಾಜಿಸುತ್ತಿರುವವನೂ ಶಾಂತಮೂರ್ತಿಯೂ ಆದ ಮಹಾನುಭಾವನಾದ ಶಂಕರನೇ ನಿನಗೆ ವಂದನೆ'' ಈ ಅರ್ಥಪ್ರದವಾದ ಮಂತ್ರಗಳನ್ನುಚ್ಚರಿಸುತ್ತಾ ಗೋವುಗಳಮೇಲೆ ಜಲಪ್ರೋಕ್ಷಣೆಮಾಡಬೇಕು. ಹೀಗೆ ಮಾಡುವುದರಿಂದ ಗೋವುಗಳಿಗೆ ಶಾಂತಿಯು ಲಭಿಸುವುದು ಮತ್ತು ಗೋವುಗಳಿಗೆ ಉಪದ್ರವವು ನಾಶವಾಗುವುದು.॥೪೧-೪೨-೪೩॥

ಯಾರು ಪ್ರತಿನಿತ್ಯವೂ ಪ್ರಾತಃಕಾಲ ಈ ರೀತಿ ಗೋಸಾವಿತ್ರೀದೇವಿಯನ್ನು ಗೋಶಾಂತಿಮಂತ್ರಗಳಿಂದ ಸೇವಿಸುವದೋ ಮತ್ತು ಗೋವುಗಳನ್ನು ಕೊಟ್ಟಿಗೆಯಲ್ಲಿ ಕಟ್ಟುವಾಗಲೂ, ಕೊಟ್ಟಿಗೆಯಿಂದ ಬಿಡುವಾಗಲೂ, ಒಟ್ಟುಗೂಡಿಸುವಾಗಲೂ, ಈ ಮಂತ್ರವನ್ನು ಯಾರು ಪುರಶ್ಚರಣೆಮಾಡುವರೋ ಅವರು ಆಯುಸ್ಸು, ಬಲ, ಸಂಪತ್ತು, ಗೋಧನ ಮುಂತಾದುವುಗಳನ್ನು ಈ ಜನ್ಮದಲ್ಲಿ ಪಡೆದು ಜನ್ಮಾಂತರದಲ್ಲಿ ಶಿವಸಾರೂಪ್ಯವನ್ನು ಹೊಂದುವರೆಂಬುದರಲ್ಲಿ ಸಂಶಯವಿಲ್ಲ. ॥೪೪-೪೫-೪೬॥

ಎಲೌ ದೇವಿಯೇ, ಇಂತಹ ಗೋವನ್ನು ಕರುಸಹಿತವಾಗಿ ಅಲಂಕರಿಸಿ

ಪ್ರಭೂತತೋಯೇಷು ಬೃಹತ್ತೃಣೇಷು
ಸುಪುಂಗವಾ ನಿತ್ಯಮರೋಗವತ್ಸಾಃ ।
ಚರಂತು ಗಾವಃ ಸುಖಿತಾ ವನೇಷು
ಕ್ಷೀರಂ ಪ್ರಯಚ್ಛಂತು ಸುಖಂ ಹ್ರದಂತು ॥೪೯॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಗೋಮಹಿಮಾ ಗೋಸಾವಿತ್ರೀ ಮಂತ್ರಕಥನಂ ನಾಮ ಪಂಚಚತ್ವಾರಿಂಶೋಽಧ್ಯಾಯಃ

---

ನನಗಾಗಿ ಯಾವನು ಅರ್ಪಿಸುವನೋ ಅವನಿಗೆ ಅಶ್ವಮೇಧಯಾಗದ ಫಲವು ಅತಿಶಯವಾಗಿ ಲಭಿಸುವುದು. ಲೋಕದಲ್ಲಿ ಪರಮಪೂಜ್ಯವಾದ ಗೋವುಗಳು ಸದಾ ನೀರು, ಹುಲ್ಲು ಇವುಗಳಿಂದ ವ್ಯಾಪ್ತವಾದ ಭೂಭಾಗದಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತಾ, ಎತ್ತು, ಗೂಳಿ ಮತ್ತು ಕರುಗಳೊಡನೆ ಸಂತೋಷದಿಂದ ವಿಹರಿಸುತ್ತಿರಲಿ. ನನ್ನ ಭಕ್ತರಿಗೆ ಗೋವುಗಳು ಸದಾ ಕ್ಷೀರಾದಿಗಳನ್ನು ಒದಗಿಸುತ್ತಾ ಅವರನ್ನು ರಕ್ಷಿಸುತ್ತಿರಲಿ ಎಂದು ಪರಶಿವನು ಪಾರ್ವತಿಗೆ ಗೋಮಹಿಮೆಯನ್ನು ವಿಸ್ತಾರವಾಗಿ ಶ್ರುತಪಡಿಸಿದನು. ||೪೭-೪೮||

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ನಲವತ್ತೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಷಟ್ಚತ್ವಾರಿಂಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ಸುವಿನೀತಾಂ ಸ್ತ್ರಿಯಂ ದಾಸೀಂ ಭೃತ್ಯಂ ಮಮ ನಿವೇದಯೇತ್ ।
ನರಮೇಧಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತಿ ಪುಷ್ಕಲಂ ॥೧॥

ನಿವೇದಯತಿ ಯೋ ನಾಗಂ ಭಕ್ತ್ಯಾ ಭದ್ರಮಲಂಕೃತಂ ।
ಶಿವಾಯ ಪರ್ವದಿವಸೇ ತಸ್ಯ ಪುಣ್ಯಫಲಂ ಶೃಣು ॥೨॥

ಸಮನ್ವೈರಾವತಪ್ರಖ್ಯೈರ್ಗಜೈರ್ಯುಕ್ತೈಸ್ಸುಶೋಭನೈಃ ।
ಪ್ರಕ್ರೀಡತೇ ಮಹಾಯಾನೈಶ್ಶತಸಂಖ್ಯೈರನೇಕಶಃ ॥೩॥

---

## ನಲವತ್ತಾರನೆಯ ಅಧ್ಯಾಯ

ದೇವಿಯೇ ಕೇಳು, ವಿನಯವತಿಯಾದ ದಾಸಿಯನ್ನೂ, ವಿಧೇಯನಾದ ಸೇವಕನನ್ನೂ, ಯಾರು ನನಗಾಗಿ ಸಮರ್ಪಿಸುವರೋ ಅವರಿಗೆ ನರಮೇಧಯಾಗದ ಫಲವು ಒದಗುವುದು. ಅಲ್ಲದೆ ಶಿವತಿಥಿಗಳಲ್ಲಿ ಒಂದು ಆನೆಯನ್ನು ಭೂಷಣಾದಿಗಳಿಂದ ಅಲಂಕರಿಸಿ, ಅದನ್ನು ನನಗಾಗಿ ಸಲ್ಲಿಸುವವನಿಗೆ ಅನಂತಾನಂತ ಪುಣ್ಯವು ಲಭಿಸುವುದು. ಅದನ್ನೇ ಈಗ ಹೇಳುವೆನು ಕೇಳು. ॥೧-೨॥

ಅವನು ಈ ಜನ್ಮವು ಕಳೆದನಂತರ ಕಲ್ಪಕೋಟಿಗಟ್ಟಲೆ ರುದ್ರಲೋಕದಲ್ಲಿದ್ದು ಅನಂತರ ದೇವೇಂದ್ರಪದವಿಯನ್ನು ಹೊಂದುವನು. ಅಲ್ಲಿ ಅವನು ಐರಾವತ

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ರುದ್ರಲೋಕಂ ಗತಸ್ತ್ವಾಂತೇ ಭವೇದಿಂದ್ರಸ್ಸುರಾಧಿಪಃ ॥೪॥

ಚತುರ್ಯುಗಸಹಸ್ರಾಂತೇ ಸ ಗಾಂ ಪ್ರಾಪ್ಯ ನರಾಧಿಪಃ ।
ಭವೇದಿಂದ್ರಸಮಶ್ಶ್ರೀಮಾನ್ ರೂಪವೀರ್ಯಶ್ರುತಾನ್ವಿತೈಃ ॥೫॥

ಯಶ್ಶಿವಾಯ ಜಲೋಪೇತಾಂ ಸರ್ವಸಸ್ಯಪ್ರರೋಹಿಣೀಂ ।
ಮಹೀಂ ಮಹೀಪತಿರ್ದದ್ಯಾತ್ತಸ್ಯ ಪುಣ್ಯಫಲಂ ಶೃಣು ॥೬॥

ಯಾವದ್ಗಂಗಾ ಭವೇದ್ಭೂಮಿರ್ಧ್ರಿಯಮಾಣಾ ಸಮಂತತಃ ।
ತಾವತ್ಕಲ್ಪಸಹಸ್ರಾಣಿ ರುದ್ರಲೋಕೇ ಮಹೀಯತೇ ॥೭॥

ಏವಂ ಸರ್ವತ್ರ ವಿಜ್ಞೇಯಂ ಫಲಂ ದಂಡಪ್ರಮಾಣತಃ ।
ಗ್ರಾಮಖೇಟಪುರಕ್ಷೇತ್ರವಿಷಯಾದಿನಿವೇದನೇ ॥೮॥

ಸರ್ವಸಸ್ಯಜಲೋಪೇತಂ ಸರ್ವಬಾಧಾವಿವರ್ಜಿತಂ ।
ಗ್ರಾಮಂ ಶಿವಾಯ ಯೋ ದದ್ಯಾತ್ತಸ್ಯ ಪುಣ್ಯಫಲಂ ಶೃಣು ॥೯॥

---

ಸಮಾನವಾದ ನೂರಾರು ಆನೆಗಳನ್ನು ಪಡೆದು ಅವುಗಳ ಮೇಲೆ ಯಥೇಚ್ಛವಾಗಿ ಸಂಚರಿಸುತ್ತಾ ದೇವಲೋಕದ ಸೌಖ್ಯವನ್ನು ಪಡೆಯುವನು. ॥೩-೪॥

ಹಾಗೆ ಸಹಸ್ರ ಮಹಾಯುಗ ಪರ್ಯಂತ ದೇವಲೋಕದಲ್ಲಿದ್ದು, ಮತ್ತೆ ಭೂಲೋಕಕ್ಕೆ ಬಂದು, ರೂಪ, ಶೌರ್ಯ, ವಿದ್ಯೆ ಇವೇ ಮೊದಲಾದುವುಗಳಿಂದ ಕೂಡಿ ಇಂದ್ರ ಸಮನೆನಿಸಿ ರಾಜನಾಗಿ ಬಾಳುವನು. ಹಾಗೆಯೇ ಫಲವತ್ತಾದ ಮತ್ತು ನೀರು ಸಸ್ಯ ಇವುಗಳಿಂದ ಕಂಗೊಳಿಸುತ್ತಿರುವ ಭೂಮಿಯನ್ನು ಶಿವಪ್ರೀತಿಯಾಗ ಲೆಂದು ಶಿವನಿಗೆ ಯಾರು ದಾನಮಾಡುವರೋ ಅವರಿಗೆ ಒದಗುವ ಪುಣ್ಯವನ್ನು ಎಷ್ಟೆಂದು ಹೇಳಲಿ. ॥೫-೬॥

ಗಂಗಾನದಿಯು ಭೂಲೋಕದಲ್ಲಿ ಎಷ್ಟು ವರ್ಷ ಪ್ರವಹಿಸುವುದೋ ಅಷ್ಟು ಸಹಸ್ರಾರು ವರ್ಷಗಳೂ ರುದ್ರಲೋಕದಲ್ಲಿ ಅವನು ವಾಸಿಸುವನು. ಇದೇ ರೀತಿ ಶಿವಪ್ರೀತಿಗಾಗಿ ಗ್ರಾಮ, ಕೋಟೆ, ಕೊತ್ತಲ, ಊರು, ಗದ್ದೆ ಮೊದಲಾದುವುಗಳನ್ನು ದಾನಮಾಡಿದವರಿಗೂ ಅಷ್ಟೇ ಸುಕೃತರಾಶಿಯನ್ನು ಊಹಿಸಬಹುದು. ॥೭-೮॥

ಪೈರುಪಚ್ಚೆಗಳಿಂದಲೂ, ಜಲಸಮೃದ್ಧಿಯಿಂದಲೂ ಕಂಗೊಳಿಸುತ್ತಾ ಈತಿ

ಸರ್ವಯಜ್ಞೇಷು ಯತ್ಪುಣ್ಯಂ ಸರ್ವತೀರ್ಥೇಷು ಯತ್ಫಲಂ ।
ಸರ್ವದಾನೇಷು ಯತ್ಪುಣ್ಯಂ ಗ್ರಾಮದಾನೇನ ತದ್ಭವೇತ್ ॥೧೦॥

ಸೂರ್ಯಕೋಟಿಪ್ರತೀಕಾಶೈರ್ದಿವ್ಯಸ್ತ್ರೀಕೋಟಿಸಂಯುತೈಃ ।
ಸಂಯುತೈಃ ಕೋಟಿಶೋ ಯಾನೈಸ್ಸರ್ವಕಾಮಸಮನ್ವಿತೈಃ ॥೧೧॥

ಸೋನೇನ ಗ್ರಾಮದಾನೇನ ತ್ರಿಸಪ್ತಕುಲಸಂಯುತಃ ।
ಯಥೇಷ್ಟಮೈಶ್ವರೇ ಲೋಕೇ ಕ್ರೀಡತೇ ಕಾಲಮಕ್ಷಯಂ ॥೧೨॥

ಪುಣ್ಯಂ ನಗರದಾನಸ್ಯ ಗ್ರಾಮದಾನಾಚ್ಛತಾಧಿಕಂ ।
ದೇಶದಾನೇನ ಚಾನಂತ್ಯಂ ನ ಶಕ್ಯಂ ತತ್ರ ಕೀರ್ತಿತುಂ ॥೧೩॥

ರತ್ನದಾನಂ ತು ಗೋಶ್ವಾರ್ಥಸರ್ವಂ ಭೂವೌ ಪ್ರಜಾಯತೇ ।
ತಸ್ಮಾದ್ಭೂಮಿಪ್ರದಾನೇನ ನರೋ ಭವತಿ ಸರ್ವದಾ ॥೧೪॥

---

ಬಾಧಾವಿವರ್ಜಿತವಾಗಿರುವ ಗ್ರಾಮವನ್ನು ಶಿವನಿಗೆ ದಾನಮಾಡುವವರಿಗೆ, ಸಮಸ್ತ ಯಜ್ಞಾಚರಣೆಯಫಲವೂ, ಸರ್ವತೀರ್ಥಸ್ನಾನದ ಸುಕೃತವೂ, ಸಕಲವಸ್ತುದಾನದ ಪುಣ್ಯವೂ ಅನಾಯಾಸವಾಗಿ ದೊರೆಯುವುದು. ॥೯-೧೦॥

ಗ್ರಾಮದಾನಮಾಡಿದವನಿಗೆ ಸೂರ್ಯಕೋಟಿಯಂತೆ ಹೊಳೆಯುವ ನಾನಾ ವಾಹನಲಾಭವೂ, ಸುಂದರಿಯರಾದ ಸ್ತ್ರೀಯರ ಸೌಖ್ಯವೂ, ಇನ್ನೂ ಭೋಗ್ಯವಸ್ತುಗಳ ಅತಿಶಯಲಾಭವೂ ದೊರೆಯುವುದಲ್ಲದೆ, ಅದೇ ಸೌಖ್ಯವು ತನ್ನ ಇಪ್ಪತ್ತೊಂದು ಕುಲದವರಿಗೂ ಅವರವರ ಇಚ್ಛಾನುಸಾರವಾಗಿ ಪ್ರಾಪ್ತವಾಗುವುದು. ಅವರೆಲ್ಲರೂ ಬಹುಕಾಲ ಈಶ್ವರಸಮೀಪದಲ್ಲಿ ಆನಂದವನ್ನನುಭವಿಸುತ್ತಾ ಜೀವಿಸುವರು. ॥೧೧-೧೨॥

ಗ್ರಾಮದಾನಕ್ಕಿಂತಲೂ ನಗರದಾನವು ವಿಶೇಷಪುಣ್ಯಪ್ರದವಾದುದು. ಅದಕ್ಕಿಂತ ದೇಶದಾನವು ಮತ್ತೂ ವಿಶೇಷವು. ಅದರಿಂದ ಲಭಿಸುವ ಫಲವನ್ನು ವರ್ಣಿಸುವುದೇ ಅಸದಳ. ರತ್ನದಾನ, ಹಾಗೆಯೇ ಅದನ್ನು ಅಡಗಿಸಿಕೊಂಡಿರುವ ಭೂದಾನ, ಅಶ್ವದಾನ ಇವುಗಳನ್ನು ನಡೆಸುವುದರಿಂದ ಮಾನವನು ನಿಜವಾಗಿಯೂ ಮುಕ್ತನಾಗುವನು. ಇದರಲ್ಲಿ ಸಂಶಯವಿಲ್ಲ. ॥೧೩-೧೪॥

ಯೋಽನ್ಯದತ್ತಾಂ ಸ್ವದತ್ತಾಂ ವಾ ಹರೇದ್ಭೂಮಿಂ ನರಾಧಿಪಃ ।
ಸಂಪಚ್ಯತೇಽಕ್ಷಯಂ ಕಾಲಂ ನರಕೇಷು ಕ್ರಮೇಣ ಸಃ ॥೧೫॥

ಸರ್ವಂ ವಾ ಭೂಮಿಹರಣೇ ಹೃತಮೇವ ನ ಸಂಶಯಃ ।
ಭೂಮಿಹರ್ತಾ ವಸೇತ್ತಸ್ಮಾನ್ನರಕೇ ಕಾಲಮಕ್ಷಯಂ ॥೧೬॥

ದೇವಸ್ವಾನಿ ಹರಂತೀಹ ನರಾ ನರಕನಿರ್ಭಯಾಃ ।
ಬ್ರಹ್ಮಸ್ವಾನಿ ಚ ಯೇ ಮೋಹಾತ್ಪಚ್ಯಂತೇ ನರಕೇಷು ತೇ ॥೧೭॥

ದೇವಬ್ರಹ್ಮಸ್ವಪುಷ್ಟಾನಿ ವಾಹನಾನಿ ಮಹೀಪತೇಃ ।
ಯುದ್ಧಕಾಲೇ ವಿಶೀರ್ಯಂತೇ ಸೈಕತಾಸ್ಸೇತವೋ ಯಥಾ ॥೧೮॥

ಭೂಮಿಪ್ರದೋ ವಸೇತ್ಸ್ವರ್ಗೇ ಯಾವತ್ಕಾಲಸ್ಯ ಸಂಖ್ಯಯಾ ।
ತಸ್ಮಾಚ್ಛತಗುಣಂ ಕಾಲಂ ತದ್ಧರ್ತಾ ನರಕೇ ವ್ರಜೇತ್ ॥೧೯॥

ವಿಂಶತ್ಯಷ್ಟೌ ತ್ರಯಃ ಕೋಟ್ಯೋ ನರಕಾಣಾಂ ಸುದಾರುಣಾಃ ।
ಕ್ರಮೇಣ ತಾಸು ಪಚ್ಯಂತೇ ದೇವಬ್ರಹ್ಮಸ್ವಹಾರಿಣಃ ॥೨೦॥

ರಾಜನಾದವನು ದೇವರಿಗಾಗಿ ತನ್ನಿಂದಲೋ ಅಥವಾ ಅನ್ಯರಿಂದಲೋ ಕೊಡಲ್ಪಟ್ಟ ಭೂಮ್ಯಾದಿಗಳನ್ನು ಅಪಹರಿಸಿದುದೇ ಆದರೆ ಅವನು ಬಹುಕಾಲ ನರಕದಲ್ಲಿ ಕೊಳೆಯುವನು. ಭೂಮಿಯನ್ನು ಅಪಹರಿಸಿದವನು ಸರ್ವವನ್ನೂ ಅಪಹರಿಸಿದಂತೆಯೇ ಸರಿ. ಆದ್ದರಿಂದ ಭೂವ್ಯಪಹಾರಕನು ಬಹುಕಾಲ ನರಕದಲ್ಲಿ ನಾನಾಕಷ್ಟಗಳನ್ನು ಅನುಭವಿಸುವನೆಂಬುದರಲ್ಲಿ ಯಾವ ಸಂಶಯವೂ ಇಲ್ಲ ॥೧೫-೧೬॥

ನರಕಲೋಕದ ಕಷ್ಟಗಳನ್ನು ಗಮನಿಸದೆ ಯಾರು ದೇವಬ್ರಹ್ಮಸ್ವತ್ತುಗಳನ್ನು ಅಪಹರಿಸುವರೋ ಅವರು ಬಹುಕಾಲ ವಿಶೇಷನಾರಕಿಗಳಾಗಿ ಶ್ರಮಪಡುವರು. ದೇವ, ಬ್ರಹ್ಮಸ್ವತ್ತುಗಳ ಸೇವನೆಯಿಂದ ಬೆಳೆದ ರಾಜರ ಐಶ್ವರ್ಯವೆಲ್ಲಾ ಯುದ್ಧಕಾಲದಲ್ಲಿ ನಾಶಹೊಂದುವುವು. ಮರಳುಸೇತುವೆಯು ಪ್ರವಾಹದಲ್ಲಿ ಮುಳುಗಿಹೋಗುವಂತೆ ಅವನ ಸೈನ್ಯವೆಲ್ಲವೂ ಅವನ ಎದುರಿಗೇ ಧ್ವಂಸವಾಗುವುವು. ॥೧೭-೧೮॥

ಭೂದಾನಮಾಡಿದವನು ಎಷ್ಟುಕಾಲ ಸ್ವರ್ಗಲೋಕದಲ್ಲಿ ಸುಖಪಡುವನೋ ಅದರ ಶತಾಧಿಕಕಾಲದಲ್ಲಿ ಆ ಭೂಮಿಯನ್ನು ಅಪಹರಿಸಿದವನು ನರಕದಲ್ಲಿ ವ್ಯಥೆಪಡುವನು. ಎಂಬತ್ತುನಾಲ್ಕುಕೋಟಿ ಸಂಖ್ಯೆಯ ನರಕಗಳಲ್ಲಿಯೂ ಅವರು ಪ್ರತ್ಯೇಕ

ಕಲ್ಪಾಂತೇ ಚ ಸಮುತ್ತೀರ್ಣಾ ವೃಕಕೋರಾದಿಯೋನಿಷು ।
ಭ್ರಮಂತಿ ಚಿರಕಾಲಂ ತು ಕ್ಷುತ್ಪಿಪಾಸಾದಿಪೀಡಿತಾಃ ॥೨೦॥

ಕೇನಚಿಚ್ಛಿವಭಕ್ತೇನ ಶಿವಾರ್ಚಾಯತನಾದಿಷು ।
ಉಪಯುಕ್ತಾ ಭವಂತೀಹ ಯಾವತ್ತಾವಚ್ಚ ಪಾದಪಾಃ ॥೨೧॥

ತತೋ ನಿರ್ಧೂತಪಾಪಾಶ್ಚ ತೇ ನರಾಃ ಶಿವತೇಜಸಾ ।
ದಿವಂ ಪ್ರಯಾಂತಿ ಸಂತ್ಯಜ್ಯ ಶರೀರಂ ಯಾತನಾತ್ಮಕಂ ॥೨೩॥

ದೇವಬ್ರಹ್ಮಪರಂ ದ್ರೋಹಂ ತಸ್ಮಾತ್ಸಂತ್ಯಜ್ಯ ಶಂಕರಂ ।
ಯೇ ಪೂಜಯಂತಿ ಭೂದೇವಾಸ್ತೇಯಾಂತಿ ಪರಮಂಪದಂ ॥೨೪॥

ಯ ಇದಂ ಪಠತೇಧ್ಯಾಯಂ ಶೃಣುಯಾದ್ವಾ ಸಮಾಹಿತಃ ।
ಸ ವಿಧೂಯಾಶುಪಾಪಾನಿ ಶಿವಲೋಕೇ ಮಹೀಯತೇ ॥೨೫॥

---

ಪ್ರತ್ಯೇಕವಾಗಿ ದುಃಖವನ್ನು ಅನುಭವಿಸುತ್ತಾ, ದೇವಬ್ರಾಹ್ಮಣ ಭೂಮ್ಯಪಹಾರಕರು ಸದಾ ದುಃಖಿಸುತ್ತಿರುವರು. ॥೧೯-೨೦॥

ಹಾಗೆ ನರಕದಿಂದ ದುಃಖಾನುಭವವಾದಮೇಲೆ ಭೂಮಿಯಲ್ಲಿ ತೋಳ, ಕೀರ ಮುಂತಾದ ತಿರ್ಯಗ್ಜಂತುಗಳಾಗಿ ಹುಟ್ಟಿ ಹಸಿವು ಬಾಯಾರಿಕೆಗಳಿಂದ ನರಳುವರು. ತಾನು ದಾನಮಾಡಿದ ಭೂಮಿಯಲ್ಲಿ ಹುಟ್ಟಿದ ಮರಗಿಡಗಳಿಂದ ಶಿವಾಲಯಾದಿಗಳಲ್ಲಿ ಯಾವತ್ಪರ್ಯಂತ ಶಿವಾರ್ಚನಾದಿಗಳು ನಡೆಯುವುವೋ, ಅಲ್ಲಿಯವರೆಗೂ ದಾನಮಾಡಿದವರು ಪಾಪರಹಿತರಾಗಿದ್ದು ಯಾತನಾದೇಹವನ್ನು ತ್ಯಜಿಸಿ ಆನಂದಮಯರಾಗಿ ಸ್ವರ್ಗಲೋಕದಲ್ಲಿ ವಾಸಮಾಡುವರು. ॥೨೧-೨೨॥

ಶಿವತೇಜಸ್ಸನ್ನು ಪಡೆದು ಯಾರು ತಮ್ಮ ಪಾಪರಾಶಿಯನ್ನು ಪೂರ್ಣವಾಗಿ ಕಳೆದುಕೊಳ್ಳುವರೋ, ಅವರು ತಮ್ಮ ಯಾತನಾದೇಹದಿಂದ ಮುಕ್ತರಾಗುವರು. ಆದ್ದರಿಂದ ಮಾನವರು ಯಾರೇ ಆದರೂ ದೇವಬ್ರಾಹ್ಮಣದ್ರೋಹಕ್ಕೆ ಅವಕಾಶಕೊಡಬಾರದು. ದೇವಬ್ರಾಹ್ಮಣಾರಾಧಕರು ಪರಮಪದವನ್ನು ಪಡೆಯುವರು. ಅಲ್ಲದೆ ಈ ಅಧ್ಯಾಯವನ್ನು ಯಾರು ಭಯಭಕ್ತಿಯಿಂದ ಓದುವರೋ ಮತ್ತು ಕೇಳುವರೋ ಅವರು ಸಕಲಪಾಪರಾಶಿಯನ್ನೂ ಕಳೆದುಕೊಂಡು ಶಿವಲೋಕಕ್ಕೆ ತೆರಳುವರು. ॥೨೩-೨೪-೨೫॥

ಅತಃ ಪರಮಿದಂ ಗುಹ್ಯಂ ವಕ್ಷ್ಯಾಮಿ ಮುನಿಸತ್ತಮ ।
ಪುಣ್ಯಾತಿಶಯಸಂಯುಕ್ತಂ ಸರ್ವೈರ್ದೇವೈರನುಷ್ಠಿತಂ ॥೨೬॥

ಬ್ರಹ್ಮಣಾ ವಿಷ್ಣುನಾ ದೇವ್ಯಾ ಸ್ಕಂದೇಂದುಭ್ಯಾಂ ಯಮೇನ ಚ ।
ವರುಣಾದಿತ್ಯಸೋಮಾಗ್ನಿಮರುದ್ಧನದನಾರದೈಃ ॥೨೭॥

ಧರ್ಮಶ್ರೀಶುಕನಕ್ಷತ್ರವಿಲೋಹಿತಶನೈಶ್ಚರೈಃ ।
ವಿಶ್ವಾಮಿತ್ರವಸಿಷ್ಠಾತ್ರಿಬೃಹಸ್ಪತಿಬುಧಾದಿಭಿಃ ॥೨೮॥

ಶ್ವೇತಾಗಸ್ತ್ಯದಧೀಚಾದ್ಯೈಃ ಸರ್ವೈಶ್ಚ ಮುನಿಸತ್ತಮೈಃ ।
ಭೃಂಗಿಮಾತ್ರಮಹಾಕಾಲಚಂಡೇಶ್ವರಗಣಾಧಿಪೈಃ ॥೨೯॥

ಶೇಷವಾಸುಕಿಕರ್ಕೋಟಗುಲಿಕಾನಂತತಕ್ಷಕೈಃ ।
ಪದ್ಮಶಂಖಮಹಾಶಂಖೈರನ್ಯೈಶ್ಚಾಪಿ ಮಹೋರಗೈಃ ॥೩೦॥

ಅನುಷ್ಠಿತಂ ಶಿವಪ್ರೀತಿಜನಕಂ ಸರ್ವದಾ ಮುನೇ ।
ಶಿವೇ ಗತಿರ್ಯಥಾ ಪ್ರಾಪ್ತಾ ಸರ್ವಗತ್ಯತಿಶಾಯಿನೀ ॥೩೧॥

ಈಗ ಮತ್ತೊಂದು ಗೂಢವಾದ ಮತ್ತು ಅತಿಶಯಪುಣ್ಯಪ್ರದವಾದ ಹಾಗೂ ಸರ್ವದೇವತೆಗಳಿಂದಲೂ ಅನುಷ್ಠಿಸಲ್ಪಟ್ಟ ಶಿವವ್ರತವೊಂದನ್ನು ಈಗ ತಿಳಿಯಪಡಿಸುವೆನು. ಈವ್ರತವನ್ನು ಹಿಂದೆ ಬ್ರಹ್ಮ, ವಿಷ್ಣು, ದೇವಿ, ಸ್ಕಂದ, ಚಂದ್ರ, ಯಮ, ವರುಣ, ಸೂರ್ಯ, ಸೋಮ, ಅಗ್ನಿ, ವಾಯು, ಕುಬೇರ, ನಾರದ ಮುಂತಾದ ದೇವತೆಗಳು ಭಕ್ತಿಯಿಂದ ಆಚರಿಸಿರುವರು. ॥೨೬-೨೭॥

ಹಾಗೆಯೇ, ಧರ್ಮದೇವತೆ, ಶುಕಮುನಿ, ನಕ್ಷತ್ರದೇವತೆಗಳು, ಅಂಗಾರಕ, ಶನೈಶ್ಚರ, ವಿಶ್ವಾಮಿತ್ರ, ವಸಿಷ್ಠ, ಅತ್ರಿ, ಬೃಹಸ್ಪತಿ, ಬುಧ, ಶ್ವೇತ, ಅಗಸ್ತ್ಯ, ದಧೀಚಿ, ಭೃಂಗಿ, ಮಹಾಕಾಲ, ಚಂಡೇಶ್ವರ, ಗಣನಾಯಕರು, ಆದಿಶೇಷ, ವಾಸುಕಿ, ಕಾರ್ಕೋಟಕ, ಗುಲಿಕ, ಅನಂತ, ತಕ್ಷಕ, ಪದ್ಮ, ಶಂಖ, ಮಹಾಶಂಖ, ಮುಂತಾದ ಮಹಾಸರ್ಪದೇವತೆಗಳು, ಇವರೆಲ್ಲರೂ ಈವ್ರತವನ್ನು ಅನುಷ್ಠಿಸಿ ಧನ್ಯರಾಗಿರುವರು. ॥೨೮-೩೦॥

ಶಿವಲೋಕವನ್ನು ದೊರಕಿಸುವ, ಹಾಗೂ ಸರ್ವಮಾರ್ಗಗಳಿಗಿಂತಲೂ ಅತಿಶಯವಾದ ಮೋಕ್ಷಮಾರ್ಗವನ್ನು ಕರುಣಿಸುವ, ಆ ಉತ್ತಮ ಶೈವವ್ರತವು

ಮಯಾ ಚೇಶಪ್ರಸಾದೇನ ತಥಾ ಶೃಣು ವಿಧಿಂ ಪರಂ ।
ಶೀತಚಂದನತೋಯೇನ ಸ್ನಾಪ್ಯ ಲಿಂಗಂ ವಿಲಿಪ್ಯ ಚ ॥೩೨॥

ಶ್ವೇತೈರ್ವಿಕಸಿತೈಃ ಪದ್ಮೈಸ್ಸಂಪೂಜ್ಯ ಪ್ರಣಿಪತ್ಯ ಚ ।
ತತ್ರ ಪದ್ಮಾಸನೇ ಸೌಮ್ಯೇ ನ ಛಿದ್ರೇ ಪುಷ್ಪಿತೇ ಸಿತೇ ॥೩೩॥

ಮಧ್ಯೇ ಕೇಸರಜಾಲಸ್ಯ ಸ್ಥಾಪ್ಯ ಲಿಂಗಂ ಕನೀಯಸಂ ।
ಅಂಗುಷ್ಠಪ್ರಮಿತಂ ಲಿಂಗಂ ಸರ್ವಗಂಧಮಯಂ ಶುಭಂ ॥೩೪॥

ಸ್ಥಾಪ್ಯ ದಕ್ಷಿಣಮೂರ್ತೌ ತು ಬಿಲ್ವಪತ್ರೈಃ ಸಮರ್ಚಯೇತ್ ।
ಅಗರುಂ ದಕ್ಷಿಣೇ ಪಾರ್ಶ್ವೇ ಪಶ್ಚಿಮೇ ತು ಮನಶ್ಶಿಲಾಂ ॥೩೫॥

ಉತ್ತರೇ ಚಂದನಂ ದದ್ಯಾತ್ಪಗುರುಂ ಚಾಪಿ ಗುಗ್ಗುಲಂ ।
ವಾಸಾಂಸಿ ಚಾಥ ಸೂಕ್ಷ್ಮಾಣಿ ವಿಶೋಶಾನಿ ನವಾನಿ ಚ ॥೩೬॥

ಪಾಯಸಂ ಘೃತಸಂಮಿಶ್ರಂ ಘೃತದೀಪಾಂಶ್ಚ ದಾಪಯೇತ್ ।
ಸರ್ವಂ ನಿವೇದ್ಯ ಮಂತ್ರೇಣ ತತೋ ಗಚ್ಛೇತ್ಪ್ರದಕ್ಷಿಣಂ ॥೩೭॥

---

ಶಿವಪ್ರೀತ್ಯರ್ಥವಾಗಿ ಅವರೆಲ್ಲರಿಂದಲೂ ಆಚರಿಸಲ್ಪಟ್ಟಿತು. ಶಿವಾನುಗ್ರಹಬಲದಿಂದ ನಾನು ಅದನ್ನು ನಡೆಸಿರುವೆನು. ಅದೇ ಪೂಜಾವಿಧಿಯನ್ನು ನಿನಗೂ ಈಗ ತಿಳಿಯಪಡಿಸಲಿರುವೆನು. ಅದನ್ನು ಕೇಳು. ಮೊದಲು ಶಿವಲಿಂಗವನ್ನು ಶೀತಲವಾದ ಗಂಧೋದಕದಿಂದ ಅಭಿಷೇಕಮಾಡಬೇಕು. ||೩೧-೩೨||

ಹಾಗೆಯೇ ಬಿಳಿಯಕಮಲಗಳಿಂದ ಅರ್ಚಿಸಿ, ಸ್ತುತ್ಯಾದಿಗಳಿಂದ ನಮಸ್ಕರಿಸಿ, ಅಲ್ಲಿಯೇ ಪದ್ಮಾಸನವೊಂದರಲ್ಲಿ ಅಂದರೆ ರಂಧ್ರಾದಿಗಳಿಲ್ಲದೆ ಕೇಸರಗಳಿಂದ ಮಾಡಿದ ಬಿಳಿಯಕಮಲಪೀಠದಲ್ಲಿ ಅಂಗುಷ್ಠಪರಿಮಿತವಾದ ಚಿಕ್ಕಶಿವಲಿಂಗವನ್ನು ಮಧ್ಯೆ ಸ್ಥಾಪಿಸಬೇಕು. ಆ ಲಿಂಗವನ್ನು ದಿವ್ಯಗಂಧಗಳಿಂದ ಲೇಪನಮಾಡಿರಬೇಕು. ||೩೩-೩೪||

ದಕ್ಷಿಣಮೂರ್ತಿಯ ವಿಗ್ರಹವನ್ನೂ ಅಲ್ಲಿ ಸ್ಥಾಪಿಸಿ ಬಿಲ್ವಪತ್ರೆಗಳಿಂದ ಅರ್ಚಿಸಿ, ದಕ್ಷಿಣದಿಕ್ಕಿನಲ್ಲಿ ಅಗುರುವನ್ನೂ, ಪಶ್ಚಿಮದಲ್ಲಿ ಮನಶ್ಶಿಲೆಯಗಂಧವನ್ನೂ ಉತ್ತರದಿಕ್ಕಿನಲ್ಲಿ ಚಂದನವನ್ನೂ, ಪೂರ್ವಭಾಗದಲ್ಲಿ ಗುಗ್ಗುಲುವನ್ನೂ ಸಮರ್ಪಿಸಬೇಕು. ಹಾಗೆಯೇ ಹೊಸದಾದ ಸೂಕ್ಷ್ಮವಸ್ತ್ರಗಳನ್ನು ಹೊದಿಸಬೇಕು. ಘೃತಮಿಶ್ರಿತವಾದ

ಪ್ರಣಮ್ಯ ಭಕ್ತ್ಯಾ ದೇವೇಶಂ ಸ್ತುತ್ವಾ ಚಾಂಡೇ ಕ್ಷಮಾಪಯೇತ್ ।
ಸರ್ವೋಪಹಾರಸಂಯುಕ್ತಂ ತತೋ ಲಿಂಗಂ ನಿವೇದಯೇತ್ ॥೩೮॥

ಶಿವಾಯ ಶಿವಮಂತ್ರೇಣ ದಕ್ಷಿಣಾಮೂರ್ತಿಮಾಶ್ರಿತಃ ।
ಅನೇನ ವಿಧಿನಾ ದೇವಾಃ ಸರ್ವೇ ದೇವತ್ವಮಾಗತಾಃ ॥೩೯॥

ದೇವೀ ದೇವೀತ್ವಮಾಪನ್ನಾ ಸ್ಕಂದಸ್ಕಂದತ್ವಮಾಗತಃ ।
ಬ್ರಹ್ಮಾ ಬ್ರಹ್ಮತ್ವಮಾಪನ್ನೋ ಹರಿರ್ವಿಷ್ಣುತ್ವಮಾಗತಃ ॥೪೦॥

ಇಂದ್ರಶ್ಚ ದೇವರಾಜತ್ವಂ ಗಣಾಶ್ಚ ಗಣತಾಂ ಗತಾಃ ।
ಏವಂ ಯೋರ್ಚಯತೇ ಲಿಂಗಂ ಪದ್ಮಗಂಧಮಯಂ ಶುಭಂ ॥೪೧॥

ಸರ್ವಪಾಪವಿನಿರ್ಮುಕ್ತಃ ಶಿವಲೋಕೇ ಮಹೀಯತೇ ।
ಏತದ್ಧಿತತಮಂ ಗುಹ್ಯಂ ಶಿವಲಿಂಗಂ ಮಹಾವ್ರತಂ ॥೪೨॥

ಪಾಯಸವನ್ನೂ, ಘೃತದೀಪವನ್ನೂ ಸಮರ್ಪಿಸಬೇಕು. ಅವೆಲ್ಲವನ್ನೂ ಪರಶಿವನಿಗೆ ಮಂತ್ರಪೂರ್ವಕವಾಗಿ ನಿವೇದಿಸಿ ಅನಂತರ ನಮಸ್ಕಾರಮಾಡಬೇಕು. ||೩೫-೩೬-೩೭||

ದೇವದೇವನಾದ ಪರಶಿವನನ್ನು ನಾನಾವಿಧವಾದ ಸ್ತುತಿವಚನಗಳಿಂದ ಸ್ತುತಿಸಿ ಅಪರಾಧವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಬೇಕು. ಅನಂತರ ಸರ್ವೋಪಹಾರಗಳನ್ನೂ ಶಿವಲಿಂಗಕ್ಕೆ ನಿವೇದಿಸಿ ಶಿವಮಂತ್ರದಿಂದ ದಕ್ಷಿಣಾಮೂರ್ತಿಯನ್ನು ಧ್ಯಾನಮಾಡಬೇಕು. ಇದೇವಿಧಿಯಿಂದಲೇ ಸಕಲದೇವತೆಗಳೂ ಶಂಕರನನ್ನು ಆರಾಧಿಸಿ ದೇವತ್ವವನ್ನು ಪಡೆದಿರುವರು. ||೩೮-೩೯||

ದೇವಿಯು ದೇವೀಪದವಿಯನ್ನೂ, ಸ್ಕಂದಸ್ವಾಮಿಯು ನಿಖಿಲ ಗಾಣಾಪತ್ಯವನ್ನೂ, ಬ್ರಹ್ಮನು ಸೃಷ್ಟಿಕರ್ತೃತ್ವವನ್ನೂ, ವಿಷ್ಣುವು ಲೋಕಪಾಲಕತ್ವವನ್ನೂ, ಇಂದ್ರನು ದೇವರಾಜಪದವಿಯನ್ನೂ, ಸಕಲಗಣಗಳೂ ಗಣನಾಯಕಪದವಿಯನ್ನೂ ಈರೀತಿ ಶಿವಾರ್ಚನೆಮಾಡಿಯೇ ಪಡೆದರು. ಹೀಗೆ, ಯಾರು ಪದ್ಮ ಮತ್ತು ಗಂಧಗಳಿಂದ ಶಿವಲಿಂಗವನ್ನು ಭಕ್ತಿಯಿಂದ ಆರಾಧಿಸುವರೋ, ಅವರು ಸಕಲಪಾಪಮುಕ್ತರಾಗಿ ಶಿವಸನ್ನಿಧಾನವನ್ನು ಪಡೆಯುವರು. ಈ ಶಿವಲಿಂಗ ಮಹಾವ್ರತವು ಬಹುಹಿತವಾದದ್ದು ಮತ್ತು ನಿಗೂಢವಾದುದು. ||೪೦-೪೧-೪೨||

ಭಕ್ತಸ್ಯ ತೇ ಮಯಾಖ್ಯಾತಂ ನ ದೇಯಂ ಯಸ್ಯ ಕಸ್ಯಚಿತ್ ।
ಶಿವಭಕ್ತೇ ಸದಾ ದೇಯಂ ಶಿವೇನ ಕಥಿತಂ ಪುರಾ ॥೪೩॥

ಚಿರೇಣ ಗ್ರಥಿತಂ ಮಾಲ್ಯಂ ಶಿವಸ್ಯೋಪನಯೇತ್ತು ಯಃ ।
ಗೋಸಹಸ್ರಫಲಂ ತಸ್ಯ ಭವತೀತಿ ನ ಸಂಶಯಃ ॥೪೪॥

ರಹಸ್ಯಾಧ್ಯಾಯಮೇತತ್ತು ಪಠತೇ ಶೃಣುತೇ ಚ ಯಃ ।
ಅಚಿರಾಲ್ಲಭತೇಽಭೀಷ್ಟಂ ಶಿವಲೋಕಂ ಚ ವಿಂದತಿ ॥೪೫॥

ಯತ್ಪೂಜಯೇಚ್ಛಶಿಕಲಾಕಲಿತೋತ್ತಮಾಂಗಂ
ಲಿಂಗಾರ್ಚನೇನ ಸತತಂ ಕಿಲ ಶಾಂಗಚರ್ಯಾಃ ।
ಪಾಪಾನುಷಂಗಮತಿಭಂಗಮತಂಗಕುಂಭ
ವಿದ್ರಾವಣೈಕಸುಧಿಯಃ ಪ್ರಭವಂತಿ ರುದ್ರಾಃ ॥೪೬॥

ಇತಿ ಶ್ರೀಶಿವರಹಸ್ಯೇ ಏಕಾದಶಾಂಶೇ ಶಿವದ್ರೋಹಿನರಕಯಾತನಾ
ಶಿವಲಿಂಗಾರ್ಚನವಿಧಿನಿರೂಪಣ ರಹಸ್ಯಾಧ್ಯಾಯೋ ನಾಮ
ಷಟ್ಚತ್ವಾರಿಂಶೋಽಧ್ಯಾಯಃ

---

ಈ ವ್ರತವಿಧಾನವನ್ನು ಶಿವಭಕ್ತಿಯಿಲ್ಲದವರಿಗೆ ಹೇಳಬಾರದು. ಹೀಗೆಂದು ಈಶ್ವರನೇ ಹೇಳಿರುವನು. ಶಿವನಿರ್ಮಾಲ್ಯವನ್ನು ಯಾರು ಭಕ್ತಿಯಿಂದ ತಾವು ಧರಿಸುವರೋ ಅವರಿಗೆ ಸಹಸ್ರ ಗೋದಾನಗಳ ಫಲವು ದೊರೆಯುವುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ॥೪೩-೪೪॥

ಈಭಾಗವನ್ನು ರಹಸ್ಯಾಧ್ಯಾಯವೆನ್ನುವರು. ಇದನ್ನು ಓದುವವರಿಗೂ ಕೇಳುವವರಿಗೂ ಸಕಲಇಷ್ಟಾರ್ಥವೂ ಸಿದ್ಧಿಸುವುದು ಮತ್ತು ಶಿವಲೋಕವೂ ಪ್ರಾಪ್ತವಾಗುವುದು. ಯಾರು ಚಂದ್ರಶೇಖರನೆನಿಸಿದ ಪರಶಿವನನ್ನು ಶಿವಲಿಂಗಾರ್ಚನೆಯಿಂದ ಪೂಜಿಸುವರೋ, ಅಂತಹವರು ತಮ್ಮ ಪಾಪರಾಶಿಯೆಂಬ ಮದ್ದಾನೆಯನ್ನು ನಾಶಗೈದು ಕಾಲಕ್ರಮದಲ್ಲಿ ಶಿವಸ್ವರೂಪರಾಗಿ ಮೆರೆಯುವರು. ಅಂದರೆ ಶಿವಸಾರೂಪ್ಯವನ್ನೇ ಹೊಂದುವರು. ಎಂದು ಶಿವೋಕ್ತಿಯನ್ನು ಸೂತಮಹರ್ಷಿಗಳು ಶೌನಕಾದಿಗಳಿಗೆ ವಿವರವಾಗಿ ತಿಳಿಯಪಡಿಸಿದರು. ॥೪೫-೪೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವಲಿಂಗಾರ್ಚನ
ವಿಧಿನಿರೂಪಣೆಯೆಂಬ ನಲವತ್ತಾರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಸಪ್ತಚತ್ವಾರಿಂಶೋಽಧ್ಯಾಯಃ

|| ಶ್ರೀ ಈಶ್ವರ ಉವಾಚ ||

**ಅನ್ಯವೀರ್ಯೈಸ್ತಥಾ ಮರ್ತ್ಯೈರಲ್ಪಸತ್ತ್ವೈರ್ನರ್ಭಿಶ್ಶಿವೇ ।**
**ಸಂವತ್ಸರಸಹಸ್ರೈಶ್ಚ ಸದಾ ಮಾಂ ಪೂಜಯನ್ತು ಮೇ ॥೧॥**

**ನ ಪಶ್ಯಂತಿ ಸುರಾಸ್ಸರ್ವೇ ಸರಾ ಯೇ ವಾ ನರೋಪಮಾಃ ।**
**ಕಥಂ ಮಾಂ ಭಕ್ತಿರಹಿತಾ ನಿರ್ಭಾಗ್ಯಾಃ ಪೂಜಯಂತ್ಯಪಿ ॥೨॥**

**ತಥಾಪಿ ಶ್ರದ್ಧಯಾ ದೃಶ್ಯಃ ಪೂಜ್ಯೋಽಹಂ ಸರ್ವಭಾವತಃ ।**
**ಪ್ರಸಂಗಾಚ್ಚೈವ ಸಂಪೂಜ್ಯ ಭಕ್ತಿಹೀನೈರಪಿ ದ್ವಿಜೈಃ ॥೩॥**

---

## ನಲವತ್ತೇಳನೆಯ ಅಧ್ಯಾಯ

ದೇವಿಯೇ ಕೇಳು, ಮನುಷ್ಯರು ಸ್ವಯಂಪರಾಕ್ರಮಿಗಳಲ್ಲ. ಅವರಿಗೆ ಎಲ್ಲ ಸತ್ವವೂ ದೇವತಾಂಶಗಳಿಂದಲೇ ಲಭಿಸಬೇಕು. ಅಂತಹ ಅಶಕ್ತಮಾನವರು ನನ್ನನ್ನು ಸಹಸ್ರಾರುವರ್ಷಗಳಿಂದ ಪೂಜಿಸಿದರೂ ನನ್ನ ಅನುಗ್ರಹವನ್ನು ಅವರು ಪಡೆದಿಲ್ಲ. ಅಷ್ಟೇಕೆ! ಈ ಮಾನವ ಸದೃಶರಾದ ದೇವತೆಗಳೂ ಸಹ ನನ್ನನ್ನು ಕಾಣಲಾರದೆ ವ್ಯಥೆಪಡುತ್ತಿರುವರು. ಹೀಗಿರುವಾಗ ಭಕ್ತಿಶೂನ್ಯರಾದ ನಿರ್ಭಾಗ್ಯಪುರುಷರು ನನ್ನನ್ನು ಹೊಂದುವುದು ಹೇಗೆ? ||೧-೨||

ನನ್ನನ್ನು ಪೂಜಿಸುವವರಿಗೆ ಮುಖ್ಯವಾಗಿ ಶ್ರದ್ಧೆಯಿರಬೇಕು. ಒಂದು ವೇಳೆ ಭಕ್ತಿಶೂನ್ಯರಾಗಿ ಅಲ್ಪಶ್ರದ್ಧೆಯಿಂದ ಪೂಜೆಮಾಡಿದರೂ ಅಂಥ ದ್ವಿಜರಿಗೆ ನಾನು

ಭಾವಾನುರೂಪಫಲದೋ ಭಗವಾನಿತಿ ಕೀರ್ತಿತಃ ।
ಉಚ್ಛಿಷ್ಟಃ ಪೂಜಯನ್ ಯಾತಿ ಪೈಶಾಚಂ ಚ ದ್ವಿಜಾಧಮಃ ॥೪॥

ಸಂಕ್ರುದ್ಧೋ ರಕ್ಷಸಾಂ ಸ್ಥಾನಂ ಆಲಸ್ಯಾದ್ಗುಹ್ಯಕಂ ಶಿವೇ ।
ಅಭಕ್ಷಭಕ್ಷ್ಯಃ ಸಂಪೂಜ್ಯ ಯಕ್ಷಮಾಪ್ನೋತಿ ಮಾನವಃ ॥೫॥

ಗಾನಶೀಲಶ್ಚ ಗಾಂಧರ್ವಂ ನೃತ್ತಶೀಲಸ್ತಥಾಪ್ಸರಾಃ ।
ಬ್ರಾಹ್ಮಂ ಹಿ ಪ್ರಣವೇನೈವ ವೈಷ್ಣವಂ ಚಾಭಿನಂದಕಃ ॥೬॥

ಶ್ರದ್ಧಯಾ ಸಕೃದೇವಾಪಿ ಸಮಭ್ಯರ್ಚ್ಯ ಮಹೇಶ್ವರಂ ।
ಗಾಯತ್ರ್ಯಾ ಚ ಸಮಭ್ಯರ್ಚ್ಯ ಸೋಮಸ್ಥಾನಮವಾಪ್ನುಯಾತ್ ॥೭॥

ಪಂಚಾಕ್ಷರೇಣಾಭಿಪೂಜ್ಯ ರುದ್ರಲೋಕೇ ವಸೇನ್ನರಃ ।
ಕಲ್ಪಮೇಕಂ ದಿವ್ಯದೇಹಃ ಶಿವರೂಪೇಣ ಸಂಗತಃ ॥೮॥

---

ಅವರವರ ಶ್ರದ್ಧಾನುಗುಣವಾಗಿ ಫಲವನ್ನು ಕೊಡುವೆನು. ಭಾವಾನುರೂಪವಾದ ಫಲವನ್ನು ಕೊಡುವವನಾದುದರಿಂದಲೇ ನನಗೆ ಭಗವಾನನೆಂಬ ಹೆಸರು ಪ್ರಸಿದ್ಧವಾಗಿರುವುದು. ನನ್ನನ್ನು ಪೂಜಿಸುವಾಗ ಯಾರು ಎಂಜಲುವಸ್ತುಗಳನ್ನು ಬಳಸುವರೋ ಅವನಿಗೆ ಪಿಶಾಚತ್ವವು ದೊರಕುವುದು. ॥೩-೪॥

ಕೋಪದಿಂದ ಶಿವಾರ್ಚನೆಗೈದವನಿಗೆ ರಾಕ್ಷಸಜನ್ಮವೂ, ಉದಾಸೀನದಿಂದ ಪೂಜೆ ಸಲ್ಲಿಸಿದವನಿಗೆ ಗುಹ್ಯಕಪದವಿಯೂ, ಅಭಕ್ಷ್ಯಭಕ್ಷಣದಿಂದ ಪೂಜಿಸಿದವನಿಗೆ ಯಕ್ಷಜನ್ಮವೂ, ಗಾನಶೀಲನಾದವನಿಗೆ ಗಾಂಧರ್ವಪದವಿಯೂ, ನಾಟ್ಯಶೀಲನಿಗೆ ಅಪ್ಸರೋಜನ್ಮವೂ ದೊರಕುವುದು. ಪ್ರಣವಮಂತ್ರದಿಂದ ಪೂಜಿಸಿದವನಿಗೆ ಬ್ರಾಹ್ಮಣಜನ್ಮವೂ, ಸ್ತುತ್ಯಾದಿಗಳಿಂದ ಪೂಜಿಸಿದವನಿಗೆ ವೈಷ್ಣವಜನ್ಮವೂ ಲಭಿಸುವುದು. ॥೫-೬॥

ಶ್ರದ್ಧಾಳುವಾಗಿ ಗಾಯತ್ರೀಮಂತ್ರಪಠನದಿಂದ ಮಹೇಶ್ವರನನ್ನು ಪೂಜಿಸಿದವರಿಗೆ ಸೋಮಸ್ಥಾನವೇ ದೊರಕುವುದು. ಶಿವಪಂಚಾಕ್ಷರಮಂತ್ರದಿಂದ ಶಂಕರನನ್ನು ಪೂಜಿಸಿದವರು ರುದ್ರಲೋಕದಲ್ಲಿಯೇ ವಾಸಮಾಡುತ್ತಾ ಕಲ್ಪಪರ್ಯಂತ ದಿವ್ಯದೇಹಿಗಳಾಗಿದ್ದು ಕೊನೆಗೆ ಶಿವರೂಪವನ್ನು ಪಡೆಯುವರು. ॥೭-೮॥

ಪಂಚಭಿರ್ಬ್ರಹ್ಮಭಿಃ ಪೂಜ್ಯ ಶಿವಂ ಶಿವಗಣೋ ಭವೇತ್ ।
ಸಂಶೋಧ್ಯ ಚ ಶುಭಂ ಲಿಂಗಂ ಮಮ ಪೀಠಂ ಶುಭೋದಕೈಃ ॥೯॥

ಅದ್ಭಿಃ ಪೂತೇ ತಥಾ ಪೀಠೇ ಲಿಂಗೇ ಚಾವಾಹ್ಯ ಶಂಕರಂ ।
ದೃಷ್ಟ್ವಾ ದೈವಂ ತದಾ ಲಿಂಗೇ ಸ ಪುಷ್ಪಂ ಮಸ್ತಕೇ ಕ್ಷಿಪೇತ್ ॥೧೦॥

ಕಲ್ಪಿತೇ ಚಾಸನೇ ತತ್ರ ನಿರ್ಮಾಲ್ಯಮಪನೋದ್ಯ ಚ ।
ಪಾದ್ಯಮಾಚಮನಂ ಚಾರ್ಘ್ಯಂ ದತ್ವಾ ರುದ್ರಾಯ ಶಂಭವೇ ॥೧೧॥

ಸ್ನಾಪಯೇದ್ಗಂಧತೋಯೇನ ಪಾಟಲೀಮಿಶ್ರಿತೇನ ಚ ।
ಕ್ಷೀರೇಣ ಚ ಗವಾಂ ನಿತ್ಯಂ ಘೃತೇನ ಚ ಸುಗಂಧಿನಾ ॥೧೨॥

ದಧ್ನಾ ಚ ಮಧುನಾ ಚೈವ ಕೀಟಹೀನೇನ ಶಾಂಕರಿ ।
ಐಕ್ಷವ್ಯಾ ಸಿತಯಾ ಚಾಪಿ ಸ್ನಾಪಯೇದ್ದೇವಮೀಶ್ವರಂ ॥೧೩॥

ನಾರಿಕೇಲೋದಕೈಃ ಸ್ನಾಪ್ಯ ಯಂಶ್ಚಾಮ್ರಕಸುಪಾನಸೈಃ ।
ಜಂಬೀರಸಾರೈರ್ಗಂಧಾಢ್ಯೈಃ ಕುಶಪುಷ್ಪಹಿರಣ್ಯಜೈಃ ॥೧೪॥

---

ಸದ್ಯೋಜಾತಾದಿ ಪಂಚಬ್ರಹ್ಮಾನುವಾಕಗಳಿಂದ ಪರಶಿವನನ್ನು ಪೂಜಿಸಿ, ಆದರಿಂದ ಶಿವಲಿಂಗವನ್ನು ಶುದ್ಧೋದಕದಿಂದ ಅಭಿಷೇಕಮಾಡಿದವರು ಶಿವಗಣಗಳಲ್ಲಿ ಒಬ್ಬರಾಗುವರು. ಹಾಗೆ ಶುದ್ಧೋದಕದಿಂದ ಪರಿಶುದ್ಧವಾದ ಶಿವಲಿಂಗದಲ್ಲಿ ಶಂಕರನನ್ನು ಆವಾಹಿಸಿ, ಶಿವಲಿಂಗದಲ್ಲಿ ಸ್ವಾಮಿಯನ್ನು ನೋಡುತ್ತಾ ಶಿವನಿರ್ಮಾಲ್ಯವನ್ನು ಶಿರಸಾ ಧಾರಣೆಮಾಡಬೇಕು. ||೯-೧೦||

ಅನಂತರ ಶಿವಪೀಠದಲ್ಲಿರುವ ನಿರ್ಮಾಲ್ಯವನ್ನು ತೆಗೆದು ಬಲಿಪೀಠದಲ್ಲಿಟ್ಟು ಶಿವಲಿಂಗರೂಪಿಯಾದ ಶಂಕರನಿಗೆ ಪಾದ್ಯ, ಅರ್ಘ್ಯ, ಆಚಮನೀಯ ಮುಂತಾದುವುಗಳನ್ನು ಸಮರ್ಪಿಸಬೇಕು. ಗಂಧೋದಕ, ಪಾಟಲೀಕುಸುಮೋದಕ, ಗೋಕ್ಷೀರ, ಸುಗಂಧಕೊಡುವ ತುಪ್ಪ. ಮೊಸರು, ಜೇನುತುಪ್ಪ, (ಇರುವೆ ಮೊದಲಾದ ಹುಳುಗಳಿಲ್ಲದ) ಶುಭ್ರವಾದ ಕಬ್ಬಿನ ಹಾಲು ಮತ್ತು ಸಕ್ಕರೆ ಇವುಗಳಿಂದ ಶಿವಲಿಂಗಕ್ಕೆ ಅಭಿಷೇಕಮಾಡಬೇಕು. ಈ ವಸ್ತುಗಳು ಅತ್ಯಂತ ಪರಿಶುದ್ಧಗಳಾಗಿದ್ದು ಅಭಿಷೇಕವು ಮಂತ್ರವತ್ತಾಗಿ ನಡೆಯಬೇಕು. ||೧೧-೧೨-೧೩||

ಪರಶಿವಲಿಂಗಕ್ಕೆ ಅನಂತರ ಎಳನೀರು, ಮಾವಿನಹಣ್ಣು, ಹಲಸಿನಹಣ್ಣು,

ಅಖಂಡನೀರಧಾರಾಭಿಃ ಸ್ನಾಪಯೇತ್ಪರಮೇಶ್ವರಂ ।
ರುದ್ರೇಣ ಚಮಕೇನೈವ ಚಿತ್ವಾ ಪೌರುಷಸೂಕ್ತಕೈಃ ॥೧೫॥

ಕದ್ರುದ್ರೈಃ ಪಾವಮಾನ್ಯೈಶ್ಚ ವಾಮದೇವಾದಿಸಾಮಭಿಃ ।
ರಥಂತರೈಸ್ತಥಾ ರೌದ್ರೈಃ ಶಿವೇಥರ್ವಶಿಖಾದಿಭಿಃ ॥೧೬॥

ಸ್ನಾಪಯೇದ್ದೇವದೇವೇಶಂ ತರ್ಪಯೇದಷ್ಟನಾಮಭಿಃ ।
ವಾಸಸಾ ಮೃಜ್ಯಪೀಠೇ ತು ಸ್ಥಾಪ್ಯ ಲಿಂಗಂ ಮಹೇಶ್ವರಂ ॥೧೭॥

ಭಸ್ಮನಾ ಚಂದನಾದ್ಯೈಶ್ಚ ಲೇಪಯೇತ್ಸಾಕ್ಷತಾದಿಭಿಃ ।
ರೋಚನಾದ್ಯೈಸ್ತು ಸಂಪೂಜ್ಯ ಚಂದ್ರೈಶ್ಚೈವ ಮಹೇಶ್ವರಂ ॥೧೮॥

ಬಿಲ್ವಪತ್ರೈರಖಂಡೈಶ್ಚ ದೂರ್ವಾಸಾಮಾರ್ಗದರ್ಭಕೈಃ ।
ನೀಲೋತ್ಪಲೈಸ್ತಥಾ ಪದ್ಮೈರ್ನಂದ್ಯಾವರ್ತಶಿರೀಷಕೈಃ ॥೧೯॥

ಮಲ್ಲಿಕಾಚಂಪಕೈರ್ಜಾಜೀ ಬಕುಲಾರ್ಕಶಮೀಸುಮೈಃ ।
ಕರವೀರೈಶ್ಚ ಕುಟಜೈಃ ಪಾಟಲೀದ್ರೋಣಸಂಭವೈಃ ॥೨೦॥

---

ನಿಂಬೆಹಣ್ಣು ಇವುಗಳ ರಸ, ಗಂಧೋದಕ, ಕುಶೋದಕ, ಪುಷ್ಪೋದಕ, ಹಿರಣ್ಯೋದಕ, ಧಾರಾಪೂರ್ವಕವಾದ ಶುದ್ಧೋದಕ ಇವುಗಳಿಂದ ಅಭಿಷೇಕ ಮಾಡಬೇಕು. ಅಭಿಷೇಕ ಕಾಲದಲ್ಲಿ ಶ್ರೀರುದ್ರ, ಚಮಕ, ಪುರುಷಸೂಕ್ತ, ರುದ್ರಸೂಕ್ತ, ಪವಮಾನಸೂಕ್ತಗಳು ವಾಮದೇವ ರಥಂತರ ಸಾಮಗಳು, ಅಥರ್ವಶೀರ್ಷಾದ್ಯುಪನಿಷತ್ತುಗಳು ಇವುಗಳನ್ನು ಉಚ್ಚರಿಸುತ್ತಿರಬೇಕು. ॥೧೪-೧೫-೧೬॥

ದೇವದೇವನೆನಿಸಿದ ಪರಶಿವನಿಗೆ ಭವಾದಿ ಎಂಟು ನಾಮಗಳಿಂದ ತರ್ಪಣ ಮಾಡಬೇಕು. ಅನಂತರ ಮಹೇಶ್ವರನನ್ನು ಶುದ್ಧವಸ್ತ್ರದಿಂದ ಒರಸಿ, ಭಸ್ಮ ಚಂದನ, ಅಕ್ಷತೆ, ಗೋರೋಚನ, ಚಂದ್ರ ಮುಂತಾದ ವಸ್ತುಗಳಿಂದ ಅಲಂಕರಿಸಬೇಕು. ॥೧೭-೧೮॥

ಅನಂತರ, ತ್ರಿದಳಗಳಿಂದ ಕೂಡಿದ ಬಿಲ್ವ, ಹುಲ್ಲುಗರಿಕೆ, ಉತ್ತರಣೀ, ದರ್ಭೆ, ನೀಲೋತ್ಪಲ, ಕಮಲ, ನಂದೀಬಟ್ಟಲು, ಬಾಗೆಹೂವು, ಮಲ್ಲಿಗೆ, ಸಂಪಿಗೆ, ಜಾಜೀ, ಬಕುಲ, ಎಕ್ಕ, ಶಮೀ, ಕಣಗಲು, ಕಾಡುಸೋಗೆ (ಕುಟಜ), ಪಾದರಿ, ತುಂಬೆ,

ಕನಕೈರ್ಬೃಹತೀಪುಷ್ಪೈಃ ಪುಷ್ಪೈರಾರಗ್ವಧೋದ್ಭವೈಃ ।
ಪೂಜಯೇನ್ನಾಮಭಿರ್ದೇವಿ ನಿಧನೇಶಾದಿಭಿಶ್ಶಿವೇ ॥೨೦॥

ದತ್ವಾ ಪಂಚವಿಧಂ ಧೂಪಂ ತಗರಾಗರುಕೇಸರಂ ।
ದೇವದ್ರುಸಂಭವಂ ಬೈಲ್ವಂ ಗುಗ್ಗುಲಂ ಸಘೃತಂ ಶಿವೇ ॥೨೨॥

ದೀಪಾನ್ ಪ್ರಜ್ವಾಲ್ಯ ಘೃತಜಾನ್ ಪಾಯಸಂ ಚ ನಿವೇದಯೇತ್ ।
ದಧಿಭಕ್ತಂ ಚ ಮಧ್ವಾಜ್ಯಂ ಪರಿಪ್ಲುತಮುಮಾಪತೇ ॥೨೩॥

ಶುದ್ಧಾನ್ನಂ ಚೈವ ಮುದ್ಗಾನ್ನಂ ಮಾಷಾನ್ನಂ ವಿನಿವೇದಯೇತ್ ।
ಮಾಷಾಪೂಪಂ ಗುಡಾಪೂಪಂ ಗೋಧೂಮಾಪೂಪಮೇವ ಚ ॥೨೪॥

ಸಘೃತಾಢ್ಯಂ ಚೋಷ್ಯಪಾಕಜನ್ಯಾ ಶಷ್ಕುಲಿಕಾ ತಥಾ ।
ಖರ್ಜಿಕಾ ಲಡ್ಡುಕಾಶ್ಚೈವ ಮೋದಕಾಃ ಪೋಲಿಕಾಸ್ತಥಾ ॥೨೫॥

ಮಂಡಕಾ ಭಕ್ಷ್ಯಭೋಜ್ಯಂ ಚ ನಿವೇದ್ಯಂ ಸ್ಯಾತ್ಸದಾಶಿವೇ ।
ಶಾಕಸೂಪಾದಿದಧ್ಯನ್ನಂ ಗುಡಾನ್ನಂ ವಿನಿವೇದಯೇತ್ ॥೨೬॥

---

ಸಂಪಿಗೆ, ಬೃಹತೀ, ರಾಜಪುಷ್ಪ ಮುಂತಾದ ವಿಧವಿಧವಾದ ಪುಷ್ಪಗಳಿಂದ ಶಿವನಿಗೆ ಸಹಸ್ರನಾಮಾದ್ಯರ್ಚನೆಗಳನ್ನು ನಡೆಸಬೇಕು. ||೧೯-೨೦||

ನಿಧನಪತಯೇ ನಮಃ ಮುಂತಾದ ಶಿವನಾಮಗಳಿಂದ ನಾನಾಪುಷ್ಪಾರ್ಚನೆ ಮಾಡಬೇಕು. ಪಂಚವಿಧಗಳಾದ ಅಂದರೆ ತಗರ, ಅಗುರು, ಕೇಸರ, ದೇವದಾರು, ಬಿಲ್ವ, ಗುಗ್ಗುಲು, ತುಪ್ಪ ಇವುಗಳಿಂದ ಕೂಡಿದ ಪಂಚಧೂಪಗಳನ್ನು ಸಮರ್ಪಿಸಬೇಕು. ||೨೧-೨೨||

ಅನಂತರ ತುಪ್ಪದ ದೀಪಗಳನ್ನು ಹೊತ್ತಿಸಿ ನೀರಾಜನವನ್ನು ಬೆಳಗಿ ಅನಂತರ ಪಾಯಸ, ಮೊಸರನ್ನ, ಜೇನುತುಪ್ಪ, ಉದ್ದಿನ ಅನ್ನ, ಶುದ್ಧಾನ್ನ, ಹೆಸರನ್ನ, ಒಡೆ, ಒಬ್ಬಟ್ಟು, ಗೋಧಿಯ ಪೂರಿ, ತುಪ್ಪದಿಂದ ಮಾಡಿದ ಸಜ್ಜಿಗೆ, ಉಂಡೆಗಳು, ಚಕ್ಕುಲಿ, ಖರ್ಜಿಕಾಯಿ, ಲಾಡು, ಕಡುಬು, ಹೋಳಿಗೆ, ಮಂಡಿಗೆ ಇನ್ನೂ ನಾನಾ ವಿಧವಾದ ಭಕ್ಷ್ಯಭೋಜ್ಯಗಳು, ತೊವ್ವೆ, ಹುಳಿ, ಮೊಸರನ್ನ, ಬೆಲ್ಲದ ಅನ್ನ ಇವೇ ಮೊದಲಾದುವುಗಳನ್ನು ಸ್ವಾಮಿಗೆ ನಿವೇದನಮಾಡಬೇಕು. ||೨೩-೨೪-೨೫-೨೬||

ಕ್ರಮೇಣೈವಂ ಫಲಂ ಶ್ರೇಷ್ಠಂ ಪಾನಕಂ ತಕ್ರಕಂ ತಥಾ ।
ತಾಂಬೂಲಪುಷ್ಪಗಂಧಾಢ್ಯಂ ಸಕಲ್ಪಂ ವಿನಿವೇದಯೇತ್ ॥೨೭॥

ನೀರಾಜಯೇತ್ತತೋ ದೀಪೈಃ ಶತಸಾಹಸ್ರವರ್ತಿಕಂ ।
ವೃಷಕುಂಭಗಜಾಕಾರಂ ನಾಗಮಾನುಷರೂಪಕಂ ॥೨೮॥

ನಾಕ್ಷತ್ರಂ ದೀಪಕಂ ದದ್ಯಾತ್ಸದ್ಯೋಜಾತಾದಿಪಂಚಕಂ ।
ದೀಪಂ ಪಾತ್ರೇಷು ದೇಯಂ ಸ್ಯಾತ್ತತಃ ಕರ್ಪೂರಖಂಡಜಂ ॥೨೯॥

ರಕ್ಷಾಬಂಧಂ ತತಃ ಕುರ್ಯಾದ್ಭಸ್ಮನಾ ತ್ರಿಃ ಕ್ರಮೇಣ ತು ।
ಋಕ್ಸಾಮಯಜುಷಾಥರ್ವಮಂತ್ರೈಃ ಸ್ತುತ್ವಾ ಮಹೇಶ್ವರಂ ॥೩೦॥

ಪೌರಾಣೈರ್ವಾ ತಥೈವಾರ್ಷೈಃ ಸ್ತುವೀತ ಪರಮೇಶ್ವರಂ ।
ಈಶಾನಂ ಪುರುಷಂ ಚೈವಮಘೋರಂ ವಾಮಮೇವ ಚ ॥೩೧॥

ಸದ್ಯೋಜಾತಂ ಜಪೇತ್ಪಶ್ಚಾತ್ಪಂಚಭಿಃ ಪೂಜಯೇಚ್ಛಿವಂ ।
ಛತ್ರಂ ಚ ಚಾಮರೇ ದಿವ್ಯೇ ವ್ಯಜನಾದರ್ಶಕಂ ಧ್ವಜಂ ॥೩೨॥

---

ಹಾಗೆಯೇ ಕ್ರಮವಾಗಿ ದಿವ್ಯವಾದ ಪಾನಕ, ಮಜ್ಜಿಗೆ, ಹಣ್ಣುಗಳು, ಪುಷ್ಪ ಗಂಧಸಹಿತವಾದ ತಾಂಬೂಲ ಮೊದಲಾದ ಇವುಗಳನ್ನು ಅರ್ಪಿಸಿ, ಸಹಸ್ರಬತ್ತಿಗಳಿಂದ ಉರಿಯುವ ದೀಪಗಳಿಂದ ನೀರಾಜನವನ್ನು ಬೆಳಗಬೇಕು. ಬಸವ, ಗಡಿಗೆ, ಆನೆ, ಹಾವು, ಮನುಷ್ಯ, ನಕ್ಷತ್ರಗಳು ಈ ಆಕಾರದ ನೀರಾಜನಪಾತ್ರೆಗಳಲ್ಲಿ ದೀಪಗಳನ್ನು ಹೊತ್ತಿಸಿ ಸದ್ಯೋಜಾತಾದಿ ಪಂಚಬ್ರಹ್ಮಾನುವಾಕಗಳನ್ನು ಉಚ್ಚರಿಸುತ್ತಾ ಆರತಿಯನ್ನು ಬೆಳಗಬೇಕು. ಅನಂತರ ಕರ್ಪೂರದಾರತಿಯನ್ನು ಹೊತ್ತಿಸಿ ಮಂಗಳಾರತಿಮಾಡಬೇಕು ॥೨೭-೨೮-೨೯॥

ಅನಂತರ ವಿಭೂತಿಯಿಂದ ಮೂರು ಸುತ್ತು ರಕ್ಷಾಬಂಧವನ್ನು ಕ್ರಮವಾಗಿ ಋಕ್ಕು, ಯಜುಸ್ಸು, ಸಾಮ ಮುಂತಾದ ಮಂತ್ರಗಳಿಂದ ಕಲ್ಪಿಸಬೇಕು. ಅನಂತರ ಪುರಾಣದ ಶ್ಲೋಕಗಳು, ಅಥರ್ವಶೀರ್ಷೋಪನಿಷತ್ತು, ಈಶಾನಸ್ಸರ್ವವಿದ್ಯಾನಾಂ, ಅಘೋರೇಭ್ಯಃ, ಸದ್ಯೋಜಾತಂ ಪ್ರಪದ್ಯಾಮಿ ಇವೇ ಮೊದಲಾದ ವೇದವಾಕ್ಯಗಳಿಂದ ಸ್ವಾಮಿಯನ್ನು ಸ್ತೋತ್ರಮಾಡಬೇಕು. ಇದಾದ ಮೇಲೆ ಛತ್ರ, ಚಾಮರ, ಬೀಸಣಿಗೆ, ಕನ್ನಡಿ, ಧ್ವಜ, ವೀಣೆ, ಕೊಳಲು, ಮೃದಂಗ, ಶಂಖ, ನಗಾರಿ,

ವೀಣಾವೇಣುಮೃದಂಗಾದೀನ್ ಶಂಖದುಂದುಭಿಕಾಹಲಂ ।
ಚಾರ್ಮಂತಂತ್ರೀಮಯಂ ಶ್ರೇಷ್ಠಮಾಲಿಂಗಂ ಚ ಮುಖೋದ್ಭವಂ ॥೩೩॥

ವಾದ್ಯಂ ಚ ಶ್ರೇಷ್ಠಮಿತ್ಯಾಹುಃ ಶಿವಾರ್ಚಾಸು ಮಹೇಶ್ವರಿ ।
ಅಲಾಭೇ ಸರ್ವವಾದ್ಯಾನಾಂ ಘಂಟಾಘೋಷಃ ಪ್ರಶಸ್ಯತೇ ॥೩೪॥

ರತ್ನಸ್ವರ್ಣೋದ್ಭವಂ ಪಾತ್ರಂ ರಾಜತಂ ತಾಮ್ರಜಂ ತು ಸಾ ।
ಕಾಂಸ್ಯಪೈತ್ತಲಸಂಭೂತಂ ದಾರವಂ ಚಾಶ್ಮಸಂಭವಂ ॥೩೫॥

ಶೌಕ್ತಿಕಂ ಪತ್ರಸಂಭೂತಂ ಮೃನ್ಮಯಂ ವಾ ಅಲಾಭತಃ ।
ಕಲ್ಪಯೇಚ್ಛಿವಪೂಜಾಯಾಃ ಫಲಂ ಸ್ಯಾದುತ್ತರೋತ್ತರಂ ॥೩೬॥

ಪಂಚಾಮೃತಂ ಚಾನ್ಯಗವಾಂ ಕಾಪಿಲಂ ಸ್ಯಾತ್ತತೋಧಿಕಂ ।
ನಾರಿಕೇಳಂ ತಥೈವಾನ್ಯಾಶ್ಶ್ವೇತಂ ತತ್ರ ಪ್ರಶಸ್ಯತೇ ॥೩೭॥

---

ಕಾಹಲೆ, ಚರ್ಮದ ಹಾಗೂ ತಂತಿಯ ವಾದ್ಯಗಳು, ಓಲಗ ಇವೇ ಮೊದಲಾದ ವಾದ್ಯಗಳಿಂದ ಶಿವಕೀರ್ತನಾದಿಗಳನ್ನು ಬಾರಿಸಿ ಭಗವಂತನನ್ನು ಸೇವಿಸಬೇಕು. ||೩೦-೩೧-೩೨||

ಮುಖವೀಣೆ ಅಥವಾ ಓಲಗವು ಶಿವಾರ್ಚನೆಯಕಾಲದಲ್ಲಿ ಬಹಳ ಶ್ರೇಷ್ಠವಾದು ದೆಂದು ಹೇಳುವರು. ಯಾವ ವಾದ್ಯಗಳು ಸಿಕ್ಕದಿದ್ದರೂ ಕೇವಲ ಘಂಟಾವಾದನ ದಿಂದಲೇ ಎಲ್ಲವನ್ನೂ ನಡೆಸಬಹುದು. ಅದೇ ಶ್ರೇಷ್ಠವಾದ್ಯವೆಂದು ಹೇಳಲ್ಪಡುವುದು. ಇನ್ನು ಶಿವಾರ್ಚನೆಯಕಾಲದಲ್ಲಿ ಉಪಯೋಗಿಸಲ್ಪಡುವ ಪಾತ್ರೆಗಳ ವಿಷಯದಲ್ಲಿ ರತ್ನ, ಸುವರ್ಣ, ಬೆಳ್ಳಿ, ತಾಮ್ರ, ಕಂಚು, ಹಿತ್ತಾಳೆ, ಮರ, ಕಲ್ಲು, ಮುತ್ತಿನಚಿಪ್ಪುಗಳು, ಎಲೆ, ಮಣ್ಣು ಇವುಗಳಿಂದ ನಿರ್ಮಿತವಾದ ಪಾತ್ರೆಗಳು ಶ್ರೇಷ್ಠವಾದವುಗಳು. ಇವು ಗಳಲ್ಲಿ ಉತ್ತರೋತ್ತರವಾಗಿ ಪಾತ್ರೆಗಳಿಗೆ ಪ್ರಾಶಸ್ತ್ಯವಿರುವುದು. ಯಾವ ಪಾತ್ರೆಯೂ ಸಿಕ್ಕದಿದ್ದರೆ ಮಣ್ಣಿನ ಪಾತ್ರೆಯನ್ನು ಬಳಸಬಹುದು. ಅಂದರೆ ಪಾತ್ರವಿಶೇಷಗಳಿಗೆ ತಕ್ಕಂತೆ ಫಲವು ಹೆಚ್ಚುಕಮ್ಮಿಯಾಗಿ ದೊರೆಯುವುದು. ||೩೩-೩೪-೩೫-೩೬||

ಪಂಚಗವ್ಯಗಳಲ್ಲಿ ಕಪಿಲವರ್ಣದ ಗೋವಿನಿಂದ ದೊರೆತ ವಸ್ತುಗಳು ಬಹು ಶ್ರೇಷ್ಠವಾದುದು. ಫಲರಸಗಳಲ್ಲಿ ಶುಭ್ರವಾದ ಎಳನೀರಿನ ಅಭಿಷೇಕವೇ ಶ್ರೇಷ್ಠವಾ

ರಂಭಾ ಸುವೃತ್ತಪೀತಾಭ್ಯಾ ಪ್ರಶಸ್ತಾಸ್ತ್ವಭಿಷೇಚನೇ ।
ಇಕ್ಷುಭ್ಯಃ ಪೌಂಡ್ರಕಂ ಚೇಕ್ಷು ಪ್ರಶಸ್ತಂ ಸ್ನಪನೇ ಶಿವೇ ॥೩೮॥

ಗುಣವಲ್ಮೀಕಸಂಭೂತಾನ್ಮಧು ಪಾರ್ವತಮುತ್ತಮಂ ।
ಕೃಷ್ಟಂ ನಿಷಿದ್ಧಂ ದೇವೇಶಿ ಪೈತೃಕೇ ವಿನಿಯೋಜಯೇತ್ ॥೩೯॥

ತಟಾಕಂ ಕೂಪಮುತ್ಕೃಷ್ಟಂ ತತಃ ಕುಲ್ಯೋದ್ಭವಂ ಶಿವೇ ।
ತತೋ ನದೀಭವಂ ಪುಣ್ಯಂ ಸಾಗರಾಭಿಮುಖಾಸು ಚ ॥೪೦॥

ಶಂಖೋದಕಂ ತತೋತ್ಕೃಷ್ಟಂ ಸರ್ವಪಾತ್ರಜಲೈರಪಿ ।
ಸರ್ವತೈಲೈರಪಿ ಶಿವೇ ಚೋತ್ಕೃಷ್ಟಂ ತಿಲಜಂ ಸದಾ ॥೪೧॥

ಪ್ರಹರಂ ತಿಷ್ಠತೇ ಜಾಜೀ ದಿವಾರಾತ್ರೌ ಚ ಮಲ್ಲಿಕಾ ।
ಪದ್ಮಂ ನೀಲೋತ್ಪಲಂ ಚೈವ ಮುಕುಲಂ ವಾ ದಿನತ್ರಯಂ ॥೪೨॥

ನ ಪರ್ಯುಷಿತದೋಷೋಸ್ತಿ ಬಿಲ್ವಪತ್ರೇ ಶಿವಪ್ರಿಯೇ ।
ನ ಪರ್ಯುಷಿತದೋಷೋಸ್ತಿ ಹೈಮೇ ರತ್ನಾಯುಕಲ್ಪಕೇ ॥೪೩॥

---

ದುದು. ದಪ್ಪನಾಗಿ ಹಳದಿಬಣ್ಣದ ಬಾಳೆಯಹಣ್ಣುಗಳಿಂದಲೂ, ಕೆಂಪುಬಣ್ಣದ ಕಬ್ಬಿನ ರಸ ಮುಂತಾದುವುಗಳಿಂದಲೂ ಶಿವಾಭಿಷೇಕಮಾಡುವುದೇ ಸರ್ವಶ್ರೇಷ್ಠವು ॥೩೭-೩೮॥

ಪರ್ವತದಲ್ಲಿ ಹುತ್ತದಮೇಲೆ ಕಟ್ಟಿರುವ ಜೇನುತುಪ್ಪವು ಶಿವಾಭಿಷೇಕಕ್ಕೆ ಶ್ರೇಷ್ಠವಾದದ್ದು. ಕಪ್ಪಾದ ಜೇನುತುಪ್ಪವು ಶ್ರಾದ್ಧಾದಿಗಳಿಗೆ ಯೋಗ್ಯವೇಹೊರತು ಶಿವಾರಾಧನೆಗಲ್ಲ. ಕೆರೆ, ಬಾವಿ, ಸಣ್ಣನಾಲಾ, ನದೀ, ಸಾಗರ, ಸಾಗರಗಾಮಿಗಳಾದ ಪ್ರವಾಹಗಳು ಇವುಗಳ ನೀರು ಶಿವಾಭಿಷೇಕಕ್ಕೆ ಶ್ರೇಷ್ಠವಾದವುಗಳು. ॥೩೯-೪೦॥

ಶಿವಾಭಿಷೇಕಕ್ಕೆ ಇತರ ಎಲ್ಲಾ ಪಾತ್ರಸ್ಥಜಲಕ್ಕಿಂತಲೂ ಶಂಖೋದಕವೇ ಅತಿ ಶ್ರೇಷ್ಠವಾದದ್ದು ತೈಲಾಭಿಷೇಕಕ್ಕೆ ಎಳ್ಳೆಣ್ಣೆಯೇ ಉತ್ತಮವಾದದ್ದು. ಒಂದು ಯಾಮ ಪರ್ಯಂತ ಜಾಜೀಹೂವು. ಒಂದು ದಿನ ಪೂರ್ತಿ ಮಲ್ಲಿಗೆ ಹೂವು, ಬಿಳಿಯ ಮತ್ತು ಕೆಂಪು ಕಮಲಗಳು, ಅವುಗಳ ಮೊಗ್ಗುಗಳೂ, ಮೂರು ದಿನಗಳ ಪರ್ಯಂತವೂ ನಿಲ್ಲುವುವು. ಈ ಅವಧಿಯಾದಮೇಲೆ ಅವುಗಳನ್ನು ಪೂಜಿಸಬಾರದು. ॥೪೧-೪೨॥

ಬಿಲ್ವಪತ್ರೆಗೆ ಮಾತ್ರ ಹಳೆಯದೆಂಬ ದೋಷವಿರುವುದಿಲ್ಲ. ಅದರಂತೆ ಸುವರ್ಣ, ರತ್ನ ಮುಂತಾದ ವಸ್ತುಗಳಿಂದ ನಿರ್ಮಿತವಾದ ಆಭರಣಾದಿಗಳಿಗೂ ಹಳೆಯದೆಂಬ

ಅಲಾಭೇ ಬಿಲ್ವಪತ್ರಾಣಾಂ ನಿರ್ಮಾಲ್ಯೈಃ ಕ್ಷಾಳಿತೈರ್ಯಜೇತ್ ।
ಪುಷ್ಪಾಣಾಮಪ್ಯಲಾಭೇತು ತತ್ಪತ್ರಾಣಿ ನಿವೇದಯೇತ್ ॥೪೪॥

ಕುಟ್ಮಲೈರ್ನಾರ್ಚಯೇ ದೀಶಂ ಯಸ್ಯ ಕಸ್ಯ ಸುಮಸ್ಯ ಚ ।
ವಿನಾ ಪದ್ಮೋತ್ಪಲಂ ದೇವಿ ಸಾಯಂ ಮಂದಾರಕೈರ್ಯಜೇತ್ ।೪೫॥

ಮಲ್ಲೀಭಿರ್ಜಾತಿಕಾಭಿಶ್ಚ ಪ್ರಾತಶ್ಚಂಪಕನಂದಿಕೈಃ ।
ಮಧ್ಯಾಹ್ನೇ ಕರ್ಣಿಕಾರೈಶ್ಚ ಕರವೀರೈಶ್ಚ ಪಾಟಲೈಃ ॥೪೬॥

ಪುನ್ನಾಗೈಃ ಪಾರಿಜಾತೈಶ್ಚ ಪುಷ್ಪೈರನ್ಯೈರ್ಯಥಾಬಲಂ ।
ಕನಕಂ ಕೇತಕೀಪುಷ್ಪಂ ನಿಶಿ ಕಾದಂಬಕೈರ್ಯಜೇತ್ ॥೪೭॥

ಸರ್ವದಾ ಬಿಲ್ವಪತ್ರಂ ಮೇ ಪ್ರಿಯಂ ಶೈಲೇಂದ್ರಕನ್ಯಕೇ ।
ಬಿಲ್ವಪತ್ರೇ ಚ ಕಮಲೇ ಕಮಲಾ ಸುಪ್ರತಿಷ್ಠಿತಾ ॥೪೮॥

ನೀಲೋತ್ಪಲೇಂಬಿಕಾ ಸಾಕ್ಷಾದ್ಧಲ್ಲಕೇ ಷಣ್ಮುಖಃ ಸ್ಥಿತಃ ।
ಪುಂಡರೀಕೇ ಮಹಾದೇವೋ ಗಣೇಶಶ್ಶತಪತ್ರಕೇ ॥೪೯॥

---

ದೋಷವಿಲ್ಲ. ಒಂದು ವೇಳೆ ಹೊಸ ಬಿಲ್ವಪತ್ರೆಗಳು ದೊರೆಯದಿದ್ದರೆ ಹಳೆಯ ಬಿಲ್ವದಳಗಳನ್ನೇ ತೊಳೆದು ಪೂಜಿಸಬೇಕು. ಮೇಲೆ ಹೇಳಿದ ಹೂವುಗಳು ದೊರೆಯದಿದ್ದರೆ ಅವುಗಳ ಎಲೆಗಳಿಂದಲೇ ಪೂಜಿಸಬಹುದು. ||೪೩-೪೪||

ಈಶ್ವರನಿಗೆ ಎಂದೂ ಮೊಗ್ಗುಗಳಿಂದ ಪೂಜೆಮಾಡಬಾರದು. ಕಮಲ, ನೈದಿಲೆ ಇವುಗಳ ಮೊಗ್ಗುಗಳು ಮಾತ್ರ ದುಷ್ಟಗಳಲ್ಲ. ಸಾಯಂಕಾಲದ ವೇಳೆಯಲ್ಲಿ ಮಂದಾರ ಪುಷ್ಪವೂ, ಪ್ರಾತಃಕಾಲದಲ್ಲಿ ಮಲ್ಲಿಗೆ, ಜಾಜಿ ಈ ಹೂವುಗಳೂ ಶಿವಪೂಜೆಗೆ ಶ್ರೇಷ್ಠವಾದವುಗಳು. ಸಂಪಿಗೆ, ನಂದ್ಯಾವರ್ತ, ಕಣಿಗಲೆ, ಕರ್ಣಿಕಾರ, ಪಾದರಿ, ಸುರಗಿ ಮುಂತಾದ ಹೂವುಗಳನ್ನು ಮಧ್ಯಾಹ್ನಕಾಲದಲ್ಲಿಯೂ, ರಾತ್ರಿಯವೇಳೆ ಕದಂಬಪುಷ್ಪಗಳಿಂದಲೂ ಮಹಾದೇವನನ್ನು ಪೂಜಿಸಬೇಕು. ||೪೫-೪೬-೪೭||

ದೇವಿಯೇ, ಬಿಲ್ವಪತ್ರೆಯು ಮಾತ್ರ ನನಗೆ ಸದಾ ಪ್ರಿಯವಾದದ್ದು. ಅದನ್ನು ಯಾವ ಕಾಲದಲ್ಲಿ ಬೇಕಾದರೂ ಪೂಜಿಸಬಹುದು. ಬಿಲ್ವದಳ ಮತ್ತು ಕಮಲಪುಷ್ಪಗಳಲ್ಲಿ ಲಕ್ಷ್ಮಿಯು ಸದಾ ನೆಲಸಿರುವಳು. ಅದೇ ರೀತಿ ನೀಲೋತ್ಪಲದಲ್ಲಿ ಅಂಬಿ

ಕರ್ಣಿಕಾರೇ ಸ್ಥಿತೋ ವೇಧಾಃ ಮಲ್ಲಿಕಾಸು ಹರಿಃ ಸ್ಥಿತಃ ।
ಕರವೀರೇ ಸ್ಥಿತೋ ನಂದೀ ದುರ್ಗಾ ಪಾಟಲಕೇಷು ಚ ॥೫೦॥

ಶ್ವೇತಾರ್ಕೇ ಚೈವ ಚಂಡೀಶಃ ಪುಷ್ಪೇಷು ಗಣಪಾಸ್ಸ್ಥಿತಾಃ ।
ಯಮೋ ನೀಲೇಷು ಪುಷ್ಪೇಷು ರಕ್ತೇಷ್ವಪರ್ಣಾ ಪ್ರತಿಷ್ಠಿತಾ ॥೫೧॥

ಶುಭ್ರಪುಷ್ಪಾರ್ಚನೇ ಮುಕ್ತಿಃ ಭುಕ್ತೀ ರಕ್ತಸುಮಾರ್ಚನೇ ।
ಪೀತಂ ವಶ್ಯಕರಂ ದೇವಿ ನೀಲಂ ಮಾರಣಕೇ ಜಪೇತ್ ॥೫೨॥

ಅನೇನ ವಿಧಿನಾ ದೇವಃ ಪ್ರಸೀದತಿ ಮಹೇಶ್ವರಃ ।
ಕೃಷ್ಣಾಗರೂದ್ಭವಂ ಧೂಪಂ ಸರ್ವಪಾಪನಿಕೃಂತನಂ ॥೫೩॥

ಸಾಮ್ರಾಣಿಕೇ ಗುಗ್ಗುಲುಜಂ ಧೂಪಂ ವಶ್ಯಕರಂ ಭವೇತ್ ।
ಸರ್ವರೋಗಹರಂ ಬಿಲ್ವಂ ಸಘೃತಂ ಧೂಪಮುತ್ತಮಂ ॥೫೪॥

---

ಕೆಯೂ, ಕಲ್ಹಾರಪುಷ್ಪದಲ್ಲಿ ಕುಮಾರಸ್ವಾಮಿಯೂ, ಬಿಳಿಯ ಕಮಲದಲ್ಲಿ ಮಹಾ ದೇವನೂ, ಶತಪತ್ರ (ನೂರುದಳದ ಕಮಲ) ದಲ್ಲಿ ಗಣಪತಿಯೂ, ಕರ್ಣಿಕಾರ ಪುಷ್ಪದಲ್ಲಿ ಬ್ರಹ್ಮನೂ, ಮಲ್ಲಿಗೆಯ ಹೂವಿನಲ್ಲಿ ವಿಷ್ಣುವೂ, ಕಣಗಿಲು ಹೂವಿನಲ್ಲಿ ನಂದಿಯೂ, ಪಾದರೀಪುಷ್ಪದಲ್ಲಿ ದುರ್ಗಾದೇವಿಯೂ ನೆಲಸಿರುವರು ॥೪೮-೪೯-೫೦॥

ಬಿಳಿಯ ಎಕ್ಕದ ಹೂವಿನಲ್ಲಿ ಚಂಡೀಶ್ವರನೂ ಇತರ ಎಲ್ಲ ಹೂವುಗಳಲ್ಲಿಯೂ ನನ್ನ ಗಣನಾಯಕರೂ ನೆಲಸಿರುವರು. ಕಪ್ಪು ಹೂಗಳಲ್ಲಿ ಯಮನೂ, ಕೆಂಪು ಹೂಗಳಲ್ಲಿ ಪಾರ್ವತಿಯೂ ಇರುವರು . ಬಿಳಿಯ ಪುಷ್ಪಗಳ ಅರ್ಚನೆಯಿಂದ ಮೋಕ್ಷವೂ, ಕೆಂಪುಹೂಗಳ ಪೂಜೆಯಿಂದ ಐಹಿಕಸುಖವೂ, ಹಳದಿಯ ಹೂಗಳಿಂದ ಸರ್ವವಸ್ತುಗಳ ವಶೀಕರಣವೂ, ಕಪ್ಪುಹೂಗಳಿಂದ ಮಾರಣಾದಿ ಶತ್ರುನಿಗ್ರಹ ಕಾರ್ಯವೂ ಸಿದ್ಧಿಸುವುದು. ॥೫೧-೫೨॥

ಈ ನಿಯಮವನ್ನು ಅನುಸರಿಸಿ ಶಿವಾರ್ಚನೆಮಾಡುವುದರಿಂದ ಪರಶಿವನು ತೃಪ್ತಿಹೊಂದುವನು. ಕರೀ ಅಗುರುವಿನ ಧೂಪವು ಪಾಪನಾಶಕವು. ಸಾಮ್ರಾಣಿ, ಗುಗ್ಗುಲು ಇವುಗಳ ಧೂಪವು ವಶೀಕರಣಫಲಪ್ರದವಾಗುವುದು. ಬಿಲ್ವತ್ವಕ್, ತುಪ್ಪ, ಇವುಗಳ ಮೇಳನ ರೂಪವಾದ ಧೂಪವು ಸರ್ವರೋಗ ನಿವಾರಕವು ॥೫೩-೫೪॥

ಮಾರಣೋಚ್ಚಾಟನೇ ಚೈವ ಧೂಪದೀಪೋಽಪಿ ಸತ್ತಮೇ ।
ಕೌಸುಂಭತೈಲಂ ವಶ್ಯಂ ಸ್ಯಾಚ್ಛಿವದೀಪಪ್ರದಾನತಃ ॥೫೫॥

ಸಾರ್ಷಪಂ ರೋಗನಾಶಾಯ ಮಧೂಕಂ ರಾಜವಶ್ಯಕಂ ।
ನಾರಿಕೇಲೋದ್ಭವಂ ತೈಲಂ ಸ್ತ್ರೀವಶೀಕರಣಂ ಶಿವೇ ॥೫೬॥

ತಿಲತೈಲಂ ಜ್ಞಾನದಾಯೀ ಶಿವಾಗ್ರೇ ದೀಪದಾಯಕೇ ।
ಐರಂಡಂ ಬುದ್ಧಿಮಾಂದ್ಯಂ ಸ್ಯಾಚ್ಛಿವಾಗ್ರೇ ದೀಪದಾನತಃ ॥೫೭॥

ಗವ್ಯಮಾಜ್ಯಂ ಮುಕ್ತಿದಾಯಿ ಮಾಹಿಷಂ ಪುಷ್ಟಿಕೃತ್ ಭವೇತ್ ।
ಏವಂ ಧೂಪಾದಿದೀಪೇಷು ಪುಷ್ಪೇಷು ಫಲಮಂಬಿಕೇ ॥೫೮॥

ಯಥಾಲಾಭಂ ಪ್ರಕುರ್ವೀತ ಭಾವಯುಕ್ತೋ ನ ದುಷ್ಯತಿ ।
ವೃಕ್ಷಪುಷ್ಪಾಂಗಪತ್ರಾದ್ಯೈರ್ವಲ್ಲಯರ್ಶ್ಚ ಮಹೇಶ್ವರಿ ॥೫೯॥

ಉಪಯುಕ್ತಾಶ್ಶಿವಾರ್ಚಾಯಾಂ ಗಾವೋ ಯಾ ಲೋಕಮಾತರಃ ।
ಗತಿಂ ಪ್ರಯಾಂತಿ ಪರಮಾಂ ಕಿಂ ಪುನರ್ಮಾನವಾಶ್ಶಿವೇ ॥೬೦॥

---

ಮಾರಣ, ಉಚ್ಚಾಟನ ಇಂತಹ ಕರ್ಮಗಳಿಗೆ ಧೂಪ, ದೀಪ ಇವುಗಳಿಂದ ವಿಶೇಷ ಶಕ್ತಿಯುಂಟು. ಕೌಸುಂಭ (ಕೆಂಪುಕುಸುಮ)ದ ಎಣ್ಣೆಯಿಂದ ದೀಪ ಹೊತ್ತಿಸಿ ಶಿವಾರ್ಚನೆ ಮಾಡಿದರೆ ಸರ್ವಪ್ರಾಣಿಯೂ ವಶ್ಯವಾಗುವುದು. ಹಾಗೆಯೇ ಸಾಸಿವೆ ಎಣ್ಣೆಯ ದೀಪದಿಂದ ರೋಗನಾಶವೂ, ಹಿಪ್ಪೆ ಎಣ್ಣೆಯ ದೀಪದಿಂದ ರಾಜ ವಶ್ಯವೂ, ಕೊಬ್ಬರಿ ಎಣ್ಣೆಯಿಂದ ಸ್ತ್ರೀವಶ್ಯವೂ ಲಭಿಸುವುದು. ॥೫೫-೫೬॥

ಎಳ್ಳೆಣ್ಣೆಯ ದೀಪಗಳಿಂದ ಜ್ಞಾನವೃದ್ಧಿಯೂ, ಹರಳೆಣ್ಣೆಯಿಂದ ಬುದ್ಧಿ ಮಾಂದ್ಯವೂ, ಹಸುವಿನ ತುಪ್ಪದ ದೀಪದಿಂದ ಮೋಕ್ಷವೂ, ಎಮ್ಮೆ ತುಪ್ಪದಿಂದ ದೇಹಪುಷ್ಟಿಯೂ ಲಭಿಸುವುದು. ಈರೀತಿ ಪುಷ್ಪ, ಧೂಪ, ದೀಪ ಇವುಗಳ ಭೇದ ದಿಂದ ಫಲವೂ ಬೇರೆ ಬೇರೆಯಾಗಿ ದೊರಕುವುದು. ॥೫೭-೫೮॥

ಇವುಗಳನ್ನು ಉಪಯೋಗಿಸುವುದರಲ್ಲಿ ಅವರ ಶಕ್ತಿಯನ್ನನುಸರಿಸಿ ನಡೆಯ ಬೇಕು. ಭಕ್ತಿಯೊಂದಿದ್ದರೆ ಫಲವು ತಾನೇ ದೊರೆಯುವುದು. ಮರ, ಹೂವು, ಕೊಂಬೆ, ಎಲೆ, ಚಿಗುರು, ಹಸು ಮುಂತಾದ ಯಾವ ವಸ್ತುಗಳು ಶಿವಪೂಜೆಗೆ

ದ್ವಿಜಾಃ ಕ್ಷತ್ರವಿಶಃ ಶೂದ್ರಾ ಸ್ತ್ರಿಯೋ ವಾಪಿ ಚ ಸಂಕರಾಃ ।
ಶಂಕರಾರ್ಚಾಸು ನಿರತಾಃ ಪ್ರಯಾಂತಿ ಪರಮಂ ಪದಂ ॥೬೧॥

ಪೂಜಯೇದ್ಯಃ ಶಿವಂ ರುದ್ರಂ ಶರ್ವಂ ಶಿವಮಜಂ ಸಕೃತ್
ಸ ಯಾತಿ ಶಿವಸಾಯುಜ್ಯಂ ತ್ರಿಃಸಪ್ತಕುಲಸಂಯುತಃ ॥೬೨॥

ಪೂಜಿತಂ ವಾ ಮಹಾದೇವಂ ಪೂಜ್ಯಮಾನಮಥಾಪಿ ವಾ ।
ದೃಷ್ಟ್ವಾ ಪ್ರಯಾತಿ ವೈ ಮರ್ತ್ಯೋ ರುದ್ರಲೋಕಂ ನ ಸಂಶಯಃ ॥೬೩॥

ಅರ್ಚಿತಂ ಪ್ರಾತರೀಕ್ಷನ್ ವೈ ಲಿಂಗೇ ದೇವಮುಮಾಸಖಂ ।
ನೈಶಪಾಪಾದ್ವಿಮುಚ್ಯೇತ ಮಧ್ಯಾಹ್ನೇ ಹಯಮೇಧಭಾಕ್ ॥೬೪॥

ಸಾಯಂ ಜನ್ಮಾಯುತೋದ್ಭೂತಂ ದೃಷ್ಟ್ವಾ ತತ್ಪಾಪನಾಶಕೃತ್ ।
ನಿಶೀಥೇ ತು ಮಹಾದೇವಮಭಿವೀಕ್ಷ್ಯ ವಿಮುಕ್ತಿಭಾಕ್ ॥೬೫॥

---

ಸಹಕಾರಿಗಳಾಗುವುವೋ, ಅವೆಲ್ಲಕ್ಕೂ ಮೋಕ್ಷವು ದೊರೆಯುವಾಗ ಇನ್ನು ಮಾನವರಿಗೆ ಹೇಳುವುದೇನಿದೆ? ॥೫೯-೬೦॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಸ್ತ್ರೀ, ಸಂಕರಜಾತಿಯವರು ಈ ಯಾವ ಮತವರ್ಗಕ್ಕೆ ಸೇರಿದವರಾದರೂ, ಈಶ್ವರಾರ್ಚನೆಮಾಡುವುದರಿಂದ ಅವರು ಮುಕ್ತರೆನಿಸುವರು. ಯಾರು ಲೋಕರಕ್ಷಕನೂ, ಮಂಗಳಕರನೂ, ನಾಶರಹಿತನೂ ಆದ ಮಹಾದೇವನನ್ನು ಸದಾ ಪೂಜಿಸುವರೋ, ಅವರು ಇಪ್ಪತ್ತೊಂದು ಕುಲಸಹಿತರಾಗಿ ಮೋಕ್ಷವನ್ನು ಹೊಂದುವರು. ॥೬೧-೬೨॥

ಒಂದು ವೇಳೆ ಮತ್ತಾರಿಂದಲಾದರೂ ಭಕ್ತಿಯಿಂದ ಪೂಜಿತವಾಗಿರುವ ಶಿವಲಿಂಗವನ್ನು ದರ್ಶನಮಾಡಿದರೂ ಮನುಷ್ಯನಿಗೆ ರುದ್ರಲೋಕವು ಪ್ರಾಪ್ತವಾಗುವುದು. ಪೂಜಿತವಾದ ಶಿವಲಿಂಗವನ್ನು ಪ್ರಾತಃಕಾಲ ದರ್ಶನಮಾಡುವುದರಿಂದ ರಾತ್ರಿಕೃತವಾದ ದೋಷವೆಲ್ಲಾ ಪರಿಹೃತವಾಗುವುದು. ಮಧ್ಯಾಹ್ನಕಾಲದ ಶಿವದರ್ಶನದಿಂದ ಅಶ್ವಮೇಧಯಾಗದ ಫಲವು ಲಭಿಸುವುದು. ॥೬೩-೬೪॥

ಸಾಯಂಕಾಲ ಶಿವದರ್ಶನಮಾಡುವುದರಿಂದ ಹತ್ತುಸಾವಿರ ಜನ್ಮಗಳಿಂದ ಸಂಪಾದಿಸಿದ ಪಾಪವೆಲ್ಲಾ ಪರಿಹಾರವಾಗುವುದು. ಅರ್ಧರಾತ್ರಿಯಲ್ಲಿ ಶಿವದರ್ಶನಮಾಡುವುದರಿಂದ ಮೋಕ್ಷವನ್ನೇ ಪಡೆಯಬಹುದು. ಯಾವನು ನನ್ನ ಅರ್ಚಿತವಾದ

ದೃಷ್ಟ್ವಾ ಶ್ರುತ್ವಾಪಿ ಮೋದೇದ್ವಾ ಸ ಯಾತಿ ಗಣತಾಂ ಮಮ ।
ಸಕೃತ್ಪ್ರಸಂಗತೋ ಲಿಂಗಮನಂಗಾಂಗಹರಸ್ಯ ಹಿ ॥೬೬॥

ದೃಷ್ಟ್ವಾ ನತ್ವಾಭಿಗಚ್ಛೇತ ಪ್ರಾದಕ್ಷಿಣ್ಯೇನ ಶಂಕರಿ ।
ಬಹಿರೇವ ಸ್ಥಿತೋ ನತ್ವಾ ಗಚ್ಛೇನ್ಮಾರ್ಗಮತಂದ್ರಿತಃ ॥೬೭॥

ಏಕಪ್ರದಕ್ಷಿಣಂ ಲಿಂಗೇ ಚಂಡೇಶಾದರ್ಶನಂ ತಥಾ ।
ಅದೀಪದರ್ಶನಂ ಚೈವ ಶಿವಸ್ಯಾರ್ಧನಮಃಕ್ರಿಯಾ ॥೬೮॥

ಬ್ರಾಹ್ಮಣಾನಾಂ ಪರೀವಾದೋ ಹಂತಿ ಪುಣ್ಯಂ ಪುರಾಕೃತಂ ॥೬೯॥

॥ ಈಶ್ವರ ಉವಾಚ ॥

ಇತ್ಯೇತತ್ತೇ ಸಮಾಸೇನ ಫಲಾಫಲವಿನಿರ್ಣಯಂ ।
ಪುಣ್ಯಂ ಚ ದರ್ಶನಂ ಶಂಭೋರ್ದೀಪಧೂಪನಿವೇದನೇ ॥೭೦॥

ಕಥಿತಂ ಪ್ರಥಿತಂ ದೇವಿ ಮಥಿತಂ ಶಾಂಭವಂ ವರಂ ॥೭೧॥

ಶಿವಲಿಂಗವನ್ನು ಭಕ್ತಿಯಿಂದ ನೋಡಿಯೋ ಅಥವಾ ಕೇಳಿಯೋ ಆನಂದಪಡುವನೋ ಅವನು ಗಣನಾಯಕನೆನಿಸುವನು. ॥೬೫-೬೬॥

ಆಕಸ್ಮಾತ್ತಾಗಿ ಎಲ್ಲಿ ಶಿವಲಿಂಗವನ್ನು ನೋಡಿದರೂ ಒಡನೆಯೇ ಪ್ರದಕ್ಷಿಣೆ ನಮಸ್ಕಾರಾದಿಗಳಿಂದ ನಿಂತಲ್ಲಿಯೇ ನಮಸ್ಕರಿಸಿ ಮುಂದುವರಿಯಬೇಕು. ಶಿವಲಿಂಗವನ್ನು ನೋಡಿಯೂ ನಮಸ್ಕಾರಮಾಡದಿರುವುದೂ, ಚಂಡೀಕೇಶನದರ್ಶನಮಾಡದಿರುವುದೂ, ಮಂಗಳಾರತಿಯಲ್ಲಿ ಶಿವನನ್ನು ನೋಡದಿರುವುದೂ, ಪಾರ್ವತಿಗೆ ನಮಸ್ಕರಿಸದಿರುವುದೂ, ಬ್ರಾಹ್ಮಣನಿಂದನೆಯೂ ಪುಣ್ಯನಾಶಕವು ಇಂತಹ ಕರ್ಮಗಳನ್ನು ಮಾಡುವುದರಿಂದ ಪುರಾಕೃತವಾದ ಪುಣ್ಯವೆಲ್ಲಾ ನಾಶವಾಗುವುದು. ॥೬೭-೬೮-೬೯॥

ಎಲೌ ದೇವಿಯೇ, ಇಲ್ಲಿನವರೆಗೂ ನಾನೂ ಶಿವಪೂಜೆಯ ಫಲಾಫಲಗಳ ಸ್ವರೂಪವನ್ನೂ, ಈಶ್ವರನಿಗೆ ಧೂಪದೀಪಾದಿಗಳನ್ನು ಬೆಳಗುವುದರಿಂದ ಆಗುವ ಫಲಾಫಲಗಳನ್ನೂ ತಿಳಿಯಪಡಿಸಿರುವೆನು. ಹೀಗೆ ಶಾಂಭವನ ಗುಣಗಳನ್ನು ನಿನಗೆ ತಿಳಿಯಪಡಿಸುವೆನು. ॥೭೦-೭೧॥

ನಾನಾಯೋನಿಷು ಸಂಚರನ್ ವಿಧಿವಶಾದ್ವಿಪ್ರತ್ವಮೇತ್ಯಾದರಾದ್ವ
ರ್ಣಿತ್ವೇಽಖಿಲವೇದಜಾಲಕಲನಾದ್ದಾರಾಗ್ನಿಹೋತ್ರೇ ರತಃ ।
ಅಗ್ನಿಷ್ಟೋಮಮುಖಾದಿಭಿಃ ಕ್ರತುವರೈರಿಷ್ಟ್ವೇಷ್ಟವಿಶ್ರಾಂತಿಮ್ವ್ಯ
ರ್ಾನಪ್ರಸ್ಥಗತೋ ವಿರಜ್ಯ ವಿಷಯೇ ತ್ಯಕ್ತ್ವೇಷಣೋ ಮಸ್ಕರೀ॥೭೨॥

ಬ್ರಹ್ಮಾತ್ಮೈಕ್ಯರತಿರ್ವಿಮುಕ್ತಿಪದಭಾಗೀಶಾರ್ಚಕೋ ಮುಚ್ಯತೇ ॥೭೩॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಶಿವಪೂಜಾಸಾಹಿತ್ಯಫಲಾಫಲ
ನಿರ್ಣಯೋ ನಾಮ ಸಪ್ತಚತ್ವಾರಿಂಶೋಽಧ್ಯಾಯಃ

---

ನಾನಾವಿಧವಾದ ಜನ್ಮಗಳಲ್ಲಿ ಹುಟ್ಟಿ, ಅಲ್ಲಿನ ಕಷ್ಟಸುಖಗಳನ್ನೆಲ್ಲಾ ಅನುಭವಿಸಿ, ಆಯಾ ಜನ್ಮದ ಪುಣ್ಯಲೇಶಗಳ ಫಲವಾಗಿ ಮಾನವನಾಗಿ ಹುಟ್ಟಿ, ಅಲ್ಲಿಯೂ ಸುಕೃತವನ್ನು ಆರ್ಜಿಸಿ ಕೊನೆಗೆ ಬ್ರಾಹ್ಮಣಜನ್ಮವನ್ನು ತಾಳುವನು. ಆ ಜನ್ಮದಲ್ಲಿಯೂ ವಿಧಿವತ್ತಾಗಿ ಬ್ರಹ್ಮಚರ್ಯವನ್ನು ಪಡೆದು ಆಗ ವೇದೋಪನಿಷದಾದಿ ವಿದ್ಯಾರಾಶಿಯನ್ನು ಸಂಗ್ರಹಿಸಬೇಕು. ಹಾಗೆಯೇ ಗೃಹಸ್ಥನೆನಿಸಿ, ಅಗ್ನಿಹೋತ್ರಾದಿ ಕರ್ಮಗಳಲ್ಲಿ ನಿರತನಾಗಿ ಅಗ್ನಿಷ್ಟೋಮವೇ ಮೊದಲಾದ ಯಾಗಾದಿಗಳನ್ನು ನೆರವೇರಿಸಿ, ಗೃಹಸ್ಥಧರ್ಮದಿಂದ ಈಶ್ವರಪೂಜಾದಿಗಳಲ್ಲಿ ತೊಡಗಿ ಕೆಲವು ಕಾಲ ಕಳೆಯಬೇಕು. ಸ್ವಲ್ಪ ವಯಸ್ಸಾದ ಮೇಲೆ ವಾನಪ್ರಸ್ಥಾಶ್ರಮವನ್ನು ಪಡೆದು ಆಶಾಪಾಶಗಳಿಂದ ದೂರನಾಗಿ ಹಾಗೆಯೇ ಸಂನ್ಯಾಸಾಶ್ರಮವನ್ನು ಹೊಂದಬೇಕು. ಅಲ್ಲಿ ಶಮದಮಾದಿಗಳನ್ನು ಸಾಧಿಸಿಕೊಂಡು, ವೈರಾಗ್ಯದಿಂದ ಜೀವಿಸಿ, ಆತ್ಮಾನುಸಂಧಾನ ಮಾಡಿ ಈಶ್ವರಾರ್ಚನಾದಿಗಳಿಂದ ಶಿವಾನುಗ್ರಹವನ್ನು ಸಂಪಾದಿಸಿ, ತನ್ಮೂಲಕ ಜ್ಞಾನಿಯಾಗಿ, ಆತ್ಮಾನಂದವನ್ನನುಭವಿಸುತ್ತಾ ಶಾಶ್ವತಸುಖವನ್ನು ಕಾಣಬೇಕು. ಇದೇ ನಿಜವಾದ ಬ್ರಾಹ್ಮಣನ ಕರ್ತವ್ಯ, ಎಂದು ಪರಶಿವನು ಪಾರ್ವತಿಗೆ ಬೋಧಿಸಿದನೆಂದು ಸೂತಮಹಾಮುನಿಗಳು ಶೌನಕಾದಿ ಮುನಿವೃಂದಕ್ಕೆ ಶಿವೋಕ್ತಿಯನ್ನು ವಿವರಿಸಿ ಹೇಳಿದರು. ॥೭೨-೭೩॥

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವಪೂಜಾಸಾಹಿತ್ಯ ಫಲಾಫಲಗಳನ್ನು ತಿಳಿಸುವ ನಲವತ್ತೇಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯನಮಃ ||

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಅಷ್ಟಚತ್ವಾರಿಂಶೋಽಧ್ಯಾಯಃ

|| ಶ್ರೀ ಈಶ್ವರ ಉವಾಚ ||

**ಅಥ ಸಂಕ್ಷೇಪತೋ ವಕ್ಷ್ಯೇ ಶಿವಭಕ್ತಾನುಕಂಪಯಾ ।**
**ಅದ್ಯ ಶಾಖೋಪಶಾಖಾರ್ಥಂ ಶಿವಧರ್ಮಸಮನ್ವಿತಂ ||೧||**

**ಕ್ವಚಿದ್ಗಚ್ಛನ್ ಯದಾ ಪಶ್ಯೇಚ್ಛಿವಲಿಂಗಮಪೂಜಿತಂ ।**
**ಗ್ರಾಮೇ ವಾ ನಗರೇ ವಾಪಿ ವಿಪಿನೇ ಪರ್ವತೇ ಪಥಿ ||೨||**

**ನದೀತೀರೇ ಶಿವಕ್ಷೇತ್ರೇ ಶೂನ್ಯಲಿಂಗಾಲಯೇಸ್ಥಿತಂ ।**
**ತದಾ ಸಂಪೂಜ್ಯ ನತ್ವಾ ವಾ ಯೋ ಗಚ್ಛೇತ್ಸಗಣೋಪಮಃ ||೩||**

---

## ನಲವತ್ತೆಂಟನೆಯ ಅಧ್ಯಾಯ

ಪರಶಿವನು ಪಾರ್ವತಿಯೊಡನೆ ಹೀಗೆಂದನು.—" ದೇವಿಯೇ, ನನ್ನ ಭಕ್ತರ ಉದ್ಧಾರಕ್ಕಾಗಿ ಈಗ ಶಿವಧರ್ಮಸ್ವರೂಪವನ್ನು ಶಾಖೋಪಶಾಖೆಯಾಗಿ ನಿನಗೆ ತಿಳಿಯಪಡಿಸಲಿರುವೆನು. ಮಾರ್ಗದಲ್ಲಿ ಪ್ರಯಾಣ ಮಾಡುತ್ತಾ ಗ್ರಾಮ, ನಗರ, ಅರಣ್ಯ, ಪರ್ವತ, ಮಾರ್ಗಮಧ್ಯ, ನದೀತೀರ, ಶಿವಕ್ಷೇತ್ರ, ಶೂನ್ಯಾಲಯ ಮುಂತಾದ ಸ್ಥಳಗಳಲ್ಲಿ ಪೂಜಿತವಾಗದಿರುವ ಶಿವಲಿಂಗವನ್ನು ನೋಡಿದೊಡನೆಯೇ ಅದನ್ನು ಅಲಕ್ಷ್ಯಮಾಡಿ ಹೋಗಬಾರದು. ||೧-೨||

ಶಿವಲಿಂಗವನ್ನು ದರ್ಶನಮಾಡಿದೊಡನೆಯೇ ಅದನ್ನು ಪೂಜಿಸಿ, ನಮಸ್ಕರಿಸಿ, ಯಾವನು ಪ್ರಯಾಣಮಾಡುವನೋ ಅವನು ಗಣಶ್ರೇಷ್ಠನೆನಿಸುವನು. ಶಿವಪ್ರೀತಿ

ಸ್ನಾನನ್ನೈವೇದ್ಯವಸ್ತ್ರಾದ್ಯಮಾದದೀತ ಪ್ರಿಯಾಣಿ ಚ ।
ದತ್ತಂ ಯಚ್ಛಿವಮುದ್ದಿಶ್ಯ ಸರ್ವದಾನಾತ್ಪರಂ ಹಿ ತತ್ ॥೪॥

ದೃಷ್ಟ್ವಾ ಶಿವಾಲಯಂ ದೂರಾತ್ಪ್ರಣಮನ್ ಪಾಪಹೃನ್ನರಃ ।
ಸರ್ವಪಾಪೈಃ ಪ್ರಮುಚ್ಯೇತ ನಾತ್ರ ಕಾರ್ಯಾ ವಿಚಾರಣಾ ॥೫॥

ಚತುಷ್ಪಥಂ ನದೀಶ್ಶೈಲಂ ಶಿವಭಕ್ತಂ ಶಿವಂ ತಥಾ ।
ಹಸ್ತಿಯಾನಾಸನಾಶ್ವೇಭ್ಯಃ ಶಿವಯೋಗಿಯತಿಂ ತಥಾ ॥೬॥

ಅವತೀರ್ಯ ನಮಸ್ಕುರ್ಯಾದ್ದೃಷ್ಟ್ವಾ ಲಿಂಗಂ ದೃಢವ್ರತಃ ।
ತ್ವರಯಾ ಭಕ್ತಿಮಾನ್ ಗಚ್ಛನ್ ಭಾವಯುಕ್ತೋ ಯದಿ ಪ್ರಿಯೇ॥೭॥

ತತ್ರಸ್ಥೋಽಪಿ ನಮಸ್ಕೃತ್ವಾ ಶಿವಲೋಕೇ ಮಹೀಯತೇ ।
ಸೋಷ್ಣೀಷಃ ಕಂಚುಕೀ ವಾಪಿ ಪ್ರವಿಶೇದ್ಯಃ ಶಿವಾಲಯಂ ॥೮॥

ತತ್ಪಾಪೇನ ಪ್ರಮುಚ್ಯೇತ ತ್ವರಾಯುಕ್ತೋ ವಿಭೂತಿಧೃಕ್ ।
ಮೃಗಾಜಮಾಂಸಲಶುನಂ ಕಲಂಜಂ ಗೃಂಜನಂ ತಥಾ ॥೯॥

---

ಗಾಗಿ ಶಿವಲಿಂಗಕ್ಕೆ ಅಭಿಷೇಕ, ನೈವೇದ್ಯ, ವಸ್ತ್ರ ಮುಂತಾದುವುಗಳನ್ನು ಯಾರು ದಾನ ಮಾಡುವರೋ, ಅವರು ಸಮಸ್ತ ಮಹಾದಾನಗಳನ್ನೂ ನಡೆಸಿದಂತಾಗುವುದು ॥೩-೪॥

ಶಿವಾಲಯವನ್ನು ನೋಡಿದೊಡನೆಯೇ ದೂರದಿಂದಲೇ ನಮಸ್ಕರಿಸಿದವನಿಗೆ ಸಕಲ ಪಾಪರಾಶಿಯೂ ನಿವೃತ್ತಿಹೊಂದುವುದು. ನಾಲ್ಕು ದಾರಿಗಳು ಕೂಡಿದ ಚೌಕ, ನದೀ, ಪರ್ವತ, ಈಶ್ವರಭಕ್ತ, ಶಿವಲಿಂಗ, ಶಿವಯೋಗಿ, ಯತಿ ಇವರನ್ನು ಎಲ್ಲಿ ನೋಡಿದರೂ, ತಾನು ಕುಳಿತಿರುವ ಆನೆ, ಕುದುರೆ, ವಾಹನಗಳು ಮುಂತಾದುವುಗಳಿಂದ ಇಳಿದು ಅವರಿಗೆ ನಮಸ್ಕಾರಮಾಡಬೇಕು. ॥೫-೬॥

ಶಿವಲಿಂಗವನ್ನು ನೋಡಿದೊಡನೆ ದೃಢಭಕ್ತಿಯಿಂದಲೂ, ಸೋಹಂಭಾವದಿಂದಲೂ ಕೂಡಿ ಶಿವನನ್ನು ಭಜಿಸಿದವನು ಶಿವಲೋಕವನ್ನು ಪಡೆಯುವನು. ಶಿವಾಲಯಕ್ಕೆ ಪ್ರವೇಶಿಸುವವನು ತಲೆಗೆ ರುಮಾಲನ್ನಿಟ್ಟು, ಕವಚವನ್ನು ಧರಿಸಿ ಹೋಗಬಾರದು. ॥೭-೮॥

ಒಂದು ವೇಳೆ ಹಾಗೆ ಪ್ರವೇಶಿಸಿದರೂ ಒಡನೆಯೇ ವಿಭೂತಿಯನ್ನು ಧರಿಸಿ ಆ ಪಾಪವನ್ನು ಪರಿಹರಿಸಿಕೊಳ್ಳಬೇಕು. ಜಿಂಕೆಗಳ ಮತ್ತು ಆಡಿನ ಮಾಂಸ,

ಆರನಾಲಂ ಚ ಸೌವೀರಮಭಕ್ಷ್ಯಂ ತದ್ವಿವರ್ಜಯೇತ್ ।
ಶಿವಾರ್ಚಕಸ್ಸರ್ವವರ್ಣೋ ಮಧುಮಾಂಸಂ ವಿವರ್ಜಯೇತ್ ॥೧೦॥

ಸರ್ವದಾನೋಗ್ರತಪಸಾಮಶ್ವಮೇಧಾಯುತಸ್ಯ ಚ ।
ಫಲಮಾಪ್ನೋತ್ಯಯತ್ನೇನ ಮತ್ಸ್ಯಮಾಂಸವಿವರ್ಜನಾತ್ ॥೧೧॥

ಸರ್ವದೋಷಾಶ್ರಯಂ ಮದ್ಯಮತಿದೂರೇ ವಿವರ್ಜಯೇತ್ ।
ಕ್ವ ಮದ್ಯಂ ಕ್ವ ಶಿವೇ ಭಕ್ತಿಃ ಕ್ವ ಮಾಂಸಂ ಕ್ವ ಶಿವಾರ್ಚನಂ ॥೧೨॥

ಮಾಂಸಮದ್ಯಪ್ರಸಕ್ತಾನಾಂ ದೂರೇ ತಿಷ್ಠತಿ ಶಂಕರಃ ।
ಸರ್ವತೀರ್ಥೇಷು ಯತ್ಪುಣ್ಯಂ ಸರ್ವಯಜ್ಞೇಷು ಯತ್ಫಲಂ ॥೧೩॥

ತತ್ಫಲಂ ಲಭತೇ ಸರ್ವಂ ಯೋ ಮದ್ಯಂ ಪರಿವರ್ಜಯೇತ್ ।
ಅಭಕ್ಷ್ಯಮಪಿ ಭಕ್ಷ್ಯಂ ಸ್ಯಾದೌಷಧಾರ್ಥೇ ನ್ನಭಿಶ್ಶಿವೇ ॥೧೪॥

ಸರ್ವಶ್ರಾದ್ಧಾನಿ ನಿತ್ಯಾತ್ಮಾ ಶಿವಭಕ್ತೋ ವಿವರ್ಜಯೇತ್ ।
ರಜಸ್ವಲಾದಿಸಂಸ್ಪೃಷ್ಟಿಮಂತ್ಯಜಂ ಶ್ವಾನಸೂಕರಂ ॥೧೫॥

---

ಬೆಳ್ಳುಳ್ಳಿ, ಕಲಂಜ:(ಹೊಂಗೆ ಎಣ್ಣೆ) ಗೃಂಜನ(ಬೆಳ್ಳುಳ್ಳಿ ಗೆಡ್ಡೆ) ಗಂಜೀ, ಮಾದಕದ್ರವ್ಯ ಇವುಗಳನ್ನು ಶಿವಾಲಯದಲ್ಲಿ ಭಕ್ಷಿಸಬಾರದು. ಶಿವಾರ್ಚಕನು ಯಾವಜಾತಿಯವನಾದರೂ ಮದ್ಯಮಾಂಸಾದಿಗಳನ್ನು ಶಿವಾರ್ಚನಕಾಲದಲ್ಲಿಭಕ್ಷಿಸಬಾರದು. ||೯-೧೦||

ಮೀನು ಮಾಂಸಾದಿಗಳ ಭಕ್ಷಣೆಯನ್ನು ದೂರಮಾಡಿದವರು ಸಮಸ್ತ ದಾನಧರ್ಮಗಳ ಫಲವನ್ನೂ, ಹತ್ತುಸಾವಿರ ಅಶ್ವಮೇಧ ಯಾಗಗಳ ಸುಕೃತವನ್ನೂ ಪಡೆಯುವರು. ಅದೇ ರೀತಿ ಮದ್ಯಪಾನವೆಂಬುದು ಸಕಲ ದೋಷಾಶ್ರಯವಾದುದು. ಆದರಿಂದ ಪಾಪಭೂಯಿಷ್ಠವಾದ ಮದ್ಯವೆಲ್ಲಿ? ಮಾಂಸವೆಲ್ಲಿ? ಪರಮಪವಿತ್ರವಾದ ಶಿವಾರ್ಚನೆಯೆಲ್ಲಿ? ||೧೧-೧೨||

ಮಾಂಸ, ಮದ್ಯ ಇವುಗಳಲ್ಲಿ ನಿರತರಾದವರನ್ನು ಈಶ್ವರನು ದೂರದಲ್ಲಿ ನಿಲ್ಲಿಸುವನು. ಮದ್ಯ ತ್ಯಾಗಮಾಡಿದವನಿಗೆ ಸರ್ವತೀರ್ಥಗಳ ಸ್ನಾನಫಲವೂ, ಯಜ್ಞಾಚರಣೆಯ ಸುಕೃತವೂ, ಅನಾಯಾಸವಾಗಿ ಲಭಿಸುವುದು. ರೋಗನಿವಾರಣಾರ್ಥವಾಗಿ ಔಷಧದ ರೂಪದಲ್ಲಿ ತಿನ್ನಬಾರದ ವಸ್ತುಗಳನ್ನೂ ತಿನ್ನಬಹುದು. ಆದರೆ ಮದ್ಯ ಮಾಂಸಗಳನ್ನು ಮಾತ್ರ ಆಗಲೂ ತ್ಯಜಿಸಬೇಕು. ಎಂದು ಶ್ರುತಿಯು

ಅಂತರೇಣ ಸುರಾಮಾಂಸಂ ಇತಿ ಸರ್ವಶ್ರುತೀರಿತಂ ।
ಗರ್ಭಾದಿಸರ್ವಸಂಸ್ಕಾರ ಶ್ಮಶಾನಾದ್ಯೈಕ್ಷ ಭೋಜನಂ ॥೧೬॥

ನ ಗೋಬ್ರಾಹ್ಮಣಭಸ್ಮಾದಿ ಲಿಂಗಚ್ಛಾಯಾಂ ಪದಾ ಸ್ಪೃಶೇತ್ ।
ನ ಲಂಘಯೇತ ನಿರ್ಮಾಲ್ಯಂ ಶಿವಸ್ಯ ಪರಮಾತ್ಮನಃ ॥೧೭॥

ಧಾರಯೇಚ್ಛಿವನಿರ್ಮಾಲ್ಯಂ ಭಕ್ತ್ಯಾ ಲೋಭಾನ್ನ ಧಾರಯೇತ್ ।
ಭಕ್ಷಣಾನ್ನರಕಂ ಗಚ್ಛೇನ್ನವಿಲಂಘ್ಯ ಚ ಮೂಢಧೀಃ ॥೧೮॥

ನ ತಸ್ಯ ಸ್ನಾನನೈವೇದ್ಯಂ ಪ್ರತಿಗೃಹ್ಣಾತಿ ಶಂಕರಃ ।
ತತ್ರ ನೈವೇದ್ಯನಿರ್ಮಾಲ್ಯಂ ಭುಕ್ತ್ವಾ ನೈವ ಪ್ರಪೂಜಯೇತ್ ॥೧೯॥

ಯತ್ರ ನೈವೇದ್ಯನಿರ್ಮಾಲ್ಯಂ ಮಲಭುಕ್ಪೂಜಯೇಚ್ಛಿವಂ ।
ತತ್ಸ್ಪೃಷ್ಟಿಭೀತ್ಯಾ ದೇವೋಽಪಿ ಗಚ್ಛತ್ಯತ್ಯಂತದೂರತಃ ॥೨೦॥

ಬೋಧಿಸುತ್ತಿರುವುದು. ಹಾಗೆಯೇ ಶಿವಾರ್ಚಕನಾದವನು ಗರ್ಭಾಧಾನಾದಿ ಸಕಲ ಸಂಸ್ಕಾರ ಕರ್ಮಗಳಲ್ಲಿಯೂ, ಸ್ಮಶಾನದಲ್ಲಿ ನಡೆಸುವ ಅಂತ್ಯೇಷ್ಟಿಕರ್ಮಗಳಲ್ಲಿಯೂ, ಶ್ರಾದ್ಧಾದಿ ಭೋಜನಗಳಲ್ಲಿಯೂ ಭಾಗವಹಿಸಕೂಡದು. ॥೧೩-೧೪-೧೫॥

ಬಹಿಷ್ಠೆಯಾದ ಹೆಂಗಸರನ್ನು ಸ್ಪರ್ಶಮಾಡುವುದು, ಹಾಗೆಯೇ ಚಂಡಾಲ, ನಾಯಿ, ಹಂದಿ ಮುಂತಾದ ಪ್ರಾಣಿಗಳೊಡನೆ ಸಹವಾಸಮಾಡುವುದು, ಗೋವು, ಬ್ರಾಹ್ಮಣ, ಭಸ್ಮ, ಶಿವಲಿಂಗದ ನೆರಳು ಮುಂತಾದುವುಗಳನ್ನು ಕಾಲಿನಿಂದ ಮೆಟ್ಟು ವುದು, ಪರಶಿವನ ನಿರ್ಮಾಲ್ಯವನ್ನು ದಾಟುವುದು ಇವೇ ಮೊದಲಾದ ಅಧರ್ಮ ಕಾರ್ಯಗಳನ್ನು ಈಶ್ವರಾರಾಧಕರು ದೂರಮಾಡಬೇಕು. ॥೧೬-೧೭॥

ಶಿವನಿರ್ಮಾಲ್ಯವನ್ನು ಭಕ್ತಿಯಿಂದ ಧರಿಸಬೇಕು. ಯಾರೂ ದುರಾಸೆ ಯಿಂದಲೂ ಆಡಂಬರದಿಂದಲೂ ಶಿವನೈವೇದ್ಯಭಕ್ಷಣಾದಿಗಳನ್ನು ನಡೆಸಬಾರದು. ಯಾರೂ ಶಿವಾರಾಧನೆಗೆ ಮೊದಲು ಶಿವಪ್ರಸಾದಾದಿಗಳನ್ನು ಭಕ್ಷಿಸಬಾರದು. ಒಂದು ವೇಳೆ ಮೊದಲು ಶಿವನೈವೇದ್ಯ ವಸ್ತುಗಳನ್ನು ತಾನು ತಿಂದು ಅನಂತರ ಶಿವಾರಾಧನೆ ಮಾಡಿದರೆ ಅದು ಸಫಲವೆನಿಸುವುದು. ಅಂತಹವನು ಕೊಟ್ಟ ಸ್ನಾನ, ದಾನ, ಅರ್ಚನಾದಿಗಳಿಂದ ಶಂಕರನು ತೃಪ್ತನಾಗುವುದಿಲ್ಲ. ॥೧೮-೧೯॥

ಅದರಲ್ಲಿಯೂ ಶಿವನಿರ್ಮಾಲ್ಯವನ್ನು ಶುಚಿಯಾಗಿದ್ದೇ ಭಕ್ಷಿಸಬೇಕು. ಅಶುಚಿ ಯಾಗಿ ಶಿವನೈವೇದ್ಯವನ್ನು ಭಕ್ಷಿಸುವವನನ್ನು ದೇವರು ದೂರದಲ್ಲಿಡುವನು. ಹೇಗೆ

ಅಸಂಸ್ಪೃಶೋ ಭವೇತ್ಸೋಽಪಿ ಯೋ ನಿರ್ಮಾಲ್ಯಮಲಂ ಸ್ಪೃಶೇತ್ ।
ತಸ್ಮಾನ್ನಸಂಸ್ಪೃಶೇಲ್ಲಿಂಗೇ ನರೋ ನಿರ್ಮಾಲ್ಯದೂಷಿತಃ ॥೨೦॥

ನಿರ್ಮಾಲ್ಯಂ ನಿರ್ಮಲೇನೈವ ಭೋಕ್ತವ್ಯಂ ಸ್ಯಾಚ್ಛಿವಸ್ಯ ಹಿ ।
ಸ್ವೇಷ್ಟಲಿಂಗೇ ಚ ಯದ್ದತ್ತಂ ಗಂಧಪುಷ್ಪಫಲಾದಿಕಂ ॥೨೧॥

ಪಾಯಸಾಪೂಪಭಕ್ಷ್ಯಾದಿಭಕ್ಷಯೇಚ್ಛಿವಭಕ್ತಿಮಾನ್ ।
ಸ್ವಾಯಂಭುವೇ ಬಾಣಲಿಂಗೇ ರತ್ನಲಿಂಗೇಷು ಪಾರ್ಥಿವೇ ॥೨೩॥

ವಿನಾಭಿಷೇಕದ್ರವ್ಯಾದಿ ನೈವೇದ್ಯಂ ಭೋಜ್ಯಮೇವ ಹಿ ।
ಧಾತುಜೇಷು ಚ ಲಿಂಗೇಷು ನೈವ ದೋಷೋ ನಿವೇದನೇ ॥೨೪॥

ಮಲೋದರೈರ್ನೈವ ಭೋಜ್ಯಮಶೈವೈರ್ದೂಷಿತಾತ್ಮಭಿಃ ।
ಸ್ತ್ರೀಶೂದ್ರಯತಿಭಿಃ ಪೂಜ್ಯೇ ಮಾನುಷಸ್ಥಾಪಿತೇಽಸ್ಥಿರೇ ॥೨೫॥

ಆವನು ಅಶುಚಿಯಾಗಿ ಶಿವನಿರ್ಮಾಲ್ಯಭಕ್ಷಣೆಗೆ ಅನಧಿಕಾರಿಯೋ, ಆದರಂತೆ ಆವನು ಶಿವಲಿಂಗಸ್ಪರ್ಶಕ್ಕೂ ಅನರ್ಹನಾಗುವನು. ಅಂತಹವನಿಗೆ ಶಿವನಿರ್ಮಾಲ್ಯವು ಪವಿತ್ರ ವಸ್ತುವೆನಿಸಲಾರದು. ॥೨೦ ೨೧॥

ಶಿವನಿರ್ಮಾಲ್ಯವನ್ನು ನಿರ್ಮಲಸ್ವಭಾವದವನಾಗಿಯೇ ಸೇವಿಸಬೇಕು. ತಾನು ಶಿವಲಿಂಗಕ್ಕೆ ಪೂಜಿಸಿದ ಗಂಧ, ಹೂವು, ಹಣ್ಣು ಮುಂತಾದುವುಗಳೂ, ನಿವೇದಿಸಿದ ಪಾಯಸ, ಕಡಬು, ಭಕ್ಷ್ಯ ಭೋಜ್ಯಾದಿಗಳು ಇವೆಲ್ಲವೂ ಶಿವಪ್ರಸಾದ ಗಳೇ. ಸ್ವಯಂಭುವಲಿಂಗ, ಬಾಣಲಿಂಗ, ರತ್ನಲಿಂಗ ಇವುಗಳಿಗೆ ಅರ್ಪಿಸಿದ ಸಕಲ ಪೂಜಾದ್ರವ್ಯಗಳೂ, ಅಭಿಷೇಕ ವಸ್ತುಗಳು ವಿನಾ ಪ್ರಸಾದಗಳೆನಿಸಿ ಭೋಜ್ಯಗಳಾಗು ವುವು. ಆದರೆ ಮೃನ್ಮಯವಾದ ಪಾರ್ಥಿವಲಿಂಗಕ್ಕೆ ಮಾಡಿದ ಅಭಿಷೇಕದ್ರವ್ಯಗಳು ಸೇವಿಸಲು ಅನರ್ಹವಾದವುಗಳು. ಇದಲ್ಲದೆ ಲೋಹಮಯಗಳಾದ ಸಕಲ ಶಿವಲಿಂಗಗ ಳಿಗೂ ಅರ್ಪಿಸಿದ ಸಕಲ ವಸ್ತುಗಳೂ ಪ್ರಸಾದರೂಪಗಳೇ ಆಗುವುವು ॥೨೨-೨೩-೨೪॥

ಕಶ್ಮಲವಾದ ಹೃದಯದಲ್ಲಿದ್ದು ಶಿವನಿರ್ಮಾಲ್ಯವನ್ನು ಭಕ್ಷಿಸಬಾರದು. ಶಿವಪೂಜಕರಲ್ಲದವರು, ಸ್ತ್ರೀಯರು, ಶೂದ್ರರು, ಯತಿಗಳು ಇವರಿಗೆ ಶಿವಪ್ರಸಾದವು ಯೋಗ್ಯವಲ್ಲದ್ದು. ಇದಲ್ಲದೆ ಸಾಮಾನ್ಯ ಮಾನವರಿಂದ ಕಲ್ಪಿತವಾಗಿ ವಿಧಿವತ್ತಾಗಿ ಪ್ರತಿಷ್ಠಿತವಾಗದಿರುವ ಶಿವಲಿಂಗಕ್ಕೆ ನಿವೇದನ ಮಾಡಿದ ಯಾವ ವಸ್ತುಗಳೂ

ನೈವೇದ್ಯಂ ನೈವ ಗೃಹ್ಣೀಯಾತ್ಪ್ರಾಜ್ಞೈಃ ಕಂಠಗತೈರಪಿ ।
ಚಂಡೇಶಾಧಿಕೃತಿರ್ಯತ್ರ ತತ್ರ ನಿರ್ಮಾಲ್ಯದೂಷಣಂ ॥೨೬॥

ಚಂಡೇಶ್ವರಸ್ಯಾಭಿಮತಂ ನಿರ್ಮಾಲ್ಯಂ ಭಕ್ಷಿತಂ ನೃಭಿಃ ।
ತಾನ್ ಸವಂಶಂ ಲೋಹೇನ ನಿರ್ದಹಿಷ್ಯತಿ ಚಂಡಿಕಃ ॥೨೭॥

ಸರ್ವತ್ರಾಧಿಕೃತಃ ಸೋಽಪಿ ಮಹಾತ್ಮಾ ಶಿವಭಕ್ತಿಮಾನ್ ।
ತಸ್ಯೈವ ಜೀರ್ಣಂ ನೈವೇದ್ಯಂ ಮದ್ಧ್ಯಾನನಿಹತಾಶುಭಃ ॥೨೮॥

ನ ಚಂಡೇಶ್ವರತುಲ್ಯೋಽಸ್ತಿ ಭಕ್ತೋಽನ್ಯೋ ಭುವನತ್ರಯೇ ।
ಶಿವನೈವೇದ್ಯಭುಕ್ತ್ಯರ್ಥಂ ಸ ಹಿ ಪಾತ್ರಂ ಶಿವೇ ಸದಾ ॥೨೯॥

ನಾನ್ಯೇಷಾಂ ಗ್ರಹಣೇ ದೇಽಪಿ ಅಧಿಕಾರೋಽಸ್ತಿ ಸರ್ವದಾ ।
ನ ಭೋಜ್ಯಂ ಶಿವನಿರ್ಮಾಲ್ಯಮಶುದ್ಧಾನಾಂ ಶಿವೇ ಸದಾ ॥೩೦॥

ಪ್ರಸಾದರೂಪದಿಂದ ಸೇವಿಸುವುದಕ್ಕೆ ಅರ್ಹವಾದವುಗಳಲ್ಲ. ಎಲ್ಲಿ ಚಂಡೀಶ್ವರನ ಪ್ರತಿಷ್ಠೆಯಿಲ್ಲವೋ ಆ ಸ್ಥಳದಲ್ಲಿರುವ ಶಿವಲಿಂಗದ ನಿರ್ಮಾಲ್ಯಕ್ಕೆ ಪ್ರಾಶಸ್ತ್ಯವಿರುವುದಿಲ್ಲ. ಅಂತಹ ಶಿವಾಲಯದ ಪ್ರಸಾದವನ್ನು ಪ್ರಾಣಹೋಗುವ ಸಮಯದಲ್ಲಿಯೂ ಭಕ್ಷಿಸಬಾರದು. ॥೨೫-೨೬॥

ಚಂಡೇಶ್ವರನ ಅಪ್ಪಣೆಯನ್ನು ಪಡೆದು ತಂದ ಈಶ್ವರ ಪ್ರಸಾದವೇ ಸೇವ್ಯವಾದದ್ದು. ಒಂದು ವೇಳೆ ಚಂಡೀಶ್ವರನ ಅಭಿಮತವಿಲ್ಲದೆ ಪ್ರಸಾದವನ್ನು ಸ್ವೀಕರಿಸುವುದಾದರೆ, ಕೋಪದಿಂದ ಚಂಡೀಶ್ವರನು ವಂಶಸಹಿತನಾಗಿ ಆತನನ್ನು ಸಂಹರಿಸಿಬಿಡುವನು. ಶಿವಭಕ್ತವರ್ಯನಾದ ಚಂಡೀಶ್ವರನು ಶಿವಾಲಯಕ್ಕೆ ನಿಜವಾದ ಅಧಿಕಾರಿಯು. ಅವನ ಅನುಗ್ರಹದಿಂದಲೂ, ಶಿವಧ್ಯಾನಬಲದಿಂದಲೂ, ಶಿವನಿರ್ಮಾಲ್ಯವು ಶರೀರದಲ್ಲಿ ಜೀರ್ಣವನ್ನೈದುವುದು ॥೨೭-೨೮॥

ಚಂಡೀಶ್ವರನಿಗೆ ಸರಿಸಮನಾದ ನನ್ನ ಭಕ್ತನು ಮೂರುಲೋಕದಲ್ಲಿ ಯಾರೂ ಇಲ್ಲ. ಶಿವನೈವೇದ್ಯವನ್ನು ಮೊದಲು ಭಕ್ಷಿಸುವುದಕ್ಕೆ ಅವನೊಬ್ಬನೇ ಯೋಗ್ಯನು. ಮತ್ತೊಬ್ಬರು ಶಿವನೈವೇದ್ಯವನ್ನು ಸ್ವೀಕರಿಸುವುದಕ್ಕೂ, ಭಕ್ಷಿಸುವುದಕ್ಕೂ ಸಮರ್ಥರಾಗಲಾರರು. ಶಿವನಿರ್ಮಾಲ್ಯವನ್ನು ಭುಂಜಿಸಲು ಅಶುದ್ಧಸ್ವಭಾವದವರಿಗೆ ಎಂದಿಗೂ ಅಧಿಕಾರವಿರುವುದಿಲ್ಲ. ॥೨೯-೩೦॥

ನ ವಿಶೇಷತಯಾ ಗ್ರಾಹ್ಯಂ ಭಕ್ಷ್ಯಭೋಜ್ಯಾಂಬುಶಾಂಕರಂ ।
ಯತೋ ಮಲೋದರೈರ್ದೇವಿ ನ ಭೋಜ್ಯಂ ಸ್ಯಾನ್ನಿವೇದಿತಂ ॥೩೦॥

ಅವೈದಿಕೋ ಶೈವೋ ಹಿ ಭುಕ್ತ್ವಾ ನರಕಮೃಚ್ಛತಿ ।
ಮೂರ್ತಯೋಷ್ಟೌ ಶಿವಸ್ಯೈತಾಸ್ತಾಸು ನಿಂದಾಂ ವಿವರ್ಜಯೇತ್ ॥೩೧॥

ಭೂಮಿರಾಪೋನಲೋ ವಾಯುಃ ಖಂ ಬಿಲ್ವಂ ದೀಕ್ಷಿತೋ ದ್ವಿಜಃ ।
ಗುರೌ ಚ ಶಿವಭಕ್ತೇಷು ತಪಸಾಧೂತಪಾಪ್ಮಸು ॥೩೨॥

ಅಷ್ಟಮ್ಯಾದಿಷು ಸರ್ವೇಷು ಭೂತಾದಿಷು ಚ ಪರ್ವಣಿ ।
ಸೋಮವಾರೇಷು ಸರ್ವೇಷು ನಕ್ತಭುಕ್ಪೂರ್ವವರ್ಜಿತಂ ॥೩೪॥

ಏಕಾದಶ್ಯಾಂ ಚ ಕೃಷ್ಣಾಯಾಂ ಶಿವಮಚ್ಯಾರ್ಥ ನಕ್ತಭುಕ್ ।
ಕುರ್ಯಾದ್ವಿಶೇಷತಃ ಪೂಜಾಂ ಶುಕ್ಲಾಯಾಮುಪವಾಸಕೃತ್ ॥೩೫॥

ದ್ವಾದಶ್ಯಾಂ ಕುತ್ಸಿತರ್ಕ್ಷೇ ತು ದುರ್ವಾರೇಷು ಕದಾಚನ ।
ತೈಲಸ್ತ್ರೀಕರ್ಮಾಂಗನಾಭ್ಯಂಗಂ ಪ್ರಯಾಣಂ ಚ ವಿವರ್ಜಯೇತ್ ॥೩೬॥

---

ಶಂಕರನ ಪ್ರಸಾದವೆಂದು ಹೆಚ್ಚಾಗಿ ಭಕ್ಷ್ಯಭೋಜ್ಯಾದಿಗಳನ್ನು ಭಕ್ಷಿಸಲು ಆರಂಭಿಸಬಾರದು. ಏಕೆಂದರೆ ಮಾನವರು ತಮ್ಮ ಉದರದಲ್ಲಿ ಮಲವನ್ನೇ ಹೆಚ್ಚಾಗಿ ಹೊಂದಿರುವರು. ಶಿವಪ್ರಸಾದವು ಮಲವಾಗಿ ಪರಿಣಮಿಸಬಾರದು. ವೈದಿಕಮಾರ್ಗವನ್ನವಲಂಬಿಸದೆ, ಶಿವಾರಾಧಕರಲ್ಲದವರಿಗೆ ಶಿವಪ್ರಸಾದವು ನರಕಪ್ರದವಾಗುವುದು. ಪರಶಿವನ ಅಷ್ಟಮೂರ್ತಿಗಳೆನಿಸಿದ ಭೂಮ್ಯಾದಿ ಎಂಟು ವಸ್ತುಗಳನ್ನು ಯಾವಾಗಲೂ ನಿಂದಿಸಬಾರದು. ॥೩೦-೩೧॥

ಭೂಮಿ, ಅಗ್ನಿ, ಜಲ, ವಾಯು, ಆಕಾಶ, ಬಿಲ್ವ, ಯಜಮಾನ (ಯಾಗ ಮಾಡಿದವನು) ಗುರು ಇವೆಂಟೂ ಶಿವನ ಅಷ್ಟಮೂರ್ತಿಗಳು. ಇವರಲ್ಲದೆ ತಪಸ್ಸಿನಿಂದ ಪವಿತ್ರರಾದ ಈಶ್ವರ ಭಕ್ತರಲ್ಲಿಯೂ ಶಿವಭಾವನೆಯಿಂದಿರಬೇಕು. ಅಷ್ಟಮಿಯೇ ಮೊದಲಾದ ಪರ್ವತಿಥಿಗಳಲ್ಲಿಯೂ, ಎಲ್ಲಾ ಸೋಮವಾರಗಳಲ್ಲಿಯೂ ಹಗಲು, ರಾತ್ರಿ ಶಿವಾರ್ಚನೆಮಾಡಿ ನಕ್ತವ್ರತದಿಂದ ರಾತ್ರಿವೇಳೆ ಭೋಜನ ಮಾಡಬೇಕು. ॥೩೨-೩೪॥

ಕೃಷ್ಣಪಕ್ಷದ ಏಕಾದಶಿಯದಿವಸ ಈಶ್ವರಾರ್ಚನೆಮಾಡಿ ರಾತ್ರಿ ಊಟ ಮಾಡಬಹುದು. ಶುಕ್ಲಪಕ್ಷದ ಏಕಾದಶೀ ದಿನ ಮಾತ್ರ ಉಪವಾಸಮಾಡಬಹುದು.

ಸ್ತ್ರೀದ್ಯೂತಮತ್ಸ್ಯಮಾಂಸಾದ್ಯಂ ಸರ್ವಪರ್ವಸು ವರ್ಜಯೇತ್ ।
ತ್ರಿಕಾಲಂ ವಾ ದ್ವಿಕಾಲಂ ವಾ ಸ್ನಾನಂ ನೈತ್ಯಕಮಾಚರೇತ್ ॥೩೭॥

ರುದ್ರಸೂಕ್ತೈರ್ಮಾರ್ಜನಾನಿ ಕುರ್ವನ್ ಕೂರ್ಚೈರ್ವಿಧಾನತಃ ।
ಶೌಚಂ ಚ ಮೃಜ್ಜಲೈಃ ಕುರ್ಯಾದ್ಗಂಧಲೇಪಕ್ಷಯಾವಧಿ ॥೩೮॥

ಅಸ್ನಾತೋ ಯೋಽಸ್ತು ತೇ ದೇವಿ ಪಾಪಮದ್ಯಾತ್ಸಕೇವಲಂ ।
ಪಂಚಾಕ್ಷರಂ ಚ ಗಾಯತ್ರೀ ರುದ್ರಂ ಚ ಶತಶಾಖಿಗಂ ॥೩೯॥

ಅಜಪನ್ ಕ್ರಿಮಿಭುಕ್ಸ ಸ್ಯಾದಜುಹ್ವಂಛೋಣಿತಂ ಪಿಬೇತ್ ।
ಅನರ್ಚನ್ ಲಿಂಗಮುಸ್ನಾತಃ ಪರೇತೋ ರೇತಪೋ ಭವೇತ್ ॥೪೦॥

ಅಭೋಜಯನ್ ವಾಪ್ಯತಿಥಿಂ ವಿಷ್ಠಾಪೂರ್ಣಮುಖೋ ಭವೇತ್ ।
ತಸ್ಮಾತ್ ಸ್ನಾತ್ವೈವ ಭುಂಜೀತ ಅಶಕ್ತೋ ಭಸ್ಮಭರ್ಜನಃ ॥೪೧॥

---

ದ್ವಾದಶೀ, ದುಷ್ಟನಕ್ಷತ್ರಗಳು, ದುಷ್ಟವಾರಗಳು ಇಂತಹ ದಿನಗಳಲ್ಲಿ ಕ್ಷೌರ, ಸ್ತ್ರೀಸಂಬಂಧ, ಅಭ್ಯಂಗಸ್ನಾನ, ದೂರಪ್ರಯಾಣ ಇವುಗಳನ್ನು ವರ್ಜಿಸಬೇಕು. ಇವು ಆ ದಿನಗಳಲ್ಲಿ ಅಶುಭಫಲವನ್ನು ಕೊಡುವುವು. ॥೩೫-೩೬॥

ಉಳಿದ ಪರ್ವತಿಥಿಗಳಲ್ಲಿ ಸ್ತ್ರೀಸೇವನೆ, ಜೂಜು, ಮತ್ಸ್ಯಮಾಂಸ ಭಕ್ಷಣೆ ಮುಂತಾದುವುಗಳನ್ನು ತ್ಯಜಿಸಬೇಕು. ಪ್ರತಿದಿನವೂ ಎರಡು ಅಥವಾ ಮೂರುವೇಳೆ ನಿತ್ಯಸ್ನಾನಮಾಡಬೇಕು. ಸ್ನಾನಾನಂತರ ರುದ್ರಸೂಕ್ತಪಠನೆಯಿಂದ ಕೂರ್ಚದಲ್ಲಿ ಪ್ರೋಕ್ಷಣೆಮಾಡಿಕೊಳ್ಳಬೇಕು. ಮಣ್ಣಿನಿಂದ ಕೂಡಿದ ನೀರಿನಿಂದ ಹಸ್ತಪಾದಾದಿಗಳಲ್ಲಿ ದುರ್ಗಂಧವು ನಾಶವಾಗುವ ವರೆಗೂ ಶೌಚವನ್ನು ನೆರವೇರಿಸಬೇಕು. ॥೩೭-೩೮

ಸ್ನಾನಮಾಡದೆ, ಶಿವಪಂಚಾಕ್ಷರೀಜಪ, ಗಾಯತ್ರೀಜಪ, ಶತರುದ್ರಾಧ್ಯಾಯ ಪಾರಾಯಣ ಇವುಗಳನ್ನು ನಡೆಸದೆ ಭೋಜನಮಾಡಿದರೆ, ಅದು ಕ್ರಿಮಿಭೋಜನ ಸದೃಶವಾಗುವುದು. ಶಿವೋದ್ದೇಶಕವಾಗಿ ಹೋಮಮಾಡದೆ ಕುಡಿದ ನೀರು ರಕ್ತ ಸದೃಶವಾಗುವುದು. ಶಿವಲಿಂಗಾರಾಧನೆ ಮಾಡದೆ, ಸ್ನಾನಗೈಯ್ಯದೆ ಭಕ್ಷಿಸಿದ ಆಹಾರವು ರೇತಸ್ಸಿಗೆ ಸದೃಶವಾಗುವುದು. ॥೩೯-೪೦॥

ತಾನು ಸ್ನಾನಾದಿಗಳನ್ನು ನೆರವೇರಿಸದೆ ಅತಿಥಿಗಳಿಗೆ ಭೋಜನ ಮಾಡಿಸಿದರೂ ತಾನು ಅಮೇಧ್ಯಭಕ್ಷಣಮಾಡಿದಂತಾಗುವುದು. ಆದ್ದರಿಂದ ಸಕಲ ಕರ್ಮ

ಪ್ರಾತಃ ಸ್ನಾತ್ವಾಂಭಸಾ ಪೂರ್ವಂ ಭಸ್ಮಸ್ನಾನಂ ಸಮಾಚರೇತ್ ।
ಸಂಧ್ಯಾಮುಪಾಸ್ಯ ವಿಧಿವತ್ ವೈತಾನೇ ಜುಹುಯಾಜ್ಜಪೇತ್ ॥೪೨॥

ಪಂಚಾಕ್ಷರಂ ಚ ಗಾಯತ್ರೀಂ ಶ್ರೀರುದ್ರಂ ಪ್ರಣವಂ ತಥಾ ।
ಲಿಂಗೇರ್ಚಯನ್ ಮಹಾದೇವಂ ತ್ರಿಸಂಧ್ಯಂ ಬಿಲ್ವಪಲ್ಲವೈಃ ॥೪೩॥

ದೇವರ್ಷೀನ್ ಪಿತೃಮುಖ್ಯಾಂಶ್ಚ ಸಂತರ್ಪ್ಯಾಧೀತವೇದಕಃ ।
ಕಂದಮೂಲಫಲಾನ್ನೈಶ್ಚ ವರ್ತಯೇದತಿಥಿಪ್ರಿಯಃ ॥೪೪॥

ತ್ರಿಸಂಧ್ಯಾಮಾಚರೇದ್ಯಸ್ತು ಶಿವಾರ್ಚಾಚಾರಮುತ್ತಮಂ ।
ಸಂಧ್ಯಯೋರ್ಭೋಜನಂ ದೇವಿ ಮನ್ನೈವೇದ್ಯಾದಿಶೇಷತಃ ॥೪೫॥

ನ ನಕ್ತಂ ಶೋಷಯೇದ್ದೇಹಂ ಸ್ವೀಯಂ ವಾಪ್ಯತಿಥೇರಪಿ ।
ಏವಮಾಚರತೇ ಧನ್ಯಃ ಶಿವಭಕ್ತಶ್ಶಿವಾರ್ಚಕಃ ॥೪೬॥

ಗಳನ್ನೂ ಸ್ನಾನಮಾಡಿಯೇ ನೆರವೇರಿಸಬೇಕು. ಒಂದುವೇಳೆ ಸ್ನಾನಮಾಡಲು ಅಶಕ್ತನಾದರೆ ಭಸ್ಮಲೇಪನವನ್ನಾದರೂ ಮಾಡಿಕೊಳ್ಳಬೇಕು. ಒಂದು ಸಾರಿ ಪ್ರಾತಃಸ್ನಾನಮಾಡಿ ಅನಂತರ ಭಸ್ಮಸ್ನಾನ ಮಾಡಬೇಕು. ಭಸ್ಮಸ್ನಾನವಾದ ಮೇಲೆ ಸಂಧ್ಯಾವಂದನಾದಿಗಳನ್ನು ಮುಗಿಸಿಕೊಳ್ಳಬೇಕು. ॥೪೦-೪೨॥

ಹಾಗೆಯೇ ಶಿವಪಂಚಾಕ್ಷರೀಮಂತ್ರ, ಗಾಯತ್ರೀಮಂತ್ರ, ರುದ್ರಮಂತ್ರ, ಪ್ರಣವ ಇವುಗಳನ್ನು ಜಪಿಸುತ್ತಾ, ಶಿವಲಿಂಗವನ್ನು ತ್ರಿಕಾಲಗಳಲ್ಲಿಯೂ ಬಿಲ್ವದಳಾದಿಗಳಿಂದ ಪೂಜಿಸುತ್ತಾ, ದೇವ, ಋಷಿ, ಪಿತೃದೇವತೆಗಳಿಗೆ ತರ್ಪಣಾದಿಗಳಿಂದ ತೃಪ್ತಿಪಡಿಸುತ್ತಾ, ಬ್ರಹ್ಮಯಜ್ಞ, ವೈಶ್ವದೇವಾದಿಗಳನ್ನು ನೆರವೇರಿಸುತ್ತಾ, ಅತಿಥಿಸತ್ಕಾರಗೈಯ್ಯುತ್ತಾ ಕಂದಮೂಲಫಲಾದಿಗಳ ಭೋಜನದಿಂದ ತಾನೂ ಜೀವಿಸುತ್ತಿರಬೇಕು. ॥೪೩-೪೪॥

ತ್ರಿಕಾಲಗಳಲ್ಲಿಯೂ ತಪ್ಪದೆ ಶಿವಾರ್ಚನೆ ಮಾಡುವುದು ಉತ್ತಮ ಧರ್ಮವು. ಅಥವಾ ಎರಡು ಸಂಧ್ಯಾಕಾಲಗಳಲ್ಲಾದರೂ ತಪ್ಪದೆ ನಡೆಸಬೇಕು. ರಾತ್ರಿಹೊತ್ತು ಎಂದೂ ಉಪವಾಸದಿಂದಿರಬಾರದು. ಶಿವನೈವೇದ್ಯಶೇಷದಿಂದ ಅತಿಥಿಗಳನ್ನೂ ಸೇವಿಸಿ ತಾನು ಭೋಜನ ಮಾಡಬೇಕು. ಈರೀತಿ ಯಾರು ಶಿವಾರ್ಚನೆಯಿಂದ ಕಾಲ ಕಳೆಯುವರೋ ಅವರೇ ಧನ್ಯರು. ॥೪೫-೪೬॥

ಪಾಪಕಂಚುಕಮುತ್ಸೃಜ್ಯ ಜೀರ್ಣಾಂ ತ್ವಚಮಿವೋರಗಃ ।
ಸ್ವವಂಶಪಿತೃಭಿಸ್ಸಾರ್ಧಂ ಶಿವಲೋಕೇ ಮಹೀಯತೇ ॥೪೭॥

ಕುರ್ಯಾದ್ವ್ರತಂ ಚತುರ್ಮಾಸಂ ಮಹಾಪೂಜಾಪ್ರವರ್ತನಂ ।
ಆಷಾಢೇ ಶ್ರಾವಣೇ ದೇವಿ ಕಾರ್ತಿಕೇ ಮಾರ್ಗಶೀರ್ಷಕೇ ॥೪೮॥

ಏಕಭುಕ್ತೇನ ನಕ್ತೇನ ಮುಕ್ತಿಕಾಮೀ ಶಿವಾರ್ಚಕಃ ।
ಭೋಜಯೇಚ್ಛಿವಭಕ್ತಾಂಶ್ಚ ಶಕ್ತ್ಯಾ ದಾನಂ ಚ ದಾಪಯೇತ್ ॥೪೯॥

ಆಷಾಢೇ ಫಲಪೂಜಾ ಸ್ಯಾದ್ವಸ್ಯ ಕಸ್ಯ ಶತಾಷ್ಟಕಂ ।
ಶ್ರಾವಣೇ ಪಾರಿಜಾತೈಶ್ಚ ಪೂಜಯೇಲ್ಲಕ್ಷಸಂಖ್ಯಯಾ ॥೫೦॥

ಕಾರ್ತಿಕೇ ದೀಪಮಾಲಾಭಿರ್ದ್ಯೋತಯೇಚ್ಛಿವಮಂದಿರಂ ।
ಸೇವಂತೀಭಿರ್ಮಾರ್ಗಶೀರ್ಷೇ ಉಷಸ್ಸಂಪೂಜಯೇಚ್ಛಿವಂ ॥೫೦॥

ವಸೇಚ್ಛಿವಪುರೇ ರಮ್ಯೇ ಚಾತುರ್ಮಾಸ್ಯಾರ್ಚಕೋ ನರಃ ।
ತ್ರಿಸಪ್ತಕುಲಸಂಯುಕ್ತಃ ಸರ್ವಭೋಗಸಮೃದ್ಧಿಭಾಕ್ ॥೫೧॥

---

ಹಾಗೆ ಶಿವಧರ್ಮದಿಂದ ಜೀವಿಸುವವನು ಸರ್ಪವು ಪೊರೆಬಿಡುವಂತೆ ತನ್ನ ಪಾಪಶರೀರವನ್ನು ತೊರೆದು, ತನ್ನ ಪಿತೃವರ್ಗದವರೊಡನೆ ಶಿವಲೋಕವನ್ನೈದುವನು. ಆಷಾಢ, ಶ್ರಾವಣ, ಕಾರ್ತಿಕ, ಮಾರ್ಗಶೀರ್ಷ ಈ ನಾಲ್ಕು ತಿಂಗಳಲ್ಲಿಯೂ ಶಿವಾರ್ಚನೆಯನ್ನು ಅತ್ಯಂತ ವೈಭವದಿಂದ ನಡೆಸಬೇಕು. ॥೪೭-೪೮॥

ಮೋಕ್ಷಾರ್ಥಿಯಾದವನು ರಾತ್ರಿ ಏಕಭುಕ್ತದಿಂದ ಶಿವಾರ್ಚನೆ ಮಾಡಬೇಕು. ತನ್ನ ಶಕ್ತಿಯಿದ್ದಷ್ಟು ಈಶ್ವರ ಭಕ್ತಾದಿಗಳಿಗೆ ದಾನಧರ್ಮಗಳನ್ನು ನಡೆಸಬೇಕು. ಆಷಾಢಮಾಸದಲ್ಲಿ ಯಾವುವಾದರೂ ನೂರೆಂಟು ಹಣ್ಣುಗಳಿಂದ ಶಂಕರನನ್ನು ಪೂಜಿಸಬೇಕು. ಶ್ರಾವಣಮಾಸದಲ್ಲಿ ಲಕ್ಷಪಾರಿಜಾತಪುಷ್ಪಗಳಿಂದ ಪರಶಿವಲಿಂಗವನ್ನು ಆರಾಧಿಸಬೇಕು. ॥೪೯-೫೦॥

ಕಾರ್ತಿಕಮಾಸದಲ್ಲಿ ದೀಪಮಾಲೆಗಳಿಂದ ದೇವಾಲಯವನ್ನು ಬೆಳಗಿಸಬೇಕು. ಮಾರ್ಗಶಿರ ಮಾಸದಲ್ಲಿ ಸೇವಂತಿಕಾಪುಷ್ಪಗಳಿಂದ ಉಷಃಕಾಲದಲ್ಲಿ ಶಿವಾರ್ಚನೆ ಮಾಡಬೇಕು. ಈ ರೀತಿ ನಾಲ್ಕು ತಿಂಗಳಲ್ಲಿಯೂ ಶಿವಾರ್ಚನೆಮಾಡುವವರ್ಳ

ಏವಂ ಪರ್ವೋತ್ಸವೇ ಶ್ರಾದ್ಧೇ ಮಾಸೇಷು ನಿಯತಾಶನೈಃ ।
ಭೋಜಯೇಚ್ಛಿವನೈವೇದ್ಯೈಃ ಶಿವಂ ಸಂಪೂಜ್ಯ ವಾಗ್ಯತಃ ॥೫೩॥

ಪಿತರಸ್ಸರ್ವದೇವಾಶ್ಚ ಶಿವಮಾಶ್ರಿತ್ಯ ಸಂಸ್ಥಿತಾಃ ।
ಪ್ರೀತೇ ಶಿವೇ ತು ತೇ ಸರ್ವೇ ಸುಪ್ರೀತಾಸ್ಸ್ಯುರ್ನ ಸಂಶಯಃ ॥೫೪॥

ವೃಕ್ಷಸ್ಯ ಮೂಲಸೇಕೇನ ಶಾಖಾಃ ಪುಷ್ಯಂತಿ ವೈ ಯಥಾ ।
ಶಿವೇ ಶಿವಾರ್ಚನಪ್ರೀತೇ ತುಷ್ಯತ್ಯಸ್ಯ ವಪುರ್ಜಗತ್ ॥೫೫॥

ನಾನಿಷ್ಟಮಾಚರೇತ್ಕಿಂಚಿತ್ಸರ್ವದೇಹೇಷು ಸರ್ವದಾ ।
ಮನೋವಾಕ್ಕಾಯಜೈರ್ದೋಷೈರ್ನಿಯತಾತ್ಮಾಪಿ ಪಾಪಿಷು ॥೫೬॥

ಯದಿ ಕುರ್ಯಾತ್ಪ್ರಮಾದೇನ ಸೋಷ್ಟಮೂರ್ತೇರನಿಷ್ಟಕೃತ್ ।
ಕಿಂ ಪುನಃಪುಣ್ಯದೇಹೇಷು ಶಿವಾತ್ಮಸು ಮಹೇಶ್ವರಿ ॥೫೭॥

ತನ್ನ ಇಪ್ಪತ್ತೊಂದು ಕುಲಸಹಿತವಾಗಿ ಶಿವಲೋಕವನ್ನು ಸೇರುವರು ಮತ್ತು ಸಕಲ ಭೋಗಭಾಗ್ಯಗಳನ್ನೂ ಪಡೆಯುವರು. ॥೫೧-೫೨॥

ಇದೇ ರೀತಿ ಪರ್ವಕಾಲಗಳಲ್ಲಿ ನಡೆಸುವ ಪಿತೃಶ್ರಾದ್ಧದಿನಗಳಲ್ಲಿಯೂ, ಆಹಾರನಿಯಮದಿಂದ ಕೂಡಿ, ಶಿವನೈವೇದ್ಯವನ್ನು ಬ್ರಾಹ್ಮಣರಿಗೆ ಭೋಜನರೂಪವಾಗಿ ಅರ್ಪಿಸಬೇಕು. ಏಕೆಂದರೆ ಎಲ್ಲ ಪಿತೃದೇವತೆಗಳೂ ಶಿವನನ್ನು ಆಶ್ರಯಿಸಿಕೊಂಡು ನಿಂತಿರುವರು. ಶಿವಪ್ರೀತಿಯಾದರೆ ಎಲ್ಲ ಪಿತೃಗಣಗಳೂ ತೃಪ್ತರಾದಂತೆಯೇ ಸರಿ. ॥೫೩-೫೪॥

ಮರದ ಬುಡಕ್ಕೆ ನೀರು ಹಾಕುವುದರಿಂದ ಮೇಲಿರುವ ಕೊಂಬೆಗಳು ಹೇಗೆ ಪುಷ್ಪಗಳಿಂದ ಕೂಡಿ ನಗುವುವೋ ಅದೇ ರೀತಿ ಶಿವಪ್ರೀತಿಯುಂಟಾದರೆ ತದಾಶ್ರಿತರಾದ ಸಕಲ ದೇವಪಿತೃಗಳೂ ತೃಪ್ತಿಹೊಂದುವರು. ಇದಲ್ಲದೆ ಮಾನವರು ಸಾಮಾನ್ಯವಾಗಿ ಯಾವ ಪ್ರಾಣಿಗಳಿಗೂ ಬಾಧೆಯುಂಟಾಗದಂತೆಯೂ, ಪಾಪಿಗಳಿಗೂ ನೋವುಂಟಾಗದಂತೆಯೂ ಆಹಾರವಿಹಾರಾದಿಗಳಿಂದ ನಿಯಮಬದ್ಧರಾಗಿಯೂ ಜೀವಿಸಬೇಕು. ॥೫೫-೫೬॥

ಯಾವ ಪ್ರಾಣಿಗೆ ಹಿಂಸೆಮಾಡಿದರೂ ಅದರಿಂದ ಶಿವನು ಕುಪಿತನಾಗುವನು. ಹಾಗಿರುವಾಗ ಪುಣ್ಯಾತ್ಮರೂ, ಶಿವಧ್ಯಾನತತ್ಪರರೂ ಆದವರಲ್ಲಿ ದ್ರೋಹವೆಸಗಿದರೆ

ಜ್ಞಾನವೈರಾಗ್ಯಸಂಪನ್ನಂ ಭಸ್ಮನಿಷ್ಠಂ ಜಿತೇಂದ್ರಿಯಂ ।
ವಶ್ಯಾತ್ಮಾನಂ ಯತಾತ್ಮಾನಂ ಶಾಂತಂ ದಾಂತಂ ತಪಸ್ವಿನಂ ॥೫೮॥

ಭೋಜಯೇಚ್ಛಾಂಭವಂ ದೇವಿ ವೇದವೇದಾಂತಪಾರಗಂ ।
ಪಂಕ್ತಿಪಾವನಮೂರ್ಧನ್ಯಂ ಶ್ರಾದ್ಧೇಷು ಶಿವಯೋಗಿನಂ ॥೫೯॥

ಯದೀಶ್ವರಾದಿತತ್ತ್ವಾನಾಂ ಪರಿಜ್ಞಾತಾರಮೀಶ್ವರಿ ।
ನಾನಿಷ್ಟಂ ದ್ವೇಷ್ಟಿ ಸಂಪ್ರಾಪ್ತಂ ನಚೇಷ್ಟಮಭಿನಂದತಿ ॥೬೦॥

ಭಾವೇ ಸಾಧರ್ಮ್ಯವೈಧರ್ಮ್ಯಮೇತದ್ಜ್ಞಾನಸ್ಯ ಲಕ್ಷಣಂ ।
ವರ್ಣೇಷ್ವಪ್ಯಧಿಕೋ ವಿಪ್ರೋ ವಿಪ್ರಾದ್ವೇದವಿದುತ್ತಮಃ ॥೬೧॥

ವೇದವಿದ್ಭ್ಯೋಽರ್ಥವಿಚ್ಛ್ರೇಷ್ಠಸ್ತಸ್ಮಾದ್ಯಾಜೀ ವಿಶಿಷ್ಯತೇ ।
ತತೋಽಪಿ ಸತ್ರಯಾಜೀಸ್ಯಾದ್ವರ್ಣಿಭ್ಯೋಽಪ್ಯಧಿಕೋ ಗೃಹೀ ॥೬೨॥

---

ಶಿವದ್ರೋಹವಾಗುವುದೆಂಬುದನ್ನು ಮತ್ತೆ ಹೇಳಬೇಕೆ ? ಜ್ಞಾನವೈರಾಗ್ಯಾದಿಗಳಿಂದ ಕೂಡಿ ಭಸ್ಮಧಾರಿಯೂ, ಜಿತೇಂದ್ರಿಯನೂ, ಆತ್ಮಜ್ಞಾನಿಯೂ, ಶಮದಮಾದಿ ಸದ್ಗುಣಗಳಿಂದ ಭರಿತನೂ ಆಗಿರುವ ಶಾಂಭವನಿಗೆ ಶ್ರಾದ್ಧಕಾಲದಲ್ಲಿ ಭೋಜನಾದಿಗಳಿಂದ ತೃಪ್ತಿಯನ್ನುಂಟುಮಾಡಬೇಕು. ವೇದವೇದಾಂತಪಾರಂಗತನಾದ ಶಾಂಭವನೇ ಸಹಪಂಕ್ತಿ ಭೋಜನಕ್ಕೆ ಶ್ರೇಷ್ಠನೆನಿಸಿದವನು. ಅವನೇ ನಿಜವಾಗಿ ಶಿವಸ್ವರೂಪಿಯಾದ ಯೋಗಿಯು. ॥೫೭-೫೮-೫೯॥

ಈಶ್ವರತತ್ತ್ವವನ್ನು ಚೆನ್ನಾಗಿ ಅರಿತವನು ಎಂತಹ ದ್ವೇಷಿಯಾಗಿದ್ದರೂ ಅವನನ್ನು ದ್ವೇಷಿಸಬಾರದು ಅವನು ತನಗೆ ಪ್ರಿಯನಾಗಿದ್ದರೆ ಅವನನ್ನು ವಿಶೇಷವಾಗಿ ಸ್ತುತಿಸಲೂಬಾರದು ಶಿವಭಾವನೆಯು ಪೂಜ್ಯವಸ್ತುಗಳಲ್ಲಿ ಸಾಧರ್ಮ್ಯವೈಧರ್ಮ್ಯ ರಹಿತವಾಗಿರಬೇಕು. ಅಂದರೆ ಇಷ್ಟಾನಿಷ್ಟರೂಪವಾದ ಇತರ ಭಾವನೆಗಳಿಗೆ ಈಶ್ವರಭಾವನೆಯು ಅಧೀನವಾಗಿಯೂ ಇರಕೂಡದು. ವಿರುದ್ಧವಾಗಿಯೂ ಇರಕೂಡದು. ಇನ್ನು ಜಾತಿವ್ಯವಸ್ಥೆಯಲ್ಲಿ ಸಕಲ ಜಾತಿಗಳಿಗಿಂತಲೂ ವಿಪ್ರಜಾತಿಯು ಶ್ರೇಷ್ಠವಾದುದು. ಅದರಲ್ಲಿ ವೇದಜ್ಞನು ಮತ್ತೂ ಶ್ರೇಷ್ಠನು. ॥೬೦-೬೧॥

ವೇದಾಧ್ಯಯನ ಮಾಡಿದವನಿಗಿಂತಲೂ ಅದರ ಅರ್ಥವನ್ನು ಅರಿತವರು ಶ್ರೇಷ್ಠರು. ಅವರಿಗಿಂತ ಯಾಗವನ್ನು ಮಾಡಿದವರು ಯೋಗ್ಯರು. ಸತ್ರವೆಂಬ ಯಾಗಮಾಡಿದವರು ಎಲ್ಲರಿಗೂ ದೊಡ್ಡವರು. ಬ್ರಹ್ಮಚಾರಿಗಳಿಗಿಂತ ಗೃಹಸ್ಥನೂ,

ವನೀ ಗೃಹಿಭ್ಯೋಽಭ್ಯಧಿಕಃ ಸಂನ್ಯಾಸೀ ಚ ತತೋಽಧಿಕಃ ।
ತತೋ ವೇದಾಂತವಿಜ್ಜ್ಯೇಷ್ಠೋ ರುದ್ರಜಾಪೀ ತತೋಽಧಿಕಃ ॥೬೩॥

ಸರ್ವೇಷಾಮೇವ ವರ್ಣಾನಾಂ ತ್ರೈವರ್ಣಪುರುಷಾ ನರಾಃ ।
ಪುರುಷೇಭ್ಯೋ ದ್ವಿಜಶ್ರೇಷ್ಠಸ್ತತೋ ನ್ಯೈ ಗ್ರಂಥಪಾರಗಃ ॥೬೪॥

ಗ್ರಂಥಜ್ಞಾದ್ವೇದವಿದ್ವಾಂಸಸ್ತೇಭ್ಯಸ್ತತ್ತ್ವಾರ್ಥಚಿಂತಕಃ ।
ತತ್ತ್ವವಿದ್ಭ್ಯೋ ಯೋಗವಿಜ್ಞೋ ವಿಶಿಷ್ಟ ಇತಿ ಮೇ ಮತಿಃ ॥೬೫॥

ವೇದಾಂತವಿದ್ಭ್ಯಃ ಕೋಟಿಭ್ಯೋ ವಿಶಿಷ್ಟಾಶ್ಶಿವಯೋಗಿನಃ ।
ಯೋಗಜ್ಞಾ ಯೋಗನಿಷ್ಠಾಶ್ಚ ಪಿತರೋ ಯೋಗಸಂಭವಾಃ ॥೬೬॥

ಭುಂಕ್ತೇ ಪ್ರೀಣಂತಿ ತೇ ತಸ್ಮಾದ್ದ್ವಿಶಿಷ್ಟಾಃ ಶಿಪಿಪಿಷ್ಟಕಾಃ ।
ಸರ್ವಯಜ್ಞತಪೋದಾನೈಃ ಕೃತೈಸ್ಸಾಂಗೈಶ್ಚ ಯತ್ಫಲಂ ॥೬೭॥

---

ಗೃಹಸ್ಥನಿಗಿಂತ ವಾನಪ್ರಸ್ಥಾಶ್ರಮಿಯೂ, ಅವನಿಗಿಂತ ಸಂನ್ಯಾಸಿಯೂ, ಅವನಿಗಿಂತ ಆತ್ಮಜ್ಞಾನಿಯೂ, ಎಲ್ಲರಿಗಿಂತ ರುದ್ರಜಪಮಾಡುವವನೂ ಶ್ರೇಷ್ಠನೆನಿಸುವನು. ||೬೧-೬೩||

ಚಾತುರ್ವರ್ಣ್ಯದವರಲ್ಲಿ ಮೊದಲಿನ ಮೂರುವರ್ಗದವರು ಉತ್ತಮರು. ಅವರೇ ದ್ವಿಜರು. ಅವರಲ್ಲಿ ಗ್ರಂಥಗಳನ್ನು ಹೆಚ್ಚಾಗಿ ಅರಿತವನು ಶ್ರೇಷ್ಠನು. ವೇದವನ್ನು ಅಧ್ಯಯನಮಾಡಿದವನು ಮತ್ತೂ ಶ್ರೇಷ್ಠನು. ತತ್ತ್ವಾರ್ಥವನ್ನು ಚಿಂತಿಸುವವನು ಅವನಿಗಿಂತ ಉತ್ತಮನು. ಯೋಗಮಾರ್ಗವನ್ನು ಅವಲಂಬಿಸಿದ ಯೋಗಿಯು ಎಲ್ಲರಿಗಿಂತ ಶ್ರೇಷ್ಠನು ಎಂಬುದೇ ನನ್ನ ಅಭಿಪ್ರಾಯ. ||೬೪-೬೫||

ವೇದಾಂತವನ್ನು ಅರಿತ ಕೋಟಿಜನರಿಗಿಂತ ಶಿವಯೋಗಿಯು ಶ್ರೇಷ್ಠನೆನಿಸುವನು. ಪಿತೃದೇವತೆಗಳೆಲ್ಲರೂ ಯೋಗಮಾರ್ಗವನ್ನು ತಿಳಿದವರು. ಮತ್ತು ಯೋಗಾಭ್ಯಾಸದಲ್ಲಿ ನಿರತರಾದವರು, ಯೋಗದಿಂದಲೇ ಜನಿಸಿದವರು. ಅವರು ಶ್ರಾದ್ಧದಲ್ಲಿ ತೃಪ್ತರಾಗಬೇಕಾದರೆ ಶಿವಯೋಗಿಗಳು ಶ್ರಾದ್ಧದಲ್ಲಿ ಭೋಜನಮಾಡಬೇಕು. ಯಜ್ಞ, ತಪಸ್ಸು, ದಾನಾದಿಗಳು, ಇವುಗಳನ್ನು ವಿಧಿವತ್ತಾಗಿ ನಡೆಸಿದರೆ ಯಾವ ಫಲವು ಲಭಿಸುವುದೋ ಅಂತಹ ಸುಕೃತವು ಒಬ್ಬ ಶಿವಯೋಗಿಗೆ ಭೋಜನಮಾಡಿಸುವುದರಿಂದ ಲಭಿಸುವುದು. ||೬೬-೬೭||

ಶಾಂಭವೋ ವೇದವಿದ್ವಿಪ್ರೋ ಭಸ್ಮನಿಷ್ಠೋತ್ರ ಭುಜ್ಯತೇ ।
ನ ತೇನ ಕಿಂ ಗೃಹಸ್ಥೇನ ಪ್ರಾಪ್ತಂ ಕ್ರತುಶತೈರಪಿ ॥೬೮॥

ತ್ರೈವಿದ್ಯಾವೇದಿನಃ ಶ್ರೇಷ್ಠಾ ರಾಶತಾಧ್ಯಾಯಿನೋಽಪಿ ಚ ।
ತತೋಽಪಿ ಯಾಜುಷಾ ಶ್ರೇಷ್ಠಾ ಸ್ತತೋ ವಾಜಸನೇಯಿನಃ ॥೬೯॥

ಸಾಮ್ನಾಂ ಪದಸ್ವರಾಭಿಜ್ಞಾ ಛಂದೋಗಾಶ್ಚ ತತೋಽಂಬಿಕೇ ।
ತತೋಽಥರ್ವವಿದಶ್ಶ್ರೇಷ್ಠಾಸ್ತತೋ ಮಂತ್ರವಿದಸ್ಸ್ಮೃತಾಃ ॥೭೦॥

ಕದ್ರುದ್ರಾಜಾಪ್ಯನಿರತಾಃ ಶತರುದ್ರಂ ಚ ಜಾಪಕಾಃ ।
ಭಸ್ಮನಿಷ್ಠಾ ರುದ್ರಜಾಪ್ಯನಿರತಾಃ ಪಾಪವರ್ಜಿತಾಃ ॥೭೧॥

ತ್ರಿಮಧುತ್ರಿಸುಪರ್ಣಶ್ಚ ವಾಮದೇವಾಶ್ಚ ಸಾಮಗಾಃ ।
ಜ್ಯೇಷ್ಠಾರ್ಚನರತೋ ರಾಜಾ ತಥಾ ವೈ ಜ್ಯೇಷ್ಠಸಾಮಗಃ ॥೭೨॥

ಷಡಂಗವಿತ್ತತೋ ದೇವಿ ತತೋಽಪನಿಷತ್ಪರಃ ।
ಬೃಹಜ್ಜಾಬಾಲನಿರತಃ ಪುರಾಣೇಷು ಚ ನಿಷ್ಠಿತಃ ॥೭೩॥

ಶಿವಾರಾಧಕನಾಗಿ ವೇದವನ್ನರಿತ ಭಸ್ಮಧಾರಿಯಾದ ವಿಪ್ರನನ್ನು ಯಾವನು ತನ್ನ ಮನೆಯಲ್ಲಿ ಭೋಜನಾದಿಗಳಿಂದ ತೃಪ್ತಿಪಡಿಸುವನೋ, ಅಂತಹವನಿಗೆ ನೂರು ಯಜ್ಞಾಚರಣೆಯ ಫಲವು ಲಭಿಸುವುದು. ಋಗ್ಯಜುಸ್ಸಾಮಗಳೆಂಬ ವೇದತ್ರಯ ಗಳಲ್ಲಿ ಯಾವ ವೇದವನ್ನು ಅಧ್ಯಯನಮಾಡಿದವರಾದರೂ ಶ್ರೇಷ್ಠರೇ ಸರಿ. ಅವರಲ್ಲಿಯೂ ಯಜುರ್ವೇದವನ್ನು ಪಠಿಸಿದವರೂ, ಅವರಲ್ಲಿಯೂ ವಾಜಪೇಯ ಯಾಗಮಾಡಿದವರೂ ಮತ್ತೂ ಶ್ರೇಷ್ಠರು. ॥೬೮-೬೯॥

ಸಾಮವೇದದಲ್ಲಿ ಪದ, ಸ್ವರ, ಛಂದಸ್ಸು ಇವೇ ಮೊದಲಾದುವುಗಳನ್ನು ತಿಳಿದವರೂ, ಹಾಗೆಯೇ ಅಥರ್ವಣವೇದದ ಮಂತ್ರಗಳನ್ನು ಅರಿತವರೂ 'ಕದ್ರುದ್ರಾಯ' ಎಂಬ ಮಂತ್ರಾದಿಯಾದ ರುದ್ರಸೂಕ್ತವನ್ನು ಜಪಿಸುವವರೂ, ಶ್ರೀ ರುದ್ರಪಾರಾಯಣ ಮಾಡುವವರೂ, ಭಸ್ಮಧಾರಿಗಳಾಗಿ ಸದಾ ರುದ್ರಪಾರಾಯಣಾ ಸಕ್ತರೂ ಆದವರು ಪಾಪವರ್ಜಿತರಾಗುವರು. ॥೭೦-೭೧॥

ತ್ರಿಸುಪರ್ಣಸೂಕ್ತವನ್ನೂ, ವಾಮದೇವಸೂಕ್ತವನ್ನೂ ಪಾರಾಯಣಮಾಡು ವವರೂ, ಜ್ಯೇಷ್ಠಸಾಮವನ್ನು ಪಠಿಸುವವರೂ, ವೇದಾಂಗಗಳೆನಿಸಿದ ಷಟ್‌ಶಾಸ್ತ್ರ

ಇತಿಹಾಸವಿದಶ್ಶ್ರೇಷ್ಠಾಃ ತತೋ ಧರ್ಮವಿದುತ್ತಮಃ ।
ತಥಾಽಥರ್ವಶಿರೋ ವೇತ್ತಾ ಶಿಖಾಧ್ಯಾಯೀ ತತೋಽಪಿ ಹಿ ॥೭೪॥

ಕೈವಲ್ಯೋಪನಿಷದ್ಧ್ಯಾನಧ್ಯಾಯೀ ನೋದ್ಯ ವಿಶಿಷ್ಯತೇ ।
ಕಾಲಾಗ್ನಿರುದ್ರಜಾಪೀ ಸ್ಯಾತ್ತತೋ ದೇವಿ ವಿಶಿಷ್ಯತೇ ॥೭೫॥

ತತಶ್ಶಿವರಹಸ್ಯಜ್ಞಃ ಶಾಂಭವಶ್ರೇಷ್ಠ ಉಚ್ಯತೇ ।
ವಶ್ಯೇಂದ್ರಿಯಃ ಪ್ರಸನ್ನಾತ್ಮಾ ಯೋ ನ ದ್ವೇಷ್ಟಿ ನ ಕಾಂಕ್ಷತೇ ॥೭೬॥

ಶಬ್ದಾದಿವಿಷಯಾನ್ ಭೋಗ್ಯಾನ್ ಯೋ ಜಾನಾತಿ ಗುಣಾಗುಣಂ ।
ಜ್ಞಾನವೈರಾಗ್ಯಸಂಪನ್ನಃ ಪ್ರಸನ್ನಸ್ಸಂಯತೇಂದ್ರಿಯಃ ॥೭೭॥

ಯುಕ್ತೋಷ್ಟಾಂಗೇನ ಯೋಗೇನ ಸ ಜ್ಞಾನೀ ಶ್ರೇಷ್ಠ ಉಚ್ಯತೇ ।
ಶಿವಧರ್ಮೋದ್ಭವಂ ಜ್ಞಾನಂ ಜ್ಞಾನಾದ್ವೈರಾಗ್ಯಸಂಭವಃ ॥೭೮॥

ಜ್ಞಾನವೈರಾಗ್ಯಯುಕ್ತಸ್ಯ ಶಿವಯೋಗಃ ಪ್ರವರ್ತತೇ ।
ಶಿವಯೋಗಾಚ್ಚ ಸರ್ವಜ್ಞಃ ಪರಿಪೂರ್ಣಸ್ಥಿರೋ ಭವೇತ್ ॥೭೯॥

ಗಳನ್ನು ಅರಿತಿರುವವರೂ, ಉಪನಿಷತ್ತುಗಳನ್ನು ಪಠಿಸುವವರೂ, ಪುರಾಣಾದಿಗಳನ್ನು ಓದಿದವರೂ ಶ್ರೇಷ್ಠರೆನಿಸುವರು. ॥೭೨-೭೩॥

ಇತಿಹಾಸ, ಧರ್ಮಶಾಸ್ತ್ರ, ಅಥರ್ವಶೀರ್ಷ, ಕೈವಲ್ಯೋಪನಿಷತ್ತು ಮುಂತಾದ ಉಪನಿಷತ್ತುಗಳನ್ನು ಪಠಿಸಿದವರು, ಶಿವಧ್ಯಾನಪರನಾದವರು ಇವರೆಲ್ಲರೂ ನನಗೆ ಪ್ರಿಯರೆನಿಸಿದವರು. ಕಾಲಾಗ್ನಿರುದ್ರೋಪನಿಷತ್ತನ್ನು ಪಠಿಸಿದವರಂತೂ ನನಗೆ ವಿಶೇಷ ಪ್ರಿಯರೆನಿಸುವರು. ॥೭೪-೭೫॥

ಶಿವರಹಸ್ಯವನ್ನು ಸಂಪೂರ್ಣವಾಗಿ ಅರಿತವನು ಶಾಂಭವಶ್ರೇಷ್ಠನೆನಿಸುವನು. ಜಿತೇಂದ್ರಿಯನೂ, ಪ್ರಸನ್ನಾತ್ಮನೂ, ಸರ್ವರನ್ನೂ ಪ್ರೀತಿಸುವವನೂ, ಆಶಾರಹಿತನೂ ಶಬ್ದಾದಿ ಇಂದ್ರಿಯವಿಷಯಗಳ ಗುಣಾಗುಣಗಳನ್ನರಿತವನೂ, ಜ್ಞಾನವೈರಾಗ್ಯ ಸಂಪನ್ನನೂ, ಪ್ರಸನ್ನನಾಗಿ ಇಂದ್ರಿಯಗಳಿಗೆ ವಶನಾಗದವನೂ ನನಗೆ ಪ್ರಿಯತಮರೆನಿಸುವರು. ॥೭೬-೭೭॥

ಅಷ್ಟಾಂಗಯೋಗಾಭ್ಯಾಸದಿಂದ ಕೂಡಿದವನು ಶ್ರೇಷ್ಠನೆನಿಸುವನು. ಶಿವಧರ್ಮಾಚರಣೆಯಿಂದ ಜ್ಞಾನವೂ, ಜ್ಞಾನದಿಂದ ವೈರಾಗ್ಯವೂ, ಉಂಟಾಗುವುದು.

ಸ್ವಾತ್ಮನ್ಯೇವಾಸ್ಥಿತಃ ಸರ್ವಃ ಶಿವವತ್ಸರ್ವಗೋ ಭವೇತ್ ।
ಸ್ವಾತ್ಮಾರಾಮಸ್ತ್ವಸಂಗಶ್ಚ ಸ ಬ್ರಹ್ಮೈವ ನ ಸಂಶಯಃ ॥೪೦॥

ತಾದೃಶಂ ಭೋಜಯಿತ್ವಾ ತು ಜಗದ್ಭೋಜ್ಯಫಲಂ ಲಭೇತ್ ।
ಯೋ ವಾ ದೋಷವಿನಿರ್ಮುಕ್ತಾಂ ಗಾಂ ಚ ದದ್ಯಾತ್ಪಯಸ್ವಿನೀಂ॥೪೧॥

ಘಂಟಾಭರಣವಸ್ತ್ರಾಢ್ಯಾಂ ಸವತ್ಸಾಂ ಚ ದೃಢಾಂಗಕಾಂ ।
ದದ್ಯಾದ್ಗೋದಾನಮುತ್ಕೃಷ್ಟಂ ಶಾಂಭವೇಷು ನಿಯತಾತ್ಮಸು ॥೪೨॥

ಮಧ್ಯಮೋತ್ತಮವಸ್ತ್ರಾಣಿ ಯೋ ದದ್ಯಾತ್ತು ನವಾನಿ ಚ ।
ಶಿವಭಕ್ತೇಷು ವಸ್ತ್ರಾಣಿ ಯಾವತ್ತತ್ತಂತುಸಂಖ್ಯಯಾ ॥೪೩॥

ತಾವದ್ವರ್ಷಶತಂ ದೇವಿ ಸ್ವರ್ಗಲೋಕೇ ಮಹೀಯತೇ ।
ಬ್ರಹ್ಮಚರ್ಯಸಮೋಪೇತಃ ಶಾಂತಃ ಶೀಲಪರಾಯಣಃ ॥೪೪॥

ಅಹೋರಾತ್ರಂ ನ ಭುಂಜೀತ ಉಪವಾಸಸ್ಯ ಲಕ್ಷಣಂ ।
ಅಹಸ್ಸು ಚೋಪೋಷ್ಯೈವಾದ್ಯಂ ಸಾಯಂ ಯಾಮೇ ಚ ಭೋಜ
ಯೇತ್ ॥೪೫॥

---

ಜ್ಞಾನವೈರಾಗ್ಯಗಳಿಂದ ಕೂಡಿರುವುದೇ ಶಿವಯೋಗವೆನಿಸುವುದು. ಶಿವಯೋಗಾಚರಣೆಯಿಂದ ಸರ್ವಜ್ಞತ್ವವೂ, ಸ್ಥಿರಜೀವಿತ್ವವೂ ಲಭಿಸುವುವು. ॥೩೮-೩೯॥

ಆತ್ಮಮಾರ್ಗದಲ್ಲಿ ಯಾವನು ಸದಾ ನಿರತನಾಗಿರುವನೋ ಅವನು ಶಿವನಂತೆ ಸರ್ವವ್ಯಾಪಿಯೆನಿಸುವನು. ಅವನು ಸ್ವಾತ್ಮಾರಾಮನಾಗಿಯೂ, ಸಂಗವಿವರ್ಜಿತನಾಗಿಯೂ ಇದ್ದು ಪರಬ್ರಹ್ಮಸ್ವರೂಪನೆನಿಸುವನು. ಅಂತಹವನಿಗೆ ಒಂದುಸಾರಿ ಭೋಜನ ಮಾಡಿಸಿದರೆ ಜಗತ್ತಿಗೇ ಊಟಮಾಡಿಸಿದ ಪುಣ್ಯವು ದೊರೆಯುವುದು. ॥೪೦-೪೧॥

ಸಕಲ ಗುಣಗಳಿಂದ ಕೂಡಿ ಘಂಟಾಭರಣಗಳಿಂದಲೂ, ಕರುವಿನಿಂದಲೂ, ಕೂಡಿದ ಹಾಲುಕರೆಯುವ ಹಸುವನ್ನು ದಾನಮಾಡುವವನೂ ಉತ್ತಮ ಶಾಂಭವನೆನಿಸುವನು. ಉತ್ತಮವಾದ ಹೊಸವಸ್ತ್ರಗಳನ್ನು ಶಿವಪ್ರೀತ್ಯರ್ಥವಾಗಿ ದಾನಮಾಡುವವರೂ ಉತ್ತಮರೆನಿಸುವರು. ಹಾಗೆ ವಸ್ತ್ರದಾನಮಾಡಿದರೆ ಆ ವಸ್ತ್ರದಲ್ಲಿ ಎಷ್ಟು ದಾರಗಳಿರುವುವೋ ಅಷ್ಟು ವರ್ಷಪರ್ಯಂತ ಅವರಿಗೆ ಸ್ವರ್ಗವಾಸವು ಲಭಿಸುವುದು.॥೪೨-೪೩-೪೪॥

ಬ್ರಹ್ಮಚರ್ಯದಿಂದಿರುತ್ತಾ, ಶಾಂತನೂ, ಸದಾಚಾರನೂ ಆಗಿ ಅಹೋ ರಾತ್ರಿ ಪೂರ್ತಿಯಾಗಿ ಒಂದುದಿನ ಊಟಮಾಡದಿದ್ದರೆ ಅದನ್ನು ಉಪವಾಸವೆನ್ನುವರು.

ತನ್ನಕ್ತಮಿತಿ ಚ ಪ್ರೋಕ್ತಂ ಛಾಯಾನಕ್ತಂ ದಿನಾಂತಿಮೇ ।
ಅಯಾಚಿತಂ ಕೇನಚಿದ್ದತ್ತಂ ಯದ್ಭುಜ್ಯತೇ ಹಿ ತತ್ ॥೮೬॥

ಯದೋಪವಸ್ಯೇದ್ದೇಹಾದಿ ಆಪ್ತೋಮೂಲಂ ಘೃತಂ ಪಯಃ ।
ಸಕ್ತೂನ್ ಪ್ರಾಶ್ಯ ನ ದೂಷ್ಯೇತ ವಚನಾದ್ಬ್ರಾಹ್ಮಣಸ್ಯ ಹಿ ॥೮೭॥

ಚತ್ವಾರಿಂಶತ್ಸಮಾಯುಕ್ತಂ ಪಿಂಡಾನಾಂ ಯೋಽಶ್ನುತೇ ದಿವಿ ।
ಅದ್ಯಾನ್ಮಾಂಸಂ ಹವಿಃ ಕ್ಷಾರವರ್ಜಿತಂ ಸೋಽಶ್ನುತೇ ವ್ರತಂ ॥೮೮॥

ಚಾಂದ್ರಾಯಣಂ ತದ್ವಿಜ್ಞೇಯಂ ಹ್ರಾಸವೃದ್ಧ್ಯಾತು ಪಕ್ಷಯೋಃ ।
ಶಿಶುಚಾಂದ್ರಾಯಣಂ ದೇವಿ ಪಕ್ಷಯೋಃ ಶುಕ್ಲಕೃಷ್ಣಯೋಃ ॥೮೯॥

ಕುರ್ವನ್ ಕೃಚ್ಛ್ರಂ ಶಿವಂ ಪೂಜ್ಯ ಲಭತೇ ಫಲಮುತ್ತಮಂ ॥೯೦॥

---

ಹಗಲು ಪೂರ್ತಿ ಉಪವಾಸದಿಂದಿದ್ದು ಸಾಯಂಕಾಲವಾದಮೇಲೆ ಪ್ರಥಮಯಾಮದಲ್ಲಿ ಭೋಜನಮಾಡಿದರೆ ಅದಕ್ಕೆ ನಕ್ತವ್ರತವೆಂದು ಹೆಸರು. ಒಂದುವೇಳೆ ದಿನದ ಕೊನೆಯ ಯಾಮದಲ್ಲಿಯೇ ಊಟಮಾಡುವುದಾದರೆ ಅದಕ್ಕೆ ಛಾಯಾನಕ್ತವೆಂದು ಹೆಸರು. ಆ ದಿನದಲ್ಲಿ ಯಾರಲ್ಲಿಯೂ ಯಾಚನೆಮಾಡದೆ, ಒಂದುವೇಳೆ ಅಯಾಚಿತವಾಗಿ ಯಾರಾದರೂ ಏನನ್ನಾದರೂ ತಂದು ಕೊಟ್ಟರೆ ಅದನ್ನು ತಿನ್ನಬಹುದು. ॥೮೫-೮೬॥

ಒಂದುವೇಳೆ ದೇಹವು ವಿಪತ್ತಿಗೆ ಸಿಕ್ಕಿರುವುದಾದರೆ ಬ್ರಾಹ್ಮಣನ ಅನುಜ್ಞೆಯನ್ನು ಪಡೆದು ಹಾಲು, ನೀರು, ತುಪ್ಪ, ಹಿಟ್ಟು ಇವುಗಳನ್ನು ಭಕ್ಷಿಸುವುದರಿಂದ ಉಪವಾಸವ್ರತಕ್ಕೆ ಭಂಗಬರುವುದಿಲ್ಲ. ಉಪವಾಸವ್ರತಾನಂತರ ನಲವತ್ತು ಕಬಳಗಳಿಂದ ಹಗಲು ಭೋಜನಮಾಡಿ ಅಷ್ಟರಿಂದಲೇ ತೃಪ್ತನಾಗಬೇಕು. ಆದಿನ ಹವಿಸ್ಸು, ಮಾಂಸ ಇವುಗಳನ್ನುಮಾತ್ರ ಕಾರ ಮತ್ತು ಉಪ್ಪನ್ನುಬೆರೆಸದೆ ತಿನ್ನಬೇಕು. ॥೮೭-೮೮॥

ಶುಕ್ಲಪಕ್ಷ, ಕೃಷ್ಣಪಕ್ಷಗಳಲ್ಲಿ ಚಂದ್ರನ ವೃದ್ಧಿಹ್ರಾಸಗಳಿಗನುಸಾರವಾಗಿ ಆಹಾರಪ್ರಮಾಣವನ್ನು ಹೆಚ್ಚುಕಮ್ಮಿ ಮಾಡಿಕೊಳ್ಳುತ್ತಾ ಒಂದು ತಿಂಗಳು ಪೂರ್ತಿ ಜೀವಿಸಿ, ಕೊನೆಯಲ್ಲಿ ಈಶ್ವರನನ್ನು ಪೂಜಿಸಿ, ಕೃಚ್ಛ್ರಾಚರಣೆಮಾಡಿದರೆ ಆಗ ಅವನಿಗೆ ಚಾಂದ್ರಾಯಣವ್ರತದ ಫಲವು ಲಭಿಸುವುದು. ॥೮೯-೯೦॥

|| ಈಶ್ವರ ಉವಾಚ ||

ಏವಂ ಕುರ್ವನ್ ಶಿವಾಚಾರಂ ವಸೇದೇವಂ ಗೃಹಾಶ್ರಮೇ ।
ವರ್ಣೀ ವನೀ ಗೃಹಸ್ಥೋ ವಾ ಯತಿಶ್ಚೈವಾವಿಶೇಷತಃ ||೯೦||

ಶಿವಲೋಕೇ ಮಹೀಯೇತಯಾವದ್ಬ್ರಹ್ಮ ಸದಾಶಿವೇ ||೯೨||

ಯೋ ವಾ ಮಮಾಚಾರಪರಾಯಣಶ್ಶಿವೇ
ವಸೇದ್ಗೃಹೇ ವಾ ವಿಪಿನಾಶ್ರಮೇ ವಾ ।
ಯತಿಶ್ಚ ವರ್ಣೀ ವಿಧವಾಸ್ತ್ರಿಯೋ ವಾ
ಶೂದ್ರಾಶ್ಚ ವರ್ಣಾಶ್ಚ ತಥೈವ ಸಂಕರಾಃ ||೯೩||

ಶಮಾನ್ವಿತಾ ಶೀಲಗುಣೋಪಪನ್ನಾ
ಪ್ರಸನ್ನವಾಕ್ಕಾಯಮನೋಭಿರೇವಂ ।
ಶಿವಾರ್ಚನಾಸೂದ್ಯತ ಚಿತ್ತವೃತ್ತಯೋ
ವಿಮುಕ್ತಿಯೋ ಹಿ ಪ್ರಯತಂತಿ ಸರ್ವೇ ||೯೪||

---

ಈರೀತಿ ಶಿವಧರ್ಮವನ್ನಾಚರಿಸುತ್ತಾ ತನ್ನ ಮನೆಯಲ್ಲಿಯೋ ಅಥವಾ ಆಶ್ರಮದಲ್ಲಿಯೋ ವಾಸಮಾಡುತ್ತಿರಬೇಕು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ ಇವರಲ್ಲಿ ಯಾರೇ ಆದರೂ ಶಿವಧರ್ಮಾಚರಣೆಯಿಂದ ಮುಂದುವರೆದರೆ ಅವರಿಗೆ ಅನಾಯಾಸವಾಗಿ ಸ್ವರ್ಗಪ್ರಾಪ್ತಿಯೂ ಶಿವಲೋಕವಾಸವೂ ಲಭಿಸುವುದು. ||೯೦-೯೨||

ದೇವಿಯೇ, ಯಾವನು ನನ್ನ ಆಚಾರದಲ್ಲಿ ಮಗ್ನನಾಗಿರುವನೋ, ಆತನು ಬ್ರಹ್ಮಚಾರಿಯಾಗಲಿ, ಗೃಹಸ್ಥನಾಗಲಿ, ವಾನಪ್ರಸ್ಥನಾಗಲಿ, ಸಂನ್ಯಾಸಿಯಾಗಲಿ, ವಿಧವೆಯಾಗಲಿ, ಸ್ತ್ರೀಯಾಗಲಿ, ಶೂದ್ರರಾಗಲಿ ಅಥವಾ ಸಂಕರಜಾತಿಯವರೇ ಆಗಲಿ ಅಂತಹವರು ನನ್ನ ಲೋಕವನ್ನು ಸೇರುವರು. ||೯೩||

ಶಮದಮಾದಿಗಳಿಂದ ಕೂಡಿ, ಸದಾಚಾರದಿಂದ ವರ್ತಿಸುತ್ತಾ, ನಿಷ್ಕಪಟವಾದ ಮನಸ್ಸು, ಮಾತು, ದೇಹಗಳಿಂದ ಜನರಿಗೆ ಅನುಕೂಲಮಾಡುತ್ತಾ, ಶಿವಾರ್ಚನೆಯಲ್ಲಿಟ್ಟ ಸ್ಥಿರಮನಸ್ಸುಳ್ಳವರು ಎಲ್ಲರೂ ಅನಾಯಾಸವಾಗಿ ಮೋಕ್ಷವನ್ನು ಪಡೆಯುವರು. ||೯೪||

ಚತುರ್ದಶೀ ಸೋಮದಿನೇಷ್ಟಮೀಷು
ಪರ್ವಸ್ವಪೀಷ್ಟಾಃ ಶಿಪಿವಿಷ್ಟಪೂಜಕಾಃ ।
ಶಿಷ್ಟಾ ವಿಶಿಷ್ಟಾಶ್ಚ ತ ಏವ ಲೋಕೇ
ಗಣೇಂದ್ರಮುಖ್ಯಾಸ್ತ ಇಹೈವ ಲೋಕೇ ॥೯೫॥

ಯೇ ಭಸ್ಮನಿಷ್ಠಾಃ ಶಿಪಿವಿಷ್ಟಸಂಶ್ರಯಾಃ
ಯೋಗೈಕನಿಷ್ಠಾ ಅಪಿ ಮೇ ಸದೇಷ್ಟಾಃ ।
ಅಷ್ಟಾಕೃತೇರರ್ಚನತಃ ಪ್ರತುಷ್ಟಾಃ
ಕಷ್ಟಾದ್ವಿಹೀನಾ ನಹಿ ದುಷ್ಟಭಾವಾಃ ॥೯೬॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಶಿವಧರ್ಮ ಶಿವಾಚಾರನಿಯಮ
ನಿರೂಪಣಂ ನಾಮ ಅಷ್ಟಚತ್ವಾರಿಂಶೋಽಧ್ಯಾಯಃ

---

ಚತುರ್ದಶೀ, ಸೋಮವಾರ, ಅಷ್ಟಮೀತಿಥಿ ಮತ್ತು ಇತರ ಪರ್ವದಿನಗಳು, ಇಂತಹ ದಿವಸಗಳಲ್ಲಿ ಯಾರು ಶಂಕರನನ್ನು ಪೂಜಿಸುತ್ತಾ ಕಾಲಕಳೆಯುವರೋ ಅವರೇ ಸತ್ಪುರುಷರು. ಅವರು ಈ ಲೋಕದಲ್ಲಿ ಸಮಸ್ತ ಐಶ್ವರ್ಯಗಳನ್ನೂ ಪಡೆದವರಾಗಿ ಮುಂದೆ ಶಿವಲೋಕದಲ್ಲಿ ಗಣನಾಥಪದವಿಯನ್ನು ಅನುಭವಿಸುವರು. ಇದು ನಿಜ.॥೯೫॥

ಸದಾಶಿವನನ್ನೇ ಸರ್ವಕಾಲದಲ್ಲಿಯೂ ಪೂಜಿಸುತ್ತಾ, ಭಸ್ಮರುದ್ರಾಕ್ಷಧಾರಿಗಳಾಗಿ ಶಮದಮಾದಿ ಅಷ್ಟಯೌಗಿಕ ಗುಣಗಳಿಂದ ಕೂಡಿದವರು ಸದಾ ನನಗೆ ಪ್ರಿಯರೆನಿಸುವರು. ಮಹಾದೇವಿಯೇ, ಅಷ್ಟಮೂರ್ತಿಸ್ವರೂಪನಾದ ನನ್ನ ಅರ್ಚನೆಯಿಂದ ತೃಪ್ತರಾಗಿ, ನನ್ನನ್ನೂ ತೃಪ್ತಿಪಡಿಸಿದವರು, ನಿಜವಾಗಿಯೂ ಕಷ್ಟದಿಂದ ಬಿಡುಗಡೆ ಹೊಂದುವರಲ್ಲದೆ ಮುಂದೆ ಸಾಂಸಾರಿಕವಾದ ಕಷ್ಟನಷ್ಟಗಳಿಗೆ ಎಂದೂ ಅಧೀನರಾಗುವುದಿಲ್ಲ ನನ್ನ ಶಿವಧರ್ಮಪ್ರಭಾವವು ಆರೀತಿ ಇರುವುದು. ಎಂದು ಪರಮೇಶ್ವರನು ಪಾರ್ವತಿಗೆ ಶಿವಧರ್ಮಮಹಿಮೆಯನ್ನು ತಿಳಿಯಪಡಿಸಿದನೆಂದು ಜೈಗೀಷವ್ಯಮಹಾಮುನಿಗೆ ಸ್ಕಂದಸ್ವಾಮಿಯು ಶಿವಧರ್ಮವನ್ನು ಬೋಧಿಸಿದನು.॥೯೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಶಿವಧರ್ಮನಿರೂಪಣೆ
ಶಿವಾಚಾರನಿರೂಪಣೆ ಶಿವಧರ್ಮಾನುಯಾಯಿಗಳ ಮುಕ್ತಿಪದವಿ ಇವನ್ನು
ವಿವರಿಸುವ ನಲವತ್ತೆಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀಶಿವರಹಸ್ಯೇ

## ಮಹಾದೇವಾಖ್ಯೇ

### ಏಕಾದಶಾಂಶೇ

## ಏಕೋನಪಂಚಾಶೋಽಧ್ಯಾಯಃ

॥ ಶ್ರೀ ಈಶ್ವರ ಉವಾಚ ॥

ದೇವೈಶ್ಚ ಮುನಿಭಿಶ್ಚೈವ ಸೇವಿತಾನಿ ವಿಮುಕ್ತಯೇ ।
ಕ್ಷೇತ್ರತೀರ್ಥಾನಿ ಪುಣ್ಯಾನಿ ಚಿತ್ತಶುದ್ಧ್ಯರ್ಥಮಾದರಾತ್ ॥೧॥

ಪ್ರಕಾಶ್ಯಂತೇ ಮಯಾ ತಾನಿ ಶೃಣು ಪದ್ಮಸಮಾನನೇ ।
ರುದ್ರಾವತಾರಸ್ಥಾನಾನಿ ಶಿವಕ್ಷೇತ್ರಾಣಿ ನಿರ್ದಿಶೇ ॥೨॥

ಮೃತಾನಾಂ ತತ್ರ ರುದ್ರತ್ವಂ ಶಿವಕ್ಷೇತ್ರೇಷು ದೇಹಿನಾಂ ।
ಅಥಾಯಾಗ್ನಿಂ ಶಿವಕ್ಷೇತ್ರೇ ಸಂಪೂಜ್ಯ ಪರಮೇಶ್ವರಂ ॥೩॥

---

## ನಲವತ್ತೊಂಬತ್ತನೆಯ ಅಧ್ಯಾಯ

ದೇವಿಯೇ, ಕೇಳು. ಹಿಂದೆ ಅನೇಕದೇವತೆಗಳೂ, ಮುನಿಗಳೂ ಮುಕ್ತಿ ಪ್ರಾಪ್ತಿಗಾಗಿಯೂ, ಚಿತ್ತಶುದ್ಧಿಗಾಗಿಯೂ ಅನೇಕ ತೀರ್ಥಕ್ಷೇತ್ರಗಳಲ್ಲಿ ನಿಂತು ಪುಣ್ಯವನ್ನು ಸಂಪಾದಿಸಿರುವರು. ಅವೆಲ್ಲವೂ ರುದ್ರಾವತಾರಸ್ಥಾನಗಳೆನಿಸಿದ ಶಿವಕ್ಷೇತ್ರಗಳೇ. ಆ ಪುಣ್ಯಪ್ರದಗಳಾದ ತೀರ್ಥಕ್ಷೇತ್ರಗಳ ವಿಷಯವನ್ನೆಲ್ಲಾ ವಿಸ್ತಾರವಾಗಿ ಈಗ ನಿನಗೆ ತಿಳಿಯಪಡಿಸುವೆನು ಎಂದು ಪರಶಿವನು ಪಾರ್ವತಿಗೆ ಕ್ಷೇತ್ರವಿಷಯಗಳನ್ನು ವಿವರಿಸತೊಡಗಿದನು. ॥೧-೨॥

ಶಿವಕ್ಷೇತ್ರಗಳಲ್ಲಿ ಮೃತರಾದವರಿಗೆ ರುದ್ರತ್ವವು ಲಭಿಸುವುದು. ಶಿವಕ್ಷೇತ್ರವೆಂಬ ಅಗ್ನಿಕುಂಡದಲ್ಲಿ ಪಂಚಾಕ್ಷರಮಂತ್ರ ಪಠನಪೂರ್ವಕವಾಗಿ ತಮ್ಮ ದೇಹವೆಂಬ

ಸ್ವದೇಹಂ ಪಿಂಡವದ್ವಹ್ನೌ ಜುಹ್ವನ್ ಪಂಚಾಕ್ಷರೇಣ ತು ।
ಶಿವಕ್ಷೇತ್ರೇ ಮಹಾದೇವಿ ಶಿವಸಾಯುಜ್ಯಮಾಪ್ನುಯಾತ್ ॥೪॥

ಛಿತ್ವಾ ಪಾದದ್ವಯಂ ವಾಪಿ ಶಿವಕ್ಷೇತ್ರೇ ವಸೇತ್ತು ಯಃ ।
ಸ ಯಾತಿ ಶಿವತಾಂ ದೇವಿ ನಾತ್ರ ಕಾರ್ಯಾ ವಿಚಾರಣಾ ॥೫॥

ಕ್ಷೇತ್ರಾಣಾಂ ದರ್ಶನಂ ಪುಣ್ಯಂ ಪ್ರವೇಶಸ್ತುಚ್ಛತಾಧಿಕಃ ।
ತಸ್ಮಾಚ್ಛತಗುಣಂ ಲಿಂಗದರ್ಶನಂ ಚ ಪ್ರದಕ್ಷಿಣಂ ॥೬॥

ತಸ್ಮಾಚ್ಛತಗುಣಾ ಪೂಜಾ ಜಲಸ್ನಾನಂ ತತಃ ಪರಂ ।
ಕ್ಷೀರಸ್ನಾನಂ ತತೋ ದೇವಿ ಶತಾಧಿಕಮನುತ್ತಮಂ ॥೭॥

ದಧ್ನಾ ಸಹಸ್ರಮಾಖ್ಯಾತಂ ಮಧುನಾ ತಚ್ಛತಾಧಿಕಂ ।
ಘೃತಸ್ನಾನೇನ ಚಾನಂತ್ಯಮುಪವಾಸೇನ ಸತ್ತಮೇ ॥೮॥

ತಸ್ಮಾತ್ಕೋಟಿಗುಣಂ ದೇವಿ ದೇಹಾಂತಂ ಶಿವಸನ್ನಿಧೌ ।
ಶಿವಕ್ಷೇತ್ರಸಮೀಪಸ್ಥಂ ನದೀವಾಪಿತಟಾಕಗಂ ॥೯॥

---

ಹವಿಃಪಿಂಡವನ್ನು ಯಾರು ಹೋಮಮಾಡುವರೋ ಅವರಿಗೆ ಶಿವಸಾಯುಜ್ಯವು ಸುಲಭವಾಗಿ ದೊರೆಯುವುದು. ||೩-೪||

ಶಿವಕ್ಷೇತ್ರದಲ್ಲಿ ತನ್ನ ಎರಡು ಕಾಲುಗಳನ್ನು ಕತ್ತರಿಸಿಕೊಂಡು ಮತ್ತೆಲ್ಲಿಗೂ ಹೋಗದೆ ಅಲ್ಲಿಯೇ ವಾಸಮಾಡುವವರಿಗೆ ಶಿವಸಾರೂಪ್ಯವು ದೊರೆಯುವುದು. ಕ್ಷೇತ್ರದ ದರ್ಶನದಿಂದಲೇ ವಿಶೇಷ ಪುಣ್ಯವುಂಟು. ಅದಕ್ಕೆ ನೂರರಷ್ಟು ಪುಣ್ಯವು ಆ ಕ್ಷೇತ್ರಪ್ರವೇಶದಿಂದ ಲಭಿಸುವುದು. ಅದಕ್ಕೆ ಶತಾಧಿಕವಾಗಿ ಪುಣ್ಯವು ಶಿವಲಿಂಗ ದರ್ಶನ ಮತ್ತು ಶಿವಲಿಂಗ ಪ್ರದಕ್ಷಿಣಾದಿಗಳಿಂದ ಒದಗುವುದು. ||೫-೬||

ಅದಕ್ಕಿಂತ ಕಲ್ಪೋಕ್ತವಾಗಿ ಪೂಜೆಮಾಡುವುದರಿಂದ ಶತಾಧಿಕವಾದ ಸುಕೃತವು ಲಭಿಸುವುದು. ಹಾಗೆಯೇ ಶಿವಲಿಂಗಕ್ಕೆ ಜಲಾಭಿಷೇಕ, ಕ್ಷೀರಾಭಿಷೇಕ, ದಧಿ, ಮಧು, ಘೃತ ಮುಂತಾದ ವಸ್ತುಗಳಿಂದ ಅಭಿಷೇಕ ಇವುಗಳನ್ನು ನಡೆಸುವುದರಿಂದ ಉತ್ತರೋತ್ತರವಾಗಿ ಶತಾಧಿಕವಾದ ಸುಕೃತವು ಲಭಿಸುವುದು. ||೭-೮||

ದೇಹಾಂತ್ಯದವರೆಗೂ ಶಿವಸನ್ನಿಧಿಯಲ್ಲಿ ಉಪವಾಸದಿಂದಿದ್ದು ದೇಹತ್ಯಾಗ ಮಾಡುವವನಿಗೆ ಅನಂತವಾದ ಸುಕೃತವು ದೊರಕುವುದು. ಶಿವಕ್ಷೇತ್ರದ ಸಮೀಪದಲ್ಲಿ

ಕೂಪಂ ವಾಪಿ ಪ್ರಕಸ್ಯೇತ ಶಿವತೀರ್ಥಮಿತಿ ಶ್ರುತಂ ।
ಸ್ನಾತ್ವಾ ತೇಷು ನರೋ ಭಕ್ತ್ಯಾ ನರಕಂ ನೈವ ವಿಂದತಿ ॥೧೦॥

ಶಾಂಭವಾನ್ ಭೋಜಯೇತ್ತತ್ರ ಯಥಾಯೋಗಂ ಯಥಾಬಲಂ ।
ಶ್ರದ್ಧಯಾ ಶ್ರಾದ್ಧದಾನೇನ ಪಿತೄನ್ ತಾರಯತೇ ಹಿ ಸಃ ॥೧೧॥

ಭಸ್ಮತ್ರಿಪುಂಡ್ರರುದ್ರಾಕ್ಷಧೃಗೇವ ನಿವಸೇಚ್ಛಿವೇ ।
ರುದ್ರಪಂಚಾಕ್ಷರಪರೋ ರುದ್ರಲಿಂಗಾರ್ಚನಪ್ರಿಯಃ ॥೧೨॥

ನಿಯತೋ ನಿಯಮೋಪೇತಶ್ಶಾಂತೋ ದಾಂತಃ ಸ್ಥಿರಾಸನಃ
ಉಮಾಕಾಂತಪದಧ್ಯಾಯೀ ನಿತಾಂತಂ ಮುಕ್ತ ಏವ ಸಃ ॥೧೩॥

ವಸ್ತ್ರಾಪದಂ ರುದ್ರಕೋಟಿರವಿಮುಕ್ತಂ ಮಹಾಲಯಂ ।
ಗೋಕರ್ಣಭದ್ರಕರ್ಣೌ ಚ ಸ್ವರ್ಣಾಕ್ಷಃ ತ್ರ್ಯಕ್ಷದೀಪ್ತಿಮತ್ ॥೧೪॥

ಸ್ಥಾಣ್ವೀಶ್ವರಂ ಚ ವಿಖ್ಯಾತಂ ತ್ರಿಷು ಲೋಕೇಷು ವಿಶ್ರುತಂ ।
ಸ್ಥಾನಾಷ್ಟಕಮಿದಂ ದೇವಿ ಅಷ್ಟಮೂರ್ತಿಪ್ರಿಯಂ ಪರಂ ॥೧೫॥

---

ರುವ ನದೀ, ಕೆರೆ, ಬಾವಿ ಇವೆಲ್ಲವೂ ಶಿವತೀರ್ಥವೆಂದೇ ಪ್ರಸಿದ್ಧಿಗೊಂಡಿರುವುವು. ಅಂತಹ ತೀರ್ಥಗಳಲ್ಲಿ ಸ್ನಾನಮಾಡುವುದರಿಂದ ಎಂದಿಗೂ ಅವನಿಗೆ ನರಕವು ಲಭಿಸುವುದಿಲ್ಲ. ॥೯-೧೦॥

ಶಿವಕ್ಷೇತ್ರಗಳಲ್ಲಿ ಶ್ರದ್ಧೆಯಿಂದ ಶ್ರಾದ್ಧಮಾಡಿ, ಶಾಂಭವರಿಗೆ ಭೋಜನಾದಿಗಳನ್ನು ನೆರವೇರಿಸುವುದರಿಂದ ಅವನ ಸಮಸ್ತ ಪಿತೃಗಳೂ ಉದ್ಧಾರವಾಗುವರು. ಶಿವಕ್ಷೇತ್ರದಲ್ಲಿ ವಾಸಮಾಡುವವರು ಸರ್ವದಾ ಭಸ್ಮತ್ರಿಪುಂಡ್ರಗಳನ್ನೂ ರುದ್ರಾಕ್ಷಮಾಲಿಕೆಗಳನ್ನೂ ಧರಿಸಿಕೊಂಡೇ ಇರಬೇಕು. ಮತ್ತು ಶಿವಪಂಚಾಕ್ಷರೀಮಂತ್ರವನ್ನುಚ್ಚರಿಸುತ್ತಾ ಶಿವಲಿಂಗಾರಾಧನೆಯಲ್ಲಿಯೇ ಕಾಲಕಳೆಯುತ್ತಿರಬೇಕು. ॥೧೧-೧೨॥

ನಿಯಮಬದ್ಧನಾಗಿ, ಶಾಂತನೂ, ದಾಂತನೂ, ಸ್ಥಿರವಾದ ಆಸನವುಳ್ಳವನೂ ಆಗಿ ಸದಾಶಿವನ ಪಾದಕಮಲಗಳನ್ನೇ ಧ್ಯಾನಿಸುತ್ತಿರುವವನಿಗೆ ಮೋಕ್ಷವು ಲಭಿಸುವುದು. ವಸ್ತ್ರಾಪದ, ರುದ್ರಕೋಟಿ, ಅವಿಮುಕ್ತ (ಕಾಶಿ) ಗೋಕರ್ಣ, ಭದ್ರಕರ್ಣ, ಸ್ವರ್ಣಾಕ್ಷ, ತ್ರ್ಯಕ್ಷೇಶ್ವರ, ಸ್ಥಾಣ್ವೀಶ್ವರ ಈ ಎಂಟು ಕ್ಷೇತ್ರಗಳಲ್ಲಿರುವ ಶಿವಲಿಂಗಗಳೂ ಅಷ್ಟಮೂರ್ತಿಪ್ರಿಯಗಳೆನಿಸಿವೆ. ॥೧೩-೧೪-೧೫॥

ವಸ್ತ್ರಾಪದಾದಿ ಸ್ಥಾಣ್ವಂತಂ ಶಿವಸಾಯುಜ್ಯದಾಯಕಂ ।
ಛಾಗಂಡಲೋ ದ್ವಿದಂಡಶ್ಚ ಕಾಮೋಢಂ ಮಂಡಲೇಶ್ವರಂ ॥೧೬॥

ಕಾಲಂಜರಂ ಶಂಕುಕರ್ಣಂ ಸ್ಥೂಲೇಶಶ್ಚ ಸ್ಥಲೇಶ್ವರಃ ।
ಪವಿತ್ರಾಷ್ಟಕಮಿತ್ಯೇತಚ್ಛೈವಕ್ಷೇತ್ರಂ ಮಹಾಘಭಿತ್ ॥೧೭॥

ಮೃತಾಃ ಪ್ರಯಾಂತಿ ತತ್ರೈವ ಶಿವಸ್ಯ ಪರಮಂ ಪದಂ ।
ಪಿಂಡಾರಕಂ ಕುರುಕ್ಷೇತ್ರಂ ತಥಾ ಕನಖಲಂ ಶಿವೇ ॥೧೮॥

ವಿಮಲೇಶಾಟ್ಟಹಾಸಂ ಚ ಮಹಾಕಾಲಂ ಮಹೇಶ್ವರಂ ।
ಭೀಮೇಶ್ವರಾಖ್ಯಂ ತತ್ಪುಣ್ಯಮೇತದ್ಗುಹ್ಯಾಷ್ಟಕಂ ಶಿವೇ ॥೧೯॥

ಮೃತಾಃ ಪ್ರಯಾಂತಿ ಗಣತಾಂ ಪಾಪಾಃ ಪುಣ್ಯಾ ಅಪಿಸ್ಥಿರಂ ।
ಶ್ರೀಪರ್ವತೋ ಹರಿಶ್ಚಂದ್ರಃ ಕೇದಾರೋ ಮಂತ್ರಕೇಶ್ವರಃ ॥೨೦॥

ಓಂಕಾರೋ ಭೈರವೇಶಶ್ಚ ಮಧ್ಯಮೇಶಃ ಸಿತೇಶ್ವರಃ ।
ಏತದ್ಗುಹ್ಯಾಷ್ಟಕಕ್ಷೇತ್ರಂ ಶಿವಸಾಯುಜ್ಯದಾಯಕಂ ॥೨೧॥

---

ಮೇಲೆ ಹೇಳಿದ ವಸ್ತ್ರಾಪದಕ್ಷೇತ್ರವೇ ಮೊದಲಾದ ಎಂಟು ಕ್ಷೇತ್ರಗಳು ಶಿವಸಾಯುಜ್ಯವನ್ನು ಕೊಡತಕ್ಕವುಗಳು. ಛಾಗಂಡಲ, ದ್ವಿದಂಡ, ಕಾಮೋಢ, ಮಂಡಲೇಶ್ವರ, ಕಾಲಂಜರ, ಶಂಕುಕರ್ಣ, ಸ್ಥೂಲೇಶ್ವರ ಈ ಎಂಟು ಶಿವಕ್ಷೇತ್ರಗಳೂ ಪವಿತ್ರಾಷ್ಟಕಗಳೆಂದು ಎಂದರೆ, ಎಂಟು ಪವಿತ್ರಕ್ಷೇತ್ರಗಳೆಂದು ಪ್ರಸಿದ್ಧಿಗೊಂಡಿರುವುವು. ಇವು ಸಮಸ್ತ ಪಾಪಪರಿಹಾರಕಗಳು. ಈ ಕ್ಷೇತ್ರಗಳಲ್ಲಿ ಮರಣಹೊಂದುವುದರಿಂದ ಭಕ್ತನಿಗೆ ಮುಕ್ತಿಯೇ ಲಭಿಸುವುದು. ॥೧೬-೧೭॥

ಪಿಂಡಾರಕಕ್ಷೇತ್ರ, ಕುರುಕ್ಷೇತ್ರ, ಕನಖಲಕ್ಷೇತ್ರ, ವಿಮಲೇಶಕ್ಷೇತ್ರ, ಅಟ್ಟಹಾಸ, ಮಹಾಕಾಲ, ಮಹೇಶ್ವರ, ಭೀಮೇಶ್ವರ ಈ ಎಂಟು ಶಿವಕ್ಷೇತ್ರಗಳಿಗೂ ಗೂಢವಾದ ಶಿವಕ್ಷೇತ್ರಗಳೆಂದು ಹೆಸರು. ಇಲ್ಲಿ ಮೃತರಾದರಿಗೆ ಸದ್ಯೋಮುಕ್ತಿಯು ಲಭಿಸುವುದು. ॥೧೮-೧೯॥

ಶ್ರೀಶೈಲ, ಹರಿಶ್ಚಂದ್ರಕ್ಷೇತ್ರ, ಕೇದಾರೇಶ್ವರ, ಮಂತ್ರಕೇಶ್ವರ, ಓಂಕಾರೇಶ್ವರ, ಭೈರವೇಶ್ವರ, ಮಧ್ಯಮೇಶ್ವರ, ಸಿತೇಶ್ವರ ಈ ಎಂಟೂ ಗೂಢವಾದ ಈಶ್ವರಕ್ಷೇತ್ರಗಳು. ಇಲ್ಲಿ ವಾಸಿಸಿದವರಿಗೆ ಶಿವಸಾಯುಜ್ಯವೂ, ಇಲ್ಲಿ ಶ್ರಾದ್ಧಮಾಡಿದ ಶಾಂಭವರಿಗೆ

ಸಂತರ್ಪ್ಯ ಚ ಪಿತೄನ್ ಶ್ರಾದ್ಧೇ ಪ್ರೀಣಯೇದ್ದೇವಿ ಶಾಂಭವಾನ್ ।
ಅಮರೇಶಂ ಪ್ರಭಾಸಂ ಚ ನೈಮಿಷಂ ಪುಷ್ಕರಂ ತಥಾ ॥೨೨॥

ಆಷಾಢಂ ಚಂಡಿಮುಂಡೀ ಚ ಹರಭೂಮಿರ್ಭವಾಂತಕಃ ।
ಏತಚ್ಛೈವಾಷ್ಟಕಂ ಕ್ಷೇತ್ರಂ ಶಿವಸಾಯುಜ್ಯದಾಯಕಂ ॥೨೩॥

ಲಕುಲೀಶಪ್ರವಾಜಶ್ಚ ಕರಂಜಂ ತ್ರ್ಯಂಬಕೇಶ್ವರಂ ।
ನಾಗೇಶ್ವರಂ ವೈದ್ಯನಾಥಂ ಸೋಮೇಶಂ ಘುಸ್ಮಣೇಶ್ವರಂ ॥೨೪॥

ಕ್ಷೇತ್ರಾಷ್ಟಕಮಿದಂ ದೇವಿ ಮಮ ಪ್ರಿಯಕರಂ ಸದಾ ।
ಅತ್ರ ಯಾಂತಿ ಮೃತಾಸ್ಸರ್ವೇ ರುದ್ರಸ್ಯ ಪರಮಂ ಪದಂ ॥೨೫॥

ಪಂಚಾಷ್ಟಕಮಿದಂ ಜ್ಞೇಯಂ ಶಿವಕ್ಷೇತ್ರಂ ಸುಲಕ್ಷಣಂ ।
ಯತ್ರೈವ ಭಾವಸಂಸಕ್ತಾ ಭಾವಾ ಯಾಂತ್ಯಪುನರ್ಭವಂ ॥೨೬॥

ಸ್ನಾನಂ ದಾನಂ ತಥಾ ಶ್ರಾದ್ಧಂ ಯೇ ಕುರ್ಯುಶ್ಚಾತ್ರ ಭಾವತಃ ।
ಶಿವಾವಸಥಕೋಪಾದ್ಯಂ ತದಕ್ಷಯ್ಯಫಲಂ ವ್ರಜೇತ್ ॥೨೭॥

---

ಭೋಜನಮಾಡಿಸಿದರೆ, ಅವರ ಪಿತೃಗಳಿಗೆ ಸ್ಥಿರಮುಕ್ತಿಯೂ ಲಭಿಸುವುದು. ಇದೇ ರೀತಿ ಅಮರೇಶ್ವರಕ್ಷೇತ್ರ, ಪ್ರಭಾಸಕ್ಷೇತ್ರ, ನೈಮಿಷ, ಪುಷ್ಕರ, ಆಷಾಢ, ಚಂಡಿ ಮುಂಡಿ, ಹರಭೂಮಿ, ಭವಾಂತಕಕ್ಷೇತ್ರ, ಈ ಎಂಟು ಶಿವಕ್ಷೇತ್ರಗಳೂ ಪವಿತ್ರಗಳೆನಿಸಿವೆ. ಇಲ್ಲಿ ಶಿವಪೂಜಾದಿಗಳನ್ನು ನಡೆಸುತ್ತಾ ವಾಸಮಾಡಿದರೆ ಅವರಿಗೆ ಶಿವಸಾಯುಜ್ಯವು ಲಭಿಸುವುದು ॥೨೦-೨೧-೨೨-೨೩॥

ಲಕುಲೀಶಕ್ಷೇತ್ರ, ಪ್ರವಾಜ, ಕರಂಜ, ತ್ರ್ಯಂಬಕೇಶ್ವರ, ನಾಗೇಶ್ವರ, ವೈದ್ಯನಾಥ, ಸೋಮೇಶ್ವರ, ಘುಸ್ಮಣೇಶ್ವರ ಎಂಬ ಈ ಎಂಟೂ ಶಿವಕ್ಷೇತ್ರಗಳೇ. ಇಲ್ಲಿ ವಾಸಮಾಡಿ ದೇಹತ್ಯಾಗಮಾಡಿದವರು ಶಿವಲೋಕಕ್ಕೆ ಹೋಗಿ ನೆಲಸುವರು. ಮೇಲೆ ಹೇಳಿದ ಎಂಟು ಕ್ಷೇತ್ರಗಳ ಐದು ಗುಂಪುಗಳು ಲಕ್ಷಣಘಟಿತಗಳಾದ ಶಿವಕ್ಷೇತ್ರಗಳು. ಇಲ್ಲಿ ಶಿವಭಾವನೆಯಿಂದ ನೆಲಸಿ ಶಿವನನ್ನು ಪೂಜಾದಿಗಳಿಂದ ತೃಪ್ತಿಪಡಿಸಿದವರು ಮತ್ತೆ ಸಂಸಾರವನ್ನು ಪಡೆಯದ ಸ್ಥಿರಮುಕ್ತಿಯನ್ನು ಸಂಪಾದಿಸುವರು. ॥೨೪-೨೫-೨೬॥

ಅಲ್ಲದೆ ಮೇಲೆ ಹೇಳಿದ ಶಿವಕ್ಷೇತ್ರಗಳಲ್ಲಿ ಸ್ನಾನ, ದಾನ, ಶ್ರಾದ್ಧ ಮುಂತಾದ ಕರ್ಮಗಳನ್ನು ನೆರವೇರಿಸುತ್ತಾ, ಶಿವತೀರ್ಥಪ್ರಾಶನಾದಿಗಳನ್ನು ನೆರವೇರಿಸಿದರೆ

ಇತ್ಯುಕ್ತ್ವಾ ಸರ್ವತೋ ದೃಷ್ಟಿಂ ಪ್ರಸಾದ್ಯ ಪರಮೇಶ್ವರಃ ।
ಭಾರತೇ ಸರ್ವವರ್ಷೇಷು ಶಿವಕ್ಷೇತ್ರಾಣಿ ಸರ್ವತಃ ॥೨೮॥

ಶಿವಾಯತನಮುಖ್ಯಾನಿ ದಿವಿ ಭೂವೌ ಗಿರಿಷ್ವಪಿ ।
ಕೈಲಾಸಸ್ಥೋ ಮಹಾದೇವಸ್ತದ್ದೇವ್ಯೈ ದರ್ಶಯಚ್ಛಿವಃ ॥೨೯॥

ಗಂಗಾದ್ವಾರಂ ಚ ಕೇದಾರಂ ಗಂಗಾಸಾಗರಸಂಗಮಂ ।
ಅವಿಮುಕ್ತಮಯೋಧ್ಯಾಂ ಚ ಪ್ರಯಾಗಂ ಸರಿತಂ ತಥಾ ॥೩೦॥

ಚಿತ್ರಕೂಟಂ ತ್ರಿಕೂಟಂ ಚ ಪುಣ್ಯಕೂಟಂ ಚ ಪರ್ವತಂ ।
ಗುಂಡೀಪ್ರಭಂ ಚ ಪರಮಂ ದಿವ್ಯಂ ವೈಶ್ರವಣೇಶ್ವರಂ ॥೩೧॥

ಪ್ರಭಾಸಂ ಚ ಪ್ರಕಾಶಂ ಚ ಪ್ರಕಾಶೇಶ್ವರಕೇಶ್ವರಂ ।
ಮಧ್ಯಮೇಶ್ವರಮಿತ್ಯುಕ್ತಂ ವೇದೇಶಂ ಕ್ಷಾಮಕೇಶ್ವರಂ ॥೩೨॥

ಆಕಾಶಲಿಂಗಂ ಪರಮಂ ತೀರ್ಥಂ ಚಾಪ್ಯಚಲೇಶ್ವರಂ ।
ಪೂರ್ವದ್ವಾರಂ ಹರಿಶ್ಚಂದ್ರಸ್ತ್ರಿಪುರಾಂತಕರಂ ಹರಂ ॥೩೩॥

---

ಅವನಿಗೆ ಅಕ್ಷಯ್ಯವಾದ ಫಲವು ಲಭಿಸುವುದು. ಎಂದು ಪರಶಿವನು ಪಾರ್ವತಿಗೆ ಭರತಭೂಮಿಯಲ್ಲಿರುವ ಸಕಲ ಸ್ಥಲಗಳಲ್ಲಿಯೂ, ಸರ್ವಕ್ಷೇತ್ರಗಳಲ್ಲಿಯೂ ತನ್ನ ದೃಷ್ಟಿಯನ್ನು ಬೀರುತ್ತಾ, ಭೂವ್ಯಂತರಿಕ್ಷಪ್ರದೇಶಗಳಲ್ಲಿಯೂ, ಗಿರಿ-ವನ-ದುರ್ಗಗಳಲ್ಲಿಯೂ ಇರುವ ಸಕಲ ಶಿವಕ್ಷೇತ್ರಗಳ ವಿಷಯವನ್ನೆಲ್ಲಾ ಪರಶಿವನು ತಾನು ಕೈಲಾಸದಲ್ಲಿ ಕುಳಿತುಕೊಂಡೇ ಪಾರ್ವತಿಗೆ ತೋರ್ಪಡಿಸಿದನು. ॥೨೭-೨೮-೨೯॥

ಹಾಗೆಯೇ ಗಂಗಾದ್ವಾರ, ಕೇದಾರ, ಗಂಗಾಸಾಗರ ಸಂಗಮಪ್ರದೇಶ, ಅವಿಮುಕ್ತಕ್ಷೇತ್ರ, ಅಯೋಧ್ಯೆ, ಪ್ರಯಾಗ, ಗಂಗಾಯಮುನಾಸಂಗಮ, ಚಿತ್ರಕೂಟ, ತ್ರಿಕೂಟ, ಪುಣ್ಯಕೂಟ, ಗುಂಡೀಪ್ರಭೆ, ವೈಶ್ರವಣೇಶ್ವರ, ಪ್ರಭಾಸಕ್ಷೇತ್ರ, ಪ್ರಕಾಶಕ್ಷೇತ್ರ, ಪ್ರಕಾಶೇಶ್ವರ, ಮಧ್ಯಮೇಶ್ವರ, ವೇದೇಶ್ವರ ಮುಂತಾದ ಶಿವಕ್ಷೇತ್ರಗಳನ್ನೆಲ್ಲಾ ತೋರ್ಪಡಿಸಿದನು. ॥೩೦-೩೧-೩೨॥

ಆಕಾಶಲಿಂಗ, ಆಕಾಶತೀರ್ಥ, ಅಚಲೇಶ್ವರಲಿಂಗ, ಗಂಗಾಪೂರ್ವದ್ವಾರ, ಹರಿಶ್ಚಂದ್ರಕ್ಷೇತ್ರ, ತ್ರಿಪುರಾಂತಕಕ್ಷೇತ್ರ, ಅಮರೇಶ್ವರ, ವರದಕ್ಷೇತ್ರ, (ದೇವತೆಗಳಿಂದ

ಅಮರೇಶ್ವರಂ ಚ ವರದಂ ದೇವ್ಯೈಃ ಪೂರ್ವಂ ಪ್ರತಿಷ್ಠಿತಂ ।
ಗೋಪ್ರೇಕ್ಷೇಶ್ವರಮೀಶಾನಂ ತಥಾ ಚಂದ್ರೇಶ್ವರಂ ಶುಭಂ ॥೩೪॥

ಕರ್ಮೇಶ್ವರಂ ಚ ವಿಘಸಂ ಸೃಷ್ಟ್ಯರ್ಥಂ ಬ್ರಹ್ಮಣಾ ಕೃತಂ ।
ಶ್ರೀಮದ್ದಧಿವಟಂ ಚೈವ ಕಾಟಕಂ ವಾರಣಾಹ್ವಯಂ ॥೩೫॥

ಅಜೇನ ನಿರ್ಮಿತಂ ದಿವ್ಯಂ ಪುಣ್ಯಂ ತ್ರಿಲಿವಿಲೇಶ್ವರಂ ।
ತತ್ರೈವ ಪಾದುಕಾ ಮೇದ್ಯ ಪುಣ್ಯೇತ್ರಿಲಿಬಿಲೇಶ್ವರೇ ॥೩೬॥

ತತಃ ಶೃಂಗಾಷ್ಟಕಾಷಾಢಂ ಗೋರಟಂ ಪ್ರಾಣಕೇಶ್ವರಂ ।
ದೇವ್ಯಾವರ್ತೇಶ್ವರಂ ಪುಣ್ಯಂ ತದ್ದೇವ್ಯಾ ಸುಪ್ರತಿಷ್ಠಿತಂ ॥೩೭॥

ಮಲ್ಲಿಕಾರ್ಜುನಸಂಜ್ಞಂ ಚ ಮಮಾವಾಸನಗೋತ್ತಮಂ ।
ರಾಜೇಶ್ವರಂ ಚ ಪರ್ಯಾಯಂ ಭದ್ರೇಶ್ವರಮಥಾವ್ಯಯಂ ॥೩೮॥

ಗತೀಶ್ವರಂ ಚ ವೈಶಾಖಂ ಕಪೋತೇಶ್ವರಮವ್ಯಯಂ ।
ಕೋಟಿರುದ್ರೇಶ್ವರಕ್ಷೇತ್ರಂ ರುದ್ರಕೋಟಿಪ್ರತಿಷ್ಠಿತಂ ॥೩೯॥

---

ಹಿಂದೆ ಪ್ರತಿಷ್ಠಿತವಾದುದು) ಗೋಪ್ರೇಕ್ಷೇಶ್ವರ, ಈಶಾನಕ್ಷೇತ್ರ, ಚಂದ್ರೇಶ್ವರ, ಕರ್ಮೇಶ್ವರ, ವಿಘಸೇಶ್ವರ, ಬ್ರಹ್ಮನು ಲೋಕಸೃಷ್ಟಿಸಾಮರ್ಥ್ಯಕ್ಕಾಗಿ ಪ್ರತಿಷ್ಠಾಪಿಸಿದ ದಧಿವಟೇಶ್ವರ, ಕಾಟಕೇಶ್ವರ, ವಾರಣೇಶ್ವರ ಮುಂತಾದ ಶಿವಾಯತನಪ್ರದೇಶಗಳನ್ನು ತೋರಿಸಿದನು. ॥೩೩-೩೪-೩೫॥

ದೇವಿಯೇ, ಹಿಂದೆ ಅಜಮಹಾರಾಜನು ಇಲಿವಿಲೇಶ್ವರವೆಂಬ ಹೆಸರಿನಿಂದ ಅಲ್ಲಿ ಒಂದು ಶಿವಕ್ಷೇತ್ರವನ್ನು ನಿರ್ಮಿಸಿರುವನು. ಅಲ್ಲಿ ಈಗಲೂ ನಾನು ನನ್ನ ಪಾದುಕೆಯೊಂದನ್ನು ಇಟ್ಟಿರುವೆನು. ಅಲ್ಲಿಯೇ ಶೃಂಗಾಷ್ಟಕಾಷಾಢ, ಗೋರಟ, ಪ್ರಾಣಕೇಶ್ವರ, ದೇವಿಯಿಂದಲೇ ಪ್ರತಿಷ್ಠಿತವಾದ ದೇವ್ಯಾವರ್ತೇಶ್ವರ ಇವುಗಳೆಲ್ಲಾ ಇಲ್ಲಿ ಬಹು ಪ್ರಸಿದ್ಧಿಗಳೆನಿಸಿವೆ. ॥೩೬-೩೭॥

ಮಲ್ಲಿಕಾರ್ಜುನಕ್ಷೇತ್ರವೆಂಬುದು ನನಗೆ ಬಹುಪ್ರಿಯವಾದ ಒಂದು ಪರ್ವತವಾಗಿದೆ. ಹಾಗೆಯೇ ರಾಜೇಶ್ವರ, ಭದ್ರೇಶ್ವರ, ಗತೀಶ್ವರ, ವೈಶಾಖೇಶ್ವರ, ಕಪೋತೇಶ್ವರ, ಕೋಟಿರುದ್ರೇಶ್ವರ, (ಇದು ಅನೇಕ ರುದ್ರಗಣಗಳಿಂದ ಪ್ರತಿಷ್ಠಿತವಾದುದು)

ವಿಷ್ಣುನಾತ್ರ ತಪಸ್ತಪ್ತಂ ಪೂರ್ವಂ ಯುಗಮನುತ್ತಮಂ ।
ವಿಷ್ಣ್ವೀಶ್ವರಂ ತ್ರಿಕೂಟಾಖ್ಯಂ ಕೋಟಿಭದ್ರಾಖ್ಯಮುತ್ತಮಂ ॥೪೦॥

ಸರ್ವೇಶ್ವರಂ ಭಾರಭೂತಂ ಮಲಂ ಗೃಹಮಥಾಪಿ ವಾ ।
ಮಧ್ಯಾಂಗೇಶಕರಂಬೇಶೌ ಸ್ಕಂದೇನೈವ ಪ್ರತಿಷ್ಠಿತಂ ॥೪೧॥

ಗೋಮಂಡಲೇಶ್ವರಂ ಚೈವ ಗಂಧರ್ವೈಃ ಪೂಜಿತಂ ಪರಂ ।
ವಿದ್ಯಾಧರೇಶ್ವರಂ ಚೈವ ಪಾರ್ವತೀಶಂ ತ್ವಯಾರ್ಚಿತಂ ॥೪೨॥

ಸುರೇಶ್ವರಂ ಚ ತ್ರಿದಶೈಃ ಪೂಜಿತಂ ಕ್ಷೇತ್ರಮುತ್ತಮಂ ।
ಆವರ್ದ್ಧಿನೀಶ್ವರಂ ಚೈತನ್ನಾಗೈಃ ಸಂಪೂಜಿತಂ ಮುದಾ ॥೪೩॥

ಯಕ್ಷೇಶ್ವರಂ ಯಕ್ಷಗಣೈಃ ಕಿಂಪೂರ್ಷೈಃ ಪುರುಷೇಶ್ವರಂ ।
ವೃಷೇಶ್ವರಂ ಚ ಧರ್ಮೇಣ ಪೂಜಿತಂ ಸರ್ವಕಾಮದಂ ॥೪೪॥

ಬೃಹದ್ರಥೇಶ್ವರಂ ದೇವಂ ರಾಜ್ಞಾ ತೇನಾರ್ಚಿತಂ ಮುದಾ ।
ಗದಾಧರೇಶ್ವರಂ ದೇವಂ ಗಂಧದ್ವಾರೇಶ್ವರಂ ಪರಂ ॥೪೫॥

---

ವಿಷ್ಣ್ವೀಶ್ವರ (ಇಲ್ಲಿ ಹಿಂದೆ ವಿಷ್ಣುವು ಒಂದು ಯುಗಪರ್ಯಂತ ಶಿವನನ್ನು ಕುರಿತು ತಪಸ್ಸುಮಾಡಿರುವನು) ತ್ರಿಕೂಟೇಶ್ವರ, ಕೋಟಿಭದ್ರೇಶ್ವರ ಇವು ಬಹು ಮುಖ್ಯ ವಾದ ಶಿವಕ್ಷೇತ್ರಗಳು. ||೩೮-೩೯-೪೦||

ಸರ್ವೇಶ್ವರಲಿಂಗವು ಬಹು ಪವಿತ್ರವಾದುದು. ಹಾಗೆಯೇ ಸ್ಕಂದಸ್ವಾಮಿ ಯಿಂದ ಪ್ರತಿಷ್ಠಿತಗಳಾದ ಮಧ್ಯಾಂಗೇಶ್ವರ, ಕದಂಬೇಶ್ವರ ಲಿಂಗಗಳು ಪೂಜ್ಯ ವಾದವುಗಳು. ಹಾಗೆಯೇ ಗಂಧರ್ವರಿಂದ ಪೂಜಿತಗಳಾದ ಗೋಮಂಡಲೇಶ್ವರ ಲಿಂಗವೂ, ವಿದ್ಯಾಧರೇಶ್ವರಲಿಂಗವೂ, ಪಾರ್ವತಿಯಿಂದ ಪೂಜಿತವಾದ ಪಾರ್ವತೀಶ್ವರ ಲಿಂಗವೂ ಪವಿತ್ರವಾದವುಗಳು. ||೪೧-೪೨||

ದೇವತೆಗಳಿಂದ ಪ್ರತಿಷ್ಠಿತವಾದ ಸುರೇಶ್ವರಲಿಂಗವೂ, ನಾಗಗಳಿಂದ ಪೂಜಿತ ವಾದ ಆವರ್ದ್ಧಿನೇಶ್ವರಲಿಂಗವೂ, ಯಕ್ಷಕಿಂಪುರುಷರಿಂದ ಪ್ರತಿಷ್ಠಿತಗಳಾದ ಯಕ್ಷೇಶ್ವರ, ಪುರುಷೇಶ್ವರಗಳೂ, ಧರ್ಮಪುರುಷನಿಂದ ಪೂಜಿತವಾದ ವೃಷೇಶ್ವರವೂ, ಬೃಹದ್ರಥ ರಾಜನಿಂದ ಪ್ರತಿಷ್ಠಿತವಾದ ಬೃಹದ್ರಥೇಶ್ವರಲಿಂಗವೂ, ಹಾಗೆಯೇ ಗಂಧದ್ವಾರೇಶ್ವರ,

ವೇಣುದಾರೀಶ್ವರಂ ಚೈವ ಪಾಪಹಾರೀಶ್ವರಂ ತಥಾ ।
ರುದ್ರೇಶ್ವರಂ ಪ್ರತಿಷ್ಠಾನಂ ವಾಮದೇವೇಶ್ವರಂ ತಥಾ ॥೪೬॥

ಗಣಾತೀತೇಶ್ವರಂ ಪುಣ್ಯಂ ತುಂಗೇಶಂ ನಾರ್ಮದೇಶ್ವರಂ ।
ಯಮಪ್ರಮಥನೇಶಂ ಚ ಭಗಾಕ್ಷಿಹರಶಂಕರಂ ॥೪೭॥

ಕರ್ಪೂರೇಶಂ ಮಯೂರೇಶಂ ಪುಣ್ಯಂ ಪಂಚನದಾಭಿಧಂ ।
ಕುಶಾವರ್ತಂ ತೃಣಾವರ್ತಂ ಗಂಗಾವರ್ತಂ ಗಯೇಶ್ವರಂ ॥೪೮॥

ಮಂದರೇಶಂ ಸುಂದರೇಶಂ ವಾಮಭಾಗೇಶ್ವರಂ ಶಿವಂ ।
ಕೃತ್ತಿವಾಸೇಶ್ವರಂ ಪುಣ್ಯಂ ಗಜೋ ಯತ್ರ ನಿಪಾತಿತಃ ॥೪೯॥

ನೃಸಿಂಹಹರಣಂ ಪುಣ್ಯಂ ಶಾರಭೇಶಂ ಮಹಾದ್ಭುತಂ ।
ವಾಮನಾಂಗಪ್ರಮಥನಂ ಮನ್ಮಥಾಂತಕರಂ ಪರಂ ॥೫೦॥

ಹಿರಣ್ಯಗರ್ಭಂ ನಾಂದೀಶಂ ಮಾಯಾಪುರ್ಯಾಂ ಪ್ರತಿಷ್ಠಿತಂ ।
ವಿರಜೇಶಂ ವಿಶೋಕೇಶಂ ಭಗಪ್ರಮಥನೇಶ್ವರಂ ॥೫೧॥

---

ಇವೂ ಬಹಳ ಪ್ರಸಿದ್ಧವಾದ ಮತ್ತು ಸರ್ವಕಾಮಪ್ರದಗಳಾದ ಶಿವಲಿಂಗಗಳು. ॥೪೩-೪೪-೪೫॥

ವೇಣುದಾರೀಶ್ವರ, ಪಾಪಹಾರೀಶ್ವರ, ರುದ್ರೇಶ್ವರ, ವಾಮದೇವೇಶ್ವರ, ಗಣಾತೀತೇಶ್ವರ, ತುಂಗೇಶ್ವರ, ನರ್ಮದೇಶ್ವರ, ಯಮಪ್ರಮಥನೇಶ್ವರ, ಭಗಾಕ್ಷಿಹರ ಶಂಕರೇಶ್ವರ, ಕರ್ಪೂರೇಶ್ವರ, ಮಯೂರೇಶ್ವರ, ಪುಣ್ಯಪ್ರದವಾದ ಪಂಚನದೇಶ್ವರ, ಕುಶಾವರ್ತೇಶ್ವರ, ತೃಣಾವರ್ತೇಶ್ವರ, ಗಂಗಾವರ್ತೇಶ್ವರ, ಗಯೇಶ್ವರ ಇವೆಲ್ಲವೂ ಪರಮಪೂಜ್ಯವಾದ ಶಿವಲಿಂಗಗಳು. ॥೪೬-೪೭-೪೮॥

ಮಂದರೇಶ್ವರ, ಸುಂದರೇಶ್ವರ, ವಾಮಭಾಗೇಶ್ವರ, ಕೃತ್ತಿವಾಸೇಶ್ವರ, (ಗಜಾಸುರನನ್ನು ಸಂಹರಿಸಿದ ಸ್ಥಳ) ನೃಸಿಂಹನನ್ನು ಸಂಹರಿಸಿದ ಶಾರಭೇಶ್ವರನೂ, ವಾಮನಾವತಾರದ ಅಂಗಗಳನ್ನು ಉಪಸಂಹರಿಸಿದ ಮನ್ಮಥಾಂತಕರೇಶ್ವರ ಲಿಂಗವೂ ಬಹು ಪವಿತ್ರವಾದವುಗಳು. ॥೪೯-೫೦॥

ಮಾಯಾಪುರಿಯಲ್ಲಿ ಪ್ರತಿಷ್ಠಿತಗಳಾಗಿರುವ ಹಿರಣ್ಯಗರ್ಭೇಶ್ವರ, ನಾಂದೀಶ್ವರ ಈ ಶಿವಲಿಂಗಗಳೂ, ವಿರಜೇಶ್ವರ, ವಿಶೋಕೇಶ್ವರ, ಭಗಪ್ರಮಥನೇಶ್ವರ, ಅಚಲೇ

ಅಚಲೇಶ್ವರಸಂಜ್ಞಂ ಚ ಅಚಲೈಃ ಪರಿಪೂರಿತಂ ।
ಚಂಡೇಶ್ವರಂ ಚ ಭೇರುಂಡಂ ಗಂಡಕೀತೀರಸಂಸ್ಥಿತಂ ॥೫೨॥

ವ್ಯಾಘ್ರೇಶ್ವರಂ ಬಾಹುದಾಯಾಸ್ತೀರೇ ಕ್ಷೇತ್ರಂ ಸನಾತನಂ ।
ಭೀಮಾಶಂಕರಸಂಜ್ಞಂ ಚ ದೇವದಾರುವನೇಶ್ವರಂ ॥೫೩॥

ಹಸ್ತೀಶಂ ಪಾತ್ರಕೀಶಂ ಚ ಭಂಗಹಾರೀಶ್ವರಂ ತಥಾ ।
ತುಂಗೇಶ್ವರಂ ಚ ತುಂಗಾಯಾಃ ಲಿಂಗಂ ತುಂಗಂ ಪ್ರತಿಷ್ಠಿತಂ ॥೫೪॥

ಚರ್ಮಣ್ವತ್ಯಾಃ ಪರೇ ಪಾರೇ ಕ್ಷೇತ್ರೇ ಪುಂಜಿಷ್ಠಕೇಶ್ವರಂ ।
ಸರಸ್ವತೀಶಂ ತನ್ನದ್ಯಾಸ್ತೀರೇ ಕ್ಷೇತ್ರಂ ಶಿವಾಲಯಂ ॥೫೫॥

ಯಾಮುನೇಶಂ ಚ ಯಮುನಾಮನುತಿಷ್ಠತಿ ತತ್ಪ್ರಿಯೇ ।
ಗಂಗೇಶ್ವರಂ ಚ ಗಂಗಾಯಾಃ ಪ್ರಭವೇ ಸುಪ್ರತಿಷ್ಠಿತಂ ॥೫೬॥

ಯಮುನಾಗಂಗಯೋಸ್ಸಂಧೌ ಸಂಧೀಶಂ ಪುಣ್ಯದಾಯಕಂ ।
ಮಾಧವೀತಮನಂತೇಶಂ ನೀರಾತೀರೇ ಪ್ರತಿಷ್ಠಿತಂ ॥೫೭॥

---

ಶ್ವರ, (ಪರ್ವತಗಳಿಂದ ಪೂಜಿತವಾದುದು) ಚಂಡೇಶ್ವರ, ಭೇರುಂಡೇಶ್ವರ (ಗಂಡಕೀ ತೀರದಲ್ಲಿರತಕ್ಕದ.) ಬಾಹುದಾ ನದೀತೀರದಲ್ಲಿರುವ ವ್ಯಾಘ್ರೇಶ್ವರ, ಭೀಮೇಶ್ವರ, ಶಂಕರೇಶ್ವರ, ದೇವದಾರುವನೇಶ್ವರ ಇವೆಲ್ಲವೂ ಅತ್ಯಂತ ಪೂಜ್ಯಲಿಂಗಗಳು. ॥೫೧-೫೨-೫೩॥

ಹಸ್ತೀಶ್ವರ, ಪಾತ್ರಕೇಶ್ವರ, ಭಂಗಹಾರೀಶ್ವರ, ತುಂಗೇಶ್ವರ (ಇದು ಬಹಳ ಎತ್ತರವಾದುದು) ಚರ್ಮಣ್ವತೀ ನದೀ ತೀರದಲ್ಲಿರುವ ಪುಂಜಿಷ್ಠೇಶ್ವರ, ಸರಸ್ವತೀ ನದೀತೀರದಲ್ಲಿರುವ ಶಿವಕ್ಷೇತ್ರ, ಯಮುನಾತೀರದ ಯಾಮುನೇಶ್ವರ, ಗಂಗಾತೀರದ ಗಂಗೇಶ್ವರ ಇವೆಲ್ಲವೂ ಪವಿತ್ರಕ್ಷೇತ್ರಗಳಂತೆ ಪ್ರತಿಷ್ಠಿತಗಳಾಗಿವೆ. ॥೫೪-೫೫-೫೬॥

ಗಂಗಾ ಯಮುನಾ ಸಂಗಮಸ್ಥಾನದಲ್ಲಿರುವ ಸಂಧೀಶನೂ, ಮಾಧವೀಶನೂ, ಅನಂತೇಶನೂ, (ನೀರಾನದೀ ತೀರದಲ್ಲಿ) ಭೀಮರಥೀ ನದೀದಡದಲ್ಲಿರುವ ಭೀಮೇಶ್ವರನೂ, ಕುಂಜಹರೇಶ್ವರನೂ, ವೃಂದಾವನದಲ್ಲಿರುವ ವೃಂದೇಶನೂ, ಮಧುರಾ ನಗರದಲ್ಲಿರುವ ಮಥ್ರೇಶ್ವರನೂ, ವಿಪಾಶಾನದೀದಡದಲ್ಲಿರುವ ವಿಪಾಶೇಶ್ವರನೂ,

ಭೀಮೇಶಂ ಭೀಮರಥ್ಯಾಶ್ಚ ತಟೇ ಕುಂಜಹಸೇಶ್ವರಂ ।
ವೃಂದಾವನೇ ಚ ವೃಂದೇಶಂ ಮಧುರಾಯಾಂ ಮಥೇಶ್ವರಂ ॥೫೮॥

ವಿಪಾಶಾಯಾಂ ವಿಪಾಶೇಶಂ ನೈಮಿಷೇ ನೈಮಿಶೇಶ್ವರಂ ।
ಶೋಣಾತೀರೇ ಶೋಣಕೇಶಂ ನಾರ್ಮದೇ ನರ್ಮದೇಶ್ವರಂ ॥೫೯॥

ಯತ್ರ ಬಾಣಃ ಸಮಾರಾಧ್ಯ ಲೇಭೇ ಭುಜಸಹಸ್ರಕಂ ।
ಓಂಕಾರೇಶಂ ಚ ತತ್ತೀರೇ ಪರ್ಣಾದೇಶಂ ಪ್ರತಿಷ್ಠಿತಂ ॥೬೦॥

ಸರಯ್ವಾಂ ಚ ಸರಯ್ವೀಶಂ ಗೋಮತ್ಯಾಂ ಗೋಮತೀಶ್ವರಂ ।
ವೇಣ್ಯಾಂ ವೇಣೀಶ್ವರಂ ಪುಣ್ಯಂ ನಿಷಧೇಶಂ ನಗಾಸ್ಥಿತಂ ॥೬೧॥

ಆಶಕ್ನೀತೀರಗಂ ದೇವಿ ವಿಹ್ವರೇಶ್ವರಸಂಜ್ಞಿತಂ ।
ದ್ವಾರವತ್ಯಾಂ ದ್ವಾರಕೇಶಂ ಕೃಷ್ಣೇನಾರ್ಚಿತಮೀಶ್ವರಿ ॥೬೨॥

ಅವಂತೀಶಮವಂತ್ಯಾಂ ತು ಶತದ್ರ್ವ್ಯಾಂ ಶತೇಶ್ವರಂ ।
ಪರಾದನೇಶ್ವರಂ ಪುಣ್ಯಂ ಕಾಲಕಂಜೇಶ್ವರಂ ಪರಂ ॥೬೩॥

---

ನೈಮಿಷಾರಣ್ಯದಲ್ಲಿ ಕಂಡುಬರುವ ನೈಮಿಶೇಶ್ವರನೂ, ಶೋಣಾತೀರದಲ್ಲಿ ಶೋಣಕೇಶ್ವರನೂ, ನರ್ಮದಾತೀರದಲ್ಲಿ ತೋರಿಬರುವ ನರ್ಮದೇಶ್ವರಲಿಂಗವೂ, ಬಹು ಪವಿತ್ರವಾದವುಗಳು ಮತ್ತು ಪುಣ್ಯಪ್ರದಗಳು. ||೫೭-೫೮-೫೯||

ಬಾಣಾಸುರನು ಶಿವನನ್ನು ಕುರಿತು ತಪಸ್ಸುಮಾಡಿ ಸಾವಿರ ತೋಳುಗಳನ್ನು ಸಂಪಾದಿಸಿದ ಓಂಕಾರೇಶಕ್ಷೇತ್ರವೂ, ನರ್ಮದಾತೀರದಲ್ಲಿರುವ ಪರ್ಣಾದೇಶ್ವರ ಲಿಂಗವೂ, ಸರಯೂತೀರದಲ್ಲಿರುವ ಸರಯ್ವೀಶಲಿಂಗವೂ, ಗೋಮತೀತೀರದ ಗೋಮತೀಶ್ವರಲಿಂಗವೂ, ವೇಣುವನದಲ್ಲಿರುವ ವೇಣೀಶ್ವರನೂ, ಪರ್ವತದಲ್ಲಿರುವ ನಿಷಧೇಶ್ವರಲಿಂಗವೂ, ಆಶಕ್ನೀನದೀತೀರದಲ್ಲಿರುವ ವಿಹ್ವರೇಶ್ವರಕ್ಷೇತ್ರವೂ, ದ್ವಾರವತಿಯಲ್ಲಿರುವ ದ್ವಾರಕೇಶ್ವರವೂ (ಇದು ಶ್ರೀಕೃಷ್ಣನಿಂದ ಪೂಜಿತವಾದುದು.) ಬಹಳ ಪವಿತ್ರವಾದವುಗಳು. ||೬೦-೬೧-೬೨||

ಅವಂತೀನಗರದಲ್ಲಿ ಅವಂತೀಶನೂ, ಶತದ್ರುನದೀತೀರದಲ್ಲಿ ಶತೇಶ್ವರನೂ, ಹಾಗೆಯೇ ಪರಾದನೇಶ್ವರ, ಕಾಲಕಂಜೇಶ್ವರ, ಹರಿಭದ್ರೇಶ್ವರ (ಇದು ಗಂಗಾತೀರ

ಹರಿಭದ್ರೇಶ್ವರಂ ಪುಣ್ಯಂ ಗಂಗಾತೀರೇ ಪ್ರತಿಷ್ಠಿತಂ ।
ಅಸೀತೀರೇ ಮಹಾದೇವಂ ವರಣಾವರಣೇಶ್ವರಂ ॥೬೪॥

ಬದರ್ಯಾಂ ಬದರೀಶಂ ಚ ಪುಷ್ಕರೇ ಪುಷ್ಕರೇಶ್ವರಂ ।
ವಾಯುಸಂಪೂಜಿತಂ ಕ್ಷೇತ್ರಂ ವಾಯುವೀಶಂ ಸುಪುಣ್ಯದಂ ॥೬೫॥

ಅನಂಗಮಥನಂ ಪುಣ್ಯಂ ಯತ್ರಾನಂಗೋ ನಿಪಾತಿತಃ ।
ಕರ್ದಮೀತೀರಜಂ ಕ್ಷೇತ್ರಂ ಕರ್ದಮೇಶಂ ಸುಪುಣ್ಯದಂ ॥೬೬॥

ಯತೀಶ್ವರಂ ಪ್ರಭಾಸಂ ಚ ಕಾಲಕಾಲೇಶ್ವರಂ ಪರಂ ।
ಮತಂಗೇಶಂ ಮತಂಗಾಯಾಸ್ತೀರೇ ಲಿಂಗಂ ಪ್ರತಿಷ್ಠಿತಂ ॥೬೭॥

ಗೋಪ್ರೇಕ್ಷತೀರ್ಥೇ ಗೋಪ್ರೇಕ್ಷಂ ತ್ರ್ಯಕ್ಷಂ ಮೋಕ್ಷಪ್ರದಾಯಕಂ ।
ಸಾಗರೇಶಂ ತತೋಽಬ್ಧ್ಯರ್ಚ್ಯಂ ಭದ್ರಕರ್ಣೇಶ್ವರಂ ಶಿವಂ ॥೬೮॥

ಮಲಯೇಶಂ ಕುಂಭಜೇಶಂ ಹನೇಹಶೀಶ್ವರಂ ತಥಾ ।
ಮಾಂಡಿಕರ್ಣೇಶ್ವರಂ ಚೈವ ಕಾಮದಂ ವೈದ್ಯನಾಥಕಂ ॥೬೯॥

---

ದಲ್ಲಿರುವುದು) ಅಸೀನದಿಯ ತೀರದಲ್ಲಿರುವ ಮಹಾದೇವನೆನಿಸಿದ ವರಣಾವರಣೇಶ್ವರ, ಬದರೀಕ್ಷೇತ್ರದಲ್ಲಿರುವ ಬದರೀಶ್ವರ ಇವೆಲ್ಲವೂ ಅತ್ಯಂತ ಪ್ರಸಿದ್ಧವಾದ ಶಿವಲಿಂಗಗಳು. ||೬೩-೬೪||

ಪುಷ್ಕರಕ್ಷೇತ್ರದಲ್ಲಿರುವ ಪುಷ್ಕರೇಶ್ವರನೂ, ವಾಯುದೇವರಿಂದ ಅರ್ಚಿತವಾದ ವಾಯುವೀಶನೂ, ಮನ್ಮಥನು ದಗ್ಧವಾದ ಸ್ಥಳದಲ್ಲಿರುವ ಅನಂಗಮಥನೇಶ್ವರನೂ, ಕರ್ದಮಾನದೀತೀರದಲ್ಲಿರುವ ಕರ್ದಮೇಶ್ವರನೂ ಪರಮಪೂಜ್ಯಗಳಾದ ಶಿವಲಿಂಗಗಳೆಂದು ತಿಳಿಯಬೇಕು. ||೬೫-೬೬||

ಯತೀಶ್ವರ, ಪ್ರಭಾಸೇಶ್ವರ, ಕಾಲಕಾಲೇಶ್ವರ, ಮತಂಗೇಶ್ವರ (ಮತಂಗಾನದೀತೀರದಲ್ಲಿ ಪ್ರತಿಷ್ಠಿತವಾಗಿರುವುದು), ಗೋಪ್ರೇಕ್ಷಾತೀರದಲ್ಲಿರುವ ಗೋಪ್ರೇಕ್ಷಕ್ಷೇತ್ರದಲ್ಲಿರುವ ಗೋಪ್ರೇಕ್ಷೇಶ್ವರ, ಸಮುದ್ರರಾಜನಿಂದ ಅರ್ಚಿತವಾದ ಸಾಗರೇಶ್ವರ, ಭದ್ರಕರ್ಣೇಶ್ವರ, ಮಲಯೇಶ್ವರ, ಕುಂಭಜೇಶ್ವರ, ಹನೇಹಶೀಶ್ವರ, ಮಾಂಡಿಕರ್ಣೇಶ್ವರ, ಇವು ಕಾಮದವಾದ ಶಿವಲಿಂಗಗಳು. ||೬೭-೬೮-೬೯||

ಕೃಷ್ಣೇಶ್ವರಂ ಚ ಕೃಷ್ಣಾಯಾಸ್ತೀರೇ ಕ್ಷೇತ್ರಂ ಮನೋಹರಂ।
ಪಂಪೇಶ್ವರಂ ಚ ಪಂಪಾಯಾಸ್ತೀರೇ ದೇವಿ ಶಿವಾಲಯಂ ॥೨೦॥

ನಿದಾನೇಶಂ ದಾನವತ್ಯಾಸ್ತೀರೇ ಕ್ಷೇತ್ರಂ ಸನಾತನಂ।
ಭೃಗುತುಂಗೇ ತು ತುಂಗೇಶಂ ಪಾಪಹಾರೀಶ್ವರಂ ತಥಾ ॥೨೧॥

ವಜ್ರಾವರ್ತೇಶ್ವರಂ ಚೈವ ಫಾಣಿಕಾಯಾಸ್ತಟೇ ಶುಭಂ।
ಬಲಪ್ರಮಥನೇಶಂ ಚ ಕಾಲಮೂಲೇಶ್ವರಂ ತಥಾ ॥೨೨॥

ವ್ಯೋಮಕೇಶಂ ಹರೀಶಂ ಚ ತಂಗಣೇಷು ಪ್ರತಿಷ್ಠಿತಂ।
ಕ್ಷಿಪ್ರೇಶ್ವರಂ ಚ ಕ್ಷಿಪ್ರಾಯಾಸ್ತಟೇ ಕ್ಷಿಪ್ರಪ್ರಸಾದಕೃತ್ ॥೨೩॥

ಕಾಲವ್ಯಾಲೇಶ್ವರಂ ಚೈವ ತಕ್ಷಕೇಣ ಪ್ರತಿಷ್ಠಿತಂ।
ತ್ರಿಜಟೇಶ್ವರಸಂಜ್ಞಂ ಚ ತ್ರಿಜಟಾನಿಮ್ನಗಾನತಃ ॥೨೪॥

ಮೇರುಧನ್ವೀಶ್ವರಂ ಕ್ಷೇತ್ರಂ ಮೇರೌ ವಸುಧರೇಶ್ವರಂ।
ದ್ಯುತೀಶ್ವರಂ ದ್ಯುತಾವರ್ತೇ ಕೊಂಕಣೇ ಚ ಪ್ರತಿಷ್ಠಿತಂ ॥೨೫॥

---

ಕೃಷ್ಣಾನದೀತೀರದ ಕೃಷ್ಣೇಶ್ವರ, ಪಂಪಾತೀರದಲ್ಲಿರುವ ಪಂಪೇಶ್ವರ, ದಾನವತೀನದೀ ತೀರದ ನಿದಾನೇಶ್ವರಂ, ಭೃಗುತುಂಗ ಕ್ಷೇತ್ರದಲ್ಲಿರುವ ತುಂಗೇಶ್ವರ, ಪಾಪಹಾರೀಶ್ವರ, ವಜ್ರಾವರ್ತೇಶ್ವರ (ಫಣಿಕಾನದೀ ತೀರದಲ್ಲಿರುವುದು) ಬಲಪ್ರಮಥನೇಶ್ವರ, ಕಾಲಮೂಲೇಶ್ವರ ಮುಂತಾದ ಶಿವಲಿಂಗಗಳಿರುವ ಪ್ರದೇಶಗಳು, ಪವಿತ್ರಗಳಾದ ಶಿವಕ್ಷೇತ್ರಗಳೆನಿಸಿವೆ. ॥೨೦-೨೧-೨೨॥

ತಂಗಣಕ್ಷೇತ್ರದಲ್ಲಿರುವ ವ್ಯೋಮಕೇಶ್ವರ, ಹರೀಶ್ವರ, ಕ್ಷಿಪ್ರಾನದೀತೀರದಲ್ಲಿರುವ ಕ್ಷಿಪ್ರೇಶ್ವರ (ಜಾಗ್ರತೆ ಅನುಗ್ರಹಪ್ರದವಾದುದು), ಕಾಲವ್ಯಾಲೇಶ್ವರ, (ತಕ್ಷಕನಿಂದ ಪ್ರತಿಷ್ಠಿತವಾದುದು) ತ್ರಿಜಟಾನದೀದಡದಲ್ಲಿರುವ ತ್ರಿಜಟೇಶ್ವರ, ಮೇರು ಪರ್ವತದಲ್ಲಿರುವ ಮೇರುಧನ್ವೀಶ್ವರ, ದ್ಯುತಾವರ್ತಕ್ಷೇತ್ರಗತವಾದ ದ್ಯುತೀಶ್ವರ (ಇದು ಕೊಂಕಣದೇಶದಲ್ಲಿ ಕಂಡುಬರುವುದು), ಈ ಶಿವಲಿಂಗಗಳು ಪರಮ ಪೂಜ್ಯಗಳು. ॥೨೩-೨೪-೨೫॥

ಭೃಗ್ವೀಶ್ವರಂ ಚ ರಾಮೇಣ ಪೂಜಿತಂ ಕ್ಷತ್ರಿಯಾಂತಕೃತ್ ।
ಕೋಲಾಪುರೇ ಕೋಲಕೇಶಂ ತ್ವಯಾ ದೇವಿ ಪ್ರತಿಷ್ಠಿತಂ ॥೭೬॥

ಅಂಧಕೇನಾರ್ಚಿತಂ ಲಿಂಗಂ ಅಂಧಕಾಸುರಸಂಜ್ಞಿತಂ ।
ಮಕುಟೇಶಂ ಚ ಕಂಕೋಲಕೋಲಹಾರೀಶ್ವರಂ ಶಿವೇ ॥೭೭॥

ಯಮೇಶ್ವರಂ ಚ ಸಾಂಬೇಶಂ ಅರಣ್ಯೇಶಂ ವ್ರತೇಶ್ವರಂ ।
ಪಾರಣಾತೀರಗಂ ಕ್ಷೇತ್ರಂ ತಾರಣೇಶಾಭಿಧಂ ಶಿವಂ ॥೭೮॥

ಕಮಲೇಶಂ ದಿಗೀಶಂ ಚ ಭಾಸೇಶಂ ಪ್ರಕಟೇಶ್ವರಂ ।
ಹಾಲಾಹಲೇಶ್ವರಂ ಪುಣ್ಯಂ ಯತ್ರ ಜಾತೋ ಗರಾದನಃ ॥೭೯॥

ವಿನಾಯಕೇಶ್ವರಶ್ಚೈವ ಪರ್ಣಾದೇಶೋಂಧಸೇಶ್ವರಃ ।
ಶತಾವರ್ತೇಶ್ವರೋ ದೇವಿ ನಾಭಂಗೇಶೋ ಧನೇಶ್ವರಃ ॥೮೦॥

ಅರ್ಧನಾರೀಶ್ವರಶ್ಚೈವ ತ್ವಯಾ ಯತ್ರಾಹನಾಸ್ಥಿತಃ ।
ವಿದೂರಥೇಶ್ವರಶ್ಚೈವ ಶಿವೇ ದಶರಥೇಶ್ವರಃ ॥೮೧॥

ಕನ್ಯಾಕುಬ್ಜೇಶ್ವರಶ್ಚೈವ ಕನ್ಯಕಾಬ್ಜೇ ಪ್ರತಿಷ್ಠಿತಂ ।
ಅರುಂಧತೀಶ್ವರಶ್ಚೈವ ಸಿನೀವಾಲೀಶ್ವರಸ್ತಥಾ ॥೮೨॥

---

ಕ್ಷತ್ರಿಯನಾಶಕನಾದ ಪರಶುರಾಮನಿಂದ ಪ್ರತಿಷ್ಠಿತವಾದ ಭೃಗ್ವೀಶ್ವರ, ದೇವಿಯಿಂದ ಪ್ರತಿಷ್ಠಿತವಾದ ಕೊಲ್ಲಾಪುರದ ಕೋಲಕೇಶ್ವರ, ಅಂಧಕಾಸುರನಿಂದ ಪೂಜಿತವಾದ ಅಂಧಕೇಶ್ವರ, ಮಕುಟೇಶ್ವರ, ಕಂಕೋಲಕೋಲಹಾರೀಶ್ವರ, ಯಮೇಶ್ವರ, ಸಾಂಬೇಶ್ವರ, ಅರಣ್ಯೇಶ್ವರ, ವ್ರತೇಶ್ವರ, ಪಾರಣಾನದೀತೀರಸ್ಥವಾದ ತಾರಣೇಶ್ವರ ಇವೆಲ್ಲಾ ಶಿವಕ್ಷೇತ್ರಸ್ಥ ಶಿವಲಿಂಗಗಳು. ॥೭೬-೭೭-೭೮॥

ಕಮಲೇಶ್ವರ, ದಿಗೀಶ್ವರ, ಭಾಸೇಶ್ವರ, ಪ್ರಕಟೇಶ್ವರ, ಹಾಲಾಹಲೇಶ್ವರ (ಅಲ್ಲಿಯೇ ಶಂಕರನು ವಿಷಪಾನಮಾಡಿದುದು), ವಿನಾಯಕೇಶ್ವರ, ಪರ್ಣಾದೇಶ್ವರ, ಅಂಧಸೇಶ್ವರ, ಶತಾವರ್ತೇಶ್ವರ, ನಾಭಂಗೇಶ್ವರ, ಧನೇಶ್ವರ, ಅರ್ಧನಾರೀಶ್ವರ (ಅಲ್ಲಿಯೇ ಪರಶಿವನು ಪಾರ್ವತೀ ಸಮೇತನಾಗಿ ನೆಲಸಿರುವನು), ವಿದೂರಥೇಶ್ವರ, ದಶರಥೇಶ್ವರ ॥೭೯-೮೦-೮೧॥

ಕನ್ಯಕುಬ್ಜದಲ್ಲಿ ಪ್ರತಿಷ್ಠಿತವಾಗಿರುವ ಕನ್ಯಕುಬ್ಜೇಶ್ವರ, ಅರುಂಧತೀಶ್ವರ,

ಅಖಂಡೇಶೋ ಅದಾಲ್ಫೇಶೋ ರಾವಣೇಶಸ್ಸುರೇಶ್ವರಃ ।
ತ್ರಿಕಂದುಕೇಶ್ವರೋ ದೇವಿ ನಿಷ್ಠಿತಾಪರತಂಗಣೇ ॥೮೩॥

ಸೌರಾಷ್ಟ್ರೇ ಸೋಮನಾಥೇಶೋ ರಾಷ್ಟ್ರವರ್ಧನಪೂಜಿತಃ ।
ಗೋಸವೇಶ್ವರೋ ದೇವಿ ಗೌತಮೇಶೋ ರತೀಶ್ವರಃ ॥೮೪॥

ಯಂತ್ರಹಾರೀಶ್ವರೋ ದೇವಿ ಆನರ್ತೇ ಚ ಪ್ರತಿಷ್ಠಿತಃ ।
ಉಮೇಶ್ವರಸ್ಸೋಮಚಂಡೋ ಖಂಡಪರ್ಶುಹರೇಶ್ವರಃ ॥೮೫॥

ಮುಸಲೇಶೋರ್ಗಲೇಶಶ್ಚ ಕೋಸಲೇ ಸುಪ್ರತಿಷ್ಠಿತಃ ।
ಆವನ್ಯೇಶೋಽದನನ್ಯೇಶೋ ವಧೀಶೋ ವೈಧೃತೀಶ್ವರಃ ॥೮೬॥

ಧಿಷ್ಠಿತಾಸ್ಸರ್ವದೇವೈಶ್ಚ ಪೂಜಿತೋತ್ತರಕೋಸಲೇ ।
ಭರ್ಗೇಶೋಥ ವಿದರ್ಭೇಶಃ ಕನಕೇಶಃ ಪ್ರಭಾದನಃ ॥೮೭॥

ವಿದರ್ಭೇಧಿಷ್ಠಿತಾಹ್ಯೇತೇ ಕ್ಷೇತ್ರವರ್ಯಾಣಿ ಶೂಲಿನಃ ।
ಕಣಾದೇಶಃ ಕಹೋಲೇಶಃ ಪ್ರತಾರ್ಕ್ಯೇಶೋ ಮಹೇಶ್ವರಃ ॥೮೮॥

ಸಿನೀವಾಲೀಶ್ವರ, ಅಖಂಡೇಶ್ವರ, ಅದಾಲ್ಫೇಶ್ವರ, ರಾವಣೇಶ್ವರ, ಸುರೇಶ್ವರ, ತ್ರಿಕಂದ್ರುಕೇಶ್ವರ (ಎರಡನೆಯ ತಂಗಣಕ್ಷೇತ್ರವೆಂದು ಪ್ರಸಿದ್ಧಿಗೊಂಡಿರುವುದು), ಸೌರಾಷ್ಟ್ರೇಶ್ವರ, ಸೋಮನಾಥೇಶ್ವರ (ರಾಷ್ಟ್ರವರ್ಧನರಿಂದ ಪೂಜಿತವಾದದ್ದು), ಗೋಸವೇಶ್ವರ, ಗೌತಮೇಶ್ವರ, ರತೀಶ್ವರ, ||೮೨-೮೩ ೮೪||

ಯಂತ್ರಹಾರೀಶ್ವರ (ಆನರ್ತಕ್ಷೇತ್ರದಲ್ಲಿ ಪ್ರತಿಷ್ಠಿತವಾದುದು), ಉಮೇಶ್ವರ, ಸೋಮಚಂಡೇಶ್ವರ, ಅಖಂಡೇಶ್ವರ, ಪರಶುಹರೇಶ್ವರ, ಮುಸಲೇಶ್ವರ, ಅರ್ಗಲೇಶ್ವರ, ಕೋಸಲೇಶ್ವರ, ಅವನ್ಯೇಶ್ವರ, ಅದನನ್ಯೇಶ್ವರ, ಅವಧೀಶ್ವರ, ವೈಧೃತೀಶ್ವರ, ಉತ್ತರಕೋಸಲದಲ್ಲಿ ಸಕಲ ದೇವತೆಗಳಿಂದಲೂ ಪ್ರತಿಷ್ಠಿತವಾಗಿರುವ ಭರ್ಗೇಶ್ವರ, ವಿದರ್ಭೇಶ್ವರ, ಕನಕೇಶ್ವರ, ಪ್ರಭಾದನೇಶ್ವರ, ಇವು ಪ್ರಸಿದ್ಧವಾದ ಶಿವಕ್ಷೇತ್ರಗಳು. ||೮೫-೮೬-೮೭||

ಕಣಾದೇಶ್ವರ, ಕಹೋಲೇಶ್ವರ, ಪ್ರತಾರ್ಕ್ಯೇಶ್ವರ, ಮಹೇಶ್ವರ, ಈ ಶಿವಲಿಂಗಗಳು ವಿದರ್ಭದೇಶದಲ್ಲಿ ಪ್ರಸಿದ್ಧವಾದ ಕ್ಷೇತ್ರಗಳು. ನೂಲವ ಮತ್ತು ಸಾಲ್ವದೇಶ

ಮಾಲವೇಷು ಸ್ಥಿತಾಹ್ಯೇತೇ ಸಾಲ್ವೇಷ್ವೇತೇ ಪ್ರತಿಷ್ಠಿತಾಃ ।
ಕವಾಟಹಾರಣೇಶಶ್ಚ ದಾನವೇಶೋ ರಮೇಶ್ವರಃ ॥೮೯॥

ವಸಾನ್ಯೇಶಃ ಕಾರ್ತಿಕೇಶೋ ವಿಜಂಘೇಶೋ ಗರೇಶ್ವರಃ ।
ರೋಗಹಾರೀಶ್ವರಶ್ಚೈವ ಪುಂಡ್ರೇಷ್ವೇತೇ ಪ್ರತಿಷ್ಠಿತಾಃ ॥೯೦॥

ಕಾಶ್ಯಾಂ ವಿಶ್ವೇಶ್ವರಶ್ಚೈವ ಅವಿಮುಕ್ತೇಶ್ವರಸ್ತಥಾ ।
ತ್ರಿಲೋಚನೇಶೋ ವೀರೇಶಃ ಕಪರ್ದೀಶೋ ಮಣೀಶ್ವರಃ ॥೯೧॥

ಮಣಿಕರ್ಣೀಶ್ವರಶ್ಚೈವ ಜ್ಞಾನೇಶಸ್ಸಂಗಮೇಶ್ವರಃ ।
ಮಧ್ಯಮೇಶಶ್ಚ ಸೋಮೇಶಃ ಕೇದಾರೇ ಮಂಗಲೇಶ್ವರಃ ॥೯೨॥

ನಾಗೇಶ್ವರೋಣಿಮಾಂಡವ್ಯಃ ಸುರಾಭಾಂಡೀಶ್ವರಸ್ತಥಾ ।
ಕಪರ್ದೀಶಮತಂಗೇಶೌ ರಾಮೇಶೋ ಲಕ್ಷ್ಮಣೇಶ್ವರಃ ॥೯೩॥

ವ್ಯಾಸೇಶ್ವರೋ ವಿರೂಪಾಕ್ಷಃ ಕರ್ದಮೇಶ್ವರ ಏವ ಚ ।
ಜನಾರ್ದನೇಶೋ ಬ್ರಹ್ಮೇಶೋ ವೀರಹರ್ಷೇಶ್ವರಸ್ತಥಾ ॥೯೪॥

ಗಳಲ್ಲಿ ಕವಾಟೇಶ್ವರ, ಹಾರಣೇಶ್ವರ, ದಾನವೇಶ್ವರ, ರಮೇಶ್ವರ ಇವು ಪ್ರಸಿದ್ಧವಾದವುಗಳು. ಪುಂಡ್ರದೇಶಗಳಲ್ಲಿ ವಸಾನ್ಯೇಶ್ವರ, ಕಾರ್ತಿಕೇಶ್ವರ, ವಿಜಂಘೇಶ್ವರ, ಗರೇಶ್ವರ, ರೋಗಹಾರೀಶ್ವರ ಇವು ಪ್ರಸಿದ್ಧವಾದ ಶಿವಲಿಂಗಗಳು. ॥೮೮-೮೯-೯೦॥

ಕಾಶೀಕ್ಷೇತ್ರದಲ್ಲಿ ವಿಶ್ವೇಶ್ವರ, ಅವಿಮುಕ್ತೇಶ್ವರ, ತ್ರಿಲೋಚನೇಶ್ವರ, ವೀರೇಶ್ವರ, ಕಪರ್ದೀಶ್ವರ, ಮಣೀಶ್ವರ, ಮಣಿಕರ್ಣಿಕೇಶ್ವರ, ಜ್ಞಾನೇಶ್ವರ, ಸಂಗಮೇಶ್ವರ, ಮಧ್ಯಮೇಶ್ವರ, ಸೋಮೇಶ್ವರ ಇವು ಮಹಾಮಹಿಮೆಯುಳ್ಳ ಶಿವಲಿಂಗಗಳು. ॥೯೧-೯೨॥

ಕೇದಾರಕ್ಷೇತ್ರದಲ್ಲಿ ಮಂಗಲೇಶ್ವರ, ನಾಗೇಶ್ವರ, ಅಣಿಮಾಂಡವ್ಯೇಶ್ವರ, ಸುರಾಭಾಂಡೀಶ್ವರ, ಕಪರ್ದೀಶ್ವರ, ಮತಂಗೇಶ್ವರ, ರಾಮೇಶ್ವರ, ಲಕ್ಷ್ಮಣೇಶ್ವರ, ವ್ಯಾಸೇಶ್ವರ, ವಿರೂಪಾಕ್ಷೇಶ್ವರ, ಕರ್ದಮೇಶ್ವರ, ಜನಾರ್ದನೇಶ್ವರ, ಬ್ರಹ್ಮೇಶ್ವರ, ವೀರಹರ್ಷೇಶ್ವರ ಇವು ಪೂಜ್ಯವಾದ ಶಿವಲಿಂಗಗಳು. ॥೯೩-೯೪॥

ತ್ವಯಾನ್ನಪೂರ್ಣಯಾ ದೇವಿ ಸೇವಿತೋ ಗಣಪೈಸ್ತಥಾ ।
ಅವಿಮುಕ್ತೇ ನಿವತ್ಸ್ಯಾಮಿ ತಾರಯನ್ ಜನತಾರುಜಂ ॥೯೫॥

ಸೌವೀರೇ ಬಿಲ್ವಕೇಶಶ್ಚ ವೃಷೇಧ್ರೇಶಃ ಶಿಲೇಶ್ವರಃ ।
ತಂಗಣೇಷು ಯಯಾತೀಶಃ ಫಣೇಶಶ್ಚೇತಿ ಸಂಸ್ಥಿತಾಃ ॥೯೬॥

ಸೈಂಧವೇಷು ಮಹಾದೇಶ ವಾರಣೇಶಃ ಕುಶೇಶ್ವರಃ ।
ಸಿಂಹಲೇಥ ಪಿನಾಕೀಶಃ ಕಾರುಣ್ಯೇಶಃ ಸ್ಥಿತಶ್ಶಿವೇ ॥೯೭॥

ಆರಟ್ಟೆ ಕರಹಟ್ಟೇಶಃ ಖಾನ್ಯೇನ್ವೈಖಾನಸೇಶ್ವರಃ ।
ಬೈಂದವೇ ಬಿಂದುಕೇಶಶ್ಚ ಪ್ರಸನ್ನೇಶಃ ಪ್ರಸನ್ನಕೇ ॥೯೮॥

ಕುಣಿಕುಂಭೇ ಪ್ರಮಾಥೀಶಃ ಸಾರಣೇ ಸರಣೇಶ್ವರಃ ।
ಅಂಗೇಷು ಫಣಿಭದ್ರೇಶೋ ರೋಮಹಾರೀಶ್ವರಸ್ತಥಾ ॥೯೯॥

ವಂಗೇಷು ವಾಗುರೀಶೋಥ ವನೇಶೋಥ ನರೇಶ್ವರಃ ।
ಕಲಿಂಗೇಷು ವಿರೂಪಾಕ್ಷೋ ಗಣಾಗೀತೇಶ್ವರಸ್ತಥಾ ॥೧೦೦॥

---

ಎಲೌ ದೇವಿಯೇ, ನಾನು ಸದಾ, ಅನ್ನಪೂರ್ಣೆಯೆನಿಸಿದ ನಿನ್ನೊಡನೆಯೂ, ನನ್ನ ಪ್ರಮಥಗಣಗಳೊಡನೆಯೂ ಕೂಡಿಕೊಂಡು ಅವಿಮುಕ್ತಕ್ಷೇತ್ರವೆನಿಸಿದ ಕಾಶೀನಗರದಲ್ಲಿ ನನ್ನ ಭಕ್ತಕೋಟಿಯನ್ನುದ್ಧರಿಸುತ್ತಾ ವಾಸವಾಗುವೆನು ಸೌವೀರದೇಶದಲ್ಲಿ ಬಿಲ್ವಕೇಶ್ವರ, ವೃಷೇಧ್ರೇಶ್ವರ, ಶಿಲೇಶ್ವರ ಇವು ಪ್ರಸಿದ್ಧವಾದವುಗಳು. ಸಿಂಧುದೇಶದಲ್ಲಿ ಮಹಾದೇಶ್ವರ, ವಾರಣೇಶ್ವರ, ಕುಶೇಶ್ವರ, ಇವೂ, ಸಿಂಹಲದೇಶದಲ್ಲಿ ಪಿನಾಕೀಶ್ವರ, ಕಾರುಣ್ಯೇಶ್ವರ ಇವೂ ಪ್ರಸಿದ್ಧವಾದ ಶಿವಲಿಂಗಗಳು. ॥೯೫-೯೬-೯೭॥

ಆರಟ್ಟಕ್ಷೇತ್ರದಲ್ಲಿ ಕರಹಟ್ಟೇಶ್ವರನೂ, ಖಾನ್ಯ (?) ದೇಶದಲ್ಲಿ ವೈಖಾನಸೇಶ್ವರನೂ, ಬಿಂದುಕ್ಷೇತ್ರದಲ್ಲಿ ಬಿಂದುಕೇಶ್ವರನೂ, ಪ್ರಸನ್ನಕ್ಷೇತ್ರದಲ್ಲಿ ಪ್ರಸನ್ನಕೇಶ್ವರನೂ, ಕುಣಿಕುಂಭಕ್ಷೇತ್ರದಲ್ಲಿ ಪ್ರಮಾಥೀಶ್ವರನೂ, ಸಾರಣಕ್ಷೇತ್ರದಲ್ಲಿ ಸರಣೇಶ್ವರನೂ, ಅಂಗದೇಶದಲ್ಲಿ ಫಣಿಭದ್ರೇಶ್ವರನೂ. ರೋಮಹಾರೀಶ್ವರನೂ, ವಂಗದೇಶದಲ್ಲಿ ವಾಗುರೀಶ್ವರನೂ, ವನೇಶ್ವರನೂ, ನರೇಶ್ವರನೂ, ಕಲಿಂಗದೇಶಗಳಲ್ಲಿ ವಿರೂಪಾಕ್ಷೇಶ್ವರನೂ, ಗಣಾಗೀತೇಶ್ವರನೂ ಪೂಜ್ಯಲಿಂಗಗಳೆನಿಸಿರುವುವು. ॥೯೮-೯೯-೧೦೦॥

ಕಾಶ್ಮೀರೇ ರಶ್ಮಿಕೇಶಶ್ಚ ತುರಂಗೇಶಪ್ರಸಾದನಃ ।
ವರ್ಧನೇಷು ಮಹಾವೀರೋ ಗಂಧರ್ವೇಶಶ್ಶತೇಶ್ವರಃ ॥೧೦೧॥

ಪೌರಾಣೇಷು ಮತೀಶಾನಃ ಫಣಿಕಂಠೇಶ್ವರಶ್ಶಿವಃ ।
ಉದಯೇ ಚೋದಯೇಶೋಥ ಪಾರಿಯಾತ್ರೇ ಮಹೇಶ್ವರಃ ॥೧೦೨॥

ಅಸ್ತಾಚಲೇ ತಥಾಸ್ತೇಶೋ ಭಗಮಾಲೀಶ್ವರಸ್ತಥಾ ।
ಶಿಲಾನದ್ಯಾಸ್ತಟೇ ದೇವಿ ವೈದ್ಯುತೇಶಃ ಪ್ರತಿಷ್ಠಿತಃ ॥೧೦೩॥

ಕೋಟೇಶ್ವರೋ ಮಹಾಕಾಲಃ ಸುನರ್ದೇಚ ಸ್ಥಿತೌ ಶಿವೇ ।
ಮರುದ್ದೇಶೋ ವಿಗಂಡೇಶಃ ಶುಕೇಶೋ ರಜನೀಶ್ವರಃ ॥೧೦೪॥

ಬಿಲ್ವಜೇ ಮಣಿಚಿತ್ರೇಶಃ ಪೌಂಡ್ರೇ ಪುಂಡ್ರೇಶ್ವರಸ್ಸ್ಥಿತಃ ।
ಸಾರ್ವಕೇ ಸುಂದರೇಶಾನಃ ಪ್ರತರ್ದನನಗಾರ್ದನೌ ॥೧೦೫॥

ಕಾರಂಡೇ ತಾಂಡವೇಶಶ್ಚ ವಿಸರ್ಗೇಶಶ್ಚ ಸಂಸ್ಥಿತಃ ।
ಗರುಡೇಶಃ ಪನ್ನಗೇಶಃ ಕಾಲಕೇ ಸುಪ್ರತಿಷ್ಠಿತಃ ॥೧೦೬॥

ಕಾಶ್ಮೀರದಲ್ಲಿ ರಶ್ಮಿಕೇಶ್ವರನೂ, ತುರಂಗೇಶ್ವರನೂ, ವರ್ಧನದೇಶದಲ್ಲಿ ಮಹಾವೀರೇಶ್ವರ, ಗಂಧರ್ವೇಶ್ವರ, ಶತೇಶ್ವರ, ಶಿವಲಿಂಗಗಳೂ, ಪೌರಾಣದೇಶಗಳಲ್ಲಿ ಫಣಿಕಂಠೇಶ್ವರ, ಉದಯಾಚಲದಲ್ಲಿ ಉದಯೇಶ್ವರನೂ, ಅಸ್ತಾಚಲದಲ್ಲಿ ಅಸ್ತೇಶ್ವರನೂ, ಭಗಮಾಲೀಶ್ವರನೂ, ಪಾರಿಯಾತ್ರಪರ್ವತದಲ್ಲಿ ಮಹೇಶ್ವರನೂ, ಪ್ರಸಿದ್ಧರಾಗಿರುವರು. ॥೧೦೧-೧೦೨॥

ಶಿಲಾನದಿಯ ತೀರದಲ್ಲಿ ವೈದ್ಯುತೇಶನೂ, ಸುನರ್ದಕ್ಷೇತ್ರದಲ್ಲಿ ಕೋಟೇಶ್ವರ, ಮಹಾಕಾಲೇಶ್ವರ, ಮರುದ್ದೇಶೇಶ್ವರ, ವಿಗಂಡೇಶ್ವರ, ಶುಕೇಶ್ವರ, ರಜನೀಶ್ವರಲಿಂಗಗಳೂ, ಬಲ್ವಜಕ್ಷೇತ್ರದಲ್ಲಿ ಮಣಿಚಿತ್ರೇಶ್ವರನೂ, ಪೌಂಡ್ರಕ್ಷೇತ್ರದಲ್ಲಿ ಪುಂಡ್ರೇಶ್ವರನೂ, ಸಾರ್ವಕಕ್ಷೇತ್ರದಲ್ಲಿ ಸುಂದರೇಶ್ವರನೂ, ಪ್ರತರ್ದನೇಶ್ವರನೂ, ನಗಾರ್ದನೇಶ್ವರನೂ ಪ್ರಸಿದ್ಧರಾಗಿರುವರು. ॥೧೦೩-೧೦೪-೧೦೫॥

ಕಾರಂಡಕ ಕ್ಷೇತ್ರದಲ್ಲಿ ತಾಂಡವೇಶ್ವರ, ವಿಸರ್ಗೇಶ್ವರ, ಗರುಡೇಶ್ವರ, ಪನ್ನಗೇಶ್ವರ (ಕಾಲಕಕ್ಷೇತ್ರದಲ್ಲಿ) ಉದುಂಬರಕ್ಷೇತ್ರದಲ್ಲಿ ಉದುಂಬರೇಶ್ವರನೂ, ಕಹೋಲ

ಉದುಂಬರೇಂಬರೇಶಾನಃ ಕಹೋಲೇ ಹೋಲಕೇಶ್ವರಃ ।
ಕೌಸಲೇ ಕಮಲೇಶಶ್ಚ ತಸ್ಕರೇಶೋ ಧುನೀಶ್ವರಃ ॥೧೦೭॥

ಪಾರಿಜಾತೇಶ್ವರಶ್ಚೈವ ಗಂಧಭದ್ರೇಶ್ವರಸ್ತಥಾ ।
ಉತ್ತರಾಪಥಗಾ ದೇವಿ ಪ್ರಮೋದೇಶೋ ಭಗೀಶ್ವರಃ ॥೧೦೮॥

ಫುಲ್ಲೇಶಕರುಣೇಶೌ ಚ ಚಿತ್ರಖಂಡೇ ವ್ಯವಸ್ಥಿತಃ ।
ದಾರವೇ ದಾರುಕೇಶಶ್ಚ ಪ್ರಮಾಥೀಶೋರಗೇಶ್ವರೌ ॥೧೦೯॥

ಕರಾಡೇ ಪಾಲಕೀಶಶ್ಚ ತರಂಗೇಶಾ ವ್ಯವಸ್ಥಿತಾಃ ।
ಮಹಾರಾಷ್ಟ್ರೇ ಮಧ್ಯಮೇಶಃ ಸಿಂಧುರೀಶೋ ಗಣೇಶ್ವರಃ ॥೧೧೦॥

ಮರೇಶ್ವರೋನಮಿತ್ರೇಶೋ ಗೂರ್ಜರೇ ಗುಂಜಿಕೇಶ್ವರಃ ।
ವರ್ಧನೀಶಸ್ಸ್ವರ್ಧುನೀಶೋ ಪಾರಸೀಕೇಷು ಶಂಕರಃ ॥೧೧೧॥

ತುಂಬುರೇಶಃ ಕರಂಭೇಶೋ ದಲಿಕೇಷು ಪನೀಶ್ವರಃ ।
ಮಾರ್ಗದೇಶೋ ರಾತ್ರಿಕೇಶೋ ವೇಣುದಾರೀಶ್ವರಸ್ತಥಾ ॥೧೧೨॥

ಮೌಸಲೇ ತುಹಲೀಶಾನಃ ಕಾದ್ರವೇಶೋ ಧನಾಧಿಪಃ ।
ಬಲೇಷು ಧಾನ್ಯಕೇಶಾನೋ ಸುಪಾರ್ಶ್ವೇಶಃ ಪ್ರಸನ್ನಕಃ ॥೧೧೩॥

---

ಕ್ಷೇತ್ರದಲ್ಲಿ ಹೋಲಕೇಶ್ವರನೂ, ಕೋಸಲದೇಶದಲ್ಲಿ ಕಮಲೇಶ್ವರನೂ, ತಸ್ಕರೇಶ್ವರನೂ, ಧುನೀಶ್ವರನೂ ಪ್ರಸಿದ್ಧರಾಗಿರುವರು. ॥೧೦೬-೧೦೭॥

ಪಾರೀಜಾತೇಶ್ವರ, ಗಂಧಭದ್ರೇಶ್ವರ, ಉತ್ತರಾಪಥದಲ್ಲಿ ಪ್ರಮೋದೇಶ್ವರ, ಭಗೀಶ್ವರ, ಫುಲ್ಲೇಶ್ವರ, ಕರುಣೇಶ್ವರ, ಚಿತ್ರಖಂಡೇಶ್ವರ, ದಾರವಕ್ಷೇತ್ರದಲ್ಲಿ ದಾರುಕೇಶ್ವರ, ಪ್ರಮಾಥೀಶ್ವರ, ಉರಗೇಶ್ವರ, ಕರಾಡಕ್ಷೇತ್ರದಲ್ಲಿ ಪಾಲಕೀಶ್ವರ, ತರಂಗೇಶ್ವರ, ಮಹಾರಾಷ್ಟ್ರದೇಶದಲ್ಲಿ ಮಧ್ಯಮೇಶ್ವರ, ಸಿಂಧುರೀಶ್ವರ, ಗಣೇಶ್ವರ, ಈ ಶಿವಲಿಂಗಗಳು ಪ್ರಸಿದ್ಧವಾದವುಗಳು. ॥೧೦೮-೧೦೯-೧೧೦॥

ಮರೇಶ್ವರ, ಅನಮಿತೇಶ್ವರ, ಗುರ್ಜರದೇಶದಲ್ಲಿ ಗುಂಜಕೇಶ್ವರ, ವರ್ಧನೀಶ್ವರ, ಸ್ವರ್ಧುನೀಶ್ವರ, ಪಾರಸೀಕದೇಶದಲ್ಲಿ ಶಂಕರನೂ, ತುಂಬುರೇಶ್ವರ, ಕರಂಭೇಶ್ವರ, ಪನೀಶ್ವರ, ಮಾರ್ಗದೇಶ್ವರ, ರಾತ್ರಿಕೇಶ್ವರ, ವೇಣುದಾರೀಶ್ವರ, ಮೌಸಲಕ್ಷೇತ್ರದಲ್ಲಿ

ಗೋವರ್ಧನೇ ವರ್ದಕೇಶೋ ಚೀನೇ ಹೀನಹರೇಶ್ವರಃ ।
ಜಾಂಗಲೇ ಮಂಗಲೇಶಾನಸ್ತುಂಡೀರೇ ಕಾಂಡಕೇಶ್ವರಃ ॥೧೧೪॥

ಹೂಣೇಷು ಕಲಿಕೇಶಶ್ಚ ಸುಹೂಣೇಷು ಜಟೇಶ್ವರಃ ।
ಮೀನಾಶನೇಷು ಮೌನೀಶೋ ಮೈತ್ರೇ ಮಿತ್ರಾಯಣೇಶ್ವರಃ ॥೧೧೫॥

ವಲ್ಕಲೇಷು ಪ್ರತಾನೇಶೋ ಕಾಂದೇಷು ಪ್ರಕಟೇಶ್ವರಃ ।
ತುಹುಂಡೇಷು ತುಹುಂಡೀಶೌ ಹೌಂಡೀಶಃ ಪಾರದೇಶ್ವರಃ ॥೧೧೬॥

ಮಾಂಸಾದನೇಷು ದಾನೇಶೋ ಗಂಡೇಷು ಪುರುಕೇಶ್ವರಃ ।
ಲಂಗಡೇಷು ಫಣೇಂದ್ರೇಶೋ ವಿಸ್ತಾರ್ಯೇಷು ಪ್ರಕಾಶಕೃತ್ ॥೧೧೭॥

ಮಧ್ವಾದನೇಷು ಮಾಧ್ವೀಶೋ ಗೌಡೇಷು ಶ್ರುತಕೇಶ್ವರಃ ।
ಚಾರುದೇಷ್ಣೇಷು ಶೌಕ್ಲೀಶಃ ಕುಂಟಕೇಷು ಲತೇಶ್ವರಃ ॥೧೧೮॥

ಪಾವನೇಷು ಫಲಸ್ಯೇಶೋ ರಾಘವೇಶೋ ದ್ರುಮೇಶ್ವರಃ ।
ಸ್ವಕಲ್ಪೇಷು ಸಪತ್ನೀಶೋ ನಗಚಾರಿಷು ನಾಗಧೃಕ್ ॥೧೧೯॥

ತುಹಲೀಶ್ವರ, ಕಾದ್ರವೇಶ್ವರ, ಧನಾಧಿಪೇಶ್ವರ, ಬಲಕ್ಷೇತ್ರಗಳಲ್ಲಿ ಧಾನ್ಯಕೇಶ್ವರ, ಸುಪಾಶೀಶ್ವರ, ಪ್ರಸನ್ನಕೇಶ್ವರ. ॥೧೧೧-೧೧೨-೧೧೩॥

ಗೋವರ್ಧನಕ್ಷೇತ್ರದಲ್ಲಿ ವದನಕೇಶ್ವರ, ಚೀನಾದೇಶದಲ್ಲಿ ಹೀನಹರೇಶ್ವರನೂ, ಜಾಂಗಲೇಶಕ್ಷೇತ್ರದಲ್ಲಿ ಮಂಗಲೇಶ್ವರನೂ, ತುಂಡೀರಕ್ಷೇತ್ರದಲ್ಲಿ ತಾಂಡವೇಶ್ವರನೂ, ಹೂಣದೇಶದಲ್ಲಿ ಕಲಿಕೇಶ್ವರನೂ, ಸುಹೂಣಕ್ಷೇತ್ರದಲ್ಲಿ ಜಟೇಶ್ವರನೂ, ಮೀನಾಶನ ಕ್ಷೇತ್ರದಲ್ಲಿ ಮೌನೀಶ್ವರನೂ, ಮೈತ್ರಕ್ಷೇತ್ರದಲ್ಲಿ ಮಿತ್ರಾಯಣೇಶ್ವರನೂ, ವಲ್ಕಲ ಕ್ಷೇತ್ರದಲ್ಲಿ ಪ್ರತಾನೇಶ್ವರನೂ, ಕಾಂದಕ್ಷೇತ್ರದಲ್ಲಿ ಪ್ರಕಟೇಶ್ವರನೂ, ತುಹುಂಡ ಕ್ಷೇತ್ರದಲ್ಲಿ ತುಹುಂಡೀಶ್ವರನೂ, ಹೌಂಡೀಶ್ವರನೂ, ಪಾರದೇಶ್ವರನೂ ಪ್ರಸಿದ್ಧ ಶಿವಲಿಂಗಗಳಾಗಿರುವುವು. ॥೧೧೪-೧೧೫-೧೧೬॥

ಮಾಂಸಾದನದೇಶದಲ್ಲಿ ದಾನೇಶ್ವರನೂ, ಗಂಡೇಷುಕ್ಷೇತ್ರದಲ್ಲಿ ಪುರುಕೇಶ್ವರನೂ, ಲಂಗಡದೇಶದಲ್ಲಿ ಫಣೇಂದ್ರೇಶ್ವರನೂ, ವಿಸ್ತಾರ್ಯದೇಶದಲ್ಲಿ ಪ್ರಕಾಶಕೃದೀಶ್ವರನೂ, ಮಧ್ವಾದನದೇಶದಲ್ಲಿ ಮಾಧ್ವೀಶ್ವರನೂ, ಗೌಡದೇಶದಲ್ಲಿ ಶ್ರುತಕೇಶ್ವರನೂ, ಚಾರುದೇಶದಲ್ಲಿ ಶೌಕ್ಲೀಶನೂ, ಕುಂಟಕಕ್ಷೇತ್ರದಲ್ಲಿ ಲತೇಶ್ವರನೂ, ಪಾವನದೇಶದಲ್ಲಿ

ಫಣಾಫಣೇಶ್ವರಃ ಕಾಲೇ ಅಂಕೋಲೇಷು ಜಿನೇಶ್ವರಃ ।
ಮನಸ್ಯೇಷು ಪುರಂಧ್ರೀಶಃ ಪೌಂಡ್ರೇಷು ಪ್ರಸ್ಥಿತೇಶ್ವರಃ ॥೧೨೦॥

ಮಿಥಿಲೇಷು ಕನಸ್ಯೇಶೋ ಗೋಪ್ರೇಕ್ಷೇಶೋ ನಿರಿಂದ್ರಿಯಃ ।
ವಾಸ್ತೇಷು ಭೌತಿಕೇಶಶ್ಚ ಕಂಠೇಷು ಮಣಿಕಂಠಕಃ ॥೧೨೧॥

ತಾರ್ಕ್ಷ್ಯೇಷು ಕಾಣವೇಶಶ್ಚ ಕರಂಧೇಷು ಮಹೇಶ್ವರಃ ।
ತರಂಗೇಷು ಮಹಾಭದ್ರೋ ದರ್ದುರೇಷು ಕೃತೀಶ್ವರಃ ॥೧೨೨॥

ವೈರಾಟೇಷು ಕಠೋರೇಶೋ ವಿಸ್ತಂಡೇಷು ಕುಥೇಶ್ವರಃ ।
ಪಾರಿಯಾತ್ರೇ ಪಾತ್ರಿಕೇಶೋ ವಿತಸ್ತೀಶಃ ಕರುಸ್ಥಲೇ ॥೧೨೩॥

ಭಾರತೇ ಪುರುಭದ್ರೇಶಃ ಪುರುಹೂತೇಶ್ವರಸ್ತಥಾ ।
ಗಾಣೇಷು ಚ ಗಣೇಶಾನಃ ಕುಮಾರೀಶಃ ಕುಮಾರಕೇ ॥೧೨೪॥

ಶತಶೃಂಗೇಮರೀಶಾನಃ ಪರ್ಜನ್ಯೇಶಃ ಓಲಿಪ್ಪಿಲೇ ।
ಕಾಲಂಜರೇ ರುದ್ರಕೇಶೋ ಜಾತೂಕರ್ಣೇಶ್ವರಶ್ಶಿವೇ ॥೧೨೫॥

---

ಫಲೇಶ್ವರನೂ, ರಾಘವೇಶ್ವರನೂ. ದ್ರುಮೇಶ್ವರನೂ, ಸ್ವಕಲ್ಕದೇಶದಲ್ಲಿ ಸಪತ್ನೀಶ್ವರನೂ. ನಗಚಾರಿದೇಶದಲ್ಲಿ ನಾಗಧಾರೀಶ್ವರನೂ ಪ್ರಸಿದ್ಧಶಿವಮೂರ್ತಿಗಳೆನಿಸಿವೆ. ॥೧೧೭-೧೧೮-೧೧೯॥

ಕಾಲಕ್ಷೇತ್ರವಲ್ಲಿ ಫಣಾಫಣೇಶ್ವರನೂ, ಅಂಕೋಲಕ್ಷೇತ್ರದಲ್ಲಿ ಜಿನೇಶ್ವರನೂ, ಮನಸ್ಯದೇಶದಲ್ಲಿ ಪುರಂಧ್ರೀಶ್ವರನೂ, ಪೌಂಡ್ರದೇಶದಲ್ಲಿ ಪ್ರಸ್ಥಿತೇಶ್ವರನೂ, ಮಿಥಿಲಾದೇಶದಲ್ಲಿ ಕನಸ್ಯೇಶ್ವರನೂ, ಗೋಪ್ರೇಕ್ಷೇಶ್ವರನೂ, ನಿರಿಂದ್ರಿಯೇಶ್ವರನೂ, ವಾಸ್ತಕ್ಷೇತ್ರದಲ್ಲಿ ಭೌತಿಕೇಶ್ವರನೂ, ಕಂಠಕ್ಷೇತ್ರದಲ್ಲಿ ಮಣಿಕಂಡಕೇಶ್ವರನೂ, ತಾರ್ಕ್ಷ್ಯದೇಶದಲ್ಲಿ ಕಾಣವೇಶ್ವರನೂ, ಕರಂಧದೇಶಗಳಲ್ಲಿ ಮಹೇಶ್ವರನೂ, ತರಂಗದೇಶಗಳಲ್ಲಿ ಮಹಾಭದ್ರೇಶ್ವರನೂ, ದರ್ದುರಕ್ಷೇತ್ರಗಳಲ್ಲಿ ಕೃತೀಶ್ವರನೂ ಪ್ರಸಿದ್ಧ ಶಿವಲಿಂಗಗಳು. ॥೧೨೦-೧೨೧-೧೨೨॥

ವೈರಾಟದೇಶದಲ್ಲಿ ಕಠೋರೇಶ್ವರನೂ, ವಿಸ್ತಂಡದೇಶದಲ್ಲಿ ಕುಥೇಶ್ವರನೂ, ಪಾರಿಯಾತ್ರದೇಶದಲ್ಲಿ ಪಾತ್ರಿಕೇಶ್ವರನೂ, ಕರುಸ್ಥಲದೇಶದಲ್ಲಿ ವಿತಸ್ತೀಶನೂ, ಭಾರತದಲ್ಲಿ ಪುರುಭದ್ರೇಶ್ವರನೂ, ಪುರುಹೂತೇಶ್ವರನೂ, ಗಾಣದೇಶದಲ್ಲಿ ಗಣೇಶ್ವರನೂ, ಕುಮಾರ

ವರ್ಧನೇ ಪಾರಿಭದ್ರೇಶೋ ವಿಂಧ್ಯೇ ಸಾಧ್ಯೇಶ್ವರಸ್ತಥಾ ।
ವಿರಾಧೇಶಃ ಕೊಂಕಣೇಶಸ್ತಮಾಲೇಷು ಮಹೇಶ್ವರಃ ॥೧೩೬॥

ಗರ್ಗರೀಷು ಪವೀಶಾನ ಉದ್ದಾಮೇ ಚ ಪ್ರಸೇನಜಿತ್ ।
ಕಾಂಡೇಷು ಪಾಂಡಲೀಶಾನೋ ವಧ್ರೇಷು ಬ್ರಧ್ನಕೇಶ್ವರಃ ॥೧೩೭॥

ಕರಂಭೇಷು ಸುಧನ್ವೀಶೋ ಗೋಪತಿಶ್ಚ ಮಹೇಶ್ವರಃ ।
ಉರ್ವರೀಶೋ ವಾಮನೇಶೋ ಸಿಂಜನೇ ಕುಜನೇಶ್ವರಃ ॥೧೩೮॥

ಶಾಂತಕುಂಭೇಷು ಕುಂಭೀಶೋ ಮಥನೇಶೋ ಮೃಡೇಶ್ವರಃ ।
ಪಂಥಾವೃತೇಶ್ವರಶ್ಚೈತ್ರೇ ಮಾಣಿಕ್ಯೇಶಃ ಪ್ರಸೋಮಕಃ ॥೧೩೯॥

ಸೋಮಚೂಡೇಶ್ವರಃ ಸೈಂಹೇ ಸಿಂಹಕೇಶಶ್ಚ ಶಂಕರಃ ।
ಕಾಕೇಶ್ವರಸ್ತಾರಕೇಶೋ ಮಾಲವೇಷು ಮಹೇಶ್ವರಃ ॥೧೪೦॥

ವೀಣಾಪಾಣೀಶ್ವರೋ ನೀಲೇ ಸೌಮ್ಯೇ ಸೋಮೇಶ್ವರೋ ಮಹಾನ್ ।
ಹೇಮಕೂಟೇ ಚ ಕೂಟೇಶಸ್ತ್ರಿಕೂಟೇ ಕರ್ಕಟೇಶ್ವರಃ ॥೧೪೧॥

ಕ್ಷೇತ್ರದಲ್ಲಿ ಕುಮಾರೀಶ್ವರನೂ, ಶತಶೃಂಗಪರ್ವತದಲ್ಲಿ ಅಮರೇಶ್ವರನೂ, ಪಿಲಿಪ್ಪಿಲ ದೇಶದಲ್ಲಿ ಪರ್ಜನ್ಯೇಶ್ವರನೂ, ಕಾಲಂಜರದೇಶದಲ್ಲಿ ರುದ್ರೇಶ್ವರನೂ, ಜಾತೂಕರ್ಣೇಶ್ವರನೂ ಪ್ರಸಿದ್ಧವಾದ ಶಿವಲಿಂಗಗಳೆನಿಸಿರುವುವು. ॥೧೩೪-೧೩೫॥

ವರ್ಧನಪರ್ವತದಲ್ಲಿ ಪಾರಿಭದ್ರೇಶ್ವರನೂ, ವಿಂಧ್ಯಪರ್ವತದಲ್ಲಿ ಸಾಧ್ಯೇಶ್ವರನೂ, ತಮಾಲಪರ್ವತದಲ್ಲಿ ವಿರಾಧೇಶ್ವರ, ಕೊಂಕಣೇಶ್ವರ, ತಮಾಲೇಶ್ವರ, ಮಹೇಶ್ವರ, ಇವುಗಳೂ, ಗರ್ಗರಕ್ಷೇತ್ರದಲ್ಲಿ ಪವೀಶಾನ, ಉದ್ದಾಮೇಶ್ವರ, ಪ್ರಸೇನಜಿತ್, ಎಂಬ ಶಿವಲಿಂಗಗಳೂ, ಕಾಂಡಕ್ಷೇತ್ರಗಳಲ್ಲಿ ಪಾಂಡಲೀಶ್ವರ, ಬ್ರಧ್ನಕೇಶ್ವರ, ಇವೂ, ಕರಂಬಕಕ್ಷೇತ್ರದಲ್ಲಿ ಸುಧನ್ವೀಶ್ವರ, ಗೋಪತೀಶ್ವರ, ಮಹೇಶ್ವರ, ಸಿಂಜಾನ ಕ್ಷೇತ್ರದಲ್ಲಿ ಉರ್ವರೀಶ್ವರ, ವಾಮನೇಶ್ವರ ಕುಜನೇಶ್ವರಗಳೆಂಬ ಶಿವಲಿಂಗಗಳೂ ಪ್ರಸಿದ್ಧಗಳೆನಿಸಿವೆ. ॥೧೩೬-೧೩೭-೧೩೮॥

ಶಾಂತಕುಂಭಕ್ಷೇತ್ರಗಳಲ್ಲಿ ಕುಂಭೀಶ್ವರ, ಮಥನೇಶ್ವರ, ಮೃತೇಶ್ವರ, ಪಂಥಾವೃತೇಶ್ವರ, ಎಂಬುವೂ, ಚೈತ್ರಕ್ಷೇತ್ರದಲ್ಲಿ ಮಾಣಿಕೇಶ್ವರ, ಪ್ರಸೋಮಕೇಶ್ವರ, ಸೋಮಚೂಡೇಶ್ವರ, ಸೈಂಹಕ್ಷೇತ್ರದಲ್ಲಿ, ಸಿಂಹಕೇಶ್ವರ, ಶಂಕರೇಶ್ವರ, ಕಾಕೇಶ್ವರ,

ಸಹ್ಯೇ ಸಹ್ಯೇಶ್ವರೋ ದೇವಿ ಹಿಮವಂತ್ಯಕುರೇಶ್ವರಃ ।
ಕೇದಾರಶ್ಚೈವ ಭೌಮೇಶೋ ಗಾರ್ಗರೀಶೋಽಥ ಚಂದನೇ ॥೧೩೨॥

ಹರಶೈಲೇ ಹರೀಶಶ್ಚ ಕರ್ಪಟೇ ಕಾರ್ಪಟೇಶ್ವರಃ ।
ಸತ್ಯೇಶ್ವರೋ ವೈನತೇಶೋ ಗಾರುಡೇ ಪರ್ವತೋತ್ತಮೇ ॥೧೩೩॥

ಪ್ರಜಾಪತೀಶೋ ವೇದೀಶಸ್ತ್ರಿಧಾಮೇಶೋ ರತೀಶ್ವರಃ ।
ಹರಿಗರ್ಭೇಶ್ವರಶ್ಚೈವ ಬ್ರಹ್ಮಗರ್ಭೇಶ್ವರಸ್ತಥಾ ॥೧೩೪॥

ರತ್ನಾದ್ರೌ ರತ್ನಗರ್ಭೇಶೋ ವಿದ್ಯೇಶೋ ವೈದ್ಯಪರ್ವತೇ ।
ಕಂದರ್ಪೇಶಶ್ಚ ಸರ್ಪೇಶೋ ಗೋವರ್ಧನಗಿರೌ ಸ್ಥಿತೌ ॥೧೩೫॥

ಪ್ರತಾರ್ಯೇಶಸ್ತಾಮ್ರಕೇಶ ಶಿಖಂಡೀಶೌ ಗತಾವುಭೌ ।
ಪ್ರಭಾಮಂಡಲಕೇಶಶ್ಚ ವಿಧಾಮೇಶೇಶ್ವರೇಶ್ವರಃ ॥೧೩೬॥

---

ಸಾರಕೇಶ್ವರ ಮುಂತಾದುವುಗಳೂ ಮಾಲವದೇಶದಲ್ಲಿ ಮಹೇಶ್ವರಲಿಂಗವೂ ಪ್ರಸಿದ್ಧ ವಾಗಿರುವುವು. ॥೧೨೯-೧೩೦॥

ನೀಲಪರ್ವತದಲ್ಲಿ ವೀಣಾಪಾಣೀಶ್ವರನೂ, ಸೌಮ್ಯಪರ್ವತದಲ್ಲಿ ಸೋಮೇಶ್ವರನೂ, ಹೇಮಕೂಟಗಿರಿಯಲ್ಲಿ ಕೂಟೇಶ್ವರನೂ, ತ್ರಿಕೂಟಕ್ಷೇತ್ರದಲ್ಲಿ ಕರ್ಕಟೇಶ್ವರನೂ, ಸಹ್ಯಾದ್ರಿಯಲ್ಲಿ ಸಹ್ಯೇಶ್ವರನೂ, ಹಿಮವದ್ಗಿರಿಯಲ್ಲಿ ಅಂಕುರೇಶ್ವರನೂ, ಚಂದನವನದಲ್ಲಿ ಕೇದಾರೇಶ್ವರ, ಭೌಮೇಶ್ವರ, ಗಾರ್ಗರೀಶ್ವರನೂ ಪ್ರಸಿದ್ಧವಾದ ಶಿವಲಿಂಗಗಳೆನಿಸಿವೆ. ॥೧೩೧-೧೩೨॥

ಹರಶೈಲದಲ್ಲಿ ಹರೀಶ್ವರನೂ, ಕರ್ಪಟಗಿರಿಯಲ್ಲಿ ಕರ್ಪಟೇಶ್ವರನೂ, ಗರುಡಗಿರಿಯಲ್ಲಿ ಸತ್ಯೇಶ್ವರ, ವೈನತೇಶ್ವರ, ಪ್ರಜಾಪತೀಶ್ವರ, ವೇದೀಶ್ವರ, ತ್ರಿಧಾಮೇಶ್ವರ, ರತೀಶ್ವರ, ಹರಿಗರ್ಭೇಶ್ವರ, ಬ್ರಹ್ಮಗರ್ಭೇಶ್ವರ ಮುಂತಾದ ಶಿವಲಿಂಗಗಳೂ ವಿರಾಜಿಸುತ್ತಲಿವೆ. ॥೧೩೩-೧೩೪॥

ರತ್ನಾದ್ರಿಯಲ್ಲಿ ರತ್ನಗರ್ಭೇಶ್ವರನೂ, ವೈದ್ಯಪರ್ವತದಲ್ಲಿ ವಿದ್ಯೇಶ್ವರನೂ, ಗೋವರ್ಧನಗಿರಿಯಲ್ಲಿ ಕಂದರ್ಪೇಶ್ವರ, ಸರ್ಪೇಶ್ವರ ಇವೂ, ಪ್ರತಾರ್ಯೇಶ್ವರ, ತಾಮ್ರಕೇಶ್ವರ, ಶಿಖಂಡೀಶ್ವರ, ಪ್ರಭಾಮಂಡಲಕೇಶ್ವರ, ವಿಧಾಮೇಶ್ವರ, ಈಶ್ವರೇಶ್ವರ ಇವೂ ಬಹು ಪ್ರಸಿದ್ಧವಾದವುಗಳು. ॥೧೩೫-೧೩೬॥

ತೋಯಕೇಶಶ್ಶಿವಗಿರೌ ಹರಿಕೇಶಶಿಖಂಡಿಕೇ ।
ಕರಂಜಪರ್ವತಗತಾತಾಮ್ರಭೂಮೌ ಪಿಲಿಪ್ಪಿಲಃ ॥೧೩೭॥

ದಂಡರೀಶಸ್ತುಂಡರೀಶೋ ಗಹ್ವರೇ ಪರ್ವತೇ ಸ್ಥಿತಾಃ ।
ಮಾರ್ಗಪಾಣೇಶ್ವರಶ್ಚೈವ ಸೌಧನ್ವೇ ಪರ್ವತೇ ಸ್ಥಿತಾಃ ॥೧೩೮॥

ಸ್ವರ್ಣವೇತ್ರಧರಶ್ಚೈವ ಶಕ್ತೀಶೋ ಮೇರುಮೌಲಿಗಃ ।
ಕಪಾಲೇಶಃ ಪಾಲಗಿರೌ ಚಿತ್ರಘಂಟೇ ನಗೇಶ್ವರಃ ॥೧೩೯॥

ದೇವೇಶ್ವರೋ ದೇವಕೂಟೇ ವೃಷಭೇಶೋ ವೃಷಾಚಲೇ ।
ಕಕುದ್ಮತೀಶ್ವರಶ್ಚೈವ ಕಕುದ್ಮೇತಿಸ್ಥಿತಶ್ಶಿವಃ ॥೧೪೦॥

ಭಾದ್ರೇ ಗಿರೌ ಭಾದ್ರಕೇಶೋ ಮಂದರೇ ಸುಂದರೇಶ್ವರಃ ।
ಕಲಶೇಶಾಕುಲಾಲೇಶೌ ಕೈಲಾಸೇ ದಕ್ಷಿಣೇಸ್ಥಿತೌ ॥೧೪೧॥

ಮನಸ್ವೀಶಗಣೇಶಾನೌ ಹರಿದ್ವರ್ಣನಗಸ್ಥಿತೌ ।
ವನಾಂತಿಕೇಶೋ ವೇದೇಶೋ ಗತೀಶೋ ಅರುಣೇಶ್ವರಃ ॥೧೪೨॥

ತೇನೇಶೋ ವಾತಭದ್ರೇಶಃ ಕುಮುದೇ ಕುಮುದೇಶ್ವರಃ ।
ವಾತೇಶೋ ಧನದೇಶಾನೋ ವೀತಿಹೋತ್ರೇಶ್ವರಸ್ತಥಾ ॥೧೪೩॥

---

ಶಿವಾದ್ರಿಯಲ್ಲಿ ತೋಯಕೇಶ್ವರನೂ, ಕರಂಜಪರ್ವತದಲ್ಲಿ ಹರಿಕೇಶ ಶಿಖಂಡಕೇಶ್ವರಲಿಂಗಗಳೂ, ತಾಮ್ರಭೂಮಿಯಲ್ಲಿ ಪಿಲಿಪ್ಪಿಲೇಶ್ವರನೂ, ಗಹ್ವರಪರ್ವತದಲ್ಲಿ, ದಂಡರೀಶ್ವರ ಲಿಂಗಗಳೂ, ಸೌಧನ್ವಪರ್ವತದಲ್ಲಿ ಮಾರ್ಗಪಾಣೇಶ್ವರಲಿಂಗವೂ ಪ್ರಸಿದ್ಧವಾಗಿರುವುವು. ॥೧೩೭-೧೩೮॥

ಮೇರುಮೌಲಿಯಲ್ಲಿ ಸ್ವರ್ಣವೇತ್ರವನ್ನು ಧರಿಸಿರುವ ಶಕ್ತೀಶ್ವರನೂ, ಪಾಲಗಿರಿಯಲ್ಲಿ ಕಪಾಲೇಶ್ವರನೂ, ಚಿತ್ರಘಂಟಾಕ್ಷೇತ್ರದಲ್ಲಿ ನಗೇಶ್ವರನೂ, ದೇವಕೂಟದಲ್ಲಿ ದೇವೇಶ್ವರನೂ, ವೃಷಾಚಲದಲ್ಲಿ ವೃಷಭೇಶ್ವರನೂ, ಕಕುದ್ಮತೀಗಿರಿಯಲ್ಲಿ ಕಕುದ್ಮತೀಶ್ವರನೂ ಪ್ರಸಿದ್ಧಗಳಾಗಿವೆ. ॥೧೩೯-೧೪೦॥

ಭದ್ರಾಗಿರಿಯಲ್ಲಿ ಭಾದ್ರವೇಶ್ವರನೂ, ಮಂದರಗಿರಿಯಲ್ಲಿ ಸುಂದರೇಶನೂ, ದಕ್ಷಿಣಕೈಲಾಸದಲ್ಲಿ ಕಲಶೇಶ ಮತ್ತು ಆಕುಲಾಲೇಶ್ವರನೂ, ಹರಿದ್ವರ್ಣಪರ್ವತದಲ್ಲಿ ಮನಸ್ವೀಶಗಣೇಶ್ವರರೂ, ನೆಲಸಿರುವರು. ಹಾಗೆಯೇ ವನಾಂತಿಕೇಶ್ವರ, ವೇದೇಶ್ವರ,

ಬ್ರಧ್ನಾಣಸೇಶ್ವರಶ್ಚೈವ ದಂಡಪಾಣೇಶ್ವರಸ್ತಥಾ ।
ದುಂದುಭೇ ಪರ್ವತವರೇ ದುಂದುಭೀಶೋ ಮಹೇಶ್ವರಃ ॥೧೪೪॥

ಸಂಘಹಾರೀಶ್ವರಶ್ಚೈವ ಜ್ವಾಲಾಗರ್ಭೇಶ್ವರಸ್ತಥಾ ।
ವಾತೂಲೇಶಃ ಪನ್ನಗೇಶಃ ಕರಂಭೀ ಕುಕ್ಕುಟೇಶ್ವರಃ ॥೧೪೫॥

ಬಕೇಶ್ವರಸ್ಸಾರಸೇಶಃ ಶಕ್ರೇಶೋ ಗಂಧಪರ್ವತೇ ।
ಸುನಾಭೇ ಪರ್ವತವರೇ ಸುನಾಭೇಶೋ ನಥೇಶ್ವರಃ ॥೧೪೬॥

ಕರ್ಮಾರಿಪರ್ವತವರೇ ಕರ್ಮಾರೀಶಸ್ಥಿತಶ್ಶಿವೇ ।
ಕ್ರೌಂಚೇ ಕ್ರೌಂಚೇಶ್ವರೋ ದೇವಿ ಹರಿತೇ ಹರಿಕೇಶಕಃ ॥೧೪೭॥

ವಹ್ನಿಶೈಲೇ ಚ ವಹ್ನೀಶೋ ಮಲಯೇ ಮಲಯೇಶ್ವರಃ ।
ವೇತಸೇ ವೇತಸೇಶಾನೋ ವೃಷಭೇ ವೃಷಭೇಶ್ವರಃ ॥೧೪೮॥

ಕಪಾಲಮೋಚನಃ ಕಾಂತೇ ರೋಹಿತೇ ರೋಹಿತೇಶ್ವರಃ ।
ಕಂಧರೇ ಭೂಧರೇಶಾನೋ ವಿದ್ಯುತ್ಯೇ ವೈದ್ಯುತೇಶ್ವರಃ ॥೧೪೯॥

ಗತೀಶ್ವರ, ಅರುಣೇಶ್ವರ, ತೇನೇಶ್ವರ, ವಾತಭದ್ರೇಶ್ವರ, ಕುಮುದೇಶ್ವರ, ವಾತೇಶ್ವರ, ಧನದೇಶ್ವರ, ವೀತಿಹೋತ್ರೇಶ್ವರ ಮುಂತಾದ ಶಿವಲಿಂಗಗಳು ಪ್ರಸಿದ್ಧವಾದವುಗಳು. ॥೧೪೧-೧೪೨-೧೪೩॥

ಬ್ರಧ್ನಾಣಸೇಶ್ವರ, ದಂಡಪಾಣೇಶ್ವರ, ದುಂದುಭಗಿರಿಯಲ್ಲಿ ದುಂದುಭೀಶ್ವರ, ಮಹೇಶ್ವರಲಿಂಗಗಳೂ, ಸಂಘಹಾರೀಶ್ವರ, ಜ್ವಾಲಾಭೇಶ್ವರ, ವಾತೂಲೇಶ್ವರ, ಪನ್ನಗೇಶ್ವರ, ಕರಂಭೀಶ್ವರ, ಕುಕ್ಕುಟೇಶ್ವರ ಈ ಶಿವಲಿಂಗಗಳೂ ಅತ್ಯಂತ ಪ್ರಸಿದ್ಧವಾದವುಗಳು. ॥೧೪೪-೧೪೫॥

ಬಕೇಶ್ವರ, ಸಾರಸೇಶ್ವರ, ಶಕ್ರೇಶ್ವರ ಇವು ಗಂಧಪರ್ವತದಲ್ಲಿಯೂ, ಸುನಾಭಪರ್ವತದಲ್ಲಿ ಸುನಾಭೇಶ್ವರನೂ, ಅನಾಥೇಶ್ವರನೂ, ಕರ್ಮಾದಿಪರ್ವತದಲ್ಲಿ ಕರ್ಮಾದೀಶ್ವರನೂ, ಕ್ರೌಂಚಪರ್ವತದಲ್ಲಿ ಕ್ರೌಂಚೇಶ್ವರನೂ, ಹರಿತಪರ್ವತದಲ್ಲಿ ಹರಿಕೇಶ್ವರನೂ ನೆಲಸಿರುವರು. ॥೧೪೬-೧೪೭॥

ಅಗ್ನಿಪರ್ವತದಲ್ಲಿ ವಹ್ನೀಶ್ವರನೂ, ಮಲಯಪರ್ವತದಲ್ಲಿ ಮಲಯೇಶ್ವರನೂ, ವೇತಸಗಿರಿಯಲ್ಲಿ ವೇತಸೇಶ್ವರನೂ, ವೃಷಭಾಚಲದಲ್ಲಿ ವೃಷಭೇಶ್ವರನೂ, ಕಾಂತಗಿರಿಯಲ್ಲಿ ಕಪಾಲಮೋಚನೇಶ್ವರನೂ, ರೋಹಿತಗಿರಿಯಲ್ಲಿ ರೋಹಿತೇಶ್ವರನೂ,

ವಿಭಾಂಡೇ ಭಾಂಡವೀಶಾನಃ ಕರಮರ್ದೇ ಸನಾತನಃ ।
ತುಹಿಂಡೇ ಕೊಂಡಕೇಶಶ್ಚ ಚಂದ್ರೇಶಶ್ಚಂದ್ರಪರ್ವತೇ ॥೧೫೦॥

ವಿನಂದಿನೇ ಸುನಂದೀಶಃ ಕಣವಾದ್ರೌ ಕಣೇಶ್ವರಃ ।
ಏತೇ ಪ್ರಾಧಾನ್ಯತಃ ಶೈಲಾ ವಿಗಾಢಾ ಯೇ ಮಹಾರ್ಣವೇ ॥೧೫೧॥

ತನ್ಮೌಲಿಲಿಂಗಾನ್ಯೇತಾನಿ ದೃಷ್ಟಾನ್ಯಘಹರಾಣಿ ಮೇ ।
ನದೀನದಸಮುದ್ರೇಷು ದ್ವೀಪೇಷು ದ್ವೀಪಕೇಶ್ವರಃ ॥೧೫೨॥

ತವ ಪೀಠಾನ್ಯನಂತಾನಿ ಪಂಚಾಶತ್ತೇಷು ಮುಖ್ಯತಃ ।
ತನ್ನಾಮಾನಿ ವದಾಮ್ಯದ್ಯ ಶೃಣುಷ್ವ ಕಮಲಾನನೇ ॥೧೫೩॥

ಮಣಿದ್ವೀಪಂ ಚ ಕೈಲಾಸೇ ಅವಿಮುಕ್ತೇ ಚ ಮಂಗಲಾ ।
ಸನಾತನೇ ಸಿನೀವಾಲೀ ಭದ್ರೇ ಭದ್ರವಟೇಶ್ವರೀ ॥೧೫೪॥

---

ಕಂಧರಪರ್ವತದಲ್ಲಿ ಭೂಧರೇಶ್ವರನೂ, ವಿದ್ಯುತ್ಪರ್ವತದಲ್ಲಿ ವೈದ್ಯುತೇಶ್ವರನೂ, ವಿಭಾಂಡಗಿರಿಯಲ್ಲಿ ಭಾಂಡವೀಶ್ವರನೂ, ಕರಮರ್ದಪರ್ವತದಲ್ಲಿ ಸನಾತನೇಶ್ವರನೂ, ಚಂದ್ರಗಿರಿಯಲ್ಲಿ ಚಂದ್ರೇಶ್ವರನೂ, ತುಹಿಂಡಕ್ಷೇತ್ರದಲ್ಲಿ ಕೊಂಡಕೇಶ್ವರನೂ ಪ್ರಸಿದ್ಧವಾದ ಶಿವಲಿಂಗಮೂರ್ತಿಗಳೆನಿಸಿವೆ ||೧೪೮-೧೪೯-೧೫೦||

ವಿನಂದಿಗಿರಿಯಲ್ಲಿ ಸುನಂದೀಶ್ವರನೂ, ಕಣವಾದ್ರಿಯಲ್ಲಿ ಕಣೇಶ್ವರನೂ ಇವೆಲ್ಲವೂ ಪ್ರಸಿದ್ಧವಾದ ಪರ್ವತಪ್ರದೇಶಗಳಲ್ಲಿರುವ ಶಿವಲಿಂಗಗಳು. ನದಿಗಳು, ನದಗಳು, ಸಮುದ್ರತೀರಗಳು, ದ್ವೀಪಗಳು, ಪರ್ವತಶಿಖರಗಳು ಇಂತಹ ಪವಿತ್ರ ಸ್ಥಳಗಳಲ್ಲೆಲ್ಲಾ ಆಯಾ ಹೆಸರಿನ ಶಿವಲಿಂಗಗಳಿರುವುವು. ಆ ಶಿವಲಿಂಗಗಳ ದರ್ಶನಮಾತ್ರದಿಂದಲೇ ಭಕ್ತರ ಸಮಸ್ತ ಪಾಪಗಳೂ ಪರಿಹಾರವಾಗುವುವು ಇದೇ ರೀತಿ, ದೇವಿಯೇ, ನಿನ್ನ ಪವಿತ್ರವಾದ ಪೀಠಗಳು (ಸ್ಥಾನಗಳು) ಎಲ್ಲಾ ಕಡೆಯಲ್ಲಿಯೂ ಅನಂತವಾಗಿರುವುವು. ಅವುಗಳಲ್ಲಿ ಐವತ್ತು ಸ್ಥಳಗಳು ಮಾತ್ರ ಬಹು ಮುಖ್ಯವಾದವುಗಳು. ಆ ಹೆಸರುಗಳನ್ನು ಮಾತ್ರ ನಿನಗೆ ಈಗ ತಿಳಿಯಪಡಿಸುವೆನು. ಸಾವಧಾನದಿಂದ ಲಾಲಿಸು ಎಂದು ಪರಶಿವನು ಪಾರ್ವತಿಗೆ ದೇವಿಯ ಆವಾಸಸ್ಥಳಗಳನ್ನು ವಿವರಿಸತೊಡಗಿದನು. ||೧೫೧-೧೫೨-೧೫೩||

ಕೈಲಾಸದಲ್ಲಿ ಮಣಿದ್ವೀಪನಿವಾಸಿನಿಯಾಗಿರುವೆ. ಕಾಶಿಯಲ್ಲಿ (ಅವಿಮುಕ್ತ ಕ್ಷೇತ್ರದಲ್ಲಿ) ಸರ್ವಮಂಗಳೆಯೆನಿಸಿರುವೆ. ಸನಾತನ ಕ್ಷೇತ್ರದಲ್ಲಿ ಸಿನೀವಾಲಿಯೆಂದೂ,

ಕಾಲಂಜರೇ ಜರಾದೇವಿ ಜಜ್ವಾಲೇ ಜಾಲಕೇಶ್ವರೀ ।
ಓಂಕಾರೇ ಕಾಮದಾ ದೇವೀ ಪರ್ಜನ್ಯಾ ಗೋಮತೀತಟೇ ॥೧೫೫॥

ವಿಶಾಖಾ ಪಾಶಮಥಿನೀ ಮಾಯಾಪುರ್ಯಾಂ ಚ ಮೇನಕಾ ।
ಕಲಾವತೀ ಕಾಲಶೈಲೇ ಮರುದಾ ಮರುಧಾಮನೀ ॥೧೫೬॥

ಜ್ವಾಲಾಮುಖೀ ಪ್ರಭಾಸೇ ತ್ವಂ ಕಾನ್ಯಕುಬ್ಜೇ ಚ ಕನ್ಯಕಾ ।
ಕೋಕಾಮುಖೇ ದೇವಿಕಾ ತ್ವಂ ಸಹಜನ್ಯಾ ಘೃತಾದನೇ ॥೧೫೭॥

ಪಾರ್ವತೀ ರಮಣೇ ಶೈಲೇ ತುಂಗಾಯಾಂ ತುಂಗಕಾಶಿವೇ ।
ಪರ್ಣಾದನೇ ವೇಗವತೀ ರುದ್ರಕೋಟೌ ಮಹೇಶ್ವರೀ ॥೧೫೮॥

ಗೋಢಕೇ ಗೋಮತೀ ದೇವೀ ವನೇಶೇ ರಮಣೀಮಣಿಃ ।
ತಾಲಜಂಘೇ ಖಂಡಕೇಶೀ ದರ್ದುರೇ ತ್ವಮರಾವತೀ ॥೧೫೯॥

ಪ್ರಸಾದಿನೀ ಪ್ರಸನ್ನಾಸ್ಯೇ ಗಾರುಡೇ ಗರುಡೇಶ್ವರೀ ।
ಅನಂತೇನಂತಶಕ್ತಿಸ್ತ್ವಂ ಸಿಂಹಲೇ ಸಿಂಹವಾಹಿನೀ ॥೧೬೦॥

---

ಭದ್ರಾಕ್ಷೇತ್ರದಲ್ಲಿ ಭದ್ರವಟೇಶ್ವರಿಯೆಂದೂ, ಕಾಲಂಜರಕ್ಷೇತ್ರದಲ್ಲಿ ಜರಾದೇವಿಯೆಂದೂ, ಜಜ್ವಾಲಕ್ಷೇತ್ರದಲ್ಲಿ ಜಾಲಕೇಶ್ವರಿಯೆಂದೂ, ಓಂಕಾರಕ್ಷೇತ್ರದಲ್ಲಿ ಕಾಮದಾದೇವಿಯಾಗಿಯೂ ಗೋಮತೀತೀರದಲ್ಲಿ ಪರ್ಜನ್ಯಾದೇವಿಯಾಗಿಯೂ ನೀನು ತೋರಿಬರುತ್ತಿರುವೆ. ॥೧೫೪-೧೫೫॥

ವಿಶಾಖಾಕ್ಷೇತ್ರದಲ್ಲಿ ಪಾಶಮಥನಿಯೆಂದೂ, ಮಾಯಾಪುರಿಯಲ್ಲಿ ಮೇನಕೆಯೆಂದೂ, ಕಾಲಶೈಲದಲ್ಲಿ ಕಲಾವತಿಯೆಂದೂ, ಮರುಧಾಮಕ್ಷೇತ್ರದಲ್ಲಿ ಮರುದಾ ಎಂದೂ, ಪ್ರಭಾಸಕ್ಷೇತ್ರದಲ್ಲಿ ಜ್ವಾಲಾಮುಖಿಯೆಂದೂ, ಕನ್ಯಕುಬ್ಜದಲ್ಲಿ ಕನ್ನಿಕೆಯೆಂದೂ. ಕೋಕಾಮುಖಕ್ಷೇತ್ರದಲ್ಲಿ ದೇವಿಯೆಂದೂ, ಘೃತಾವನಕ್ಷೇತ್ರದಲ್ಲಿ ಸಹಜನ್ಯೆಯೆಂದೂ ನೀನು ಪ್ರಸಿದ್ಧಳಾಗಿರುವೆ. ॥೧೫೬-೧೫೭॥

ರಮಣಗಿರಿಯಲ್ಲಿ ಪಾರ್ವತಿಯೆಂದೂ, ತುಂಗಾತೀರದಲ್ಲಿ ತುಂಗಾದೇವಿಯೆಂದೂ ಪರ್ಣಾದನಕ್ಷೇತ್ರದಲ್ಲಿ ವೇಗವತಿಯೆಂದೂ, ರುದ್ರಕೋಟಿಯಲ್ಲಿ ಮಹೇಶ್ವರಿಯೆಂದೂ, ಗೋಢಕಪ್ರದೇಶದಲ್ಲಿ ಗೋಮತಿಯೆಂದೂ, ವನೇಶಕ್ಷೇತ್ರದಲ್ಲಿ ರಮಣೀಮಣಿಯೆಂದೂ, ತಾಲಜಂಘಕ್ಷೇತ್ರದಲ್ಲಿ ಖಂಡಕೇಶಿಯೆಂದೂ, ದರ್ದುರಕ್ಷೇತ್ರದಲ್ಲಿ ಅಮರಾವತಿಯೆಂದೂ, ಪ್ರಸನ್ನಾಸ್ಯದಲ್ಲಿ ಪ್ರಸಾದಿನಿಯೆಂದೂ, ಗರುಡಾಚಲದಲ್ಲಿ

ಚಂದ್ರಲೇ ಚಂಡಲಾದೇವೀ ಬದರ್ಯಾಂ ಕಾಂತಿದಾಯಿನೀ ।
ವಿರಜೇ ವೀತಶೋಕಾ ತ್ವಂ ಕಾಲಿಂದೇ ಕಾಲಿಕಾ ಶಿವಾ ॥೧೬೧॥

ಮಹೇಶೀ ತ್ವಮರಾವತ್ಯಾಂ ನಂದಿನೀ ಗೋನಗೇ ಸ್ಮೃತಾ ।
ತೇಜೋವತೀ ಕರಂಭಾಸ್ಯೇ ಕಂಕೋಲೇ ಲಕುಲೀಶ್ವರೀ ॥೧೬೨॥

ದುರ್ಗಾ ದುರ್ಗಾಕರಕ್ಷೇತ್ರೇ ಶೂರ್ಪಾರೇ ಶೂದ್ರಕಾ ಸ್ಮೃತಾ ।
ಸಂಮೋದಿನೀ ಅಗ್ನಿಶೈಲೇ ತ್ವಂ ಕಾಮತೇ ತ್ವಬ್ಜಸನ್ನಿಭಾ ॥೧೬೩॥

ಹೇಲಾವತೀ ಕುರುಕ್ಷೇತ್ರೇ ಸಿದ್ಧಿದಾಯುಷ್ಮಕೇ ಶಿವೇ ।
ವೈದ್ಯನಾಥೇ ವೇಗವತೀ ಕಮಲೇ ಕಮಲಾವತೀ ॥೧೬೪॥

ನೈಮಿಷೇ ನಿಮಿಷಾದೇವೀ ಕುಣಿಭದ್ರೇ ಚ ಕುಂಜಿಕಾ ।
ಗಂಧರ್ವಾ ಗಂಧಶೈಲೇ ತ್ವಂ ವರಾಸ್ಯಾ ತ್ವಂ ಹರಾಚಲೇ ॥೧೬೫॥

ತಕ್ಕೋಲೇ ಕಾಲಶಮನೀ ರುದ್ರಾಣೀ ಸ್ಥಾನಪೀಠಕೇ ।
ಆನರ್ತೇ ತ್ವಮಿಲಾದೇವೀ ಕ್ಷಮಾಯಾಂ ತ್ವಂ ಕ್ಷಮಾವತೀ ॥೧೬೬॥

ಗರುಡೇಶ್ವರಿಯೆಂದೂ, ಅನಂತಕ್ಷೇತ್ರದಲ್ಲಿ ಅನಂತಶಕ್ತಿಯೆಂದೂ, ಸಿಂಹಲಕ್ಷೇತ್ರದಲ್ಲಿ ಸಿಂಹವಾಹಿನಿಯೆಂದೂ ನೀನು ಪ್ರಸಿದ್ಧಿಗೊಂಡಿರುವೆ. ॥೧೫೮-೧೫೯-೧೬೦॥

ಎಲೌ ದೇವಿಯೇ, ಚಂದ್ರಲಕ್ಷೇತ್ರದಲ್ಲಿ ನೀನು ಚಂಡಲಾದೇವಿಯೆನಿಸಿರುವೆ. ಬದರಿಯಲ್ಲಿ, ಕಾಂತಿದಾಯಿನೀ, ವಿರಜಾಕ್ಷೇತ್ರದಲ್ಲಿ ವೀತಶೋಕೆ, ಕಾಲಿಂದಕ್ಷೇತ್ರದಲ್ಲಿ ಕಾಲಿಕೆ, ಅಮರಾವತಿಯಲ್ಲಿ ಮಹೇಶ್ವರೀ, ಗೋನಗಕ್ಷೇತ್ರದಲ್ಲಿ ನಂದಿನೀ, ಕರಂಭಾಸ್ಯದಲ್ಲಿ ತೇಜೋವತಿ, ಕಂಕೋಲಕ್ಷೇತ್ರದಲ್ಲಿ ಲಕುಲೇಶ್ವರಿ ಈ ಹೆಸರುಗಳಿಂದ ನೀನು ಪ್ರಸಿದ್ಧಳಾಗಿರುವೆ. ॥೧೬೧-೧೬೨॥

ದುರ್ಗಾಕರಕ್ಷೇತ್ರದಲ್ಲಿ ದುರ್ಗೆ, ಶೂರ್ಪಾರಕ್ಷೇತ್ರದಲ್ಲಿ ಶೂದ್ರಕೆ, ಅಗ್ನಿಶೈಲದಲ್ಲಿ ಸಂಮೋದಿನೀ, ಕಾಮತಕ್ಷೇತ್ರದಲ್ಲಿ ಅಬ್ಜಸನ್ನಿಭಾ, ಕುರುಕ್ಷೇತ್ರದಲ್ಲಿ ಹೇಲಾವತೀ, ಆಯುಷ್ಮಕದಲ್ಲಿ ಸಿದ್ಧಿದಾ, ವೈದ್ಯನಾಥಕ್ಷೇತ್ರದಲ್ಲಿ ವೇಗವತೀ, ಕಮಲಕ್ಷೇತ್ರದಲ್ಲಿ ಕಮಲಾವತೀ ಈ ಹೆಸರುಗಳಿಂದ ನೀನು ಅಲ್ಲಲ್ಲಿ ನೆಲಸಿರುವೆ. ॥೧೬೩-೧೬೪॥

ನೈಮಿಷಾರಣ್ಯದಲ್ಲಿ ಅನಿಮಿಷಾದೇವಿ, ಕುಣಿಭದ್ರಕ್ಷೇತ್ರದಲ್ಲಿ ಕುಂಜಿಕಾ, ಗಂಧಶೈಲದಲ್ಲಿ ಗಂಧರ್ವಾದೇವಿ, ಹರಗಿರಿಯಲ್ಲಿ ವರಾಸ್ಯೆ, ತಕ್ಕೋಲಕ್ಷೇತ್ರದಲ್ಲಿ

(ನೈಮಿಷೇ ನಿಮಿಷಾ ದೇವೀ ಕುಣಿಭದ್ರೇ ಚ ಕುಂಜಿಕಾ) ।
ವಿಂಧ್ಯೇ ತ್ವಂ ಕೌಶಿಕೀ ದೇವೀ ಬಂಧನೇ ಬಂಧಮೋಚಿನೀ ॥೧೬೭॥

ವಟಾರಣ್ಯೇ ಸಟಾದೇವೀ ಸೋಮಾದ್ರೌ ಸೋಮಮಸ್ತಕಾ ।
ವಿಜಯಾ ವಿಜಯಾಪುರ್ಯಾಂ ಪ್ರತಿಷ್ಠಾನೇ ಚ ಕನ್ಯಕಾ ॥೧೬೮॥

ವೇಗಾ ತ್ವಂ ವೈನತೇ ಶೈಲೇ ಬೃಹತೀ ಧಾತುಶೈಲಕೇ ।
ತುಂಗಾಚಲೇ ತುಂಗಕುಚಾ ವಿಮನಸ್ಕಾ ವಿರಾಜಕೇ ॥೧೬೯॥

ಹಾಲಾಹಲೇ ಹಲಸ್ಥಾ ತ್ವಂ ಕಂದರ್ಪೇ ದರ್ಪನಾಶಿನೀ ।
ಕುಣಿಕುಂಭೇ ಮಹಾದೇವೀ ಭದ್ರದಾ ಕನಕಾಚಲೇ ॥೧೭೦॥

ಕುರಂಗಲೋಚನಾ ರಂಗೇ ಶತಾಂಗೇ ಶಾಂತಿದಾಯಿನೀ ।
ಮೇಘಮಾಲಾ ಮೇಘಗಿರೌ ರೌಂಬರೇ ಬಿಂದುರೂಪಿಣೀ ॥೧೭೧॥

---

ಕಾಲಶಮನೀ, ಸ್ಥಾನಪೀಠದಲ್ಲಿ ರುದ್ರಾಣೀ, ಆನರ್ತಕ್ಷೇತ್ರದಲ್ಲಿ ಇಲಾದೇವೀ, ಕ್ಷಮಾಕ್ಷೇತ್ರದಲ್ಲಿ ಕ್ಷಮಾವತೀ ಈ ಹೆಸರುಗಳಿಂದ ನೀನು ಪ್ರಸಿದ್ಧಳಾಗಿರುವೆ. ||೧೬೫-೧೬೬||

ವಿಂಧ್ಯಗಿರಿಯಲ್ಲಿ ಕೌಶಿಕೀ, ಬಂಧನಗಿರಿಯಲ್ಲಿ ಬಂಧಮೋಚಿನೀ, ವಟಾರಣ್ಯದಲ್ಲಿ ಸಟಾದೇವೀ, ಸೋಮಾದ್ರಿಯಲ್ಲಿ ಸೋಮಮಸ್ತಕಾ, ವಿಜಯಾಪುರಿಯಲ್ಲಿ ವಿಜಯಾ, ಪ್ರತಿಷ್ಠಾನಗಿರಿಯಲ್ಲಿ ಕನ್ಯಕಾ, ವೈನತೇಯಗಿರಿಯಲ್ಲಿ ವೇಗವತೀ, ಧಾತುಶೈಲದಲ್ಲಿ ಬೃಹತೀದೇವೀ, ತುಂಗಾಚಲದಲ್ಲಿ ತುಂಗಕುಚಾದೇವಿ, ವಿರಾಜಕಕ್ಷೇತ್ರದಲ್ಲಿ ವಿಮನಸ್ಕಾದೇವಿ, ಈ ಹೆಸರುಗಳಿಂದ ನೀನು ಪ್ರಸಿದ್ಧಳಾಗಿರುವೆ. ||೧೬೭-೧೬೮-೧೬೯||

ಹಾಲಾಹಲಕ್ಷೇತ್ರದಲ್ಲಿ ಹಲಸ್ಥಾದೇವಿ, ಕಂದರ್ಪಕ್ಷೇತ್ರದಲ್ಲಿ ದರ್ಪನಾಶಿನೀ, ಕುಣಿಕುಂಭದಲ್ಲಿ ಮಹಾದೇವಿ, ಕನಕಾಚಲದಲ್ಲಿ ಭದ್ರದಾದೇವಿ, ರಂಗಕ್ಷೇತ್ರದಲ್ಲಿ ಕುರಂಗಲೋಚನಾದೇವಿ, ಶತಾಂಗಕ್ಷೇತ್ರದಲ್ಲಿ ಶಾಂತಿದಾಯಿನೀ, ಮೇಘಗಿರಿಯಲ್ಲಿ ಮೇಘಮಾಲಾದೇವಿ, ತುಂಬುರುಕ್ಷೇತ್ರದಲ್ಲಿ ಬಿಂದುರೂಪಿಣೀದೇವೀ ಎಂಬ ಹೆಸರಿನಿಂದ ನೀನು ನೆಲಸಿರುವೆ. ||೧೭೦-೧೭೧||

ಭೈರವೀ ಭೈರವೇ ಪೀಠೆ ತ್ರಿಕೋಣೇ ತ್ವಂ ತ್ರಿಕೋಣಗಂ ।
ಲಲಿತಾ ಲಲಿತಾಪುರ್ಯಾಂ ಮಹಾದೇವೀ ಚ ಶಾಂಭವೀ ॥೧೭೨॥

ಉಡ್ಯಾಣೇ ಚಂಡಿಕಾದೇವೀ ಮೌಸಲೇ ಮುಸಲೇಶ್ವರೀ ।
ತುಲಜಾ ತುಲಜಾಪುರ್ಯಾಂ ಶ್ರೀಶೈಲೇ ಭ್ರಮರಾಂಬಿಕಾ ॥೧೭೩॥

ರಾಜೇಶ್ವರೀ ರಾಜಪೀಠೇ ಕೌಥುಮೀ ಕುಥಮೇಶ್ವರೇ ।
ವಾಮನಾ ತ್ವಂ ವೇಗಿಕಾಯಾಂ ಮಹೇಂದ್ರೇ ಚಂದ್ರಪೂಜಿತಾ॥೧೭೪॥

ಗತಿದಾ ತಾರಣೇ ಪ್ರೋಕ್ತಾ ಶರಣೇ ಶರಣಾಂಬಿಕೇ ।
ಕೌಸಲೇ ಸಾಲಮಥನಾ ಹಿಮಶೈಲೇ ಚ ಚಂಡಿಕಾ ॥೧೭೫॥

ನಗ್ನಿಕಾ ಕೋರಟಿಕಾಯಾಂ ತು ಕರಂಜೇ ಕರಮರ್ದಿನೀ ।
ಗರ್ಭೇಶ್ವರೇ ತ್ವಂ ಗರ್ಭೇಶೀ ಕುನಂದೇ ನಂದಿನೋದಿನೀ ॥೧೭೬॥

ವಾಯವ್ಯೇ ತ್ವಂ ಭಗಾಕ್ಷೀ ಚ ವಿಶಾಲಾಕ್ಷೀ ಕಹೋಲಕೇ ।
ದಧ್ಯಾದನೇ ಭೌಮಕಾ ತ್ವಂ ವನವಾಸೀ ಚ ವನ್ಯಕಾ ॥೧೭೭॥

---

ಭೈರವೀಪೀಠದಲ್ಲಿ ಭೈರವಿಯಾಗಿಯೂ, ತ್ರಿಕೋಣಪೀಠದಲ್ಲಿ ತ್ರಿಕೋಣಕೇಶ್ವರಿಯೂ, ಲಲಿತಾಪುರಿಯಲ್ಲಿ ಲಲಿತಾಂಬಿಕೆಯೂ, ಮಹಾದೇವಿಯಾಗಿಯೂ, ಶಾಂಭವಿಯಾಗಿಯೂ ಕಾಣುವೆ. ಉಡ್ಯಾಣಕ್ಷೇತ್ರದಲ್ಲಿ ಚಂಡಿಕಾದೇವಿ, ಮೌಸಲಕ್ಷೇತ್ರದಲ್ಲಿ ಮುಸಲೇಶ್ವರೀ, ತುಲಜಾನಗರದಲ್ಲಿ ತುಲಜಾದೇವೀ, ಶ್ರೀಶೈಲದಲ್ಲಿ ಭ್ರಮರಾಂಬಿಕೆ, ರಾಜಪೀಠದಲ್ಲಿ ರಾಜೇಶ್ವರೀ, ಕುಥಮೇಶ್ವರದಲ್ಲಿ ಕೌಥುಮೀದೇವಿ, ವೇಗಿಕಾಕ್ಷೇತ್ರದಲ್ಲಿ ವಾಮನಾದೇವಿ, ಮಹೇಂದ್ರಕ್ಷೇತ್ರದಲ್ಲಿ ಚಂದ್ರಪೂಜಿತಾದೇವಿ ಮುಂತಾದ ಹೆಸರುಗಳಿಂದ ನೀನು ವ್ಯಾಪಿಸಿರುವೆ. ॥೧೭೨-೧೭೩-೧೭೪॥

ತಾರಣಕ್ಷೇತ್ರದಲ್ಲಿ ಗತಿದಾಯಿನೀ, ಶರಣಕ್ಷೇತ್ರದಲ್ಲಿ ಶರಣಾಂಬಿಕೆ, ಕೌಸಲದೇಶದಲ್ಲಿ ಸಾಲಮಥನಾ, ಹಿಮಶೈಲದಲ್ಲಿ ಚಂಡಿಕೆ, ಕೋರಟಿಕೆಯಲ್ಲಿ ನಗ್ನಿಕಾ, ಕರಂಜಕ್ಷೇತ್ರದಲ್ಲಿ ಕರಮರ್ದಿನೀ, ಗರ್ಭೇಶ್ವರಕ್ಷೇತ್ರದಲ್ಲಿ ಗರ್ಭೇಶ್ವರೀ, ಕುನಂದಕ್ಷೇತ್ರದದಲ್ಲಿ ನಂದಿನೋದಿನೀ ಎಂಬ ಈ ಹೆಸರುಗಳಿಂದ ನೀನು ನೆಲಸಿರುವೆ. ॥೧೭೫-೧೭೬॥

ವಾಯವ್ಯಕ್ಷೇತ್ರದಲ್ಲಿ ಭಗಾಕ್ಷಿಯೂ, ಕಹೋಲಕಕ್ಷೇತ್ರದಲ್ಲಿ ವಿಶಾಲಾಕ್ಷಿಯೂ, ದಧ್ಯಾದನಕ್ಷೇತ್ರದಲ್ಲಿ ಭೌಮಕಾದೇವಿಯೂ, ವನಕ್ಷೇತ್ರದಲ್ಲಿ ವನವಾಸಿನಿಯೂ,

ಗೋನರ್ದೇ ಪರ್ಣಿಕಾ ದೇವೀ ಕಾಂತಿಪುರ್ಯಾಂ ಚ ಕಾಂತಿಕಾ ।
ಸಮಾಸೀನಾ ಮೇರುಮೌಲೌ ಕದಂಬೇ ಬಿಂಬರೂಪಿಣೀ ॥೧೭೮॥

ಮಂದರೇ ಸುಂದರೀ ತ್ವಂ ಚ ಚಿತ್ರಶೈಲೇ ತ್ರಿಶೂಲಿಕಾ ।
ಕ್ರೌಂಚಾರಣ್ಯೇ ಸ್ಕಂದಮಾತಾ ಗಣಮಾತಾ ಗಣೇಶ್ವರೇ ॥೧೭೯॥

ಲೋಕಿನೇ ಲೋಕಮಾತಾ ತ್ವಂ ಕೌಲಾಪುರ್ಯಾಂ ಚ ಕೌಲಿನೀ ।
ಪದ್ಮಗರ್ಭೇ ಚ ಪದ್ಮಾತ್ವಂ ವಿರಾಗಾಮಾಸ್ಯಕೇ ಶಿವಾ॥ ॥೧೮೦॥

ಕೂರ್ಮಗ್ರೀವಾ ಹಯಶಿರೇ ಭೇರುಂಡೇ ಭಂಡನಾಶಿನೀ ।
ಉಪಾಂಗೇ ಪಾಂಗಿಕಾ ದೇವೀ ವಿಶಾಲಾ ಗಂಧಮಾದನೇ ॥೧೮೧॥

ಗೋಕರ್ಣೇ ಶಿತಿಕಂಠಾ ತ್ವಂ ಕಾಂಚ್ಯಾಂ ತ್ವಂ ರಾಮಕೋಟಿಕಾ ।
ಹಾಲಾಸ್ಯೇ ಶ್ಯಾಮಲಾ ದೇವೀ ಹಸ್ತಿಶೈಲೇ ಚ ಹಸ್ತಿನೀ ॥೧೮೨॥

ಮಲಯೇ ತ್ವಂ ಭಗವತೀ ವಿನಾಶೇ ಕಲಿಕಾಸ್ಮೃತಾ ।
ಮಹೇಂದ್ರೇ ಚಾರುಚಂದ್ರಾಂಕಾ ಕನಕೇ ಕಮಲೇಶ್ವರೀ ॥೧೮೩॥

---

ಗೋನರ್ದಕ್ಷೇತ್ರದಲ್ಲಿ ಪರ್ಣಿಕಾದೇವಿಯೂ, ಕಾಂತಿಪುರಿಯಲ್ಲಿ ಕಾಂತಿಕೆಯೂ, ಮೇರುಮೌಲಿಯಲ್ಲಿ ಸಮಾಸೀನೆಯೂ, ಕದಂಬಕ್ಷೇತ್ರದಲ್ಲಿ ಬಿಂಬರೂಪಿಣಿಯೂ, ಮಂದರಗಿರಿಯಲ್ಲಿ ಸುಂದರಾಂಬೆಯೂ, ಚಿತ್ರಶೈಲದಲ್ಲಿ ತ್ರಿಶೂಲಿಕೆಯೂ, ಕ್ರೌಂಚಾರಣ್ಯದಲ್ಲಿ ಸ್ಕಂದಮಾತೆಯೂ, ಗಣೇಶ್ವರಕ್ಷೇತ್ರದಲ್ಲಿ ಗಣಮಾತೆಯೂ, ಲೋಕನೀಕ್ಷೇತ್ರದಲ್ಲಿ ಲೋಕಮಾತೆಯೂ, ಕೌಲಾಪುರಿಯಲ್ಲಿ ಕೌಲಿನೀ ಎನಿಸಿಯೂ, ಪದ್ಮಗರ್ಭದಲ್ಲಿ ಪದ್ಮೆಯೆಂದೂ, ವಿರಾಗಾಮಾಸ್ಯಕಕ್ಷೇತ್ರದಲ್ಲಿ ಶಿವಾ ಎಂಬ ಹೆಸರಿನಿಂದಲೂ ನೀನು ಪ್ರಸಿದ್ಧಳಾಗಿರುವೆ. ॥೧೭೭-೧೭೮-೧೭೯-೧೮೦॥

ಹಯಶಿರಕ್ಷೇತ್ರದಲ್ಲಿ ಕೂರ್ಮಗ್ರೀವಾ, ಭೇರುಂಡಕ್ಷೇತ್ರದಲ್ಲಿ ಭಂಡನಾಶಿನೀ, ಉಪಾಂಗಕ್ಷೇತ್ರದಲ್ಲಿ ಪಾಂಗಿಕಾ, ಗಂಧಮಾದನಕ್ಷೇತ್ರದಲ್ಲಿ ವಿಶಾಲಾ, ಗೋಕರ್ಣದಲ್ಲಿ ಶಿತಿಕಂಠಾದೇವಿ, ಕಾಂಚಿಯಲ್ಲಿ ಕಾಮಕೋಟೀಶ್ವರೀ, ಹಾಲಾಸ್ಯಕ್ಷೇತ್ರದಲ್ಲಿ ಶ್ಯಾಮಲಾದೇವಿ, ಹಸ್ತಿಶೈಲದಲ್ಲಿ ಹಸ್ತಿನಿಯೂ ನೀನೇ ಆಗಿರುವೆ. ॥೧೮೧-೧೮೨॥

ಮಲಯ ಪರ್ವತದಲ್ಲಿ ಭಗವತಿಯೆಂದೂ, ವಿನಾಶಕ್ಷೇತ್ರದಲ್ಲಿ ಕಲಿಕಾದೇವಿಯೆಂದೂ, ಮಹೇಂದ್ರಪರ್ವತದಲ್ಲಿ ಚಾರುಚಂದ್ರಾಂಕೆಯೆಂದೂ, ಕನಕಾಚಲದಲ್ಲಿ

ಏತಾನಿ ದಿವ್ಯಪೀಠಾನಿ ತವ ಸಿದ್ಧಿಪ್ರದಾನಿ ಚ ।
ಚೇರಚೋಲೇ ಚ ಪಾಂಡ್ಯೇಷು ಲಿಂಗಾನಿ ಶೃಣು ಮೇಂಬಿಕೇ ॥೧೮೪॥

ಸಹ್ಯಜಾ ತಾಮ್ರಪರ್ಣೀ ಚ ಪಂಪಾ ವೇಗವತೀ ತಟೇ ।
ಆಮ್ರಾಸಂಗೇ ಮತ್ಸ್ಯವತ್ಯಾಸ್ತಟೇ ಪರಮಪಾವನೇ ॥೧೮೫॥

ಸಹ್ಯಮೌಲೌ ಸಹ್ಯಕೇಶಃ ಸಿಂಹೇಶಃ ಶಿತಿಕಂಠಕಃ ।
ತೃಣಜ್ಯೋತೀಶ್ವರಶ್ಚೈವ ಶಿವೇ ಮರಕತಾಚಲಃ ॥೧೮೬॥

ರತ್ನಾದ್ರಿಶಿಖರೇಶಾನೋ ಮಾತೃಭೂತೇಶ್ವರಸ್ತಥಾ ।
ಪಂಪಾತಟೇ ತಥಾ ಕಾಂಚೀ ಏಕಾಮ್ರೇಶೋ ಮಹೇಶ್ವರಃ ॥೧೮೭॥

ಶ್ರೀಮದ್ದಕ್ಷಿಣಕೈಲಾಸೇ ಕಾಲಹಸ್ತೀಶ್ವರಸ್ತಥಾ ।
ಚರೇಷು ಚ ಶ್ರೀಗಿರಿರಾಟ್ ಶ್ರೀಶೈಲೇಶಶ್ಚ ತತ್ರ ಹಿ ॥೧೮೮॥

ಶಿಖರೇಶಃ ಪನಸ್ಯೇಶೋ ಘಂಟಾಕರ್ಣೇಶ್ವರಸ್ತಥಾ ।
ತತ್ತೀರ್ಥೇಶೋ ಮಹಾದೇವಿ ಸ್ಮರಣಾನ್ಮುಕ್ತಿದಾಯಕಃ ॥೧೮೯॥

---

ಕಮಲೇಶ್ವರಿಯೆಂದೂ ನೀನು ಪ್ರಸಿದ್ಧಳಾಗಿರುವೆ. ಎಲೌ ಪಾರ್ವತಿಯೇ, ಇಲ್ಲಿನ ವರೆಗೂ ನಿನ್ನ ಪ್ರಸಿದ್ಧವಾದ ಮತ್ತು ಸಿದ್ಧಿಪ್ರದವಾದ ಸ್ಥಾನಗಳನ್ನು ವಿವರಿಸಿರುವೆನು. ಇನ್ನು ಚೇರ ಮತ್ತು ಚೋಳ, ಪಾಂಡ್ಯ ಈ ರಾಜರುಗಳ ರಾಜ್ಯದಲ್ಲಿ ಪ್ರಸಿದ್ಧವಾಗಿರುವ ಶಿವಲಿಂಗಗಳ ಸ್ಥಾನಗಳನ್ನು ವಿವರಿಸಿ ಹೇಳುವೆನು, ಕೇಳು. ॥೧೮೩-೧೮೪॥

ಕಾವೇರೀ, ತಾಮ್ರಪರ್ಣೀ, ಪಂಪಾ, ವೇಗವತೀ, ಆಮ್ರಾ, ಮತ್ಸ್ಯವತೀ ಈ ನದಿಗಳು ಆ ದೇಶಗಳಲ್ಲಿ ಹರಿಯುವ ಪವಿತ್ರವಾದ ಶಿವಲಿಂಗಗಳನ್ನುಳ್ಳವುಗಳು. ಸಹ್ಯಗಿರಿಯ ತಪ್ಪಲಲ್ಲಿ ಸಹ್ಯಕೇಶ್ವರನೂ, ಸಿಂಹೇಶನೂ, ಶಿತಿಕಂಠಕನೂ, ತೃಣಜ್ಯೋತೀಶ್ವರನೂ ಮರಕತಾಚಲೇಶ್ವರಲಿಂಗವೂ ಪ್ರಸಿದ್ಧವಾಗಿರುವುವು. ॥೧೮೫-೧೮೬॥

ರತ್ನಾದ್ರಿಶಿಖರೇಶ್ವರ, ಮಾತೃಭೂತೇಶ್ವರ, ಪಂಪಾತಟವೆನಿಸಿದ ಕಾಂಚೀ ನಗರದಲ್ಲಿ ಏಕಾಮ್ರೇಶ್ವರನೂ, ದಕ್ಷಿಣಕೈಲಾಸವೆನಿಸಿದ ಕಾಲಹಸ್ತಿಯಲ್ಲಿ ಕಾಲಹಸ್ತೀಶ್ವರನೂ, ಗಿರಿರಾಜನೆನಿಸಿದ ಶ್ರೀಶೈಲದಲ್ಲಿ ಶೈಲೇಶ್ವರನೂ ಪ್ರಸಿದ್ಧವಾದ ಶಿವಲಿಂಗಗಳು. ॥೧೮೭-೧೮೮॥

ಶಿಖರೇಶ್ವರ, ಪನಸೇಶ್ವರ, ಘಂಟಾಕರ್ಣೇಶ್ವರನೂ, ಮತ್ತು ಆಯಾ ತೀರ್ಥಗಳಲ್ಲಿರುವ ತೀರ್ಥೇಶ್ವರ ಮತ್ತು ಶಿವಲಿಂಗಗಳನ್ನು ಸ್ಮರಣೆಮಾಡುವುದರಿಂದಲೇ

ತ್ರ್ಯಂಬಕಶ್ಚ ಮಹಾಶೈಲೋ ಯಸ್ಮಾದ್ಗೋದಾವರೀ ನದೀ ।
ಶೇಷಾಚಲೇ ಕುಮಾರೇಶ ಅರುಣಾದ್ರಿನಗೇಶ್ವರಃ ॥೧೯೦॥

ವೃದ್ಧಾಚಲೇಶೋ ಗೋಭದ್ರೋ ಗೋಪರ್ವತಶಿರೋಗತಃ ।
ಶಿವೇ ಮಾರ್ಗಸಹಾಯೇಶಃ ಶ್ರೀಮದ್ದಭ್ರಸಭೇಶ್ವರಃ ॥೧೯೧॥

ಮೂಲಸ್ಥಾನೇಶ್ವರಸ್ತತ್ರ ದರ್ಶನಾದೇವ ಮುಕ್ತಿದಃ ।
ಚೇರೇಷು ಪ್ರಥಿತಾಹ್ಯೇತೇ ಶಿವಕ್ಷೇತ್ರಾಣ್ಯಪಿ ಕ್ರಮಾತ್ ॥೧೯೨॥

ಚೋಲೇಷು ದಿವ್ಯಲಿಂಗಾನಾಮನುಕ್ರಮಮಿಹೋಚ್ಯತೇ ।
ಶಿವೇ ಪಂಚಾಪಗೇಶಾಖ್ಯೋ ವಟೇಶೋಥ ದ್ಯುತೀಶ್ವರಃ ॥೧೯೩॥

ಘೃತೇಶ್ವರಃ ಪುಷ್ಪಕೇಶಸ್ತಂಜೇಶೋ ವೇದಿಕೇಶ್ವರಃ ।
ಶ್ರೀಪ್ರಯಾಣೇಶ್ವರೋ ದೇವಿ ಐರಾವತಗಜಾರ್ಚಿತಃ ॥೧೯೪॥

---

ಮುಕ್ತಿಯು ದೊರಕುವುದು. ಹಾಗೆಯೇ ಗೋದಾವರೀನದಿಯ ದಡದಲ್ಲಿರುವ ತ್ರ್ಯಂಬಕಕ್ಷೇತ್ರದಲ್ಲಿ ತ್ರ್ಯಂಬಕೇಶ್ವರನೂ, ಶೇಷಾಚಲದಲ್ಲಿರುವ ಕುಮಾರೇಶ್ವರ, ಅರುಣಾದ್ರೀಶ್ವರ, ನಗೇಶ್ವರ ಮುಂತಾದ ಶಿವಲಿಂಗಗಳೂ ಪ್ರಸಿದ್ಧವಾದವುಗಳು. ||೧೮೯-೧೯೦||

ವೃದ್ಧಾಚಲೇಶ್ವರ, ಗೋಭದ್ರೇಶ್ವರ, (ಇವು ವೃಷಾಚಲದ ಶಿಖರದಲ್ಲಿರುವುವು) ಮಾರ್ಗಸಹಾಯೇಶ್ವರ, ದಭ್ರಸಭೇಶ್ವರ, ಮೂಲಸ್ಥಾನೇಶ್ವರ. ಇವು ಚೇರದೇಶದಲ್ಲಿ ಪ್ರಸಿದ್ಧವಾಗಿರುವ ಶಿವಕ್ಷೇತ್ರಗಳು. ಇವುಗಳನ್ನು ಭಕ್ತಿಯಿಂದ ದರ್ಶನ ಮಾಡಿದರೆ ಸಾಕು. ಅಂತಹವರಿಗೆ ಸ್ಥಿರವಾದ ಮೋಕ್ಷವು ದೊರಕುವುದರಲ್ಲಿ ಸಂಶಯವಿಲ್ಲ. ಚೇರದೇಶದ ಶಿವಲಿಂಗಗಳ ಮಹಿಮೆ ಇದು. ||೧೯೧-೧೯೨||

ಇನ್ನು ಚೋಲದೇಶದ ಶಿವಲಿಂಗಗಳ ಕ್ರಮವನ್ನು ತಿಳಿಸುತ್ತೇನೆ. ದೇವಿಯೇ, ಅದನ್ನು ಸಾವಧಾನದಿಂದ ಆಲಿಸು. ಪಂಚಾಪಗೇಶ್ವರ, ವಟೇಶ್ವರ, ದ್ಯುತೀಶ್ವರ, ಘೃತೇಶ್ವರ, ಪುಷ್ಪಕೇಶ್ವರ, ತಂಜೇಶ್ವರ, ವೇದಿಕೇಶ್ವರ, ಶ್ರೀಪ್ರಯಾಣೇಶ್ವರ (ಇದು ಇಂದ್ರನ ಐರಾವತದಿಂದ ಪೂಜಿತವಾದುದು) ||೧೯೩-೧೯೪||

ಕ್ಷೀರಿಣೀಶಸ್ಸುಂದರೀಶಃ ಕುಂಭೇಶಶ್ಚಾರ್ಜುನೇಶ್ವರಃ ।
ತೇಜಿನೀಶಸ್ಸಾಕ್ಷಿನಾಥೋ ಬಿಲ್ವಾರಣ್ಯೇಶ್ವರಸ್ತಥಾ ॥೧೯೫॥

ದುರ್ಗೇಶ್ವರೋ ಭೀಮಕೇಶೋ ವೈದ್ಯೇಶೋ ಬ್ರಹ್ಮಕೇಶ್ವರಃ ।
ಘಂಟೇಶ್ವರಶ್ಚ ಶ್ವೇತೇಶಶ್ಛಾಯಾವನಮಹೇಶ್ವರಃ ॥೧೯೬॥

ಶ್ರೀವಾಂಛೀಶಸ್ತ್ರಿಕೋಟೀಶೋ ಮಂಗಲೇಶೋಽಗ್ನಿಕೇಶ್ವರಃ ।
ಕಮಲಾಲಯೇ ವಲ್ಮೀಕೇಶ ಆನಂದೇಶಶ್ಚ ಪಾರ್ವತಃ ॥೧೯೭॥

ಹಾಟಕೇಶಶ್ಚ ಸಿದ್ಧೇಶಸ್ತತ್ರ ದೇವ್ಯಚಲೇಶ್ವರಃ ।
ತಥಾ ವೇದವನೇಶಶ್ಚ ಸೇತೌ ರಾಮೇಶ್ವರಶ್ಶಿವಃ ॥೧೯೮॥

ಚೋಲೇಷು ಪ್ರಥಿತಾಹ್ಯೇತೇ ತಥಾನ್ಯದಪಿ ಶಂಕರಿ ।
ಸರ್ವಲಿಂಗಾಲಯಶ್ಚೋಲಃ ಸಹ್ಯಜಾತೀರಸಂಗತಃ ॥೧೯೯॥

ಶೌಂಡೀರೇ ಚ ಶುಚೀಂದ್ರೇಶಃ ಪಾಪನಾಶಸ್ತಥಾಂಬಿಕೇ ।
ಅರ್ಜುನೇಶಶ್ಚ ಸ್ಥಾಣ್ವೀಶೋ ಹಸ್ತಿಶೈಲೇಶ್ವರಸ್ತಥಾ ॥೨೦೦॥

---

ಕ್ಷೀರಿಣೀಶ್ವರ, ಸುಂದರೀಶ್ವರ, ಕುಂಭೇಶ್ವರ, ಅರ್ಜುನೇಶ್ವರ, ತೇಜಸೀಶ್ವರ, ಸಾಕ್ಷಿನಾಥೇಶ್ವರ, ಬಿಲ್ವಾರಣ್ಯೇಶ್ವರ, ದುರ್ಗೇಶ್ವರ, ಭೀಮಕೇಶ್ವರ, ವೈದ್ಯೇಶ್ವರ, ಬ್ರಹ್ಮಕೇಶ್ವರ, ಘಂಟೇಶ್ವರ, ಶ್ವೇತೇಶ್ವರ, ಛಾಯಾವನಮಹೇಶ್ವರ ಇವು ಪ್ರಸಿದ್ಧವಾದ ಶಿವಲಿಂಗಗಳು. ||೧೯೫-೧೯೬||

ಶ್ರೀವಾಂಛೇಶ್ವರ, ತ್ರಿಕೋಟೇಶ್ವರ. ಮಂಗಲೇಶ್ವರ, ಅಗ್ನಿಕೇಶ್ವರ, ಕಮಲಾಲಯಕ್ಷೇತ್ರದಲ್ಲಿರುವ ವಲ್ಮೀಕೇಶ್ವರ, ಪರ್ವತನಿವಾಸಿಯಾದ ಆನಂದೇಶ್ವರ, ಹಾಟಕೇಶ್ವರ, ಸಿದ್ಧೇಶ್ವರ, ಅಚಲೇಶ್ವರ, ವೇದವನೇಶ್ವರ, ರಾಮಸೇತುವಿನಲ್ಲಿರುವ ರಾಮೇಶ್ವರ, ಇವೆಲ್ಲಾ ಚೋಳದೇಶದಲ್ಲಿರುವ ಪ್ರಸಿದ್ಧವಾದ ಶಿವಲಿಂಗಗಳು. ||೧೯೭ ೧೯೮||

ದೇವಿಯೇ, ಈರೀತಿ ಚೋಲದೇಶವೇ ಸಮಸ್ತ ಲಿಂಗಾಲಯವೆನಿಸಿರುವುದು. ಕಾವೇರೀ ನದೀ ದಡದಲ್ಲಿ ಅನೇಕ ಇನ್ನೂ ಪ್ರಸಿದ್ಧಗಳಾದ ಶಿವಾಲಯಗಳಿರುವುವು. ಶೌಂಡೀರಕ್ಷೇತ್ರದಲ್ಲಿರುವ ಶುಚೀಂದ್ರವೆಂಬುದು ಒಂದು ಶಿವಕ್ಷೇತ್ರವು. ಅದು

ತಥಾ ವೇಗವತೀ ತೀರೇ ಸಾಂಡ್ಯೇ ಹಾಲಾಸ್ಯಶಂಕರಃ ।
ತಥಾ ವೈಶಾಲಿವಾಟೇಶಃ ಶಿವೇ ಚಾಮ್ರಾತಕೇಶ್ವರಃ ॥೨೦೦॥

ಶಿವೇ ದಕ್ಷಿಣಗೋಕರ್ಣೇ ಮುಕ್ತ್ಯೇಶೋ ಭರತೇಶ್ವರಃ ।
ಶಿವೇ ವಾತಪುರೀಶಶ್ಚ ತಥಾ ರತ್ನಸಭೇಶ್ವರಃ ॥೨೦೩॥

ತಥಾ ಚಿತ್ರಸಭೇಶಶ್ಚ ಉಗ್ರೇಶಶ್ಚಾಮ್ರಕೇಶ್ವರಃ ।
ಏತತ್ಪ್ರಾಧಾನ್ಯತಃ ಪ್ರೋಕ್ತಂ ತಾಮ್ರಪರ್ಣ್ಯಾಸ್ತಟೇ ಶಿವೇ ॥೨೦೪॥

ಏತೇಷು ಕ್ಷೇತ್ರವರ್ಯೇಷು ಸ್ಥಿತೋ ಭಸ್ಮವಿಭೂಷಣಃ ।
ದೇಹಾಂತೇ ಶಿವಸಾಯುಜ್ಯಂ ಭವತ್ಯೇವ ಮಹೇಶ್ವರಿ ॥೨೦೫॥

ತರವಃ ಪಶವಃ ಕೀಟಾ ಮೃತಾ ಯಾಂತ್ಯಪುನರ್ಭವಂ ।
ಪಠನ್ ಪಠೇದಿದಂ ಸ್ತೋತ್ರಂ ತೇಷು ಕ್ಷೇತ್ರೇಷು ಶೈಲಜೇ ॥೨೦೬॥

---

ಪಾಪನಾಶಕವಾದುದು. ಅಲ್ಲಿಯೇ ಇರುವ ಅರ್ಜುನೇಶ್ವರ, ಸ್ಥಾಣ್ವೀಶ್ವರ, ಹಸ್ತಿಶೈಲೇಶ್ವರ ಇವು ಪ್ರಸಿದ್ಧವಾದ ಶಿವಲಿಂಗಗಳು. ॥೧೯೯-೨೦೦॥

ವೇಗವತೀ ನದೀ ತೀರದಲ್ಲಿರುವ ಪಾಂಡ್ಯದೇಶದಲ್ಲಿ ಹಾಲಾಸ್ಯೇಶ್ವರ, ವೈಶಾಲವಾಟೇಶ್ವರ, ಅಮ್ರಾತಕೇಶ್ವರ, ದಕ್ಷಿಣಗೋಕರ್ಣದಲ್ಲಿರುವ ಮುಕ್ತ್ಯೇಶ್ವರ, ಭರತೇಶ್ವರ, ವಾತಪುರೀಶ್ವರ, ರತ್ನಸಭೇಶ್ವರ, ಚಿತ್ರಸಭೇಶ್ವರ, ಉಗ್ರೇಶ್ವರ, ಅಮ್ರತೇಶ್ವರ ಇವು ಬಹು ಮುಖ್ಯವಾದ ಶಿವಲಿಂಗಗಳು. ಇವುಗಳಲ್ಲದೆ ಇನ್ನೂ ತಾಮ್ರಪರ್ಣೀತೀರದಲ್ಲಿ ಅನೇಕ ಶಿವಲಿಂಗಗಳು ಕಾಣಬರುವುವು. ॥೨೦೧-೨೦೩-೨೦೪॥

ಈ ಶಿವಕ್ಷೇತ್ರಗಳಲ್ಲಿ ಭಸ್ಮರುದ್ರಾಕ್ಷಧಾರಿಯಾಗಿ ವಾಸಮಾಡುತ್ತಾ ಅಲ್ಲಿಯೇ ದೇಹತ್ಯಾಗಮಾಡಿದವರಿಗೆ ಶಾಶ್ವತವಾದ ಮುಕ್ತಿಯು ದೊರಕುವುದರಲ್ಲಿ ಸಂಶಯವಿಲ್ಲ. ಈ ಕ್ಷೇತ್ರಗಳಲ್ಲಿ ವಾಸಮಾಡುವ ಮೃಗಪಕ್ಷಿಗಳೂ, ತರುಗುಲ್ಮಗಳೂ ಸಹ ಮುಕ್ತಿಯನ್ನು ಪಡೆಯುವುವು. ಅಲ್ಲದೆ, ಈ ಶಿವಸ್ತುತಿಯನ್ನು ಪಠಿಸುವುದು ಬಹು ಶ್ರೇಯಸ್ಕರವು. ಇದರಿಂದ ಅವರಿಗೆ ಶಿವಾನುಗ್ರಹವು ಸುಲಭವಾಗಿ ದೊರಕುವುದು. ॥೨೦೫-೨೦೬॥

|| ಈಶ್ವರ ಉವಾಚ ||

ಕಂಜಾಕ್ಷಕಂಜಾಸನಜಾತಶಿಕ್ಷಂ
ವಾಹೀಕೃತೋಕ್ಷಮನಲಾಕ್ಷವಿಷಾದ್ಯಭಕ್ಷಂ ।
ಸಂಧುಕ್ಷಿತಾಂತಕಭಗಾಕ್ಷಹರಂ ಸುದಕ್ಷ
ದೀಕ್ಷಾಪಹಂ ಭಜತ ಭಿಕ್ಷಿತಮೌನಿಪಕ್ಷಂ ॥೨೦೬॥

ಯಕ್ಷಪ್ರಿಯಂ ತ್ವಸಮದೃಕ್ ಕ್ಷತಕುಕ್ಷಿವಾಹ
ಕುಕ್ಷಿಸ್ಥಕಕ್ಷಮಿವ ಧುಕ್ಷಿತತಕ್ಷಕಾಂಗಂ ।
ಋಕ್ಷೇಶಮೌಲಿ ಬಲಿ ನಂದನಚಂದನಾದಿ
ಸ್ರಕ್ಷೋದನಾರ್ಪಿತಪದಂ ಕ್ಷಣಜಾಭಮೀಡೇ ॥೨೦೭॥

ವಿಶ್ವಂಭರಾಭರಣಭೂಷಣ ಮಾರಕಾಲ
ಸಂಶೋಷಣಪ್ರಮಥನಾಥ ಸನಾಥಯಾಸ್ಮಾನ್ ।
ಸರ್ಗಸ್ಥಿತಿಪ್ರಲಯಕಾರಣ ತಾರಣಾದ್ಯ
ಶಂಭೋ ಪದಾಬ್ಜಯುಗಲಂ ಶರಣಂ ಪ್ರಯಾಮಿ ॥೨೦೮॥

---

ದೇವಿಯೇ, ಪರಶಿವನೆಂಬ ನಾನು ವಿಷ್ಣು, ಬ್ರಹ್ಮ ಇವರನ್ನೂ ಸಹ ಶಿಕ್ಷಿಸಿ ಬುದ್ಧಿಗಲಿಸುವವನು. ವೃಷಭವಾಹನನು. ಅಗ್ನಿನೇತ್ರನೆನಿಸಿ ಹಾಲಾಹಲವಿಷವನ್ನು ಭಕ್ಷಿಸಿದವನು. ಯಮನನ್ನು ಶಿಕ್ಷಿಸಿ, ಭಗದೇವತೆಯ ಕಣ್ಣನ್ನು ಕಿತ್ತವನು. ದಕ್ಷಬ್ರಹ್ಮನ ಯಜ್ಞವನ್ನು ನಾಶಗೊಳಿಸಿ, ಸರ್ವಸಂಗತ್ಯಾಗಮಾಡಿದ ಮುನಿವೃಂದವನ್ನು ರಕ್ಷಿಸಿದವನು. ಇಂತಹ ನನ್ನನ್ನು ನೀವೆಲ್ಲರೂ ಭಜಿಸಿರಿ, ನಿಮಗೆ ಮಂಗಳವನ್ನುಂಟು ಮಾಡುವೆನು. ||೨೦೬||

" ಕುಬೇರನಿಗೆ ಮಿತ್ರನೂ, ವಿಷಮಾಕ್ಷನೂ, ಬ್ರಹ್ಮನ ಶಿರೋಭಾಗವನ್ನು ಪೊದೆಯಂತೆ ಕತ್ತರಿಸಿದವನೂ, ಚಂದ್ರಶೇಖರನೂ, ಬಲಿಪುತ್ರನಾದ ಬಾಣಾಸುರನೇ ಮೊದಲಾದವರಿಂದ ಪೂಜಿಸಲ್ಪಟ್ಟವನೂ, ಹೂವುಗಂಧಗಳುಳ್ಳ ಪಾದಗಳಿಂದ ಪೂಜಿತನಾದವನೂ, ನೀಲಕಾಂತಿಯುಳ್ಳವನೂ ಆದ ಮಹಾದೇವನನ್ನು ನಾನು ಸರ್ವದಾ ಧ್ಯಾನಿಸುವೆನು. ||೨೦೭||

ಭೂಮಿಯನ್ನೇ ಹೊತ್ತಿರುವ ಆದಿಶೇಷನಿಂದ ಅಲಂಕೃತನಾದ ಮನ್ಮಥನಾಶಕನೇ, ಪ್ರಮಥಗಣಗಳಿಗೊಡೆಯನೇ, ನಮ್ಮನ್ನು ಸಲಹು. ಪ್ರಪಂಚದ ಸೃಷ್ಟಿ

ವಿಶ್ವೋದಯಸ್ಥಿತಿವಿನಾಶನಹೇತುಭೂತ
ಭೂತಾದಿಕಾರ್ಯ ಕರಣಾಧಿಪಕಾರಣೇಶ ।
ಶ್ರೀವ್ಯೋಮಕೇಶ ಹರಿಕೇಶ ಮಹೇಶಶಂಭೋ
ಕೇಶಾವಕಾಶ ಪರಮೇಶ ನಮೋ ನಮಸ್ತೇ ॥೨೦೯॥

ಅಂಬಾಂ ಕದಂಬಕುಸುಮಸನ್ನಿಭಚಾರುಬಿಂಬಾಂ
ಬಿಂಬೋಪಮಾಧರವರಾಂ ಸುಬೃಹನ್ನಿತಂಬಾಂ ।
ಲೋಲಂಬರಾಜಿತಕಚಾಂ ನಮತಾದ್ಯ ಸರ್ವೇ
ಹೇರಂಬಮುಖ್ಯಜನನೀಂ ನತಸತ್ಕದಂಬಾಂ ॥೨೧೦॥

ದೇಶೇಷ್ವೇತೇಷು ಶೈಲಪ್ರವರನದನದೀಸಂಗಮೇ ಸಿಂಧುಸಂಧೌ
ಜಾತಾನ್ಯತ್ಯುತ್ತಮಾನಿ ಪ್ರಥಿತಬಹುಫಲಾನ್ಯೇವ ದಾತುಂ ಸ್ಥಿತಾನಿ ।
ಆಲೋಕಾನಾಂ ಸುರಾಣಾಂ ನರಮುನಿಸುಕೃತಾಪಾರಪುಣ್ಯಾಂಕುರಾಣಿ ॥೨೧೧॥

---

ಸ್ಥಿತಿಲಯಗಳಿಗೆ ಮುಖ್ಯಕಾರಣವಾದ ಮತ್ತು ಪಾಪನಾಶಕವಾದ ನಿನ್ನ ಪಾದಯುಗಲವನ್ನೇ ನಾನು ಸರ್ವದಾ ಭಜಿಸುವೆನು. ಸ್ವಾಮಿ, ನಮ್ಮನ್ನು ಸಲಹು. ॥೨೦೮॥
ಪ್ರಪಂಚದ ಸೃಷ್ಟಿಸ್ಥಿತಿಲಯಕಾರ್ಯಗಳಿಗೆ ಮುಖ್ಯಕಾರಣನಾಗಿ, ಪಂಚಭೂತಗಳಿಗೂ, ಪಂಚೇಂದ್ರಿಯಗಳಿಗೂ, ಪಂಚೀಕರಣಕಾರ್ಯಗಳಿಗೂ ಮೂಲಭೂತನಾದ ವ್ಯೋಮಕೇಶನೇ, ಹರಿದ್ವರ್ಣದ ಕೇಶಪಾಶವುಳ್ಳವನೇ, ದಿಗಂಬರನೇ, ವ್ಯೋಮಕೇಶ್ವರನೇ, ಪರಶಿವನೇ ನಿನಗೆ ಪದೇಪದೇ ನಮಸ್ಕಾರವು" ಹೀಗೆಂದು ನನ್ನನ್ನು ಸ್ತುತಿಸಬೇಕು. ॥೨೦೯॥

ಕದಂಬಕುಸುಮದಂತೆ ಶುಭ್ರವಾದ ದೇಹವುಳ್ಳ, ತೊಂಡೆಹಣ್ಣಿನಂತೆ ಕೆಂಪಾದ ತುಟಿಯುಳ್ಳ, ಹಾಗೆಯೇ ಬೃಹತ್ತಾದ ಮಧ್ಯಭಾಗವುಳ್ಳ ದೇವಿಯನ್ನು ಸದಾ ವಂದಿಸಿರಿ. ದೇವಿಯು ಮುಂಗುರುಳು ಭ್ರಮರಗಳ ಗುಂಪಿನಿಂದ ಪ್ರಕಾಶಿಸುತ್ತಿರುವುದು. ಗಣಪತಿಯೇ ಮೊದಲಾದವರಿಗೆ ಮಾತೃಭೂತಳಾದ ಸತ್ಪುರುಷವೃಂದವನ್ನು ರಕ್ಷಿಸುವ ಜಗನ್ಮಾತೆಯನ್ನು ಬಿಡದೆ ಎಲ್ಲರೂ ಸೇವಿಸಿರಿ. ॥೨೧೦॥

ಈ ಹಿಂದೆ ಹೇಳಿದ ಕ್ಷೇತ್ರಗಳಲ್ಲಿಯೂ ಗಿರಿ, ನದೀ, ಸಮುದ್ರ ಇವುಗಳ ಸಂಗಮಸ್ಥಳದಲ್ಲಿಯೂ, ಉತ್ತಮಗಳೆನಿಸಿದ ಶಿವಲಿಂಗಗಳು ಭಕ್ತರ ಇಷ್ಟಾರ್ಥಗಳನ್ನು ಸಲ್ಲಿಸಲು ಸಿದ್ಧವಾಗಿವೆ. ಎಲೌ ದೇವಿಯೇ, ಈ ಶಿವಲಿಂಗಗಳು ದೇವತೆಗಳ

ಪಶ್ಯಾದ್ಯ ಪ್ರಥಿತೇಕ್ಷಣೇನ ಮನಸಾ
ಲೋಕನೇನಾದ್ಯ ಧನ್ಯೇ
ಜನ್ಮಾನಾಂ ಫಲಮೇತದೇವ ಗಿರಿಜೇ
ಮನ್ಯೋ ನಚಾನ್ಯೋ ಜನಃ ॥೨೧೩॥

ಯತ್ರ ತ್ರಿನೇತ್ರ ಪದಪಂಕಜಮಿತ್ರಭಾವೋ
ಭಸ್ಮಾಕ್ತಗಾತ್ರ ಸುಚರಿತ್ರ ಪತತ್ರವಾಹಃ ।
ಕ್ಷೇತ್ರೇಷು ವಾಸಮಭಿರೋಚಯತೇ ಸ ತತ್ರ
ಶ್ರೀಪದ್ಮಪೂಜನಪರಃ ಸುಕಲತ್ರಮದಕ್ಷಿಸಾತ್ರಃ ॥೨೧೪॥

ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಸರ್ವಕ್ಷೇತ್ರಶಿವಲಿಂಗ ದೇವೀಪೀಠಸ್ಥಾನಾದಿ ನಿರೂಪಣಂ ನಾಮ ಏಕೋನಪಂಚಾಶೋಽಧ್ಯಾಯಃ

---

ಮತ್ತು ಮುನಿಗಳ, ಹಾಗೂ ಪುಣ್ಯಾತ್ಮರ ಪುಣ್ಯಾಂಕುರಗಳೆಂದು ಭಾವಿಸು. ಈ ಶಿವ ಲಿಂಗಗಳನ್ನು ದರ್ಶನಮಾಡುವುದರಿಂದ ನೀನೂ ಸಹ ಧನ್ಯಳಾಗುವೆ. ಮನಸಾ ಧ್ಯಾನಮಾಡುವುದರಿಂದಲೂ ದರ್ಶನ ಪೂಜನಾದಿಗಳಿಂದಲೂ ಶಿವಲಿಂಗವನ್ನು ತೃಪ್ತಿ ಪಡಿಸುವುದರಲ್ಲಿ ಆಸಕ್ತರಾದ ಮಾನವರು ಧನ್ಯರಾಗುವರೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ॥೨೧೧-೨೧೩॥

ದೇವಿಯೇ. ತ್ರಿನೇತ್ರನಾದ ನನ್ನ ಪಾದಕಮಲಗಳಲ್ಲಿಯೇ ಸ್ಥಿರವಾದ ಮನ ಸ್ಸಿಟ್ಟು. ಭಸ್ಮಧಾರಿಯಾಗಿ ಸದಾ ನನ್ನ ಕ್ಷೇತ್ರದಲ್ಲಿಯೇ ವಾಸಮಾಡುವ ಗರುಡ ವಾಹನನಾದ ವಿಷ್ಣುವು ಹೇಗೆ ಲಕ್ಷ್ಮೀಪತಿಯೆನಿಸಿ ಸುಖಪಡುತ್ತಿರುವನೋ, ಅದೇ ರೀತಿ ನನ್ನ ಕ್ಷೇತ್ರಗಳಲ್ಲಿ ನಿತ್ಯವೂ ವಾಸಮಾಡುವ ಅವಕಾಶವನ್ನು ಪಡೆದವನು ಪತ್ನೀಪುತ್ರಸಹಿತನಾಗಿದ್ದು ಶ್ರೀಮಂತನಾಗಿ ಕೊನೆಗೆ ನನ್ನ ಅನುಗ್ರಹವನ್ನು ಪಡೆದು ಮುಕ್ತನಾಗುವನು ಇದರಲ್ಲಿ ಸಂಶಯವಿಲ್ಲ ಎಂದು ಪರಶಿವನು ಪಾರ್ವತಿಗೆ ಬೋಧಿಸಿದನು. ॥೨೧೪॥

ಇಲ್ಲಿಗೆ ಶ್ರೀಶಿವರಹಸ್ಯದ ಹನ್ನೊಂದನೆಯ ಅಂಶದಲ್ಲಿ ಸರ್ವಶಿವಕ್ಷೇತ್ರಗಳನ್ನೂ ದೇವೀಪೀಠಸ್ಥಾನಾದಿಗಳನ್ನೂ ಸೂಚಿಸುವ ನಲವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯನಮಃ ॥

# ಅಥ ಶ್ರೀ ಶಿವರಹಸ್ಯೇ

## ಮಹಾದೇವಾಖ್ಯೇ

## ಏಕಾದಶಾಂಶೇ

## ಪಂಚಾಶೋಽಧ್ಯಾಯಃ

॥ ಶ್ರೀ ಶಿವ ಉವಾಚ ॥

ಸರ್ವೇಷಾಮೇವ ವರ್ಣಾನಾಂ ಶಿವಾಶ್ರಮನಿಷೇವಿಣಾಂ ।
ಶಿವಧರ್ಮಾ ಮಯೈವೋಕ್ತಾ ಧರ್ಮಕಾಮಾರ್ಥಮುಕ್ತಯೇ ॥೧॥

ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಸ್ತ್ರೀಶೂದ್ರೋ ವಾ ಶಿವಾಶ್ರಮೀ ।
ಬ್ರಹ್ಮಚಾರೀ ಗೃಹಸ್ಥೋ ವಾ ವನಸ್ಥೋ ವಾಥ ಭಿಕ್ಷುಕಃ ॥೨॥

ಸ್ವಾಶ್ರಮಾತ್ಪರತಃ ಕುರ್ಯಾತ್ಪುಷ್ಪಾರಾಮಂ ಸುಶೋಭನಂ ।
ಆಗ್ನೇಯ್ಯಾಮಗ್ನಿಕಾರ್ಯಾರ್ಥಮೈಶಾನ್ಯಾಮೀಶ್ವರಾಲಯಂ ॥೩॥

---

## ಐವತ್ತನೆಯ ಅಧ್ಯಾಯ

ಪರಶಿವನು ಮತ್ತೆ ಪಾರ್ವತಿಯೊಡನೆ ಹೀಗೆಂದನು.—ದೇವಿಯೇ ಕೇಳು. ಇಲ್ಲಿನ ವರೆಗೆ ನಾನು ಶಿವಧರ್ಮಾನುಯಾಯಿಗಳು ಯಾವ ಜಾತಿಭೇದಗಳಿಗೆ ಸಂಬಂಧಿಸಿದ್ದರೂ, ಅವರೆಲ್ಲರೂ ಧರ್ಮಕಾಮಾರ್ಥಗಳನ್ನು ಸುಲಭವಾಗಿ ಗಳಿಸಿ ತನ್ಮೂಲಕ ಮುಕ್ತಿಯನ್ನು ಸಾಧಿಸುವ ಕ್ರಮವನ್ನು ತಿಳಿಸಿರುವೆನು. ಇನ್ನೂ ಕೆಲವು ಶಿವಧರ್ಮಗಳನ್ನು ಈಗ ನಿನಗೆ ತಿಳಿಯಪಡಿಸುವೆನು ಕೇಳು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಸ್ತ್ರೀಯರು, ಅವರಲ್ಲಿಯೂ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಿ ಇವರು ಯಾರೇ ಆದರೂ ತಾವು ವಾಸಮಾಡುವ ಪ್ರದೇಶದ ಪಕ್ಕದಲ್ಲಿ ಒಂದು ಹೂವಿನ ತೋಟವನ್ನು ನಿರ್ಮಿಸಿಕೊಳ್ಳಬೇಕು. ॥೧-೨॥

ತನ್ನ ಮನೆಯ ಆಗ್ನೇಯ ಭಾಗದಲ್ಲಿ ಅಗ್ನಿಶಾಲೆ ಅಂದರೆ ಅಡಿಗೆ ಮನೆಯನ್ನೂ, ಈಶಾನ್ಯದಲ್ಲಿ ದೇವರ ಮನೆಯನ್ನೂ ನಿರ್ಮಾಣಮಾಡಬೇಕು ಇವುಗಳಿಗೆ

ಸುದೇಶಾಸಂಭವೇ ಕುರ್ಯಾದ್ಯತ್ರ ಸ್ಯಾತ್ಸಂಭವೋ ಭುವಃ ।
ಗೃಹಸ್ಯ ದಕ್ಷಿಣೇ ಕುರ್ಯಾದತಿಥ್ಯಾಭ್ಯಾಗತಾಲಯಂ ॥೪॥

ನೈಋತ್ಯಾಂ ಚ ವಿಹಾರಾರ್ಥಂ ವಾರುಣ್ಯಾಮುದಕಾಶ್ರಯಂ ।
ವಾಯವ್ಯಾಂ ಧಾನ್ಯಸದನಂ ಕೌಬೇರ್ಯಾಂ ಭಾಂಡಕುಂಡಕಂ ॥೫॥

ತ್ರಿಸಂಧ್ಯಮರ್ಚಯೇದ್ದೇವಮಗ್ನಿಕಾರ್ಯಂ ಚ ಭಕ್ತಿತಃ ।
ದ್ವಿಕಾಲಮೇಕಕಾಲಂ ವಾ ಪೂಜಯೇಲ್ಲಿಂಗಮೈಶ್ವರಂ ॥೬॥

ಅಸಂಪೂಜ್ಯ ಶಿವಂ ಮೋಹಾನ್ನ ಭುಂಜೀಯಾತ್ಕದಾಚನ ।
ಅನ್ಯಾನಿ ಶಿವಕರ್ಮಾಣಿ ಯಥಾ ಜೋಷಂ ಸಮಾಚರೇತ್ ॥೭॥

ಶಿವಲಿಂಗಾರ್ಚನಂ ಶ್ರೇಷ್ಠಂ ತೇಭ್ಯಸ್ಸಾರಮನುತ್ತಮಂ ।
ಏಷ ಏವ ಪರೋಧರ್ಮ ಏತದೇವ ಪರಂತಪಃ ॥೮॥

---

ಆಯಾ ದಿಕ್ಕುಗಳಲ್ಲಿ ಸ್ಥಳಾವಕಾಶ ದೊರೆಯದಿದ್ದರೆ, ಅನುಕೂಲವಾದ ಸ್ಥಳದಲ್ಲಿ ಕಲ್ಪಿಸಬಹುದು. ಮನೆಯ ದಕ್ಷಿಣ ಭಾಗದಲ್ಲಿ ಅತಿಥಿ ಅಭ್ಯಾಗತರಿಗಾಗಿ ಒಂದು ಕೊಠಡಿಯನ್ನು ಏರ್ಪಡಿಸಿಕೊಳ್ಳಬೇಕು. ನೈಋತ್ಯದಿಕ್ಕಿನಲ್ಲಿ ವಿಹಾರಾರ್ಥವಾದ ಪ್ರದೇಶವನ್ನೂ, ಪಶ್ಚಿಮ ದಿಕ್ಕಿನಲ್ಲಿ ನೀರಿನ ಆಶ್ರಯ ಅಂದರೆ ಬಾವಿಯೇ ಮುಂತಾ ಮವುಗಳನ್ನೂ ಕಲ್ಪಿಸಿಕೊಳ್ಳಬೇಕು. ವಾಯವ್ಯಮೂಲೆಯಲ್ಲಿ ಉಗ್ರಾಣವನ್ನೂ, ಉತ್ತರದಿಗ್ಭಾಗದಲ್ಲಿ ಭಾಂಡಾದಿಗಳನ್ನು ಇರಿಸುವ ಸ್ಥಳವನ್ನೂ ಕಲ್ಪಿಸಿಕೊಳ್ಳಬೇಕು. ॥೩-೪-೫॥

ದಿನವೂ ಮೂರು ಕಾಲಗಳಲ್ಲಿಯೂ ದೇವತಾರ್ಚನೆ, ಅಗ್ನಿಪೂಜೆ ಇವುಗಳನ್ನು ತಪ್ಪದೆ ನಡೆಸಬೇಕು. ಮೂರುಕಾಲ ಸಾಧ್ಯವಾಗದಿದ್ದರೆ ಎರಡು ಅಥವಾ ಒಂದು ಹೊತ್ತಿನಲ್ಲಾದರೂ ಶಿವಾರಾಧನೆಯನ್ನು ನಡೆಸಬೇಕು. ಶಿವಾರಾಧನೆ ಮಾಡದೆ ಎಂದೂ ಅಜ್ಞಾನದಲ್ಲಿಯೂ ತಾನು ಭೋಜನಮಾಡಕೂಡದು. ಶಿವಪ್ರೀತಿಕರಗಳಾದ ಇತರ ಧರ್ಮಗಳನ್ನು ಕಾಲಾವಕಾಶ ದೊರೆತಾಗ ಮಾಡಬಹುದು. ॥೬-೭॥

ಧರ್ಮಗಳಲ್ಲೆಲ್ಲಾ ಶಿವಲಿಂಗಾರ್ಚನೆಯೇ ಮುಖ್ಯಧರ್ಮ. ಅದಕ್ಕಿಂತ ಶ್ರೇಷ್ಠವಾದ ಕಾರ್ಯಮತ್ತೊಂದಿಲ್ಲ. ಶಿವಲಿಂಗಾರ್ಚನೆಯೇ ಪರಮಧರ್ಮ. ಅದೇ

ಏಷ ಏವ ಮಹಾಯಜ್ಞ ಏತದ್ದಾನಂ ಪರಂ ಮತಂ ।
ಪ್ರಾಣಾತ್ಯಯೇ ಧನತ್ಯಾಗೇ ಮರಣೇ ಗದಪೀಡಿತೇ ॥೯॥

ಅನುಕಲ್ಪಾ ಮಯ್ಯೈವೋಕ್ತಾಃ ಶಿವಾಶ್ರಮನಿಷೇವಿಣಾಂ ।
ಸ್ನಾನಾಶಕ್ತೌ ದಾ ದೇವಿ ಭಸ್ಮಸ್ನಾನಂ ಸಮಂತ್ರಕಂ ॥೧೦॥

ಕುರ್ಯಾತ್ರಿಪುಂಡ್ರರುದ್ರಾಕ್ಷಧಾರಣಂ ವಾ ಯಥಾಬಲಂ ।
ಪ್ರದಕ್ಷಿಣಾದ್ಯಶಕ್ತೋಽಪಿ ಚಿಂತಯೇಚ್ಛಿವಮವ್ಯಯಂ ॥೧೧॥

ಪುತ್ರೇಣ ಪೂಜಯೇಲ್ಲಿಂಗಂ ತತೋ ಭೋಜನಮಾಚರೇತ್ ।
ಕಾರ್ಯಾತಿಪಾತಸಂರೋಧೇ ರಾಷ್ಟ್ರವಿಕ್ಷೋಭಣಾದಿಷು ॥೧೨॥

ಮನಸಾ ಪೂಜಯೇದ್ದೇವಂ ವಾಚಕೈರ್ವಾ ಜಪಾದಿಭಿಃ ।
ಶಿವಾಶ್ರಮಾಶ್ರಿತೈರೇವಂ ಶ್ರಮಿಭಿಶ್ಚ ತವಾಂಬಿಕೇ ॥೧೩॥

---

ತಪಸ್ಸು. ಅದನ್ನೇ ಮಹಾಯಜ್ಞ, ಉತ್ತಮದಾನವೆನ್ನಬಹುದು. ಪ್ರಾಣತ್ಯಾಗ ಸಮಯದಲ್ಲಿ, ದಾರಿದ್ರ್ಯವಡಸಿದಾಗ, ರೋಗಾದಿಗಳಿಂದ ಪೀಡಿತನಾದಾಗ ಶಿವ ಪೂಜೆಗೆ ವಿಕಲ್ಪಕ್ರಮಗಳನ್ನು ಈಗ ನಾನು ಹೇಳುವೆನು. ಶಿವಾಶ್ರಮಿಗಳು ಸ್ನಾನ ಮಾಡಲು ಅಶಕ್ತರಾದರೆ ಭಸ್ಮಸ್ನಾನವನ್ನು ಮಂತ್ರವತ್ತಾಗಿ ನೆರವೇರಿಸಿದರೆ ಸಾಕು. ॥೮-೯-೧೦॥

ತ್ರಿಪುಂಡ್ರಧಾರಣೆ, ರುದ್ರಾಕ್ಷಿಧಾರಣೆ ಇವುಗಳಿಂದ ಶುದ್ಧನಾದರೆ ಸಾಕು. ಪ್ರದಕ್ಷಿಣೆಮಾಡುವುದರಲ್ಲಿ ಅಶಕ್ತನಾದರೆ ಕುಳಿತಬಳಿಯಲ್ಲಿಯೇ ಈಶ್ವರನನ್ನು ಧ್ಯಾನ ಮಾಡಿದರೆ ಸಾಕು. ತನ್ನಿಂದ ಶಿವಾರಾಧನೆಮಾಡಲಾಗದಿದ್ದರೆ ಮಗನಿಂದ ಮಾಡಿಸ ಬಹುದು. ಅನಂತರ ಯಥಾಶಕ್ತಿ ಶಾಂಭವರಿಗೆ ಭೋಜನಮಾಡಿಸಿ ತಾನೂ ಊಟ ಮಾಡಬಹುದು. ರಾಷ್ಟ್ರಕ್ಷೋಭೆ, ಕಾರ್ಯಾತಿಪಾತ ಮುಂತಾದ ವಿಪತ್ಕಾಲಗಳಲ್ಲಿ ಮನಸಾ ಶಿವನನ್ನು ಧ್ಯಾನಿಸುತ್ತಾ ಯಥಾಶಕ್ತಿ ಜಪಾದಿಗಳಿಂದ ಶಿವನನ್ನು ತೃಪ್ತಿ ಗೊಳಿಸಬಹುದು. ಈ ರೀತಿ ಶಿವಧರ್ಮಾನುಯಾಯಿಗಳು ತಮ್ಮ ಧರ್ಮವನ್ನು ಪಾಲಿಸಿಕೊಂಡಿರಬೇಕು. ॥೧೧-೧೨-೧೩॥

ಅಯೋಗೀ ಪೂಜಯೇಲ್ಲಿಂಗೇ ಯೋಗೀ ಸರ್ವತ್ರ ಭಾವಯೇತ್ ।
ಮನಸಾ ವಾ ಮಹಾದೇವಂ ಧ್ಯಾಯೇತ್ಸಾಂಬಂ ತ್ರಿಲೋಚನಂ ॥೧೪॥

ಶಿವಾರ್ಥಂ ಪುಷ್ಪಹಿಂಸಾಯಾಂ ನ ಭವೇತ್ಸತು ಹಿಂಸಕಃ ।
ಯಜ್ಞಾರ್ಥಂ ಪಶುಹಿಂಸಾ ಚ ನ ತದ್ದೋಷಾಯ ಕಲ್ಪತೇ ॥೧೫॥

ಯದ್ಯಲ್ಪಮಪಿ ವಾನ್ಯಾರ್ಥೇ ಹಿಂಸತೇ ಸ ತು ಹಿಂಸಕಃ ।
ಶಿವಾರ್ಚನಪರೋ ನಿತ್ಯಂ ಸರ್ವಹಿಂಸಾವಿವರ್ಜಿತಃ ॥೧೬॥

ಸರ್ವತ್ರ ಮೈಥುನಾದ್ಧೀನೋ ಶಿವಯೋಗೀ ವಸೇತ್ಸದಾ ।
ದೇವತಾತಿಥಿಭಿಕ್ಷಾರ್ಥಂ ಪಚೇನ್ನೈವಾತ್ಮಕಾರಣಾತ್ ॥೧೭॥

ಆತ್ಮಾರ್ಥಂ ಯಃ ಪಚೇನ್ಮೋಹಾನ್ನರಕಾರ್ಥಂ ಸ ಜೀವತಿ ।
ದೇವಾರ್ಥಂ ಪಚನಂ ಯೇಷಾಂ ಸಂತಾನಾರ್ಥೇ ಚ ಮೈಥುನಂ॥೧೮॥

---

ಯೋಗಿಯಲ್ಲದವನು ಶಿವನನ್ನು ಶಿವಲಿಂಗದಲ್ಲಿ ಆರಾಧಿಸಿ ಧ್ಯಾನಿಸಬೇಕು. ಜ್ಞಾನಿಯಾದ ಯೋಗಿಯಾದರೋ ಮಹಾದೇವನು ಸರ್ವವ್ಯಾಪಿಯೆಂದು ಎಲ್ಲಿ ಬೇಕಾದರೂ ದೇಶಭಾವನೆಯಿಲ್ಲದೆ ಧ್ಯಾನಮಾಡಬಹುದು. ಶಿವಪೂಜೆಗಾಗಿ ಹೂಗಳನ್ನು ಕೊಯ್ದರೆ ಅದು ಹಿಂಸಾಕಾರ್ಯವಾಗುವುದಿಲ್ಲ ಯಜ್ಞಕ್ಕಾಗಿ ಮಾಡಿದ ಪಶುವಧೆಯೂ ದೋಷವೆನಿಸುವುದಿಲ್ಲ. ॥೧೪-೧೫॥

ಶಿವಾರ್ಚನೆಗಲ್ಲದೆ ಮತ್ತಾವ ಕಾರ್ಯಕ್ಕೆ ಹಿಂಸಾಕಾರ್ಯಗಳನ್ನು ಎಸಗಿದರೂ ಅದು ಹಿಂಸೆಯೇ ಆಗುವುದು. ಶಿವಾರ್ಚನೆಯಲ್ಲಿ ತೊಡಗಿದವನು ಸರ್ವಹಿಂಸಾವಿವರ್ಜಿತನಾಗಿರಬೇಕು ಶಿವಯೋಗಿಯಾದವನು ಯಾವಾಗಲೂ ಎಲ್ಲಿಯೂ ಸ್ತ್ರೀಸಂಬಂಧವನ್ನು ತ್ಯಜಿಸಿರಲೇಬೇಕು ತಾನುಮಾಡುವ ಅಡಿಗೆಯು ದೇವತೆಗಳು, ಅತಿಥಿಗಳು, ಭಿಕ್ಷುಕರು ಇವರ ಉಪಯೋಗಕ್ಕಾಗಿರಬೇಕೇ ಹೊರತು ಸ್ವೋದರ ಪೂರಣ ಮಾತ್ರ ಫಲವಾಗಿರಬಾರದು. ॥೧೬-೧೭॥

ತನಗಾಗಿ ಅಡಿಗೆಮಾಡಿಕೊಳ್ಳುವವನು ನರಕಭಾಗಿಯಾಗುವನು. ದೇವಪೂಜೆಗಾಗಿ ಮಾಡುವ ಅಡಿಗೆಯೂ, ಸಂತಾನಫಲಕ್ಕಾಗಿ ಮಾಡುವ ಸ್ತ್ರೀಸಂಭೋಗವೂ, ಧರ್ಮಕಾರ್ಯಕ್ಕೆ ಉಪಯೋಗಿಸುವ ಧನಧಾನ್ಯಾದಿಗಳೂ ಧರ್ಮಕಾರ್ಯಗಳೆನಿಸಿ

ಧರ್ಮಾರ್ಥಂ ಧನಧಾನ್ಯಾದಿ ನವಕಾರ್ಥಂ ವಿಸರ್ಜಯೇ ।
ವಿತ್ತಸ್ಯ ತೃತೀಯಭಾಗೇನ ಕುರ್ವೀತೈವಂ ಶಿವಾರ್ಚನಂ ॥೧೯॥

ಕುರ್ವೀತ ಧರ್ಮೋಪ್ಯೇತಚ್ಚ ವ್ಯಯಂ ಜೀವಿತಮಧ್ರುವಂ ।
ನ್ಯಾಯೇನೋಪಾರ್ಜಯೇದ್ವಿತ್ತಂ ಮದ್ಭಕ್ತ್ಯಾ ಸರ್ವಸೌಖ್ಯಕೃತ್ ॥೨೦॥

ದುಃಖೇನಾನ್ಯೇಷು ಯದ್ವಿತ್ತಂ ಸಂಪಾದಿತಮಘಾಯ ತತ್ ।
ಯಶ್ಚೈವ ಬ್ರಹ್ಮಚಾರೀ ಸ್ಯಾನ್ನೈಷ್ಠಿಕೋ ವಾ ಜಿತೇಂದ್ರಿಯಃ ॥೨೧॥

ವಿರಜಾಹೋಮಕೃನ್ನಿತ್ಯಂ ತದ್ಭಸ್ಮಪರಿಧಾರಕಃ ।
ತ್ರಿಸಂಧ್ಯಂ ಪೂಜಯೇಲ್ಲಿಂಗಂ ಬಿಲ್ವಪತ್ರೈಸ್ಸುಮಾಕ್ಷತೈಃ ॥೨೨॥

ಭೈಕ್ಷ್ಯಂ ನಿವೇದ್ಯ ದೇವಾಯ ಸೋಶ್ನೀಯಾದ್ಭಕ್ತಿಪೂರ್ವಕಂ ।
ನಿವೃತ್ತಸ್ಸರ್ವಸಂಗೇಭ್ಯೋ ಜಪೇದ್ರುದ್ರಮನನ್ಯಧೀಃ ॥೨೩॥

---

ಕೊಳ್ಳುವವು ತದ್ವಿರುದ್ಧಕಾರ್ಯಗಳೆಲ್ಲಾ ನರಕವನ್ನು ಒದಗಿಸುವುವು. ತನ್ನಲ್ಲಿರುವ ಹಣದ ಮೂರನೆಯ ಒಂದು ಭಾಗವನ್ನು ವ್ಯಯಮಾಡಿ ಶಿವಾರಾಧನೆಯನ್ನು ನಡೆಸಬೇಕು. ॥೧೮-೧೯॥

ತಾನು ಸಂಪಾದಿಸಿದ ಹಣವನ್ನು ಧರ್ಮಕಾರ್ಯಕ್ಕೆ ವಿನಿಯೋಗಿಸಬೇಕು. ಏಕೆಂದರೆ ಮಾನವ ಜೀವಿತವು ಕ್ಷಣಿಕವಾದುದು ಆದರೆ ಹಣವನ್ನು ಸಂಪಾದಿಸ ಬೇಕಾದರೆ ನನ್ನಲ್ಲಿ ಭಕ್ತಿಭಾವನೆಯಿಟ್ಟು ನ್ಯಾಯದಿಂದ ಸಂಪಾದಿಸಬೇಕು. ಮತ್ತೊಬ್ಬರ ಮನಸ್ಸನ್ನು ನೋಯಿಸಿ ಸಂಪಾದಿಸಿದ ಹಣವು ಅನ್ಯಾಯವೆನಿಸುವುದು ಆದರಿಂದ ಮಹಾಪಾಪವು ಸಂಘಟಿಸುವುದು ॥೨೦-೨೧॥

ಶಿವಧರ್ಮಾಚರಣೆಯಿಂದ ಬ್ರಹ್ಮಚಾರಿಯೆನಿಸಿದವನೂ, ನೈಷ್ಠಿಕಬ್ರಹ್ಮಚಾರಿಯೂ, ಜಿತೇಂದ್ರಿಯರಾಗಿ ಪ್ರತಿದಿನವೂ ವಿರಜಾ ಹೋಮಮಾಡಿ, ಆ ಭಸ್ಮಧಾರಣೆಯಿಂದ ತ್ರಿಸಂಧ್ಯೆಗಳಲ್ಲಿಯೂ ಶಿವಪೂಜೆಮಾಡುತ್ತಾ, ಬಿಲ್ವ, ಭಸ್ಮ, ಅಕ್ಷತೆಗಳನ್ನು ಶಿವಲಿಂಗಕ್ಕೆ ಅರ್ಪಿಸುತ್ತಾ, ತಾನು ಭಿಕ್ಷೆಮಾಡಿ ಅದನ್ನೊ ಶಿವನಿಗೆ ನಿವೇದಿಸಿ ಅನಂತರ ಅದನ್ನು ಭುಂಜಿಸಿ ತೃಪ್ತನಾಗಬೇಕು. ಹಾಗೆಯೇ ಸರ್ವಸಂಗಪರಿತ್ಯಾಗಮಾಡಿ, ಸದಾ ರುದ್ರಮಂತ್ರವನ್ನೇ ಜಪಿಸುತ್ತಾ ಕಾಲಕಳೆಯಬೇಕು. ॥೨೨-೨೩॥

ಸ ಶಿವಬ್ರಹ್ಮಚಾರೀ ಸ್ಯಾದ್ಗೃಹಸ್ಥೋ ಯಸ್ತ್ರಿಷಾರ್ಚಕಃ ।
ಆಧಾಯಾಗ್ನೀನ್ಯಜೇದ್ಯಜ್ಞೈರ್ಯಜ್ಞೇಶಂ ಪರಮೇಶ್ವರಂ ॥೨೪॥

ಪಂಚಯಜ್ಞಪರೋ ನಿತ್ಯಂ ಪಂಚಾಸ್ಯಧ್ಯಾನತತ್ಪರಃ ।
ಅಗ್ನಿರಿತ್ಯಾದಿಭಿರ್ಮಂತ್ರೈರ್ಭಸ್ಮೋದ್ಧೂಲಿತವಿಗ್ರಹಃ ॥೨೫॥

ತ್ರಿಯಾಯುಷಂ ತ್ರಿಪುಂಡ್ರಾಂಕೋ ರುದ್ರಾಕ್ಷಪರಿಮಂಡಿತಃ ।
ತ್ರಿಸಂಧ್ಯಮರ್ಚಯೇಲ್ಲಿಂಗಂ ರುದ್ರಪಂಚಾಕ್ಷರಾಪರಃ ॥೨೬॥

ಸ್ವಾಧ್ಯಾಯಶೀಲಸ್ಸತತಂ ಸಂವಿಭಾಗ್ಯತಿಥಿಪ್ರಿಯಃ ।
ಏವಂ ಶಿವಗೃಹಸ್ಥೋ ಯಃ ಶಿವಲೋಕಂ ವ್ರಜೇತ್ಸಹಿ ॥೨೭॥

ಸಾಂಗಾನ್ವೇದಾನ್ಯಥಾನ್ಯಾಯಮಧೀತ್ಯ ವಿಧಿಪೂರ್ವಕಂ ।
ಇಷ್ಟ್ವಾ ಯಜ್ಞೈರ್ಯಥಾನ್ಯಾಯ್ಯಮಗ್ನಿಷ್ಟೋಮಾದಿಭಿಃಕ್ರಮಾತ್ ॥೨೮॥

---

ಹೀಗಿರುವವನೇ ಶಿವಬ್ರಹ್ಮಚಾರಿಯೆನಿಸುವನು. ಇನ್ನು ಗೃಹಸ್ಥನಾದ ಶಿವಧರ್ಮಾನುಯಾಯಿಯು, ಪ್ರತಿನಿತ್ಯವೂ ಅಗ್ನ್ಯಾಧಾನಮಾಡುತ್ತಾ, ಬ್ರಹ್ಮಯಜ್ಞವೇ ಮೊದಲಾದ ಪಂಚಯಜ್ಞಗಳನ್ನು ನೆರವೇರಿಸುತ್ತಾ, ಪರಶಿವನ ಪಾದಧ್ಯಾನಾಸಕ್ತನಾಗಿದ್ದು, ಅಗ್ನಿರಿತಿಭಸ್ಮ ಮುಂತಾದ ಮಂತ್ರಪುರಸ್ಸರವಾಗಿ ಭಸ್ಮೋದ್ಧೂಲನಾದಿಗಳನ್ನು ನೆರವೇರಿಸಿಕೊಳ್ಳುತ್ತಾ, ತ್ರ್ಯಾಯುಷಂಜಮದಗ್ನೇಃ, ಮುಂತಾದ ಮಂತ್ರಗಳಿಂದ ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲೆ ಇವುಗಳನ್ನು ಧರಿಸಿ ತ್ರಿಸಂಧ್ಯೆಯಲ್ಲಿಯೂ ಶಿವಪಂಚಾಕ್ಷರೀಜಪ, ಶಿವಲಿಂಗಪೂಜೆ ಇವುಗಳಿಂದ ಕಾಲಕಳೆಯುತ್ತಿರಬೇಕು. ॥೨೪-೨೫-೨೬॥

ಸದಾ ವೇದಾಧ್ಯಯನ ಮಾಡುತ್ತಾ ಅತಿಥಿಸತ್ಕಾರಾದಿಗಳಿಂದ ಜೀವಿಸುತ್ತಾ ಗೃಹಸ್ಥನಾಗಿರುವವನು ಶಿವಗೃಹಸ್ಥನೆನಿಸುವನು. ಅಂತಹವನು ಶಿವಲೋಕವನ್ನು ಸೇರುವನು. ಗೃಹಸ್ಥನು ಹಾಗೆ ವೇದಾಧ್ಯಯನ, ಯಜ್ಞಾಚರಣೆ ಇವುಗಳಲ್ಲಿ ಮುಂದುವರಿದು ಅಗ್ನಿಷ್ಟೋಮಾದಿ ಯಾಗಗಳಲ್ಲಿ ಯಜಮಾನನೆನಿಸಿಕೊಳ್ಳಬೇಕು. ॥೨೭-೨೮॥

ತತೋ ವಿಶ್ವಂ ಜಿತಂ ಕೃತ್ವಾ ಅಗ್ನಿಷ್ಟೋಮಾಂತಿಮೇನ ವಾ ।
ಪುತ್ರಾನುತ್ಪಾದ್ಯ ಸದ್ವೃತ್ತಾನ್ ಸದಾರಸ್ಸಾಗ್ನಿಕೋ ದ್ವಿಜಃ ॥೨೯॥

ವಾನಪ್ರಸ್ಥಾಶ್ರಮಂ ಗತ್ವಾ ತ್ರಿಕಾಲಸ್ನಾನಭಸ್ಮಧೃಕ್ ।
ತ್ರಿಪುಂಡ್ರಮಂಡಿತತನುರ್ವನ್ಯೈಶ್ಚ ಕುಸುಮೈಃ ಫಲೈಃ ॥೩೦॥

ಪೂಜಯಿತ್ವಾ ಮಹಾದೇವಂ ತ್ರಿಕಾಲಂ ಕಂದಮೂಲಧೃಕ್ ।
ಚಾಂದ್ರಾಯಣಾದಿಭಿರ್ದೇಹಂ ಶೋಷಯನ್ ಬ್ರಹ್ಮಚರ್ಯವಾನ್ ॥೩೧॥

ಬ್ರಹ್ಮವಿದ್ಯಾಮಧೀಯಾನಃ ಸದಾ ತ್ಯಕ್ತೈಷಣೋ ಯತಿಃ ।
ಆತ್ಮನ್ಯಗ್ನೀನ್ ಸಮಾರೋಪ್ಯ ಜ್ಞಾನಜ್ಞೇಯಾತ್ಮವಿದ್ಯತಿಃ ॥೩೨॥

ಭವೇತ್ಸಗುರುಮಾಸೀನಂ ಸಮಿತ್ಪಾಣ್ಯಭಿತೋ ವ್ರಜೇತ್ ।
ತೇನಾಜ್ಞಾತೋನುತಿಷ್ಠೇತ ಧರ್ಮಾನೇನಂ ಶುಚಿವ್ರತಃ ॥೩೩॥

---

ಅಗ್ನಿಷ್ಟೋಮಯಾಗಮಾಡಿ, ಅನಂತರ ವಿಶ್ವಜಿದ್ಯಾಗಮಾಡಬೇಕು. (ಇದರಲ್ಲಿ ಸರ್ವವಸ್ತುಗಳನ್ನೂ ಆಸೆಯಿಲ್ಲದೆ ದಾನಮಾಡುವುದು) ಹಾಗೆಯೇ ಸದಾಚಾರ ಪರರಾದ ಮಕ್ಕಳನ್ನು ಪಡೆದು, ಸಂಸಾರಭಾರವನ್ನೆಲ್ಲಾ ಅವರಿಗೆ ವಹಿಸಿ, ಪತ್ನೀ ಸಮೇತನಾಗಿ ಅಗ್ನಿಯೊಡನೆ ಅರಣ್ಯದಲ್ಲಿ ವಾಸಿಸುತ್ತಾ ವಾನಪ್ರಸ್ಥಾಶ್ರಮಿಯಾಗ ಬೇಕು. ಅಲ್ಲಿಯೂ ತ್ರಿಕಾಲಗಳಲ್ಲಿ ಸ್ನಾನಮಾಡುತ್ತಾ ಭಸ್ಮತ್ರಿಪುಂಡ್ರಾದಿಗಳಿಂದ ಅಲಂಕೃತನಾಗಿ ಫಲಪುಷ್ಪಾದಿಗಳಿಂದ ಮಹೇಶ್ವರನನ್ನು ಪೂಜಿಸುತ್ತಿರಬೇಕು. ||೨೯-೩೦||

ಇದೇ ರೀತಿ ತ್ರಿಕಾಲಗಳಲ್ಲಿಯೂ ಪರಶಿವನನ್ನು ಪೂಜಿಸುತ್ತಾ, ಕಂದಮೂಲಾದಿಗಳನ್ನು ಭಕ್ಷಿಸುತ್ತಾ, ಚಾಂದ್ರಾಯಣವೇ ಮೊದಲಾದ ವ್ರತಾಚರಣೆಗಳಿಂದ ದೇಹವನ್ನು ದಂಡಿಸುತ್ತಾ ಬ್ರಹ್ಮಚರ್ಯದಿಂದಿದ್ದು, ಬ್ರಹ್ಮವಿದ್ಯೆಯನ್ನು ಅಭ್ಯಾಸ ಮಾಡುತ್ತಾ, ವೈರಾಗ್ಯಾದಿಗಳನ್ನು ತಾಳಿ ಕ್ರಮವಾಗಿ ಸಂನ್ಯಾಸಿಯಾಗಬೇಕು. ಅಲ್ಲಿ ಜ್ಞಾನ, ಜ್ಞೇಯವಸ್ತುಗಳ ಚಿಂತನೆಯಿಂದ ಪರಬ್ರಹ್ಮಸ್ವರೂಪವನ್ನು ಸಾಕ್ಷಾತ್ಕರಿಸಿ ಕೊಳ್ಳುತ್ತಾ, ತಾನು ಆರ್ಚಿಸುತ್ತಿದ್ದ ಅಗ್ನಿಯನ್ನು ಆತ್ಮಾನುಸಂಧಾನದಿಂದ ಅಡಗಿಸಿ ಕೊಳ್ಳಬೇಕು. ||೩೧-೩೨||

ಅನಂತರ ಜ್ಞಾನಿಯಾದ ಗುರುವೊಬ್ಬನನ್ನು ಆಶ್ರಯಿಸಿ ಸಮಿತ್ಪಾಣಿಯಾಗಿ ಅವನನ್ನು ಸೇವಿಸಬೇಕು. ಅವನಿಂದ ಅಪ್ಪಣೆಪಡೆದು ಮುಂದಿನ ಜೀವನವನ್ನು

ಗುರೌ ಶಿವೇವಿನಾಭಾವಂ ನ ಕುರ್ಯಾನ್ಮೋಹತೋಽಪಿ ವಾ ।
ಕುರ್ಯಾತ್ಸ್ನಾನಂ ತ್ರಿಷವಣಂ ಯತಿಸ್ತ್ಯಕ್ತೇಷಣಶ್ಶಿವಂ ॥೩೪॥

ಪೂಜಯೇದ್ಗಲಿತ್ತೈಃ ಬಿಲ್ವೈಃ ಶ್ರೀರುದ್ರಂ ಪ್ರಣವಂ ಜಪೇತ್ ।
ತ್ರಿಪುಂಡ್ರಭಸ್ಮರುದ್ರಾಕ್ಷಕಲಿತೋ ದಂಡಧೃಕ್ಸದಾ ॥೩೫॥

ಕಾಷಾಯವಸನೋ ಮೌನೀ ಸದೋಪನಿಷದರ್ಥವಿತ್ ।
ಭೈಕ್ಷ್ಯಂ ನಿವೇದ್ಯ ದೇವಾಯ ಭುಂಜೀಯಾದ್ಗ್ರಾಸಕಾಷ್ಟಕಂ ॥೩೬॥

ಏವಂ ವಸನ್ನ್ಯ ನಿಯತಃ ಶಿವಲೋಕಂ ಯತಿರ್ವ್ರಜೇತ್ ।
ಶಿವಕ್ಷೇತ್ರೇ ವಸೇನ್ನಿತ್ಯಂ ಅವಿಮುಕ್ತೇಽಪಿ ವಾ ಮಮ ॥೩೭॥

ತತ್ರ ಮೇ ತಾರಕಂ ಪ್ರಾಪ್ಯ ಪ್ರಣವಂ ಮುಚ್ಯತೇ ಯತಿಃ ।
ಅತ್ಯಾಶ್ರಮೀ ಭವೇದ್ವಾಪಿ ಸರ್ವಸಂಗವಿವರ್ಜಿತಃ ॥೩೮॥

---

ನಡೆಸುತ್ತಿರಬೇಕು. ಗುರುವಿಗೂ ಪರಶಿವನಿಗೂ ಯಾವ ಕಾರಣದಿಂದಲೂ ಭೇದ ವನ್ನು ಕಲ್ಪಿಸಬಾರದು. ಯತಿಯಾದವನು ಆಶಾರಹಿತನಾಗಿ ಕಾಲತ್ರಯದಲ್ಲಿ ಸ್ನಾನ ಮಾಡುತ್ತಾ ಬಿಲ್ವಾದಿಗಳಿಂದ ಪರಶಿವನನ್ನು ಅರ್ಚಿಸುತ್ತಾ, ರುದ್ರಮಂತ್ರವನ್ನೂ, ಪ್ರಣವಮಂತ್ರವನ್ನೂ ಜಪಿಸುತ್ತಾ ಭಸ್ಮತ್ರಿಪುಂಡ್ರ, ರುದ್ರಾಕ್ಷಿ, ದಂಡಗಳು ಇವು ಗಳನ್ನು ಧರಿಸಿ ಅರಣ್ಯದಲ್ಲಿ ಸಂಚರಿಸಬೇಕು. ॥೩೩-೩೪-೩೫॥

ಸಂನ್ಯಾಸಿಯು ಸದಾ ಕಾವಿವಸ್ತ್ರವನ್ನೇ ಧರಿಸಿರಬೇಕು. ಸದಾ ಉಪನಿಷ ತ್ತಿನ ಅರ್ಥಚಿಂತನೆಯಲ್ಲಿಯೇ ತೊಡಗಿರಬೇಕು. ಮೌನದಲ್ಲಿರಬೇಕು. ತಾನು ಮಾಡಿದ ಭಿಕ್ಷಾನ್ನವನ್ನು ಸ್ವಾಮಿಗೆ ನಿವೇದಿಸಿ ಅದರಲ್ಲಿ ತಾನು ಎಂಟು ತುತ್ತು ಗಳನ್ನು ಮಾತ್ರ ಭುಂಜಿಸಬೇಕು. ಈ ನಿಯಮದಿಂದ ಜೀವನಯಾತ್ರೆ ನಡೆಸುತ್ತಾ ಶಿವಕ್ಷೇತ್ರದಲ್ಲಾಗಲಿ ಅಥವಾ ಕಾಶಿಯಲ್ಲಾಗಲಿ ವಾಸಮಾಡುತ್ತಿರಬೇಕು. ಇದರಿಂದ ಅವನು ಶಿವಲೋಕವನ್ನು ಹೊಂದುವನು. ॥೩೬-೩೭॥

ಕಾಶಿಯಲ್ಲಿ ತಾರಕಮಂತ್ರೋಪದೇಶವನ್ನು ನನ್ನಿಂದ ಪಡೆದು ಪ್ರಣವ ಮಂತ್ರವನ್ನು ಬಿಡಬೇಕು ಅನಂತರ ಸರ್ವಸಂಗಪರಿತ್ಯಾಗದಿಂದ ಅತ್ಯಾಶ್ರಮಿಯೆನಿಸ ಬೇಕು. ಹಾಗೆ ಅತ್ಯಾಶ್ರಮಿಯಾದವನು ನಿತ್ಯವೂ ತಲೆಯಿಂದ ಹಿಡಿದು ಕಾಲಿನ ವರೆಗೂ ಭಸ್ಮೋದ್ಧೂಲನಮಾಡಿಕೊಳ್ಳಬೇಕು. ರುದ್ರಾಕ್ಷಿಯ ಮಾಲೆಯನ್ನು ಸದಾ

ಆಪಾದಮಸ್ತಕಂ ನಿತ್ಯಂ ಭಸ್ಮನೋದ್ಧೂಲ್ಯವಿಗ್ರಹಂ ।
ರುದ್ರಾಕ್ಷಕಂಠಾಭರಣಃ ಶಿರಸ್ಯೇವ ಜಟಾಧರಃ ॥೩೯॥

ತ್ರಿಪುಂಡ್ರಭಾಲಸ್ಸತತಂ ಶ್ರೀರುದ್ರಜಪತತ್ಪರಃ ।
ಸರ್ವತ್ರೈವ ಮಹಾದೇವಮಾತ್ಮಾನಂ ಪರಿಚಿಂತಯೇತ್ ॥೪೦॥

ಆತ್ಮಾರಾಮೋಽಭಿತಿಷ್ಠೇತ ಪುಣ್ಯಪಾಪವಿವರ್ಜಿತಃ ।
ಲಿಂಗಂ ಶಿವಾಶ್ರಮಸ್ಥಾನಂ ಭಸ್ಮನಾ ಚ ತ್ರಿಪುಂಡ್ರಕಂ ॥೪೧॥

ಹಸ್ತೇ ಮೂರ್ಧ್ನ್ಯುಪವೀತೇ ಚ ರುದ್ರಾಕ್ಷಂ ಧಾರಯೇತ್ತತಃ ।
ಅನ್ಯವರ್ಣೇಶ್ಚಾಶ್ರಮಿಭಿರೇವಮೇವ ಯಥಾಬಲಂ ॥೪೨॥

ರಾಜ್ಞೋಽಪಿ ಪಾಲನಂ ನಿತ್ಯಂ ಧರ್ಮೇ ಯುದ್ಧಂ ಚ ಸನ್ಮುಖಂ ।
ಮಖಾದಿಕರಣಂ ಚೈವ ಶಿವಕ್ಷೇತ್ರಾದಿಪಾಲನಂ ॥೪೩॥

ಭಸ್ಮತ್ರಿಪುಂಡ್ರರುದ್ರಾಕ್ಷಧಾರಣಂ ಚ ಶಿವಾರ್ಚನಂ ।
ತ್ರಿಕಾಲಂ ವಿಭವೇಸ್ಯೈವ ರುದ್ರಪಂಚಾಕ್ಷರೀಜಪಃ ॥೪೪॥

---

ಕಂಠದಲ್ಲಿ ಧರಿಸಿಕೊಳ್ಳಬೇಕು. ಶಿರಸ್ಸಿನಲ್ಲಿ ಜಟೆಯನ್ನು ಕಟ್ಟಿರಬೇಕು. ಸರ್ವದಾ ಹಣೆಗೆ ಭಸ್ಮತ್ರಿಪುಂಡ್ರವನ್ನಿಟ್ಟು, ರುದ್ರಮಂತ್ರವನ್ನು ಜಪಿಸುತ್ತಾ ಸದಾ ನನ್ನ ಸ್ವರೂಪವನ್ನೇ ಅನುಸಂಧಾನಮಾಡುತ್ತಿರಬೇಕು. ||೩೮-೩೯-೪೦||

ಆತ್ಮಾನಂದಾನುಭವದಲ್ಲಿಯೇ ಇರುತ್ತಾ ಪುಣ್ಯಪಾಪಗಳೆರಡಕ್ಕೂ ಸಿಕ್ಕದೆ ಶಿವಾಶ್ರಮಸ್ಥಾನಗತನಾಗಿ ಸದಾ ಶಿವಲಿಂಗಾರಾಧನೆಯಲ್ಲಿಯೇ ತೊಡಗಿರಬೇಕು. ಭಸ್ಮತ್ರಿಪುಂಡ್ರವನ್ನೂ, ತನ್ನ ಎರಡು ಕೈಗಳು, ಶಿರಸ್ಸು, ಉಪವೀತಸ್ಥಾನ ಇವುಗಳಲ್ಲಿ ರುದ್ರಾಕ್ಷಮಾಲೆಗಳನ್ನೂ ಧರಿಸಬೇಕು. ಇದೇ ಶಿವಧರ್ಮವನ್ನು ಎಲ್ಲಾ ಜಾತಿಯವರೂ, ಎಲ್ಲಾ ಆಶ್ರಮದವರೂ ಭಾವಿಸಿ ಯಥಾಶಕ್ತಿ ಅನುಷ್ಠಾನಮಾಡಬಹುದು. ||೪೧-೪೨||

ರಾಜರಾದವರು ಧರ್ಮಪಾಲನೆಗಾಗಿ ಎಂತಹ ಯುದ್ಧವನ್ನಾದರೂ ಎದುರಿಸಬೇಕು. ಯಜ್ಞಾಚರಣೆಯಲ್ಲಿ ಮಧ್ಯೆ ಒದಗುವ ತೊಂದರೆಗಳನ್ನು ಪರಿಹರಿಸುವುದು, ಶಿವಕ್ಷೇತ್ರಾದಿಗಳನ್ನು ರಕ್ಷಿಸುವುದು, ತಾನು ಸ್ವಯಂ ಭಸ್ಮತ್ರಿಪುಂಡ್ರಧಾರಿಯಾಗಿದ್ದು ಶಿವಾರ್ಚನೆಮಾಡುವುದು, ತ್ರಿಕಾಲಗಳಲ್ಲಿಯೂ ರುದ್ರಪಂಚಾಕ್ಷರೀ

ದಂಡ್ಯಾನಾಂ ದಂಡನಂ ಚೈವ ವರ್ಣಾದ್ಯಾಶ್ರಮಪಾಲನಂ ।
ಊರ್ಧ್ವಪುಂಡ್ರಧರಾಣಾಂ ತು ದೇಶಾನ್ನಿಸ್ಸರಣಂ ಶಿವೇ ॥೪೫॥

ಏವಂ ಕುರ್ವನ್ ಶಿವಾಚಾರಂ ನೃಪಶ್ಶಿವತನುರ್ಭವೇತ್ ।
ವೈಶ್ಯೋಽಪಿ ಕೃಷಿಗೋರಕ್ಷಾವಾಣಿಜ್ಯೇಜ್ಯಾದಿಭಿರ್ಯುತಃ ॥೪೬॥

ಭಸ್ಮತ್ರಿಪುಂಡ್ರರುದ್ರಾಕ್ಷಲಿಂಗಾರ್ಚನಪರಸ್ಸದಾ ।
ಧರ್ಮವೃದ್ಧ್ಯಾಭಿಜೀವೇತ ಅಕುರ್ವನ್ ಲೋಕಪೀಡನಂ ॥೪೭॥

ಏವಂ ವೈಶ್ಯಃ ಸದಾಚಾರೋ ಶಿವಲೋಕೇ ವಸೇಚ್ಛಿವೇ ।
ಶೂದ್ರೋಽಪಿ ಸರ್ವವರ್ಣಾನಾಂ ಶುಶ್ರೂಷೋ ಭಸ್ಮಭೂಷಣಃ ॥೪೮॥

ವಿರಕ್ತಶ್ಚ ಶಿವಾಗಾರೇ ವಸೇತ್ಕಾಷಾಯವಸ್ತ್ರಧೃಕ್ ।
ಶಿವಕೈಂಕರ್ಯಯುಕ್ತಾತ್ಮಾ ಶಿವದ್ರವ್ಯಾಣ್ಯಸಂಸ್ಪೃಶನ್ ॥೪೯॥

ಜಪವನ್ನು ಜಪಿಸುವುದು, ತಪ್ಪಿತಸ್ಥರನ್ನು ಶಿಕ್ಷಿಸುವುದು, ವರ್ಣಾಶ್ರಮಧರ್ಮಗಳನ್ನು ಕಾಪಾಡುವುದು, ಊರ್ಧ್ವಪುಂಡ್ರವನ್ನು ಧರಿಸಿಕೊಂಡಿರುವ ಜನರನ್ನು ದೇಶಭ್ರಷ್ಟರನ್ನಾಗಿ ಮಾಡುವುದು, ಇವೇ ಮೊದಲಾದ ಧರ್ಮಕಾರ್ಯಗಳಲ್ಲಿ ತೊಡಗಿ ತನ್ನ ರಾಜಧರ್ಮವನ್ನು ಮುಂದುವರಿಸಿಕೊಳ್ಳಬೇಕು. ॥೪೩-೪೪-೪೫॥

ಈ ರೀತಿ ರಾಜನು ಶಿವಧರ್ಮಪರನಾಗಿ ನಡೆದರೆ ಅವನಿಗೆ ಶಿವಸಾಯುಜ್ಯವು ದೊರೆಯುವುದು. ಇದೇ ರೀತಿ ವೈಶ್ಯನೂ, ವ್ಯವಸಾಯ, ಗೋರಕ್ಷೆ, ವ್ಯಾಪಾರ, ಯಜ್ಞಾಚರಣೆ, ಇವುಗಳಿಂದ ಜೀವಿಸುತ್ತಾ ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲಾ ಇವುಗಳ ಧಾರಣೆಯಿಂದ ಶಿವಾರ್ಚನೆ ನಡೆಸುತ್ತಾ ಧರ್ಮಬುದ್ಧಿಯನ್ನು ಸಂಪಾದಿಸಿ, ಆದರಿಂದ ಜನರಿಗೆ ತೊಂದರೆಯಾಗದಂತೆ ತಾನು ಜೀವನಯಾತ್ರೆ ನಡೆಸಬೇಕು. ಹೀಗಿರುವ ವೈಶ್ಯನು ಸದಾಚಾರಪರನೆನಿಸಿ ಕೊನೆಗೆ ಶಿವಲೋಕವನ್ನು ಸೇರುವನು. ॥೪೬-೪೭॥

ಶೂದ್ರನು ಉಳಿದ ಎಲ್ಲ ಜಾತಿಯವರಿಗೂ ಸೇವಕನಂತಿದ್ದು, ಭಸ್ಮದಿಂದ ಸದಾ ಭೂಷಿತನಾಗಿ, ಆಸೆಯನ್ನು ದೂರಮಾಡಿ, ಸರ್ವದಾ ಶಿವಾಲಯದಲ್ಲಿಯೇ ಕಾಷಾಯ ವಸ್ತ್ರಧಾರಿಯಾಗಿ ವಾಸಮಾಡಬೇಕು. ಈಶ್ವರ ಸೇವೆಯಲ್ಲಿಯೇ ತೊಡಗಿದವನಾಗಿ, ಶಿವದ್ರವ್ಯಗಳಲ್ಲಿ ಯಾವುದನ್ನೂ ಅಪಹರಿಸದೆ ಶಿವಲಿಂಗಾರಾಧನೆ ನಡೆಸುತ್ತಾ

ಭೈಕ್ಷವೃತ್ತ್ಯಾಭಿಜೀವೇತ ಲಿಂಗಮಭ್ಯರ್ಚಯನ್ ಶಿವೇ ।
ವಿರಕ್ತಾಸ್ತ್ರೀ ಯದಿ ಶಿವೇ ಸರ್ವವರ್ಣೇಷ್ವಪಿ ಕ್ರಮಾತ್ ॥೫೦॥

ಕಾಷಾಯವಸನೋಪೇತಾ ಜಟಿಲಾ ಭಸ್ಮಭೂಷಿತಾ ।
ತ್ರಿಪುಂಡ್ರರುದ್ರಾಕ್ಷಧರಾ ಶಿವಲಿಂಗಾರ್ಚನೇ ಪರಾ ॥೫೧॥

ಭೈಕ್ಷೇಣೈವಾಭಿವರ್ತೇತ ಯಾವದ್ದೇಹಾಂತಮೀಶ್ವರಿ ।
ಶಿವಕ್ಷೇತ್ರೇ ಶಿವಾಗಾರೇ ಸಂಮಾರ್ಜನಪರಾಯಣಾ ॥೫೨॥

ಉಪಲೇಪನಕರ್ತ್ರೀ ವಾ ಮಾಲಾಕಾರ್ಯಥವಾ ಶಿವೇ ।
ದೀಪೋದ್ಬೋಧಕರೀ ವಾಪಿ ಪಾಪೈರ್ಮುಕ್ತ್ವಾ ಶಿವಂ ವ್ರಜೇತ್ ॥೫೩॥

ಸಂಕೀರ್ಣಾ ಅಂತ್ಯಜಾಸ್ಸರ್ವೇ ಶಿವಾಲಯವಿಲೋಕನೈಃ ।
ರಥಾನಾಂ ಕರ್ಷಣಾದ್ದೇವಿ ವಿಮುಕ್ತಾ ಭಸ್ಮಭೂಷಿತಾಃ ॥೫೪॥

---

ಭಿಕ್ಷಾವೃತ್ತಿಯಿಂದ ಜೀವನ ಮಾಡಬೇಕು. ಇನ್ನು ಎಲ್ಲಾ ಜಾತಿಯವರೆಲ್ಲಿಯೂ ಸ್ತ್ರೀಯರು ವಿರಕ್ತರಾಗಿದ್ದರೆ ಅವರು ಈ ಧರ್ಮವನ್ನವಲಂಬಿಸಬೇಕು. ||೪೮-೪೯-೫೦||

ಆಕೆಯು ಸದಾ ಕಾವಿಯ ಬಟ್ಟೆಯನ್ನುಟ್ಟು, ಜಟಾಧಾರಿಣಿಯಾಗಿ ಭಸ್ಮ ತ್ರಿಪುಂಡ್ರ, ರುದ್ರಾಕ್ಷಿ ಇವುಗಳನ್ನು ಧರಿಸಿಕೊಂಡು ಸದಾ ಶಿವಲಿಂಗಾರ್ಚನೆಯ ಲ್ಲಿಯೇ ಕಾಲಕಳೆಯಬೇಕು. ಮತ್ತು ಅವಳು ಬದುಕಿರುವ ವರೆಗೂ ಭಿಕ್ಷಾವೃತ್ತಿ ಯಿಂದ ಜೀವಿಸುತ್ತಾ ಶಿವಕ್ಷೇತ್ರದಲ್ಲಿರುವ ಶಿವಾಲಯವನ್ನು ಗುಡಿಸುವ ಕಾರ್ಯದಲ್ಲಿ ಆಸಕ್ತಳಾಗಿರಬೇಕು. ||೫೧-೫೨||

ಅಥವಾ ದೇವಾಲಯವನ್ನು ಸಾರಿಸುವುದು, ಹೂವುಕಟ್ಟುವುದು ಮತ್ತು ದೇವಾಲಯದಲ್ಲಿ ದೀಪಗಳನ್ನು ಹೊತ್ತಿಸುವುದು, ಇಂತಹ ಕಾರ್ಯಗಳಲ್ಲಿ ಆಸಕ್ತಳಾಗಿ ಪಾಪಕಾರ್ಯಗಳಿಗೆ ಮನಗೊಡದೆ ವರ್ತಿಸಬೇಕು. ಹೀಗಿದ್ದರೆ ಆಕೆಗೆ ಶಿವಲೋಕವು ದೊರೆಯುವುದು. ಇನ್ನು ಅಂತ್ಯಜರು ಅಂದರೆ ಚಂಡಾಲಾದಿ ಸಂಕೀರ್ಣಜಾತಿ ಯವರು ಶಿವಾಲಯವನ್ನೇ ದೂರದಿಂದ ದರ್ಶನಮಾಡಿಕೊಂಡು ಶಿವರಥವನ್ನು ಎಳೆ ಯುತ್ತಾ ಭಸ್ಮಭೂಷಿತಗಾತ್ರರಾಗಿ ಶಿವಾನುಗ್ರಹವನ್ನು ಪಡೆದು ಮುಕ್ತರಾಗಬೇಕು. ||೫೩-೫೪||

ರುದ್ರಭಕ್ತೈಸ್ಸದಾಕಾರ್ಯಾ ರುದ್ರಸಂಖ್ಯಾ ಜಟಾ ಶುಭಾಃ ।
ಭಸ್ಮಧಾರ್ಯಂ ಪ್ರಯತ್ನೇನ ತ್ರಿಪುಂಡ್ರೋದ್ಧೂಲನಾತ್ಮನಾ ॥೫೫॥

ವಿಧೂಯ ಸರ್ವಪಾಪಾನಿ ಶಿವಲೋಕೇ ಮಹೀಯತೇ ।
ವಾರುಣಂ ಮಲನಾಶಾಯ ಭಸ್ಮನಾಜ್ಞಾನನಾಶಕಂ ॥೫೬॥

ಜಲಸ್ನಾನಾದಸಂಖ್ಯಾತಪಾಗ್ನೇಯಸ್ನಾನಜಂ ಫಲಂ ।
ಮಹಾಪಾತಕಯುಕ್ತೋ ವಾ ಯುಕ್ತೋ ವಾ ಸರ್ವಪಾತಕೈಃ ॥೫೭॥

ಭಸ್ಮಸ್ನಾನವಿಶುದ್ಧಾತ್ಮಾ ಶಿವಲೋಕಂ ಸ ಗಚ್ಛತಿ ।
ಸೋಽಪಿ ಯಾಂ ಗತಿಮಾಪ್ನೋತಿ ನ ತಾಂ ಯಜ್ಞಶತೈರಪಿ ॥೫೮॥

ಗಂಧಲೇಪವಿಹೀನೋಽಪಿ ಭಾವದುಷ್ಟೋ ನ ಶುಧ್ಯತಿ ।
ಭಾವಶುದ್ಧ್ಯಾ ಭವೇತ್ಪೂತೋ ಯೋ ವಾ ಕೋ ವಾಪಿ ಮಾನವಃ॥೫೯॥

---

ರುದ್ರಭಕ್ತರೆನಿಸಿದವರು ತಮ್ಮ ಕೂದಲುಗಳನ್ನು ಹನ್ನೊಂದು ಜಟೆಗಳನ್ನಾಗಿ ಮಾಡಿಕೊಳ್ಳಬೇಕು. ಭಸ್ಮತ್ರಿಪುಂಡ್ರಗಳಿಂದ ಶರೀರವನ್ನು ಅಲಂಕರಿಸಿಕೊಂಡಿರಬೇಕು. ಆದರಿಂದ ಅವರಿಗೆ ಶಿವಲೋಕವು ಲಭಿಸುವುದು. ಸ್ನಾನದ ವಿಷಯದಲ್ಲಿ ಕೇವಲ ಜಲಸ್ನಾನಕ್ಕಿಂತ ಆಗ್ನೇಯ (ಭಸ್ಮ) ಸ್ನಾನವು ವಿಶೇಷ ಫಲಪ್ರದವಾದುದು. ಜಲಸ್ನಾನದಿಂದ ದೇಹದ ಮೇಲಿನ ಕೊಳೆಯು ಹೋಗುವುದು ಭಸ್ಮಸ್ನಾನದಿಂದ ಅಜ್ಞಾನವು ಅಂದರೆ ಒಳಭಾಗದ ಕೊಳೆಯು ನಾಶವಾಗುವುದು. ||೫೫-೫೬||

ಮಾನವನು ಪಾಪಿಯಾಗಿರಲಿ, ಸುಕೃತಿಯಾಗಿರಲಿ ಭಸ್ಮಸ್ನಾನಮಾಡುವುದರಿಂದ ಅವನು ಮುಕ್ತನೆನಿಸುವನು. ಅವನು ಆದರಿಂದ ಶುದ್ಧನೆನಿಸಿ ಕೊನೆಗೆ ಶಿವಲೋಕವನ್ನು ಸೇರುವನು. ಯಜ್ಞಶತಗಳನ್ನು ನೆರವೇರಿಸಿದವರಿಗೂ ಭಸ್ಮಸ್ನಾನ ಮಾಡಿದ್ದರಿಂದ ಲಭಿಸುವ ಫಲವು ದೊರೆಯಲಾರದು. ಶಿವಲಿಂಗಕ್ಕೆ ಗಂಧಾದಿಗಳನ್ನು ಅರ್ಪಿಸುವುದು ಸಾಧ್ಯವಲ್ಲದಿದ್ದರೂ, ಸದ್ಭಾವನೆಯಿಂದ ಕೂಡಿರುವುದಾದರೆ, ಅಂತಹವನು ಪವಿತ್ರನೆನಿಸಿಕೊಳ್ಳುವನು. ಶಿವಲಿಂಗದಲ್ಲಿ ದೇವತಾಭಾವನೆಯನ್ನು ಹೊಂದಿರುವುದಾದರೆ ಎಂತಹ ಪಾಪಿಯೂ ಸಹ ಪವಿತ್ರನೆನಿಸಿಬಿಡುವನು. ||೫೭-೫೮-೫೯||

ಸ್ನಾನಂ ವಾರುಣಮಾಗ್ನೇಯಂ ದಿವ್ಯಂ ವಾಯವ್ಯಮಾನಸೇ ।
ಪಂಚಸ್ನಾನಾನಿ ಸರ್ವೇಷಾಂ ವಿಹಿತಾನಿ ವಿಶುದ್ಧಯೇ ॥೬೦॥

ವಾರುಣಂ ಚ ಜಲೇ ಸ್ನಾನಮಾಗ್ನೇಯಂ ಭಸ್ಮನಾ ಭವೇತ್ ।
ವೃಷ್ಟ್ಯಾ ಸಾತಪಯಾ ದಿವ್ಯಂ ವಾಯವ್ಯಂ ರಜಸಾ ಗವಾಂ ॥೬೧॥

ಮಾನಸಂ ಧ್ಯಾನಮಂತ್ರಾದಿವಿಹಿತಂ ಶಂಭುನಾ ಶಿವೇ ।
ಉದಕುಂಭಸಹಸ್ರೇಣ ಮೃದಾಂ ನಗಶತೇನ ಚ ॥೬೨॥

ಭಾವದುಷ್ಟೋನ ಶುಧ್ಯೇತ ಶತಹಾಯನಮಾಪ್ಲುತ ।
ಭಾವಪೂತಂ ಚರೇಚ್ಛೌಚಂ ವಸ್ತ್ರಪೂತಂ ಜಲಂ ಪಿಬೇತ್ ॥೬೩॥

ದೃಷ್ಟಿಪೂತಂ ನ್ಯಸೇತ್ಪಾದಂ ಸತ್ಯಪೂತಂ ವಚೋ ವದೇತ್ ।
ಜಟಾಕಪಾಲಪಾಣಿಸ್ಸ್ಯಾದ್ಭಸ್ಮಾಂಗೋ ವೀತರಾಗವಾನ್ ॥೬೪॥

---

ಮಾನಸಸ್ನಾನ ಎಂಬ ಹೆಸರಿನಿಂದ ಆ ಸ್ನಾನಗಳು ಪಂಚವಿಧಗಳಾಗಿವೆ. ನೀರಿನಲ್ಲಿ ಸ್ನಾನಮಾಡುವುದೇ ವಾರುಣಸ್ನಾನ, ಭಸ್ಮದಿಂದ ದೇಹವನ್ನು ಆಚ್ಛಾದಿಸುವುದೇ ಆಗ್ನೇಯಸ್ನಾನ, ಮಳೆ ಬಿಸಿಲಿನಿಂದ ನೆನೆದು ಒಣಗುವುದೇ ದಿವ್ಯಸ್ನಾನ, ಗೋಧೂಳಿಗೆ ಮೈಕೊಡುವುದೇ ವಾಯುವ್ಯಸ್ನಾನ, ಧ್ಯಾನದಿಂದಲೂ ಶಿವಮಂತ್ರೋಚ್ಚಾರಣೆಯಿಂದಲೂ ಸ್ನಾನಭಾವನೆಯಿಂದ ಇರುವುದೇ ಮಾನಸಸ್ನಾನ. ಆದರೆ ಮಾನಸಿಕವಾದ ಸದ್ಭಾವನೆಯಿಲ್ಲದೆ ಸಾವಿರ ಚೊಂಬು ನೀರಿನಿಂದ ಸ್ನಾನಮಾಡಿ ಮುಳುಗಿದರೂ, ನೂರಾರು ಬೆಟ್ಟಗಳಷ್ಟು ಮಣ್ಣಿನಿಂದ ಮೃತ್ತಿಕಾಸ್ನಾನವೆಸಗಿದರೂ ಅದು ವ್ಯರ್ಥವೇ ಸರಿ. ||೬೦-೬೧-೬೨||

ಅಂಥ ಮಾನಸಿಕ ಶುದ್ಧತೆಯಿಲ್ಲದ ಸ್ನಾನವನ್ನು ನೂರಾರುವರ್ಷ ಪರ್ಯಂತ ಆಚರಿಸಿದರೂ ಅದು ವ್ಯರ್ಥವೇ ಸರಿ. ಭಾವಶುದ್ಧಿಯಿಲ್ಲದ ಸ್ನಾನವೂ, ವಸ್ತ್ರದಿಂದ ಶೋಧಿಸದ ನೀರೂ ದುಷ್ಟವೇ ಎನಿಸುವುದು. ದೃಷ್ಟಿಯಿಟ್ಟು ನೋಡಿ ಸಂಶಯವಿಲ್ಲದ ಸ್ಥಳಗಳಲ್ಲಿ ಕಾಲನ್ನಿಡಬೇಕು. ಸತ್ಯದಿಂದ ಕೂಡಿದ ಮಾತನ್ನೇ ಆಡಬೇಕು. ಶಿವಧರ್ಮಾನುಯಾಯಿಯಾದವನು ಜಟೆ, ಕಪಾಲ, ಭಸ್ಮಪೂತವಾದ ಶರೀರ ಇವುಗಳಿಂದ ಕೂಡಿ ರಾಗದ್ವೇಷಾದಿಗಳನ್ನು ದೂರಮಾಡಿರಬೇಕು. ||೬೩-೬೪||

ಯದ್ವೈವ ಸರ್ವಧರ್ಮಾಣಾಂ ಫಲಂ ತತ್ಸ್ಯಾಚ್ಛಿವಾಶ್ರಮೇ ।
ಶಿವಾಜಟೋ ಜಟೀ ಮುಂಡೀ ಭಿಕ್ಷಾಶೀ ವಿಗತಸ್ಪೃಹಃ ॥೬೫॥

ಮೌನೀ ಭೂತಾನುಕಂಪೀ ಸ್ಯಾದ್ಯತಿಃ ಶಾಂತಮನಾಶ್ಚರೇತ್ ।
ಮಾಧೂಕರಂ ಚರನ್ ಭೈಕ್ಷ್ಯಮೇಕಾನ್ನಂ ಪರಿವರ್ಜಯೇತ್ ॥೬೬॥

ಉಪವಾಸಾತ್ಪರಂ ಭೈಕ್ಷಂ ಭೈಕ್ಷಾನ್ನಕ್ತಮಯಾಚಿತಾತ್ ।
ಯತಿಸ್ತು ನಿಯತಂ ಭೈಕ್ಷ್ಯಂ ಶಿವಕ್ಷೇತ್ರೇ ವಸೇತ್ಸದಾ ॥೬೭॥

ಯಸ್ಸರ್ವಸಂಗನಿರ್ಮುಕ್ತೋ ಭಕ್ತಶ್ಶಿವಪರಾಯಣಃ ।
ಯೋಗನಿಷ್ಠೋಽಪ್ಯಯೋಗೋ ವಾ ಶಿವಕ್ಷೇತ್ರೇ ವಸೇತ್ಸದಾ ॥೬೮॥

ಯೋಗೀ ಯಾಂ ಗತಿಮಾಪ್ನೋತಿ ದೇಹಾಂತೇ ತಾಂ ಗತಿಂ ವ್ರಜೇತ್ ।
ವಸೇದಾಯತಗೇ ನಿತ್ಯಂ ಸ ಗಣ ಶ್ಶಿವಧರ್ಮವಿತ್ ॥೬೯॥

---

ಸರ್ವಧರ್ಮಗಳಿಗೂ ಫಲವನ್ನು ಒದಗಿಸತಕ್ಕದ್ದೆಂದರೆ ಶಿವಾಶ್ರಮವೊಂದೇ. ಶಿವಾಶ್ರಮದಲ್ಲಿರುವವನು ಜಟಾಧಾರಿಯಾಗಿರಬೇಕು. ಏಕೆಂದರೆ ಜಟೆಯೇ ಪಾರ್ವತಿಯ ರೂಪವೆನಿಸುವುದು. ಹಾಗೆ ಜಟಾಧಾರಿಯಾಗಿ ಸಂನ್ಯಾಸಿಯೆನಿಸಿ, ಭಿಕ್ಷಾನ್ನದಿಂದ ಜೀವಿಸುತ್ತಾ, ಆಶಾರಹಿತನಾಗಿ, ಮೌನದಿಂದಿರುತ್ತಾ, ಸರ್ವಪ್ರಾಣಿಗಳಲ್ಲಿಯೂ ದಯಾಶಾಲಿಯಾಗಿ ವರ್ತಿಸಬೇಕು. ಅಂತಹವನೇ ಯತಿಯೆನಿಸುವನು. ಆತನು ಜೇನುಹುಳುವಿನಂತೆ ಪ್ರತಿ ಮನೆಗೂ ಹೋಗಿ ಭಿಕ್ಷೆಮಾಡಿ ಆದರಿಂದ ಜೀವನ ಮಾಡಬೇಕೇ ಹೊರತು, ಒಂದೇ ಮನೆಯಲ್ಲಿ ನಿಂತು ಅಲ್ಲಿ ಲಬ್ಧವಾದ ಆಹಾರವನ್ನು ಭುಂಜಿಸಬಾರದು. ||೬೫-೬೬||

ಉಪವಾಸಮಾಡುವುದಕ್ಕಿಂತ ಭಿಕ್ಷೆಮಾಡುವುದು ಶ್ರೇಷ್ಠವು. ಅದಕ್ಕಿಂತಲೂ ಅಯಾಚಿತವಾಗಿ ಬಂದ ಆಹಾರದಿಂದ ನಕ್ತಭೋಜನಮಾಡುವುದು ಮತ್ತೂ ಶ್ರೇಷ್ಠವು. ಯತಿಯಾದವನಿಗೆ ಮಾತ್ರ ಭಿಕ್ಷೆಯೇ ನ್ಯಾಯಬದ್ಧವಾದುದು. ಅವನು ಸದಾ ಶಿವಕ್ಷೇತ್ರದಲ್ಲಿಯೇ ವಾಸಮಾಡಬೇಕು. ಸರ್ವಸಂಗಪರಿತ್ಯಾಗದಿಂದ ಸದಾ ಶಿವರೂಪವನ್ನೇ ನೆನೆಯುತ್ತಾ, ಯೋಗನಿಷ್ಠನೆನಿಸಿ ಶಿವಕ್ಷೇತ್ರದಲ್ಲಿ ವಾಸಮಾಡುವುದೇ ನಿಜವಾದ ಸಂನ್ಯಾಸಿಯ ಧರ್ಮ. ||೬೭-೬೮||

ಅದೇ ಧರ್ಮದಲ್ಲಿ ಗೃಹಸ್ಥನು ನಡೆದರೂ, ಅವನಿಗೆ ಯೋಗಿಯು ಹೊಂದುವ ಫಲವೇ ದೊರೆಯುವುದು. ಶಿವಾಲಯದಲ್ಲಿಯೇ ವಾಸಮಾಡುವ ಮನುಜನಿಗೆ

ಪುಣ್ಯಾರಾಮ್ಯೈಕಕೆನರ್ಮಾತ್ವಾ ಬಿಲ್ವಾರೋಪಣಕೃನ್ನರಃ ।
ಏಕಂ ವಾ ಬಿಲ್ವಜತರುಂ ಸ್ಥಾಪಯಿತ್ವಾ ಶಿವಾಶ್ರಮೇ ॥೭೦॥

ಯಾವಂತಿ ತತ್ರ ಕುಸುಮಬೀಜಮೂಲಫಲಾನಿ ಚ ।
ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥೭೧॥

ತ್ರಿಸ್ನಾನಪೂಜಾಸಂಯುಕ್ತಃ ಕೌಪೀನಾಚ್ಛಾದನೇ ತಥಾ ।
ವಸೇದಾಮರಣಂ ಕ್ಷೇತ್ರೇ ಶಿವಲಿಂಗಸಮೀಪತಃ ॥೭೨॥

ದೇಹಿನಾಂ ತತ್ರ ಪಂಚತ್ವಂ ಶಿವಸಾಯುಜ್ಯದಾಯಕಂ ।
ಶಿವಧ್ಯಾನರತಾಶ್ಯಾಂತಾಃ ಶಿವಲಿಂಗಾರ್ಚನಪ್ರಿಯಾಃ ॥೭೩॥

ಋಜವೋ ಮೃದವಃ ಸ್ವಸ್ಥಾ ಅನುಕೂಲಾಃ ಪ್ರಿಯಂವದಾಃ ।
ಶಿವಾಭಿಮಾನಸಂಪನ್ನಾಸ್ತೇ ಶೈವಾಶ್ಶಿವಸಮ್ಮತಾಃ ॥೭೪॥

---

ಶಿವಗಣಪದವಿಯೂ, ಶಿವಧರ್ಮಜ್ಞಾನವೂ ಲಭಿಸುವುದು. ಪುಣ್ಯಪ್ರದವಾದ ಉದ್ಯಾನನಿರ್ಮಾಣ ಮತ್ತು ಅಲ್ಲಿ ಬಿಲ್ವವೃಕ್ಷಗಳನ್ನು ನೆಡುವುದು ಇವೆಲ್ಲಾ ಉತ್ತಮ ಧರ್ಮಗಳು. ಶಿವಾಲಯಕ್ಕಾಗಿ ಒಂದು ಬಿಲ್ವವೃಕ್ಷವನ್ನು ನೆಡುವುದೂ ಶ್ರೇಯಸ್ಕರ ಧರ್ಮವೆನಿಸುವುದು. ||೬೯-೭೦||

ತಾನು ಸ್ಥಾಪಿಸಿದ ಬಿಲ್ವವೃಕ್ಷದಲ್ಲಿ ಎಷ್ಟು ಹೂವು, ಹಣ್ಣು, ಬೀಜ ಇವುಗಳಿರುವುವೋ ಅಷ್ಟು ವರ್ಷ ಪರ್ಯಂತ ಶಿವಲೋಕದಲ್ಲಿ ಅವನಿಗೆ ವಾಸವು ದೊರಕುವುದು. ತ್ರಿಕಾಲಗಳಲ್ಲಿಯೂ ಸ್ನಾನಮಾಡಿಕೊಂಡು ಕೌಪೀನ ಮಾತ್ರ ಧಾರಿಯಾಗಿ ಶಿವಲಿಂಗದ ಸಮೀಪದಲ್ಲಿ ಆಮರಣಾಂತ ಶಿವಕ್ಷೇತ್ರದಲ್ಲಿ ವಾಸಮಾಡಬೇಕು. ||೭೧-೭೨||

ಶಿವಕ್ಷೇತ್ರದಲ್ಲಿ ಮರಣವೊದಗುವುದೇ ಶಿವಸಾಯುಜ್ಯ ಪ್ರಾಪ್ತಿಗೆ ಕಾರಣವೆನಿಸುವುದು. ಶಿವಧ್ಯಾನರತರಾಗಿ, ಶಾಂತರಾಗಿ, ಶಿವಲಿಂಗಾರ್ಚನಾಸಕ್ತರಾಗಿ, ಋಜುಮಾರ್ಗದಲ್ಲಿ ನಡೆಯುತ್ತಾ, ಮೃದುಸ್ವಭಾವದಿಂದಿದ್ದು, ಆರೋಗದೃಢಕಾಯರಾಗಿ, ಎಲ್ಲರಿಗೂ ಹಿತಕರವಾದ ಮಾತುಗಳನ್ನೇ ಆಡುತ್ತಾ, ಶಿವಾಭಿಮಾನಸಂಪನ್ನರಾಗಿರುವವರೇ ಶೈವರು. ಅವರೇ ಈಶ್ವರನಿಗೆ ಸಮ್ಮತವೆನಿಸುವರು. ||೭೩-೭೪||

ಭಸ್ಮನಿಷ್ಠಾಸ್ಸದಾ ತುಷ್ಟಾ ನಿತ್ಯಂ ಸ್ವಾಗತವಾದಿನಃ ।
ಮೈತ್ರಿಯುಣಶ್ಚ ಭೂತೇಷು ತ್ರೈವಾಸ್ತ್ಯಕ್ತೇಷಣಾಶ್ಶಿವೇ ॥೭೫॥

ಚಾಪಲಾನಿ ನ ಕುರ್ವಂತಿ ಶಿವಾದರವಶಂ ಗತಾಃ ।
ಶಿವಭಕ್ತಿಸ್ಸದಾ ಶಾಂತಿರಹಿಂಸಾ ಸಮದರ್ಶಿತಾ ॥೭೬॥

ಸಂತೋಷಸ್ಸತ್ಯಮಸ್ತೇಯಂ ಬ್ರಹ್ಮಚರ್ಯಂ ತಥಾಷ್ಟಕಂ ।
ಯಥಾ ಸಂಭವಪೂಜಾಭಿಸ್ಸದಾಶಿವಕಥಾರತಿಃ ॥೭೭॥

ಕರ್ಮಣಾ ಮನಸಾ ವಾಚಾ ಲಾಭಾಲಾಭೇಷು ಸಾಮ್ಯತಾ ।
ಶೌಚಮಾರ್ಜವಸಂಪತ್ತಿರ್ಭಕ್ತಿರ್ನೈ ಸವಿಭಾಗಿತಾ ॥೭೮॥

ದಯಾದಾಕ್ಷಿಣ್ಯಸಂಪತ್ತಿರ್ನಿಂದಾ ಮಾತ್ಸರ್ಯವರ್ಜನಂ ।
ಹುಂಕಾರಂ ತರ್ಜನಂ ಚೈವ ವರ್ಜಯೇಚ್ಚ ಶಿವಾಶ್ರಮೀ ॥೭೯॥

---

ಅವರು ಸದಾ ಭಸ್ಮಧಾರಿಗಳಾಗಿಯೂ, ಸಂತುಷ್ಟರಾಗಿಯೂ ಸಮಸ್ತ ಪ್ರಾಣಿಗಳಲ್ಲಿಯೂ ಮೈತ್ರಿಯುಳ್ಳವರಾಗಿಯೂ, ಈಷಣತ್ರಯ ನಿರ್ಮುಕ್ತರಾಗಿರುವವರಾಗಿಯೂ ಇರುವರು. ಶಿವಪ್ರೀತಿಗೆ ಪಾತ್ರರಾದ ಅವರು ಎಂದೂ ಚಪಲರಾಗಿ ವರ್ತಿಸುವುದಿಲ್ಲ. ಶಿವನಲ್ಲಿ ಭಕ್ತಿಯಿಡುವುದು, ಶಾಂತತೆಯಿಂದಿರುವುದು, ಅಹಿಂಸೆ, ಎಲ್ಲರಲ್ಲಿಯೂ ಸಮಭಾವ, ಸಂತೋಷ, ಸತ್ಯಾವಲಂಬನೆ, ಕಳ್ಳತನವಿಲ್ಲದಿರುವುದು, ಬ್ರಹ್ಮಚರ್ಯದಲ್ಲಿರುವುದು, ಈ ಎಂಟೂ ಅವರ ನೈಜವಾದ ಗುಣಗಳು. ಶಿವಪೂಜೆ, ಶಿವಕಥಾಸಕ್ತಿ ಇವುಗಳಲ್ಲಿ ತನ್ನ ಶಕ್ತಿಯಿದ್ದಷ್ಟು ಮುಂದುವರಿದು ಅವನ್ನು ಸಾಧಿಸಿಕೊಳ್ಳಬೇಕು. ॥೭೫-೭೬-೭೭॥

ಕರ್ಮಗಳಿಂದಲೂ, ಮನಸ್ಸು, ಮಾತು ಇವುಗಳಿಂದಲೂ, ಲಾಭಾಲಾಭ ಸಮಯಗಳಲ್ಲಿಯೂ ಒಂದೇ ರೀತಿ ವರ್ತಿಸಬೇಕು. ಸರ್ವಕರ್ಮಗಳಲ್ಲಿಯೂ ಶುಚಿಯಾಗಿ ವರ್ತಿಸಬೇಕು. ಋಜುಮಾರ್ಗದಲ್ಲಿದ್ದು, ನಿರ್ದುಷ್ಟವಾದ ಭಕ್ತಿಯನ್ನು ಸಂಪಾದಿಸಿಕೊಳ್ಳಬೇಕು ಶಿವಾಶ್ರಮಿಗಳು ವಿಶೇಷವಾದ ದಯೆ, ದಾಕ್ಷಿಣ್ಯ, ನಿಂದನೆ, ಐಶ್ವರ್ಯಾಭಿಲಾಷೆ, ಮಾತ್ಸರ್ಯ, ಹುಂಕಾರಾದಿಗಳು, ಹೆದರಿಸುವಿಕೆ ಮುಂತಾದ ದುರ್ಗುಣಗಳನ್ನು ದೂರಮಾಡಬೇಕು. ॥೭೮-೭೯॥

ಮದ್ಭಕ್ತೇಷು ಸದಾ ಪ್ರೀತಿರನ್ಯಪೂಜಾನುಮೋದನಂ ।
ಸ್ವಯಮಭ್ಯರ್ಚನಂ ಲಿಂಗೇ ಪತ್ರಪುಷ್ಪಫಲಾದಿಭಿಃ ॥೮೦॥

ಮಮಾನುಸ್ಮರಣಂ ನಿತ್ಯಂ ನಾಮಭಿಶ್ಚ ಸದಾಂಬಿಕೇ ।
ಕಥಾಸು ಶ್ರೂಯಮಾಣಾಸು ಸ್ವರನೇತ್ರಾಶ್ರುಪಾತನಂ ॥೮೧॥

ಏವಂ ಭಕ್ತಿಸ್ಸದಾ ಕಾರ್ಯಾ ಶಿವಭಕ್ತೇಷ್ವಪಿ ಕ್ರಮಾತ್ ।
ಸ್ವದೇಹಾನ್ನಿರ್ವಿಶೇಷೇಣ ಶಿವಭಕ್ತಾಂಶ್ಚ ಪಾಲಯೇತ್ ॥೮೨॥

ಭಯದಾರಿದ್ರ್ಯರೋಗೇಭ್ಯಸ್ತೇಷು ಕುರ್ಯಾತ್ಪ್ರಿಯಾಣಿ ಹಿ ।
ತೇಷಾಂ ಕುಟುಂಬಂ ಸಂರಕ್ಷೇತ್ಸ್ವಕುಟುಂಬಂ ಯಥಾ ತಥಾ ॥೮೩॥

ಶಿವಸ್ಯ ಪರಿಪೂರ್ಣಸ್ಯ ಕಿಂ ನಾಮ ಕ್ರಿಯತೇ ನರಃ ।
ಶಿವಭಕ್ತಾರ್ಚನೇನೈವ ಪ್ರಸಾದಶ್ಶಾಂಭವೋ ಭವೇತ್ ॥೮೪॥

ಯೋ ವಾ ಕೋ ವಾಸ್ತು ಮನುಜೋ ಭಸ್ಮರುದ್ರಾಕ್ಷದೇಹವಾನ್ ।
ಧೃತಶಾಂಕರಚಿಹ್ನಾಂಕಃ ಪೂಜ್ಯೋ ಬ್ರಾಹ್ಮಣಜನ್ಮಭಿಃ ॥೮೫॥

---

ಶಿವಭಕ್ತರಲ್ಲಿ ಪ್ರೀತಿಯಿಟ್ಟು, ಇತರ ದೇವತಾ ಪೂಜಾದಿಗಳಲ್ಲಿ ತಿರಸ್ಕಾರ ತೋರಿಸದೆ, ಪತ್ರಪುಷ್ಪಫಲಾದಿಗಳಿಂದ ಶಿವಲಿಂಗವನ್ನು ಸದಾ ಪೂಜಿಸುತ್ತಾ, ಸದಾ ಶಿವಸ್ಮರಣೆ, ಶಿವಮಹಿಮೆ, ಶಿವಕಥೆ ಇವುಗಳನ್ನು ಸ್ಮರಿಸಿಕೊಳ್ಳುತ್ತಾ, ಅಥವಾ ಅಲ್ಲಲ್ಲಿ ಕೇಳುತ್ತಾ ವರ್ತಿಸಬೇಕು. ಶಿವಮಹಿಮಾಪೂರಿತವಾದ ಸಂದರ್ಭಗಳನ್ನು ಕೇಳಿದಾಗ, ಆನಂದಾಶ್ರು, ಸಂತೋಷೋದ್ಗಾರ ಇತ್ಯಾದಿಗಳಿಂದ ವಿಶೇಷ ಆಸಕ್ತಿಯನ್ನು ತಾಳಬೇಕು. ॥೮೦-೮೧॥

ಈಶ್ವರನಲ್ಲಿ ಭಕ್ತಿಯಿಟ್ಟಿರುವ ಸಮಸ್ತ ಈಶ್ವರಭಕ್ತರಲ್ಲಿಯೂ ಭಕ್ತಿಯನ್ನು ತೋರ್ಪಡಿಸಬೇಕು. ತನ್ನನ್ನು ತಾನು ಕಾಪಾಡಿಕೊಂಡಂತೆ ಶಿವಭಕ್ತರನ್ನೂ ಪ್ರೀತಿಯಿಂದ ರಕ್ಷಿಸಬೇಕು. ಅವರಿಗೆ ಆಕಸ್ಮಾತ್ತಾಗಿ ಒದಗಿದ ಭಯ, ದಾರಿದ್ರ್ಯ, ರೋಗ ಇತ್ಯಾದಿ ಸಂದರ್ಭಗಳಲ್ಲಿ ತನ್ನ ಶಕ್ತಿಯಿದ್ದಷ್ಟೂ ಅವರಿಗೆ ಸಹಾಯಮಾಡಬೇಕು. ಅವರ ಸಂಸಾರಗಳನ್ನು ತನ್ನ ಸಂಸಾರವನ್ನು ರಕ್ಷಿಸುವಂತೆ ರಕ್ಷಿಸಬೇಕು. ॥೮೨-೮೩॥

ಸಕಲ ಕಲ್ಯಾಣಗುಣಪರಿಪೂರ್ಣನಾದ ಶಂಕರನನ್ನು ಸಾಮಾನ್ಯ ಮಾನವನು ಯಾವ ಭಾಗದಿಂದ ತೃಪ್ತಿಪಡಿಸಬಲ್ಲನು? ಆದ್ದರಿಂದಲೇ ಈಶ್ವರಭಕ್ತನನ್ನು ತೃಪ್ತಿ

ಶಾಂಭವೋ ಬ್ರಾಹ್ಮಣೋ ಯಸ್ಸ್ಯಾದ್ಭೋಜನೈಸ್ತಂ ಪ್ರಸಾದಯೇತ್ ।
ಇತರಾನ್ ಪ್ರಶ್ನಕಥನೈಃ ಸ್ಥಾನದಾನೈಶ್ಚತೋಷಯೇತ್ ॥೮೬॥

ಭೋಜನಾಚ್ಛಾದನೈರ್ದೇವಿ ತಸ್ಯೇಷ್ಟಂ ಯದಕುತ್ಸಿತಂ ।
ತತ್ಕುರ್ಯಾದವಿಚಾರೇಣ ಶಿವಪ್ರೀತ್ಯೈ ಚ ಶಾಂಭವೈಃ ॥೮೭॥

ಶಿವಯೋಗಿನಮಾಯಾಂತಂ ಪ್ರತ್ಯುತ್ಥಾನಾಭಿವಾದನೈಃ ।
ಯತಿಂ ವಾ ಶಾಂಭವಂ ಶಾಂತಂ ಭಸ್ಮಪುಂಡ್ರಾದಿಮಂಡಿತಂ ॥೮೮॥

ಸ್ವಾಗತಾಸನಪಾದ್ಯಾರ್ಘ್ಯ ಮಧುಪರ್ಕನಿವೇದನೈಃ ।
ಪೂಜಯಿತ್ವಾ ಯಥಾ ನ್ಯಾಯ್ಯಂ ಕುರ್ಯಾದಪ್ಯಭಿವಾದನಂ ॥೮೯॥

ಭೋಜನಾಚ್ಛಾದನೇನಾಪಿ ರಮ್ಯಾವಸಥವಾಸನೈಃ ।
ಮಠೋಪಕರಣಾದೀನಿ ದದ್ಯಾತ್ಪ್ರೀತ್ಯರ್ಥಮೀಶಿತುಃ ॥೯೦॥

ಪಡಿಸುವುದರಿಂದ ಶಿವಪ್ರಸಾದವನ್ನು ಸಂಪಾದಿಸಬೇಕು. ಜಾತಿಯಿಂದ ಅವನು ಯಾರೇ ಆಗಿದ್ದರೂ, ಭಸ್ಮರುದ್ರಾಕ್ಷಧಾರಿಯಾಗಿದ್ದು, ಶೈವಚಿಹ್ನೆಗಳಿಂದ ಕೂಡಿದ್ದರೆ, ಅಂತಹವನನ್ನು ಬ್ರಾಹ್ಮಣರೆನಿಸಿಕೊಂಡವರೂ ಸಹ ಪೂಜೆಮಾಡಹುದು ॥೮೪-೮೫॥

ಬ್ರಾಹ್ಮಣನು ಶಾಂಭವನೆನಿಸಿದ್ದರೆ ಅಂತಹವನನ್ನು ಭೋಜನಾದಿಗಳಿಂದಲೂ, ಇತರ ವರ್ಣದ ಶಾಂಭವರನ್ನು ಕುಶಲಪ್ರಶ್ನೆಗಳಿಂದಲೂ, ಮರ್ಯಾದಾಸೂಚಕವಾದ ಸ್ಥಾನಮಾನಾದಿಗಳಿಂದಲೂ ಮರ್ಯಾದಿಸಬೇಕು. ಶಾಂಭವರಿಗೆ ಯೋಗ್ಯವೆನಿಸಿದ ಭೋಜನ, ವಸ್ತ್ರಗಳು ಇವುಗಳನ್ನು ಅವರಿಗೆ ಅರ್ಪಿಸುತ್ತಾ ತನ್ಮೂಲಕ ಶಿವಾನುಗ್ರಹವನ್ನು ಸಂಪಾದಿಸಿಕೊಳ್ಳಬೇಕು. ॥೮೬-೮೭॥

ಶಿವಯೋಗಿ, ಯತಿ, ಭಸ್ಮತ್ರಿಪುಂಡ್ರಾದಿಗಳಿಂದ ಕೂಡಿರುವ ಶಾಂತನಾದ ಶಾಂಭವ, ಇವರನ್ನು ನೋಡಿದೊಡನೆಯೇ ಪ್ರತ್ಯುತ್ಥಾನಾದಿಗಳಿಂದ ಅವನನ್ನು ಗೌರವಿಸಿ, ಅವನಿಗೆ ಆಸನ, ಪಾದ್ಯ, ಅರ್ಘ್ಯ, ಮಧುಪರ್ಕ ಇವುಗಳನ್ನಿತ್ತು, ವಿಧಿವತ್ತಾಗಿ ಪೂಜಿಸಿ ಅವರಿಗೆ ಅಭಿವಾದನಮಾಡಬೇಕು. ಹಾಗೆಯೇ ಸುಖಕರವಾದ ಭೋಜನ, ವಸ್ತ್ರ, ರಮ್ಯಗೃಹ ಮುಂತಾದುವುಗಳನ್ನು ಒದಗಿಸಿ ಶಿವಪ್ರೀತ್ಯರ್ಥವಾಗಿ ಅವರಿಗೆ ಬೇಕಾಗುವ ಸಕಲ ವಸ್ತುಗಳನ್ನೂ ದಾನವಾಗಿ ಕರುಣಿಸಬೇಕು. ॥೮೮-೮೯-೯೦॥

ಸ್ವಸ್ಥಾಯ ಶಿವಭಕ್ತಾಯ ಶ್ರಾಂತಾಯ ಕ್ಷುಧಿತಾಯ ಚ ।
ಪುಷ್ಟಿಂ ಕರೋತಿ ಯೋ ನಿತ್ಯಂ ಧನಧಾನ್ಯೈಶ್ಚ ಸರ್ವದಾ ॥೯೦॥

ಗೃಹೋಪಕರಣೈರ್ದೇವಿ ಶಾಂಭವಂ ವಾಸಯೇತ್ತು ಯಃ ।
ಗೋಮಹಿಷ್ಯಾದಿಸಂಭಾರೈರ್ವಾಸಯೇದ್ಯಃ ಶಿವೇ ರತಂ ॥೯೨॥

ವರ್ಷಕೋಟಿಸಹಸ್ರಾಣಿ ವಾಸಃ ಕೈಲಾಸಸದ್ಮನಿ ।
ಶಿವಭಕ್ತಾಯ ವಿಪ್ರಾಯ ಪುರಾಣಜ್ಞಾಯ ಸಾದರಂ ॥೯೩॥

ದತ್ವಾ ಶೈವಪುರಾಣಾನಿ ಯಾವದಕ್ಷರಸಂಖ್ಯಯಾ ।
ತಾವದ್ವರ್ಷಸಹಸ್ರಾಣಿ ಶಿವಲೋಕೇ ಮಹೀಯತೇ ॥೯೪॥

ದೀನಂ ಭೀತಂ ತಥೈವಾರ್ತಂ ಶಾಂತಂ ಚೋರೈಃ ಪ್ರಪೀಡಿತಂ ।
ಆಶ್ವಾಸಯತಿ ಭಕ್ತಂ ಮೇ ಶಕ್ತೋ ಭಕ್ತೋ ಥ ಮೇ ಪ್ರಿಯಃ ॥೯೫॥

ದಾರಿದ್ರ್ಯಾರ್ಣವನಿರ್ಮಗ್ನಂ ಭಕ್ತಂ ಸೀದತ್ಕುಟುಂಬಕಂ ।
ಸಮುದ್ಧರೇನ್ನೃಪೋ ಜ್ಞಾತ್ವಾ ಸ್ವರಾಜ್ಯೇ ವಾಸಯೇಚ್ಚ ತಂ ॥೯೬॥

---

ಶ್ರಾಂತನೂ, ಆರ್ತನೂ, ದರಿದ್ರನೂ ಆದ ಶಾಂಭವನಿಗೆ ಯಾರು ಗೃಹ, ಧನ, ಧಾನ್ಯ, ಗೋ, ಎಮ್ಮೆ ಮುಂತಾದ ಜೀವಿಕೋಪಯೋಗಿಯಾದ ವಸ್ತುಗಳನ್ನು ಕೊಟ್ಟು ರಕ್ಷಿಸುವರೋ, ಅವರು ಕೋಟಿ ಸಹಸ್ರ ವರ್ಷಪರ್ಯಂತ ಕೈಲಾಸದಲ್ಲಿ ನೆಲಸುವರು. ಇನ್ನು ಈಶ್ವರಭಕ್ತನಾಗಿ ಪುರಾಣಗಳ ಸಾರವನ್ನು ತಿಳಿದ ಬ್ರಾಹ್ಮಣನೊಬ್ಬನಿಗೆ ಶೈವಪುರಾಣಾದಿಗಳನ್ನು ದಾನವಾಗಿ ಕೊಟ್ಟರೆ ಆ ಪುರಾಣದಲ್ಲಿರುವ ಅಕ್ಷರಸಂಖ್ಯೆಯಷ್ಟು ವರ್ಷಪರ್ಯಂತ ಅವನು ಶಿವಲೋಕದಲ್ಲಿ ವಾಸಮಾಡುವನು. ॥೯೧-೯೨-೯೩॥

ದೀನನೂ, ಭಯತ್ರಸ್ತನೂ, ಬಳಲಿದವನೂ, ಕಳ್ಳಕಾಕರಿಗೆ ಸಿಕ್ಕಿ ಹಿಂಸೆಗೊಳಪಟ್ಟವನೂ, ಆದ ಈಶ್ವರಭಕ್ತನನ್ನು ರಕ್ಷಿಸುವವನೇ ನಿಜವಾದ ಧೀರನು. ಆತನೇ ನನಗೆ (ಪರಶಿವನಿಗೆ) ಹಿತನಾದವನು. ದಾರಿದ್ರ್ಯವೆಂಬ ಸಮುದ್ರದಲ್ಲಿ ಮುಳುಗಿ ಕುಟುಂಬಿಯಾಗಿ ಕಷ್ಟಪಡುತ್ತಿರುವ ಶಾಂಭವನಿಗೆ, ರಾಜನು ಕರುಣೆಯಿಂದ ಜೀವನದ ಸಕಲ ಸೌಕರ್ಯಗಳನ್ನೂ ಒದಗಿಸಿಕೊಟ್ಟು, ಅವನು ತನ್ನ

ಸ ನೃಪಃ ಸ್ವಪಿತ್ರೂನ್ ಮಗ್ನಾನ್ ರಜ್ಜ್ವಾ ಕೂಪಾದ್ಘಟಂ ಯಥಾ ।
ನರಕಾಚ್ಚೋದ್ಧರತ್ಯೇವ ಶಿವಭಕ್ತಜನಾರ್ಚನಾತ್ ॥೯೭॥

ದೇಯಂ ತ್ರಿಪುಂಡ್ರಫಾಲೇಭ್ಯೋ ತದ್ದಾನಂ ಸಾತ್ವಿಕಂ ವಿದುಃ ।
ನಾಭ್ಯಸೂಯೇತ ತಾಂಚ್ಛೈವಾಂಸ್ತ್ರಿಪುಂಡ್ರಾಂಕಾನ್ ದ್ವಿಜೋತ್ತಮಾನ್ ॥೯೮॥

ಯದ್ಯಸೂಯೇಚ್ಚ ನರಕೇ ಪತೇತ್ಪೂರ್ವಪಿತಾಮಹೈಃ ।
ತ್ರಿಪುಂಡ್ರಧಾರಿಣೇ ದತ್ತಂ ದಾನಂ ಭವತಿ ಚಾಕ್ಷಯಂ ॥೯೯॥

ದಾತೃಪ್ರತಿಗೃಹೀತ್ರೂಣಾಂ ನೈವ ದೋಷೋಽಸ್ತಿ ದಾನಜಃ ।
ಸ್ವಶಕ್ತ್ಯೈವ ಚ ಭಕ್ತೇಭ್ಯೋ ದದ್ಯಾತ್ಕಿಂಚಿದಕುತ್ಸಯನ್ ॥೧೦೦॥

ಕಾರುಣ್ಯಾತ್ಸರ್ವಭೂತಾನಾಂ ದೇಯಮನ್ನಂ ಸ್ವಶಕ್ತಿತಃ ।
ಅಭಾವೇ ತೃಣಭೂಮ್ಯಂಭಃ ಪತ್ರಮೂಲಫಲಾನಿ ಚ ॥೧೦೧॥

---

ರಾಜ್ಯದಲ್ಲಿ ವಾಸಮಾಡುವಂತೆ ಏರ್ಪಡಿಸಬೇಕು. ಇದರಿಂದ ಆ ರಾಜನಿಗೆ ಶಿವ ಸಾಯುಜ್ಯವು ಲಭಿಸುವುದು. ॥೯೪-೯೫-೯೬॥

ಆ ರಾಜನು ತಾನು ಮಾತ್ರವಲ್ಲವೆ ತನ್ನ ಪಿತೃವರ್ಗದಲ್ಲಿ ಪಾಪಿಷ್ಠರಾಗಿ ನರಕವಾಸದಿಂದ ಕಷ್ಟವನ್ನು ಅನುಭವಿಸುತ್ತಿರುವವರನ್ನೂ, ಹಗ್ಗವು ಬಾವಿಯಿಂದ ಗಡಿಗೆಯನ್ನು ಮೇಲೆತ್ತಿಬಿಡುವಂತೆ ನರಕದಿಂದ ಎತ್ತಿ ಶಿವಲೋಕಕ್ಕೆ ಹೊಂದಿಸುವನು. ಆದ್ದರಿಂದ ಯಾವ ದಾನವನ್ನೇ ಆಗಲಿ ಭಸ್ಮತ್ರಿಪುಂಡ್ರಧಾರಿಗಳಾದವರಿಗೇ ಕೊಡಬೇಕು. ಅಂತಹ ದಾನವನ್ನೇ ಸಾತ್ವಿಕವಾದ ದಾನವೆನ್ನುವರು. ಭಸ್ಮತ್ರಿಪುಂಡ್ರಧಾರಿಗಳಾದ ಬ್ರಾಹ್ಮಣರನ್ನು ನೋಡಿ ಎಂದೂ ಯಾವಾಗಲೂ ಅಸೂಯೆ ಪಡಬಾರದು. ॥೯೭-೯೮॥

ಒಂದುವೇಳೆ ಅಂತಹ ಶಾಂಭವರನ್ನು ನೋಡಿ ಅಸೂಯೆ ಪಡುವುದಾದರೆ, ಅವನು ತನ್ನ ಪಿತೃವರ್ಗಸಹಿತನಾಗಿ ನರಕಕ್ಕೆ ಬೀಳುವನು. ಭಸ್ಮತ್ರಿಪುಂಡ್ರಧಾರಿಗೆ ಕೊಟ್ಟ ದಾನವೇ ನಾಶರಹಿತವಾದ ಸತ್ಫಲವನ್ನು ಅನುಗ್ರಹಿಸುವುದು ಹಾಗೆ ಶೈವನಿಗೆ ದಾನಕೊಡುವುದರಿಂದ, ಕೊಟ್ಟವನಿಗೂ ತೆಗೆದುಕೊಂಡವನಿಗೂ ಯಾವ ವಿಧವಾದ ದೋಷವೂ ಸಂಭವಿಸುವುದಿಲ್ಲ. ಆದರೆ ನನ್ನ (ಶಿವನ) ಭಕ್ತನಿಗೆ ಅವರವರ ಶಕ್ತಿಯನ್ನನುಸರಿಸಿ ದಾನಕೊಡಬಹುದು. ಕೊಟ್ಟಮೇಲೆ ಮಾತ್ರ ಅಸೂಯೆ ಪಡ

ದತ್ವಾ ಧನೀ ನಿರ್ಧನೋ ವಾ ಪ್ರಿಯಂ ವಾ ವ್ಯಾಹರೇತ್ಸದಾ ।
ನೇಹೇತ್ಸ್ವರ್ಗಸೋಪಾನಮಮಲಂ ಯತ್ವಿದಂ ವಚಃ ॥೧೦೨॥

ಪ್ರತ್ಯುತ್ಥಾನಾಭಿಗಮನಮನುವ್ರಜ್ಯ ಪ್ರಿಯಂ ವಚಃ ।
ಪೂರ್ವಾಭಿಭಾಷೀ ಭಕ್ತೇಷು ಭವೇನ್ಮತ್ಪ್ರೀತಯೇ ಶಿವೇ ॥೧೦೩॥

ಗಮನೇ ಚಾಸ್ಯ ವಕ್ತವ್ಯಂ ಪಂಥಾನಃ ಸಂತು ತೇ ಶಿವಾಃ ।
ಶಿವಂ ಭವತು ತೇ ನಿತ್ಯಮಶೇಷಾರ್ಥಪ್ರಕಾಶಕಂ ॥೧೦೪॥

ಆಶೀರ್ವಾದಮಿಮಂ ಕುರ್ಯಾತ್ಸರ್ವವರ್ಣೇಷು ಸರ್ವದಾ ।
ನಮಸ್ಕಾರಾಭಿವಾದೇಷು ಸ್ವಸ್ತಿ ಮಂಗಲವಾದಿನೇ ॥೧೦೫॥

---

ಬಾರದು. ಎಲ್ಲ ಪ್ರಾಣಿಗಳಿಗೂ ದಯೆಯಿಂದ ತನ್ನ ಶಕ್ತಿಯನ್ನು ಅನುಸರಿಸಿ ಆಹಾರವನ್ನು ಕೊಡಬೇಕು. ||೯೯-೧೦೦-೧೦೧||

ಒಂದುವೇಳೆ ತನ್ನಲ್ಲಿ ಮತ್ತಾವ ವಸ್ತುಗಳೂ ಇಲ್ಲದಿದ್ದರೆ, ಹುಲ್ಲು, ನೆಲ, ನೀರು, ಎಲೆ, ಗೆಡ್ಡೆಗೆಣಸು ಮುಂತಾದುವುಗಳನ್ನು ಬೇಕಾದರೂ ಕೊಡಬಹುದು. ಕೇವಲ ನಿರ್ಧನಿಕನಾದರೆ ಪ್ರಿಯಕರಗಳಾದ ಮಾತುಗಳಿಂದಲಾದರೂ ಅತಿಥಿಯನ್ನು ತೃಪ್ತಿಪಡಿಸಬಹುದು. ಈರೀತಿ ಪ್ರಿಯವಾಕ್ಯಸಹಿತವಾದ ದಾನವನ್ನು ಸ್ವರ್ಗಸೋಪಾನ ವೆಂದು ತಿಳಿ. ಈ ನನ್ನ ಮಾತಿನಲ್ಲಿ ಸಂಶಯಪಡಬೇಡ. ಶಾಂಭವನು ಬಂದೊಡನೆ ಅವನನ್ನು ಪ್ರತ್ಯುತ್ಥಾನಾದಿಗಳಿಂದ ಗೌರವಿಸಿ, ಪ್ರಯಾಣ ಹೋಗುವಾಗ ಹಿಂಬಾಲಿಸಿ ಹೋಗಿ, ಒಳ್ಳೆಯ ಮಾತುಗಳನ್ನಾಡಿ ನನ್ನ ಭಕ್ತರನ್ನು ಸಂತೋಷಪಡಿಸಿದವರ ವಿಷಯದಲ್ಲಿ ನಾನು ಬಹಳ ಪ್ರೀತಿಯಿಂದಿರುವೆನು. ||೧೦೨-೧೦೩||

ಶಾಂಭವನು ಪ್ರಯಾಣಮಾಡುವಾಗ 'ನಿನ್ನ ಪ್ರಯಾಣಮಾರ್ಗವು ಶುಭಪ್ರದ ವಾಗಿರಲಿ, ನಿನಗೆ ನಿತ್ಯವೂ ನಿನ್ನ ಇಷ್ಟಾರ್ಥಗಳು ಸಿದ್ಧಿಸುತ್ತಿರಲಿ' ಎಂದು ಮಂಗಳಾಶೀರ್ವಾದಸೂಚಕವಾದ ಮಾತುಗಳನ್ನು ಹೇಳಬೇಕು. ನಮಸ್ಕಾರ ಮಾಡುವಾಗ, ಅಭಿವಾದನ ಕಾಲದಲ್ಲಿ ಎಲ್ಲಾ ವರ್ಣದವರಿಗೂ ಈರೀತಿ ಮಂಗಳಾಶೀ ರ್ವಾದ ಮಾಡಬೇಕು. ||೧೦೪-೧೦೫||

ಶಿವಂ ಭವತು ಯುಷ್ಮಾಕಂ ಪ್ರಬ್ರೂಯಾತ್ಸರ್ವದಾ ಶಿವೇ ।
ಸದ್ವಿಜೋಽಪ್ಯಂತ್ಯಜೋ ಜ್ಞೇಯಃ ಸ ಏಕಃ ಕಿಲ ಜಾರಜಃ ॥೧೦೬॥

ಶಿವಯೋಗೀ ಶಿವಜ್ಞಾನೀ ಶಿವಧರ್ಮರತಶ್ಚ ಯಃ ।
ಇತ್ಯೇತತ್ತ್ರಿವಿಧಂ ಜ್ಞೇಯಂ ಪಾತ್ರಂ ದಾನಾಯ ಸರ್ವದಾ ॥೧೦೭॥

ಶಿವಮುದ್ದಿಶ್ಯ ದಾತವ್ಯಮನಪೇಕ್ಷ್ಯ ಗುಣಾಗುಣಂ ।
ಯತಸ್ತ್ರಿನೇತ್ರಃ ಪಾತ್ರಂ ಸ್ಯಾತ್ಸರ್ವಪಾತ್ರವರಂ ಶಿವೇ ॥೧೦೮॥

ದತ್ತಮೀಶ್ವರಭಕ್ತೇಷು ದತ್ತಂ ತದ್ವರ್ಧತೇಽನಿಶಂ ।
ದ್ವಿಜಾನಾಂ ವೇದವಿದುಷಾಂ ಕೋಟಿಂ ಭೋಜ್ಯ ತು ಯತ್ಫಲಂ ॥೧೦೯॥

ಯತಯೇ ವೀತರಾಗಾಯ ಭಿಕ್ಷಾದಾನೇನ ಯತ್ಫಲಂ ।
ಸಂಭೋಜ್ಯೈಕಂ ಶಾಂಭವಂ ವಾ ಶಿವಕ್ಷೇತ್ರೇ ವಿಶೇಷತಃ ॥೧೧೦॥

ದಶಕೋಟಿದ್ವಿಜಾನಾಂ ತು ಭೋಜನೇ ಯತ್ಫಲಂ ಭವೇತ್ ।
ಸಾಜ್ಯಾಪೂಪಘೃತಕ್ಷೀರಸೂಪಶಾಖಾದಿಪಾಯಸೈಃ ॥೧೧೧॥

---

ಯಾವನು ಈರೀತಿ ಆಶೀರ್ವಾದ ಮಾಡುವನೋ ಅವನೇ ಹಿತೈಷಿಯು. ದ್ವಿಜನಾದರೂ ಆತನು ಈರೀತಿ ಆಶೀರ್ವಾದಾದಿಗಳನ್ನು ನಡೆಸದಿದ್ದರೆ ಅವನು ಚಂಡಾಲಸದೃಶನಾಗುವನು. ಅವನನ್ನು ಜಾರಜನೆಂದೇ ಹೇಳಬೇಕು. ಶಿವಯೋಗಿ, ಶಿವಜ್ಞಾನಿ, ಶಿವಧರ್ಮಜ್ಞ. ಈ ಮೂವರೇ ನಿಜವಾದ ದಾನಯೋಗ್ಯರು. ಇವರೇ ಸತ್ಪಾತ್ರರು. ॥೧೦೬-೧೦೭॥

ದಾನ ಕೊಡುವಾಗ ಪಾತ್ರನ ಗುಣಾಗುಣಗಳನ್ನು ಗಮನಿಸದೆ ಶಿವೋದ್ದೇಶಕವಾಗಿ ಯಾವ ದಾನಗಳನ್ನು ಬೇಕಾದರೂ ಮಾಡಬಹುದು. ಏಕೆಂದರೆ ಸಮಸ್ತ ದಾನಗಳಿಗೂ ನಿಜವಾದ ಪಾತ್ರನೆಂದರೆ ಈಶ್ವರನೇ. ವೇದಜ್ಞರಾದ ಬ್ರಾಹ್ಮಣ ಕೋಟಿಗೆ ಸಮಾರಾಧನೆ ಮಾಡುವುದರಿಂದ, ವೀತರಾಗಿಯಾದ ಸಂನ್ಯಾಸಿಗೆ ಭಿಕ್ಷಾದಾನಮಾಡುವುದರಿಂದ, ಎಷ್ಟು ಸುಕೃತವು ಲಭಿಸುವುದೋ, ಅಷ್ಟೇ ಪುಣ್ಯರಾಶಿಯು ಶಾಂಭವನೊಬ್ಬನಿಗೆ ಶಿವಕ್ಷೇತ್ರದಲ್ಲಿ ಭೋಜನಮಾಡಿಸುವುದರಿಂದ ಲಭಿಸುವುದು. ॥೧೦೮-೧೦೯-೧೧೦॥

ತುಪ್ಪ, ಒಬ್ಬಟ್ಟು, ಹಾಲು, ಶಾಕಗಳು, ಪಾಯಸ ಮುಂತಾದುವುಗಳಿಂದ

ಗ್ರಾಸಂ ವಾ ಶಾಂಭವೇ ವಿಪ್ರೇ ದತ್ತಂ ತೇಭ್ಯೋ ವಿಶಿಷ್ಯತೇ ।
ಬಿಲ್ವಮೂಲೇ ಶಾಂಭವಾಯ ಕ್ಷೀರಾನ್ನಂ ಭೋಜಯೇನ್ನರಃ ॥೧೧೨॥

ಶಿವಭಕ್ತೋ ಯದಾ ಭುಂಕ್ತೇ ಸಾಕ್ಷಾದ್ಭುಂಕ್ತೇ ಸದಾಶಿವಃ ।
ಶಿವಭಕ್ತಾನ್ ದ್ವಿಜಶ್ರೇಷ್ಠಾನ್ ಯಃ ಶ್ರಾದ್ಧಾದಿಷು ಭೋಜಯೇತ್ ॥೧೧೩॥

ಅಪಾಙ್ಕ್ತೇಯಾನಥಾನ್ಯಾನ್ವೈ ತಾರಯಂತ್ಯೇವ ತೇ ದ್ವಿಜಾಃ ।
ಪಿತೄಣಾಮಕ್ಷಯಾತೃಪ್ತಿರ್ಭವೇದ್ವರ್ಷಸಹಸ್ರಕಂ ॥೧೧೪॥

ತಸ್ಮಾತ್ ಶ್ರಾದ್ಧೇ ಶ್ರದ್ಧಯೈವ ಭೋಜ್ಯಾಶ್ಶಾಂಭವಸತ್ತಮಾಃ ।
ಶಿವಮುದ್ದಿಶ್ಯ ಭೋಕ್ತವ್ಯಾ ಶಿವಭಕ್ತಾ ಹಿ ಪರ್ವಣಿ ॥೧೧೫॥

ಅಸಂಯತಸ್ಸಂಯತೋ ವಾ ಸರ್ವಾವಸ್ಥಾಂಗತೋಽಪಿ ವಾ ।
ಯೋ ವಾ ಕೋವಾ ಶಿವೇ ಭಕ್ತಃ ಶಿವವತ್ಪೂಜ್ಯ ಏವ ಸಃ ॥೧೧೬॥

---

ಹತ್ತುಕೋಟಿ ಬ್ರಾಹ್ಮಣರಿಗೆ ಭೋಜನಮಾಡಿಸುವುದರಿಂದ ಎಷ್ಟು ಸುಕೃತವು ಲಭಿಸುವುದೋ, ಅಷ್ಟು ಪುಣ್ಯವನ್ನೂ ಒಬ್ಬ ಶಾಂಭವನಿಗೆ ಬಿಲ್ವಮೂಲದಲ್ಲಿ ಒಂದು ತುತ್ತು ಕ್ಷೀರಾನ್ನ ದಾನಮಾಡುವುದರಿಂದ ಸುಲಭವಾಗಿ ಪಡೆಯಬಹುದು. ಶಾಂಭವನಿಗೆ ಮಾಡುವ ದಾನದಿಂದ ಅಷ್ಟು ಫಲವು ಲಭಿಸುವುದು. ॥೧೧೧-೧೧೨॥

ಈಶ್ವರಭಕ್ತನು ಭೋಜನದಿಂದ ತೃಪ್ತನಾದರೆ ಸಾಕ್ಷಾದೀಶ್ವರನು ತೃಪ್ತನಾದಂತೆಯೇ ಸರಿ. ಪಂಕ್ತಿಭೋಜನಕ್ಕೆ ಅನರ್ಹರಾಗಿದ್ದರೂ ಅವರು ಶ್ರಾದ್ಧಭೋಜನಕ್ಕೆ ಯೋಗ್ಯರೆನಿಸುವರು. ಅಂತಹವರಿಗೆ ಶ್ರಾದ್ಧಭೋಜನ ನಡೆಸುವುದರಿಂದ ಶ್ರಾದ್ಧಕರ್ತನ ಪಿತೃಪರಂಪರೆಯು ಸಹಸ್ರವರ್ಷ ಪರ್ಯಂತ ತೃಪ್ತಿಹೊಂದುವುದು. ॥೧೧೩-೧೧೪॥

ಆದ್ದರಿಂದ ಶ್ರಾದ್ಧದಲ್ಲಿ ಶಾಂಭವರನ್ನೇ ಭೋಜನಕ್ಕೆ ಆಹ್ವಾನಿಸಬೇಕು. ಅಂತಹ ಈಶ್ವರಭಕ್ತರಿಗೆ ಪರ್ವತಿಥಿಗಳಲ್ಲಿ ಶಿವೋದ್ದೇಶಕವಾಗಿ ಭೋಜನಾದಿಗಳನ್ನು ನಡೆಸಬೇಕು. ನಿಯಮಬದ್ಧನಾಗಿರಲಿ, ನಿಯಮವನ್ನು ಬಿಟ್ಟಿರಲಿ, ಯಾವುದೇ ಸ್ಥಿತಿಯಲ್ಲಿದ್ದರೂ ಮಾನವನು ಈಶ್ವರಭಕ್ತನಾಗಿದ್ದರೆ, ಅವನನ್ನು ಈಶ್ವರನಂತೆಯೇ ಭಾವಿಸಿ ಪೂಜಿಸಬೇಕು. ಇದರಿಂದ ನಿಜವಾಗಿಯೂ ಪರಮೇಶ್ವರನು ತೃಪ್ತನಾಗುವನು. ॥೧೧೫-೧೧೬॥

ತಸ್ಮಾನ್ನಾನ್ಯಶ್ಚ ಪೂಜ್ಯಶ್ಚ ರಕ್ಷಣೀಯಶ್ಚ ಸರ್ವದಾ ।
ಸಂಪರ್ಕಾದಥವಾ ಲೋಭಾದ್ಯೋವಾ ಲಿಂಗಂ ಪ್ರಪೂಜಯೇತ್ ॥೧೧೭॥

ನಾಮಮಾತ್ರಪ್ರಪನ್ನೋಽಪಿ ಲಿಂಗಕಂಠೋಽಪಿ ವಾ ಶಿವೇ ।
ಸ ಮುನಿಸ್ಸಮಹಾಯೋಗೀ ಸ ತಪಸ್ವೀ ಜಿತೇಂದ್ರಿಯಃ ॥೧೧೮॥

ನಾಸ್ಯಾಚಾರಂ ಪರೀಕ್ಷೇತ ನ ಕುಲಂ ನ ವ್ರತಂ ತಥಾ ।
ವಿದ್ವಾನವಿದ್ವಾನಥವಾ ಮಲಿನೋ ವೃದ್ಧತಃ ಕೃಶಃ ॥೧೧೯॥

ನ ಶಿವಾಶ್ರಮಿಣೋ ಮೌಂಜೀ ನ ದಂಡೋ ನ ಕಮಂಡಲುಃ ।
ನ ಶಿಖಾ ನ ಜಟಾ ಶಾಖಾ ಉಪವೀತಮಥಾಪಿ ವಾ ॥೧೨೦॥

ಬಾಹ್ಯಾಭ್ಯಂತರಚಿಹ್ನೈಸ್ತಂ ಜಾನೀಯಾತ್ಪೂಜಯೇತ್ತಥಾ ।
ಭಸ್ಮತ್ರಿಪುಂಡ್ರರುದ್ರಾಕ್ಷಪರಿಮಂಡಿತವಿಗ್ರಹಂ ॥೧೨೧॥

---

ಹೀಗಿರುವುದರಿಂದ, ದಾನ, ಭೋಜನಾದಿ ಯಾವ ಕರ್ಮಗಳಿಗೂ ಈಶ್ವರ ಭಕ್ತನನ್ನು ಬಿಟ್ಟು ಮತ್ತಾರನ್ನೂ ಕರೆಯಬಾರದು. ರಕ್ಷಣೆಮಾಡುವುದಾದರೆ ಈಶ್ವರ ಭಕ್ತನಿಗೇ ರಕ್ಷಣೆಕೊಡಬೇಕು. ಯಾರು ಈಶ್ವರನ ಹೆಸರನ್ನು ಇಟ್ಟುಕೊಂಡಿರುವರೋ, ಯಾರು ಈಶ್ವರಲಿಂಗವನ್ನು ಕಂಠದಲ್ಲಿ ಧರಿಸಿರುವರೋ, ಅವರೂ ಈಶ್ವರ ಭಕ್ತರೆನಿಸುವರು. ಹೀಗೆ ಶಿವಧರ್ಮಾನುಯಾಗಿದ್ದವನೇ ಮುನಿಯು, ಮಹಾ ಯೋಗಿಯು, ತಪಸ್ವಿಯು, ಅತನನ್ನೇ ಜಿತೇಂದ್ರಿಯನೆನ್ನಬೇಕು. ||೧೧೭-೧೧೮||

ಅಂತಹವನ ಆಚಾರಾದಿಗಳನ್ನೂ, ವಂಶ, ವ್ರತ, ಅವನ ವಿದ್ಯೆ ಮುಂತಾದುವುಗಳನ್ನೂ ಪರೀಕ್ಷಿಸಬಾರದು. ಅವನು ವಯಸ್ಸಿನಿಂದ ವೃದ್ಧನಾಗಿರಲಿ, ಬಾಲಕನಾಗಿರಲಿ, ದಡ್ಡನಾಗಿರಲಿ, ಕೃಶನಾಗಿರಲಿ ಅದನ್ನೆಲ್ಲಾ ಗಣಿಸಬಾರದು. ಶಿವಾಶ್ರಮದಲ್ಲಿರುವವನಿಗೆ, ಮೌಂಜೀ, ದಂಡ, ಕಮಂಡಲು, ಶಿಖೆ, ಜಡೆ, ಯಜ್ಞೋಪವೀತ ಇವೇ ಮುಂತಾದ ಯಾವ ಚಿಹ್ನೆಗಳೂ ಉಪಯುಕ್ತವಾದವುಗಳಲ್ಲ. ಶಿವಭಾವನೆಯುಳ್ಳವನಿಗೆ ಇವೆಲ್ಲವೂ ಬಾಹ್ಯಾಡಂಬರಗಳೇ ಸರಿ. ||೧೧೯-೧೨೦||

ಭಸ್ಮತ್ರಿಪುಂಡ್ರ, ರುದ್ರಾಕ್ಷಮಾಲಾ, ಮುಂತಾದುವುಗಳಿಂದ ಅಲಂಕೃತರಾಗಿ, ಬಾಹ್ಯಚಿಹ್ನೆಗಳಿಂದ ಈಶ್ವರಭಕ್ತನೆಂದು ತೋರಿಬರುತ್ತಲಿರುವ ಶಿವಯೋಗಿಯನ್ನೂ, ಅಭ್ಯಂತರ ಚಿಹ್ನೆಗಳಿಂದ ತೋರಿಬರುವ ಶಿವಜ್ಞಾನಿಯನ್ನೂ, ಮನಃಪೂರ್ವಕವಾಗಿ

ಪೂಜಯೇತ್ಸರ್ವಭಾವೇನ ಮನಸಾ ವಚಸಾ ಶಿವೇ ।
ಸರ್ವದೇವಾದಿಭಕ್ತೇಭ್ಯೋ ಮಮ ಭಕ್ತೋ ವಿಶಿಷ್ಯತೇ ॥೧೨೨॥

ಮದ್ಭಕ್ತಾಯ ಸದಾ ದತ್ತಂ ಮಯಿ ದತ್ತಂ ಹಿ ತದ್ಧ್ರುವಂ ।
ರುದ್ರಾಸ್ತ ಏವ ಜಗತಿ ರುದ್ರಾಕ್ಷವರಕಂಕಣಾಃ ॥೧೨೩॥

ಯೇ ರುದ್ರಾಧ್ಯಾಯಪಾರಜ್ಞಾ ತತ್ತನ್ನಾಮಾರ್ಥವೇದಿನಃ ।
ತ ಏವ ರುದ್ರಾ ಜಗತಿ ಭುವಃ ಪಾವನಪಾವನಾಃ ॥೧೨೪॥

ಯೇ ಪಂಚಾಕ್ಷರಪಾರೀಣಾಃ ಪಂಚಾಸ್ಯಧ್ಯಾನಮಾನಸಾಃ ।
ಪಂಚಪಾತಕನಿರ್ಮುಕ್ತಾಸ್ತೇ ರುದ್ರಾ ನಾತ್ರ ಸಂಶಯಃ ॥೧೨೫॥

ಯೇ ಪ್ರದೋಷೇ ಮಹಾಪೂಜಾಪ್ರವರ್ತನಪರಾಯಣಾಃ ।
ಬಿಲ್ವಪತ್ರಾದಿಭಿರ್ದೇವಿ ಪಂಚಾಮೃತನಿಷೇಚನೈಃ ॥೧೨೬॥

---

ಶುದ್ಧವಾದ ಮಾತುಕತೆಗಳಿಂದ ಪೂಜಿಸಬೇಕು. ಒಟ್ಟಿನಲ್ಲಿ ಉಳಿದ ಎಲ್ಲಾ ದೇವತೆಗಳ ಭಕ್ತರಿಗಿಂತಲೂ ನನ್ನ (ಶಿವನ) ಭಕ್ತರೇ ಶ್ರೇಷ್ಠರೆನಿಸಿದವರು. ||೧೨೧-೧೨೨||

ನನ್ನ ಭಕ್ತರಿಗೆ ಯಾವ ವಸ್ತುವನ್ನು ದಾನವಾಗಿ ಕೊಟ್ಟರೂ, ಅದೆಲ್ಲವನ್ನೂ ನನಗೆ ಕೊಟ್ಟಂತೆಯೇ ಸರಿ. ರುದ್ರಾಕ್ಷಮಾಲೆಯನ್ನು ಕೈಬಳೆಯನ್ನಾಗಿ ಧರಿಸಿದವರೇ ಸಾಕ್ಷಾದೀಶ್ವರನಿಗೆ ಸಮನೆನಿಸುವರು. ಹಾಗೆಯೇ ರುದ್ರಾಧ್ಯಾಯದ ಅರ್ಥವನ್ನು ಪೂರ್ಣವಾಗಿ ಅರಿತವರೂ, ಶಿವನಾಮಗಳ ಸ್ವರೂಪವನ್ನು ಸಂಪೂರ್ಣವಾಗಿ ತಿಳಿದವರೂ, ಪ್ರಪಂಚವನ್ನೇ ಪವಿತ್ರಗೊಳಿಸುವ ರುದ್ರನಿಗೆ ಸಮರಾದವರು, ಅಥವಾ ಅವರೇ ಈಶ್ವರಸ್ವರೂಪರು. ||೧೨೩-೧೨೪||

ಶಿವಪಂಚಾಕ್ಷರೀಮಂತ್ರವನ್ನು ಅರ್ಥವತ್ತಾಗಿ ತಿಳಿದು ಜಪಮಾಡುವವರೂ, ಈಶ್ವರಧ್ಯಾನದಲ್ಲಿಯೇ ನೆಟ್ಟ ಮನಸ್ಸುಳ್ಳವರೂ, ರುದ್ರಸದೃಶರೇ ಸರಿ. ಅವರು ಪಂಚಮಹಾಪಾಪಗಳಿಂದಲೂ ದೂರರಾದವರು. ಮತ್ತು ಪ್ರದೋಷಕಾಲದಲ್ಲಿ ಬಿಲ್ವಪತ್ರಾದಿ ಸಾಮಗ್ರಿಗಳಿಂದಲೂ, ಪಂಚಾಮೃತಾಭಿಷೇಕದಿಂದಲೂ ಪರಶಿವನನ್ನು ಪೂಜಿಸಿದವರು ಈಶ್ವರಸದೃಶರೆನಿಸುವರು. ಇದರಲ್ಲಿ ಸಂಶಯವಿಲ್ಲ. ||೧೨೫-೧೨೬||

ತ ಏವ ರುದ್ರಾ ವಿಜ್ಞೇಯಾ ನಾತ್ರಕಾರ್ಯಾವಿಚಾರಣಾ ।
ಯೇ ಸೋಮವಾರೇ ನಕ್ತೇನ ಭಕ್ತ್ಯಾ ವರ್ತಂತಿ ನಿತ್ಯಶಃ ॥೧೨೭॥

ತ ಏವ ರುದ್ರಾ ವಿಜ್ಞೇಯಾ ನಾತ್ರಕಾರ್ಯಾ ವಿಚಾರಣಾ ।
ಯೇ ಚತುರ್ದಶೀಪೂಜಾಸು ನಿಯಮಾ ನಕ್ತಭೋಜಿನಃ ॥೧೨೮॥

ತ ಏವ ರುದ್ರಾ ವಿಜ್ಞೇಯಾ ನಾತ್ರ ಕಾರ್ಯಾ ವಿಚಾರಣಾ ।
ಯೇ ವಾ ಕಾಲಾಷ್ಟಮೀಷ್ವೇವಂ ಶಿವಪೂಜಾಪರಾಯಣಾಃ ॥೧೨೯॥

ತ ಏವ ರುದ್ರಾ ವಿಜ್ಞೇಯಾ ನಾತ್ರಕಾರ್ಯಾ ವಿಚಾರಣಾ ।
ಯೇ ಪರ್ವಪೂಜಾನಿರತಾ ಶಿವಲಿಂಗೇ ಶಿವಾತ್ಮಕೇ ॥೧೩೦॥

ತ್ರಿಕಾಲಮಪ್ರಮಾದೇನ ಪೂಜಯಂತಿ ದೃಢವ್ರತಾಃ ।
ಶಿವಭಕ್ತೇಷು ನಿಯತಂ ದಾನಾಚ್ಛಾದನಭೋಜನೈಃ ॥೧೩೦॥

ಪೂಜಯಂತಿ ನರಾ ಯೇ ವೈ ತೇ ವೈ ರುದ್ರಾ ನ ಸಂಶಯಃ ।
ಅಶೇಷಪಾಪನಿರ್ಮುಕ್ತಾಶ್ಶಿವಲೋಕೇ ಮಹೀಯತೇ ॥೧೩೨॥

ಶಿವಕ್ಷೇತ್ರೇಷು ನಿಯತಂ ಯೇ ವಸಂತಿ ದ್ವಿಜಾದಯಃ ।
ತೇ ವೈ ರುದ್ರಾ ಇತಿ ಪ್ರೋಕ್ತಾಃ ಸದಾ ಶರ್ವಾರ್ಚನೇರತಾಃ ॥೧೩೩॥

---

ಪ್ರತಿ ಸೋಮವಾರವೂ ನಕ್ತವ್ರತದಲ್ಲಿದ್ದು ಶಿವಾರಾಧನೆ ಮಾಡುವವರೂ, ಚತುರ್ದಶೀ, ಕೃಷ್ಣಾಷ್ಟಮೀ, ಇನ್ನೂ ಇತರ ಪರ್ವತಿಥಿಗಳು ಈ ಕಾಲಗಳಲ್ಲಿ ತಪ್ಪದೆ ಶಿವಾರಾಧನೆ ಮಾಡುತ್ತಾ, ಶಿವಲಿಂಗವನ್ನು ಕಾಲತ್ರಯಗಳಲ್ಲಿಯೂ ಪೂಜಿಸುತ್ತಾ, ಶಾಂಭವರಿಗೆ ದಾನಧರ್ಮಗಳು, ಅಶನವಸನಗಳು ಇವುಗಳನ್ನು ಕಲ್ಪಿಸುತ್ತಾ, ಶಿವಧರ್ಮವನ್ನು ನಡೆಸಿದವರು ನಿಜವಾಗಿಯೂ ಪರಮೇಶ್ವರ ಸದೃಶರೆನಿಸುವರು. ಅವರನ್ನು ಈಶ್ವರಭಾವನೆಯಿಂದ ಕಾಣಬೇಕು. ॥೧೨೭-೧೨೮-೧೨೯-೧೩೦-೧೩೧॥

ಶಿವಕ್ಷೇತ್ರಗಳಲ್ಲಿ ತಪ್ಪದೆ ವಾಸಮಾಡುವ ಬ್ರಾಹ್ಮಣರೇ ಮೊದಲಾದ ಸಕಲ ಜಾತಿಯವರೂ ಸಮಸ್ತ ಪಾಪನಿರ್ಮುಕ್ತರೆನಿಸಿ ಶಿವಲೋಕದಲ್ಲಿ ನೆಲಸುವರು. ಅಂತಹವರನ್ನು ಸಾಕ್ಷಾತ್ಪರಶಿವನಂತೆಯೇ ಭಾವಿಸಬೇಕು. ಶಿವಾರ್ಚನರತರಾದವರು ನಿಜವಾಗಿಯೂ ರುದ್ರಸದೃಶರೇ. ॥೧೩೨-೧೩೩॥

ಆಸ್ವೇದಮತಿಯುಕ್ತೇನ ಯೇ ಪ್ರಣಾಮಕರಾಶ್ಶಿವೇ ।
ತ ಏವ ರುದ್ರಾ ವಿಜ್ಞೇಯಾ ನಾತ್ರಕಾರ್ಯಾವಿಚಾರಣಾ ॥೧೩೪॥

ಪ್ರದಕ್ಷಿಣಪರಾ ಯೇ ವೈ ನಮಸ್ಕಾರಂ ಪದೇಪದೇ ।
ತ ಏವ ರುದ್ರಾ ವಿಜ್ಞೇಯಾ ನಾತ್ರಕಾರ್ಯಾವಿಚಾರಣಾ ॥೧೩೫॥

ಲಿಂಗಾಗ್ರೇ ನರ್ತನಪರಾಸ್ತ್ರಿಕಾಲಂ ಸಾವಧಾನತಃ ।
ತ ಏವ ರುದ್ರಾ ವಿಜ್ಞೇಯಾ ನಾತ್ರಕಾರ್ಯಾವಿಚಾರಣಾ ॥೧೩೬॥

ಶಿವಸ್ತವಪರಾ ಯೇ ವೈ ತ್ರಿಕಾಲಂ ಸಾವಧಾನತಃ ।
ತ ಏವ ರುದ್ರಾ ವಿಜ್ಞೇಯಾ ನಾತ್ರಕಾರ್ಯಾವಿಚಾರಣಾ ॥೧೩೭॥

ಸದಾ ಶಿವಕಥಾಸಕ್ತಾಃ ಸರ್ವದಾ ನಿಯಮಾದ್ದ್ವಿಜಾಃ ।
ತ ಏವ ರುದ್ರಾ ವಿಜ್ಞೇಯಾ ನಾತ್ರಕಾರ್ಯಾವಿಚಾರಣಾ ॥೧೩೮॥

ಯೇ ಮನ್ನಾಮಜಪಾಸಕ್ತಾಃ ಸರ್ವದಾ ಸಾವಧಾನತಃ ।
ತ ಏವ ರುದ್ರಾ ವಿಜ್ಞೇಯಾ ನಾತ್ರಕಾರ್ಯಾವಿಚಾರಣಾ ॥೧೩೯॥

ನಿವಸಂತಿ ಸದಾ ಯೇ ವೈ ಅವಿಮುಕ್ತೇ ಮಹೇಶ್ವರಿ ।
ನಿಯತಾ ನಿಯಮೋಪೇತಾಸ್ತೇ ರುದ್ರಾ ನಾತ್ರ ಸಂಶಯಃ ॥೧೪೦॥

---

ಯಾರು ಈಶ್ವರಲಿಂಗಕ್ಕೆ ತನ್ನ ದೇಹದಿಂದ ಬೆವರು ಸುರಿಯುವವರೆಗೂ, ಪ್ರದಕ್ಷಿಣ ನಮಸ್ಕಾರಾದಿಗಳಿಂದ ವಂದಿಸುವರೋ, ಯಾರು ಶಿವಲಿಂಗದ ಮುಂದೆ ಪ್ರದಕ್ಷಿಣಾದಿಗಳಿಂದಲೂ, ನರ್ತನದಿಂದಲೂ ನಲಿದಾಡುವರೋ, ಯಾರು ತ್ರಿಕಾಲಗಳಲ್ಲಿಯೂ ನಿಧಾನವಾಗಿ ಶಿವಸ್ತುತಿಯನ್ನು ಪಠಿಸುತ್ತಾ ಶಂಕರನನ್ನು ಧ್ಯಾನಿಸುವರೋ, ಯಾರು ಸದಾಶಿವಕಥೆಯನ್ನು ತಿಳಿಯುವುದರಲ್ಲಿಯೂ, ಈಶ್ವರ ಮಹಿಮೆಯನ್ನು ಕೇಳುವುದರಲ್ಲಿಯೂ ಆಸಕ್ತರಾಗಿರುವರೋ, ಅವರೆಲ್ಲರೂ ಸಾಕ್ಷಾತ್ಪರಶಿವಸ್ವರೂಪರೇ ಎಂದು ಭಾವಿಸಬೇಕು. ॥೧೩೪-೧೩೫-೧೩೬-೧೩೭-೧೩೮॥

ಶಿವನಾಮ ಜಪಾಸಕ್ತರಾದವರೂ, ಕಾಶೀಕ್ಷೇತ್ರ ನಿವಾಸಿಗಳಾದವರೂ, ನಿಯಮಬದ್ಧರಾಗಿದ್ದು ಸದಾ ಶಿವಧರ್ಮವನ್ನು ಅನುಸರಿಸುವವರೂ, ಸರ್ವೇಶ್ವ

ಯಸ್ಸರ್ವಸಾಕ್ಷಿಣಂ ಸಾಂಬಂ ಮಹಾದೇವಂ ಸನಾತನಂ ।
ಸರ್ವೋತ್ಕೃಷ್ಟತಯಾ ವೇದ ಸ ರುದ್ರೋ ನಾತ್ರ ಸಂಶಯಃ ॥೧೪೦॥

ಪರಾಶಕ್ತಿಂ ಮಹಾದೇವೀಂ ಸರ್ವಮಂತ್ರಮಯೀಂ ಶಿವಾಂ ।
ಸರ್ವೋತ್ಕೃಷ್ಟತಯಾ ವೇದ ಬ್ರಹ್ಮಾವಿಷ್ಣೋರ್ವಿಮುಕ್ತಿದಾಂ ॥೧೪೨॥

ಸ ಏವ ಗಣಪಶ್ರೇಷ್ಠಃ ಸ ಏವ ದ್ವಿಜಸತ್ತಮಃ ।
ಯೋ ವಾ ಬ್ರಹ್ಮಾದಿತುಲ್ಯಂ ಮಾಂ ವೇದ ಚಾಬ್ರಾಹ್ಮಣೋಹಿ ಸಃ ॥೧೪೩॥

ಯೋ ಮಾಂ ವಿಷ್ಣ್ವಾದಿಭಿಸ್ತುಲ್ಯಂ ವೇದ ಚಾ ಬ್ರಾಹ್ಮಣೋಪಿ ಸಃ ।
ಸೋನೋಹಂ ಸರ್ವಜನಿತಾ ಬ್ರಹ್ಮವಿಷ್ಣುಹರಾತ್ಮನಾಂ ॥೧೪೪॥

ಯಮಶಕ್ರಾನಿಲಾನಾಂ ಚ ವಹ್ನೇಶ್ಚ ಜನಿತಾ ಶಿವೇ ।
ಯೋನ್ಯತುಲ್ಯತಯಾ ವೇದ ಸೋಂತ್ಯಜೋ ಹಿ ದ್ವಿಜೋಪಿ ಸನ್ ॥೧೪೫॥

---

ರನೂ, ಪಾರ್ವತೀಪತಿಯೂ, ಅನಾದಿಪುರುಷನೂ ಆದ ಮಹಾದೇವನನ್ನೇ ಯಾರು ಸರ್ವೋತ್ಕೃಷ್ಟನೂ, ರುದ್ರಸದೃಶರು. ಅದರಲ್ಲಿ ಸಂಶಯವಿಲ್ಲ.॥೧೩೯-೧೪೦-೧೪೧॥

ಪರಾಪರಸ್ವರೂಪಳೂ, ಮಹಾದೇವಿಯೂ, ಸರ್ವಮಂತ್ರಾತ್ಮಕಳೂ ಆದ ಪಾರ್ವತಿಯನ್ನು ಯಾರು ಸರ್ವೋತ್ಕೃಷ್ಟಳೆಂದೂ, ಬ್ರಹ್ಮವಿಷ್ಣುಗಳಿಗೂ ಮುಕ್ತಿಯನ್ನು ಕೊಡುವಳೆಂದೂ ಅರಿಯುವರೋ, ಅವರೂ ಸಹ ಶಿವಸ್ವರೂಪರೇ. ಅವರೇ ಗಣಶ್ರೇಷ್ಠರು, ಅವರೇ ಬ್ರಾಹ್ಮಣೋತ್ತಮರು. ಆದರೆ ನನ್ನನ್ನು ಬ್ರಹ್ಮ, ವಿಷ್ಣು ಮುಂತಾದ ದೇವತೆಗಳಿಗೆ ಸಮನೆಂದು ಭಾವಿಸುವವರು ಜಾತ್ಯಾ ಅವರು ಬ್ರಾಹ್ಮಣರಾದರೂ ಅವರು ನಿಜವಾದ ಬ್ರಾಹ್ಮಣರೆನಿಸುವುದಿಲ್ಲ. ॥೧೪೨-೧೪೩॥

ಉಮಾಸಹಿತನಾದ ನಾನು ಬ್ರಹ್ಮ, ವಿಷ್ಣು, ರುದ್ರ ಇವರಿಗೆಲ್ಲಾ ಜನಕನು. ಇಂತಹವನನ್ನು ಸಾಮಾನ್ಯ ದೇವತೆಯಂತೆ ಭಾವಿಸುವವನು ನಿಜವಾಗಿಯೂ ಬ್ರಾಹ್ಮಣನಲ್ಲ. ಹಾಗೆಯೇ, ಲೋಕಪಾಲಕರಾದ ಯಮ, ಇಂದ್ರ, ವಾಯು, ಅಗ್ನಿ ಇವರಿಗೆ ಉತ್ಪತ್ತಿಸ್ಥಾನವೇ ನಾನು. ಇಂತಹ ನನ್ನನ್ನು ಅವರಿಗೆ ಸಮನೆಂದು ತಿಳಿಯುವವನು ಜಾತಿಯಿಂದ ಬ್ರಾಹ್ಮಣನಾಗಿದ್ದರೂ, ಅವನು ಚಂಡಾಲನಿಗೆ ಸಮನೆನಿಸಿದವನು. ॥೧೪೪-೧೪೫॥

ಯೋ ಮಾಂ ವಿಶ್ವಾಧಿಕಂ ರುದ್ರಂ ಮಹಾದೇವಂ ಸನಾತನಂ ।
ಯೋಽನ್ಯತುಲ್ಯತಯಾ ವೇದ ಸೋಽಂತ್ಯಜೋ ಹಿ ದ್ವಿಜೋಽಪಿ ಸನ್ ॥೧೪೬॥

ಮನ್ನೈವೇದ್ಯಸುಧಾಸ್ವಾದರಹಿತಾಃ ಪಾಪಯೋನಯಃ ।
ಭಾಸುರಾಚಾರನಿರತಾ ಭೂಸುರಾ ಅಪಿ ರಾಸಭಾಃ ॥೧೪೭॥

ನದಂತಿ ನಿಂದಯಾನ್ಯೋಽನ್ಯಂ ತೇ ಗಾರ್ದಭರವೋಪಮಾಃ ।
ವಿತರ್ಕಕುಶಲಾಃ ಸರ್ವೇ ದೋಷಜ್ಞಾ ಯೇ ಕುಲಾಲಜಾಃ ॥೧೪೮॥

ಶಿವಪಾದಾಂಬುಜದ್ವಂದ್ವಪೂಜ್ಯಬಿಲ್ವವಿವರ್ಜಿತಾಃ ।
ನಿರ್ಘೃಣಾ ಘ್ರಾಣಹೀನಾಸ್ತೇ ತೇ ತಾರ್ಣಕನರೋಪಮಾಃ ॥೧೪೯॥

ವಾನರಾಕೃತಯಸ್ಸರ್ವೇ ಪಾಮರಾ ಜಾರಜಾ ಹಿ ತೇ ।
ಶಿವಧರ್ಮೋಜ್ಝಿತಾ ಯೇ ವೈ ಜಾರಜಾಸ್ತೇ ನರಾ ಇಮೇ ॥೧೫೦॥

ಮೂಢಾ ಮೃಡಾರ್ಚನಾಹೀನಾ ಹೀನಜಾತಾಸ್ತ ಏವ ಹಿ ।
ಶಿವಜ್ಞಾನವಿಹೀನಾನಾಂ ವೃಥಾ ಜನ್ಮ ನ ಸಂಶಯಃ ॥೧೫೧॥

---

ವಿಶ್ವಾಧಿಕನೂ, ಆದಿಪುರುಷನೂ, ಸನಾತನನೂ ಆದ ನನ್ನನ್ನು ಸಾಮಾನ್ಯ ದೇವತಾ ಸದೃಶನೆಂದು ಭಾವಿಸುವವನು ದ್ವಿಜನಾದರೂ ಅಂತ್ಯಜನೇ ಸರಿ. ನನ್ನ ನೈವೇದ್ಯಶೇಷವೆಂಬ ಅಮೃತವನ್ನು ಭಕ್ಷಿಸದೆ ಪಾಪಿಗಳೆನಿಸಿ, ಇತರ ಯಾವ ಆಚಾರ ಪರಂಪರೆಗಳಿಂದ ಶ್ರೇಷ್ಠರೆನಿಸಿದ್ದರೂ ಅವರು ಕತ್ತೆಗಳಿಗೆ ಸದೃಶರೆನಿಸುವರು. ||೧೪೬-೧೪೭||

ಯಾರು ಪರಸ್ಪರವಾಗಿ ನಿಂದಿಸುತ್ತಾ ಕಿರಿಚುವರೋ ಅವರು ಗರ್ದಭಧ್ವನಿಯುಳ್ಳವರು. ತರ್ಕಕುತರ್ಕಾದಿಗಳಿಂದ ಶಿವನಲ್ಲಿ ದೋಷ ಹುಡುಕುವವರು ಕುಂಬಾರ ಜಾತಿಗೆ ಸೇರಿದವರು. ಶಿವಪಾದಕಮಲವನ್ನು ಬಿಲ್ವಪತ್ರಾದಿಗಳಿಂದ ಪೂಜಿಸದೆ, ಅವನ್ನು ಭಕ್ತಿಯಿಂದ ಆಘ್ರಾಣಿಸದೆ ಪಾಪಿಗಳೆನಿಸಿದವರು ನಿಜವಾಗಿಯೂ ಕಪಿ ಮೂತಿಯ ಮಾನವರೇ ಸರಿ. ಅವರು ಅಜ್ಞಾನಿಗಳು, ವ್ಯಭಿಚಾರಜಾತರು. ಅಂತಹವರನ್ನು ಧರ್ಮಭ್ರಷ್ಟರೆಂದು ತಿಳಿಯಬೇಕು. ||೧೪೮-೧೪೯-೧೫೦||

ಈಶ್ವರಾರ್ಚನೆ ಮಾಡದ ಮೂಢರು ಹೀನವಂಶಜರೆಂದು ಭಾವವು. ಅಂತಹವರ ಜನ್ಮವೇ ವ್ಯರ್ಥವಾದುದು. ಪ್ರಪಂಚದಲ್ಲಿರುವ ಎಲ್ಲಾ ತೀರ್ಥಗಳಿಗಿಂತ ಜ್ಞಾನ

ಸರ್ವೇಷಾಮಪಿ ತೀರ್ಥಾನಾಂ ಜ್ಞಾನತೀರ್ಥಂ ಪರಂ ಸ್ಮೃತಂ ।
ಜ್ಞಾನತೀರ್ಥಾತ್ಪರಂ ತೀರ್ಥಂ ಯತ್ಪುಣ್ಯಂ ಕ್ಷಾಂತಿವಾರಿಣಾ ॥೧೫೨॥

ಜ್ಞಾನಯೋಗಸ್ತಪೋ ಜಪ್ಯಂ ಯಜ್ಞದಾನಾದಿಸತ್ಕ್ರಿಯಾಃ ।
ಕ್ರೋಧಿನಸ್ತು ವೃಥಾ ಯಸ್ಮಾತ್ತಸ್ಮಾತ್ಕ್ರೋಧಂ ವಿವರ್ಜಯೇತ್ ॥೧೫೩॥

ಮರ್ಮಾಸ್ಥಿ ಪ್ರಾಣಹೃದಯಂ ನಿರ್ದಹೇದಪ್ರಿಯಂ ವಚಃ ।
ಅವಾಚ್ಯಮಪ್ರಿಯಂ ಯಸ್ಮಾಚ್ಛಿವಭಕ್ತೈರ್ವಿಶೇಷತಃ ॥೧೫೪॥

ಕ್ಷಮಾದಾನಂ ದಮಸ್ಸತ್ಯಂ ಹಿಂಸಾ ಪೈಶೂನ್ಯವರ್ಜನಂ ।
ನಿರ್ಮಲಕ್ಷಾಂತಿಸಲಿಲೈರ್ಲೋಕಮಾಹ್ಲಾದ್ಯಶೀತಲೈಃ ॥೧೫೫॥

ಇಹಸೌಖ್ಯಮವಾಪ್ನೋತಿ ಪರತ್ರ ಚ ಶುಭಾಂಗತಿಂ ।
ಸರ್ವಶಾಸ್ತ್ರೈಶ್ಚ ವೇದೈಶ್ಚ ಸರ್ವಯಜ್ಞೈಶ್ಚ ಯತ್ಫಲಂ ॥೧೫೬॥

ಯೋ ನ ಹಿಂಸ್ಯತಿ ಭೂತಾನಿ ತಸ್ಯ ಪುಣ್ಯಂ ತತೋಧಿಕಂ ।
ತ್ರೈಲೋಕ್ಯಮಪಿ ಯೋ ದದ್ಯಾದಖಿಲಂ ರತ್ನಪೂರಿತಂ ॥೧೫೭॥

---

ತೀರ್ಥವೆಂಬುದು ಬಹುಶ್ರೇಷ್ಠವಾದುದು. ಅದಕ್ಕಿಂತ ಶ್ರೇಷ್ಠವಾದ ತೀರ್ಥವೇ ಯಾವುದೂ ಕಾಣುವುದಿಲ್ಲ ||೧೫೧-೧೫೨||

ತಪಸ್ಸು, ಜಪ, ಯಜ್ಞಯಾಗಾದಿಗಳು, ದಾನಧರ್ಮಗಳು ಇವೆಲ್ಲಾ ಜ್ಞಾನ ಯೋಗಗಳು. ಕೋಪಿಷ್ಠನಾದವನಿಗೆ ಈ ಜ್ಞಾನಯೋಗಗಳು ಸಿದ್ಧಿಸುವುದಿಲ್ಲ. ಆದ್ದರಿಂದಲೇ ಮಾನವನು ಮೊದಲು ಕೋಪವನ್ನು ಬಿಡಬೇಕು. ಕೋಪದಿಂದಾಡಿದ ಕೆಲವು ಮಾತುಗಳು ಮತ್ತೊಬ್ಬನ ಮರ್ಮಸ್ಥಳವನ್ನು ಚುಚ್ಚಿ ಅಹಿತವನ್ನುಂಟು ಮಾಡುವುವು. ಆದ್ದರಿಂದ ಅಂತಹ ಮಾತುಗಳನ್ನು ಆಡಬಾರದು. ಅದರಲ್ಲಿಯೂ ಈಶ್ವರಭಕ್ತರಾದವರು ಮೊದಲು ಕ್ರೋಧವನ್ನು ಬಿಡಬೇಕು. ||೧೫೩-೧೫೪||

ಕ್ಷಮೆ, ದಾನ, ಸಹನೆ, ಸತ್ಯ, ಅಹಿಂಸೆ, ಚಾಡಿಹೇಳದಿರುವುದು, ನಿರ್ಮಲ ಸ್ವಭಾವ, ಕ್ಷಾಂತಿ, ಮುಂತಾದ ಸುಗುಣಗಳೆಂಬ ಸುಶೀತಲ ಜಲದಿಂದ ಲೋಕವನ್ನು ಆಹ್ಲಾದಗೊಳಿಸಿದವನಿಗೆ ಈ ಲೋಕದ ಮತ್ತು ಪರಲೋಕದ ಸುಖವು ಅನಾಯಾಸ ವಾಗಿ ದೊರೆಯುವುದು. ||೧೫೫-೧೫೬||

ಸಕಲ ಶಾಸ್ತ್ರ, ವೇದ, ಇವುಗಳನ್ನು ಅಭ್ಯಾಸಮಾಡಿ, ಸಮಸ್ತ ಯಾಗಗಳನ್ನೂ

ಚರೇತ್ತಪಾಂಸಿ ಕೃಚ್ಛ್ರಾಣಿ ನ ತತ್ತುಲ್ಯಮಹಿಂಸಯಾ ।
ಯಥಾಕಾಲೋಪಪನ್ನೇನ ಕೃತನ್ಯಾಯಾಗತೇನ ಚ ॥೧೫೮॥

ಉತ್ಪನ್ನಾರ್ಥೇನ ಯಸ್ತೋಷಃ ಸಂತೋಷಂ ಸ ಉದಾಹೃತಃ ।
ತೇನ ಸರ್ವಮಧೀತೇನೇಷ್ಟಂ ತೇನ ಸರ್ವಮನುಷ್ಠಿತಂ ॥೧೫೯॥

ಯೇನ ತೃಷ್ಣಾಪದಂ ತ್ಯಕ್ತಂ ಸಂತೋಷೀ ಸ್ವಸ್ತಿಮಾನ್ ಭವೇತ್ ।
ಪರಪೀಡಾದಿನಿರ್ಮುಕ್ತಾ ದಂಭಾಲಸ್ಯವಿವರ್ಜಿತಾಃ ॥೧೬೦॥

ಯೇ ಶಿವಂ ಶರಣಂ ಪ್ರಾಪ್ತಾ ನ ತೇ ದುಃಖಸ್ಯಭಾಜನಂ ।
ಯೇ ವಾ ಕೇವಾ ಮಹಾದೇವಂ ಸ್ಮರಂತಿ ಪರಮಾರ್ಥತಃ ॥೧೬೧॥

ತೇ ಸರ್ವೇ ದುಃಖನಿರ್ಮುಕ್ತಾ ದುರ್ಗಾಣ್ಯಪಿ ತರಂತಿ ತೇ ।
ಅನ್ಯೇ ತು ಪಶವಸ್ಸರ್ವೇ ಶಿವಧರ್ಮವಿವರ್ಜಿತಾಃ ॥೧೬೨

---

ಮಾಡಿದರೆ ಎಂತಹ ಸುಕೃತವು ಲಭಿಸುವುದೋ ಅದಕ್ಕಿಂತ ಹೆಚ್ಚಾದ ಪುಣ್ಯವು ಪ್ರಾಣಿಗಳಿಗೆ ಹಿಂಸೆಕೊಡದಿರುವುದರಿಂದ ಲಭಿಸುವುದು. ಮೂರುಲೋಕಗಳನ್ನೇ ಸಂಪದ್ಭರಿತಗಳನ್ನಾಗಿ ಮಾಡಿ ದಾನಮಾಡಿದರೂ, ಅತಿಕಷ್ಟತರವಾದ ಘೋರತಪಸ್ಸನ್ನೇ ಆಚರಿಸಿದರೂ, ಅಹಿಂಸೆಯಿಂದ ಒದಗುವಷ್ಟು ಪುಣ್ಯರಾಶಿಯು ಅವುಗಳಿಂದ ಲಭಿಸಲಾರದು. ಕಾಲಾನುಸಾರವಾಗಿ ನ್ಯಾಯಬದ್ಧವಾಗಿ ಬಂದ ವಸ್ತುಗಳಿಂದಲೇ ಯಾವನು ತೃಪ್ತನಾಗುವನೋ ಅವನೇ ನಿಜವಾಗಿ ಸಂತುಷ್ಟನು. ಆ ತೃಪ್ತಿಯೇ ನಿಜವಾದ ಸಂತೋಷ. ||೧೫೭-೧೫೮||

ಹಾಗೆ ಸಂತುಷ್ಟನಾದವನು ಸಕಲ ಯಜ್ಞಗಳನ್ನೂ ಕರ್ಮಗಳನ್ನೂ ನಡೆಸಿದಷ್ಟು ಸುಕೃತವನ್ನು ಪಡೆಯುವನು. ಆಸೆಯೆಂಬ ಮನೋಭಾವವನ್ನು ಯಾವನು ತೊರೆದು ಬಿಡುವನೋ ಅವನೇ ನಿಜವಾಗಿ ಆಯುಷ್ಮಂತನು. ತೃಪ್ತನು. ಪರಪೀಡಾದಿಗಳಿಗೆ ಮನಗೊಡದೆ, ದಂಬ ಸೋಮಾರಿತನ ಇವುಗಳನ್ನು ಬಿಟ್ಟವರಾಗಿ ಸರ್ವದಾ ಶಿವಧ್ಯಾನದಲ್ಲಿಯೇ ಯಾರು ಮನಗೊಟ್ಟಿರುವರೋ, ಅಂತಹವರಿಗೆ ಎಂದೂ ಯಾವ ದುಃಖವೂ ಸಂಭವಿಸಲಾರದು. ||೧೫೯-೧೬೦-೧೬೧||

ಯಾರು ಶಂಕರನನ್ನೇ ಪಾರಮಾರ್ಥಿಕ ಭಾವನೆಯಿಂದ ಸರ್ವದಾ ಸ್ಮರಿಸುವರೋ ಅಂತಹವರು ಕಷ್ಟತರವಾದ ಸನ್ನಿವೇಶಗಳನ್ನು ಸುಲಭವಾಗಿ ದಾಟಿ ಕಷ್ಟ

ಸತ್ಯಂ ಸತ್ಯಂ ಮಹಾದೇವಿ ನ ಮುಕ್ತೇಃ ಪಾತ್ರಮುತ್ತಮಂ ।
ಬಹ್ವಾಯಾಸಕರಾ ಧರ್ಮಾಃ ಸರ್ವೇ ಶರ್ವಾರ್ಚನೋಜ್ಝಿತಾಃ ॥೧೬೩॥

ತೇ ವೈ ಮಲಾಶಿನಸ್ಸರ್ವೇ ಭವಂತಿ ನರಕೋಜ್ಝಿತಾಃ ।
ಇತಿ ಪಂಚಪ್ರಕಾರೋಽಯಂ ಶಿವಧರ್ಮಃ ಪ್ರಕೀರ್ತಿತಃ ॥೧೬೪॥

ಅಪಾತತೋ ಹಿ ಯದ್ಯಸ್ಮಾಚ್ಛೀಘ್ರಮೇವ ಪ್ರಣಶ್ಯತಿ ॥೧೬೫॥

ಅಯಮಂಶೋಂಬಿಕೇ ಸಾಕ್ಷಾತ್ಸಾರಾಸಾರ ಉದಾಹೃತಃ ।
ಮಥಿತ್ವಾ ಶಿವರತ್ನಾಬ್ಧೌ ತದ್ದೇವಿ ಹೃದಿ ಗೋಪ್ಯತಾಂ ॥೧೬೬॥

ನಾಭಕ್ತಾಯಾಪ್ರಶಾಂತಾಯಾದೇಯೋಽಯಂ ಶಿವಯೋಗಿನೇ ।
ಭಕ್ತೇಷ್ವೇವ ಪ್ರದಾತವ್ಯೋಽಪ್ಯಪಾತ್ರಂ ನರಕಂ ಲಭೇತ್ ॥೧೬೭॥

---

ಮುಕ್ತರಾಗುವರು. ಆದರೆ ಶಿವಧರ್ಮ ಬಾಹಿರರಾದವರು ನಿಜವಾಗಿಯೂ ಪಶುಸದೃಶರೇ. ದೇವಿಯೇ ಕೇಳು. ಶಿವಧರ್ಮಬಾಹಿರರಿಗೆಎಂದೂ ಮುಕ್ತಿಯೂ ದೊರಕಲಾರದು. ಶಿವಧರ್ಮವನ್ನು ಬಿಟ್ಟರೆ ಉಳಿದ ಧರ್ಮಗಳೆಲ್ಲಾ ಬಹುಕಷ್ಟತರವಾದವುಗಳು ಅವುಗಳ ಆಚರಣೆಯಿಂದ ವಿಶೇಷವಾದ ಆಯಾಸವು ಲಭಿಸುವುದು. ||೧೬೨-೧೬೩|

ಇಂತಹ ಸುಲಭವಾದ ಶಿವಧರ್ಮವನ್ನು ದೂರಮಾಡಿದವರು ನಿಜವಾಗಿಯೂ ಮಲಭೋಜನಮಾಡಿದಂತಾಗುವರು. ಹೀಗೆ ಶಿವಧರ್ಮವು ವಿಸ್ತಾರವಾದ ಕ್ರಮದಲ್ಲಿರುವುದು. ಈ ಧರ್ಮದಿಂದ ಜಾರಿ ಅನ್ಯಧರ್ಮವನ್ನು ಆಶ್ರಯಿಸಿದವನು ನಿಜವಾಗಿಯೂ ಬಹುಬೇಗ ನಾಶಹೊಂದುವನು. ಎಲೌ ದೇವಿಯೇ ಕೇಳು. ಈ ನನ್ನ (ಶಿವನ) ಅತಿಗೋಪ್ಯತರವಾದ ಧರ್ಮರಹಸ್ಯವನ್ನು ಈಗ ನಿನಗೆ ತಿಳಿಸಿರುವೆನು. ಇತರ ಧರ್ಮಗಳ ಸಾರಾಸಾರವನ್ನೂ ಬೋಧಿಸಿರುವೆನು. ಈಗ ನಾನು ಹೇಳಿರುವ ಶಿವಧರ್ಮ ಸಾಗರವನ್ನು ಕಡೆದು ಅದರಲ್ಲಿ ಹುಟ್ಟುವ ದಿವ್ಯರತ್ನವೊಂದನ್ನು ನೀನು ನಿನ್ನ ಹೃದಯದಲ್ಲಿ ಬಚ್ಚಿಡು ||೧೬೪ ೧೬೫-೧೬೬||

ನನ್ನ ಭಕ್ತನಲ್ಲದವನಿಗೂ, ತಾಳ್ಮೆಯಿಲ್ಲದವನಿಗೂ, ಶಿವಧರ್ಮ ನಿರ್ಮುಕ್ತನಿಗೂ, ಈ ನನ್ನ ಮಹಿಮಾದಿ ವಿಷಯಗಳನ್ನು ಬೋಧಿಸಬಾರದು. ಏಕೆಂದರೆ ಅವರೆಲ್ಲರೂ ಶಿವಧರ್ಮಶ್ರವಣಕ್ಕೆ ಅನಧಿಕಾರಿಗಳು. ಅಪಾತ್ರರಿಗೆ ಇಂತಹ ವಿಷಯಗಳನ್ನು ಉಪದೇಶಿಸುವುದರಿಂದ ನರಕವು ಲಭಿಸುವುದು. ಮಹಾದೇವಾಖ್ಯವಾದ ಈ

ಮಹಾದೇವಾಖ್ಯಯಾ ಪ್ರೋಕ್ತೋ ಮುಕ್ತಯೇ ಸರ್ವದೇಹಿನಾಂ।
ಶ್ರವಣಾದಸ್ಯ ಪಾಪಾನಿ ನಶ್ಯಂತಿ ವಿವಿಧಾನಿ ಚ ॥೧೬೮॥

ಯಾನ್ಯಾನ್ಯಾನ್ ಪ್ರಾರ್ಥಯತೇ ಮದ್ಭಕ್ತೋ ಲಭತೇಚಿರಾತ್।
ಬಹುನಾತ್ರ ಕಿಮುಕ್ತೇನ ಶ್ರವಣಾನ್ಮೋಕ್ಷಮಾಪ್ನುಯಾತ್ ॥೧೬೯॥

ತಸ್ಮಾದ್ಭಕ್ತೈಃ ಸದಾ ಶ್ರಾವ್ಯಃ ಶಾಂಭವಾದೇವ ಕೇವಲಂ।
ಸರ್ವಸ್ತರತು ದುರ್ಗಾಣಿ ಸರ್ವೋ ಭದ್ರಾಣಿ ಪಶ್ಯತು ॥೧೭೦॥

ಸರ್ವಸ್ಸುಗತಿಮಾಪ್ನೋತು ಸರ್ವಸ್ಯಾಪಿ ಭವೇಚ್ಛಿವಂ ॥೧೭೧॥

॥ ಸ್ಕಂದ ಉವಾಚ ॥

ಪ್ರಣಮತ ಬತ ದುಃಖಂ ನಾಸ್ತಿ ವಃ ಪಾಪಭೀತಿ
ಸ್ತರುಣಶಶಿಲಲಾಮಂ ಸೋಮಮಾಶು ಪ್ರಯಾತ।
ಶರಣಮರುಣಪಾದಂ ಕಾರಣಂ ತಾರಣಂ ವಃ
ಪ್ರಥಿತ ಭವಭವಾದ್ರೇರ್ದಾರುಣಂ ಪಾತಕಾನಾಂ ॥೧೭೨॥

---

ಹನ್ನೊಂದನೆಯ ಅಂಶದಲ್ಲಿ ಸಮಸ್ತರಿಗೂ ಮುಕ್ತಿಯನ್ನು ಒದಗಿಸುವ ಅನೇಕ ಶಿವ ಧರ್ಮಗಳು ವಿವರವಾಗಿ ವರ್ಣಿತವಾಗಿವೆ. ಇದನ್ನು ಭಕ್ತಿಯಿಂದ ಕೇಳಿದವರಿಗೂ ಸಮಸ್ತ ಪಾಪವು ಪರಿಹೃತವಾಗುವುದು. ಇದರಲ್ಲಿ ಸಂಶಯವಿಲ್ಲ. ॥೧೬೭-೧೬೮॥

ಇದನ್ನು ಕೇಳಿ ತಿಳಿದವರು ಯಾವ ಯಾವ ಇಷ್ಟಾರ್ಥಗಳನ್ನು ಅಪೇಕ್ಷಿಸಿದರೂ ಅವೆಲ್ಲವನ್ನೂ ನನ್ನ ಅನುಗ್ರಹ ಬಲದಿಂದ ಹೊಂದುವರು. ಒಟ್ಟಿನಲ್ಲಿ ಹೇಳುವುದಾದರೆ ಈ ಅಂಶವನ್ನು ಪೂರ್ತಿಯಾಗಿ ಕೇಳುವವರಿಗೆ ಮೋಕ್ಷವೇ ಲಭಿಸುವುದು. ಆದ್ದರಿಂದ ನನ್ನ ಭಕ್ತರಾದವರು ಶಾಂಭವನೊಬ್ಬನ ಮೂಲಕ ಈ ಅಂಶದಲ್ಲಿ ನನ್ನಿಂದ ಪ್ರೋಕ್ತವಾಗಿರುವ ಸಕಲ ಧರ್ಮರಹಸ್ಯಗಳನ್ನೂ ಕೇಳಿ ತಿಳಿದುಕೊಳ್ಳಬೇಕು. ಒಟ್ಟಿನಲ್ಲಿ ಪ್ರಪಂಚದಲ್ಲಿ ಎಲ್ಲರೂ ಕಷ್ಟದಿಂದ ಪಾರಾಗಲಿ. ಎಲ್ಲರಿಗೂ ಮಂಗಳವು ಲಭಿಸಲಿ, ಸರ್ವರೂ ಮುಕ್ತರಾಗಲಿ, ಸನ್ಮಂಗಳವು ಸರ್ವರಿಗೂ ಲಭಿಸಲಿ. ಇದೇ ನನ್ನ ಅಪೇಕ್ಷೆ ಎಂದು ಪರಮೇಶ್ವರನು ಪಾರ್ವತಿಗೆ ಹೇಳಿ ಸುಮ್ಮನಾದನು. ॥೧೬೯-೧೭೦-೧೭೧॥

ಎಲೈ ಜೈಗೀಷವ್ಯಾದಿ ಮಹರ್ಷಿಗಳೇ ಕೇಳಿರಿ, ಈ ರೀತಿ ಪರಶಿವನು ನಮ್ಮ

ಅಂಶೋ ಮಹೇಶಕಥಿತಃ ಶಶಿಧಾಮಚೂಡ
ಲಿಂಗಾಭಿಷೇಕಮಹಿಮಾಸ್ವತುಲಃ ಕಿಲಾಯಂ ।
ಖ್ಯಾತೋ ಮಹಾದೇವ ಇತಿಪ್ರಸಿದ್ಧಃ
ಸಿದ್ಧಾಂತಿರಾದ್ಧಾಂತಿತ ವಾಕ್ಯಜಾಲಃ ॥೧೭೩॥

ನತ್ವಾ ಸ್ತುತ್ವಾ ಮಹೇಶಂ ನಿಗಮಸುಗಮಸದ್ವಾಕ್ಯಸಾರಂ ಪ್ರಕೃಷ್ಟಂ
ಶ್ರುತ್ವಾ ಕೃತ್ವಾ ಗುರುಂ ತಂ ಶ್ರುತಿಶಿಖರಮಹಾವಾಕ್ಯಸಾರಾರ್ಥವಿದ್ಯಾಂ ।
ಭೂತ್ವಾ ಭಕ್ತಿಪರೇಣ ಚೇತಸಪರ್ಯೈಧ್ಯಾರ್ತ್ವಾ ಶಿವಂ ಪಾತಕಂ
ತ್ಯಕ್ತ್ವಾ ಮಾನುಷಮಧ್ರುವಂ ಜನುರಹೋ ಯಾತ್ಯೇವ ಶಂಭೋಃಪದಂ
॥೧೭೪॥

ತಾರಾನಾಥಸಹೋದರಾಪತಿಕೃತಾಪಾದಾರವಿಂದಾರ್ಚನ
ದ್ವಾರಾ ತುಷ್ಟಹೃದಂತರಂ ಪುರಹರಂ ವಿಶ್ವೇಶ್ವರಂ ಶಂಕರಂ ।
ಭಾಸ್ವದ್ಭಾಸ್ಕರಕೋಟಿಸನ್ನಿಭಸಹಸ್ರಾರಪ್ರದಂ ವಿಷ್ಣವೇ
ದೈತ್ಯೌಘಪ್ರಹರಂ ಹರಂ ತ್ವಘಹರಂ ಚೇತೋ ಭಜಸ್ವಾಂತರಂ ॥೧೭೫॥

---

ತಾಯಿಯಾದ ಪಾರ್ವತಿಗೆ ಹೇಳಿದುದರಿಂದ, ನೀವು ಇನ್ನು ಮುಂದೆ ತಪ್ಪದೆ ಪರಶಿವನನ್ನು ವಂದಿಸಿರಿ. ನಿಮ್ಮ ಪಾಪಗಳು ಪರಿಹಾರವಾಗುವುವು. ನೀವು ಈಗಲೇ ಚಂದ್ರಶೇಖರನೆನಿಸಿದ ಮಹಾದೇವನ ಪಾದಗಳನ್ನು ಸೇವಿಸಿ ಪಾಪಮುಕ್ತರಾಗಿರಿ. ಏಕೆಂದರೆ ಸಮಸ್ತ ಪಾಪನಾಶಕವಾದ ವಸ್ತುವೆಂದರೆ ಪರಶಿವನ ಪಾದವೊಂದೇ. ಅದು ಪ್ರಸಿದ್ಧವಾದ ಸಂಸಾರವೆಂಬ ಪರ್ವತವನ್ನು ಸುಲಭವಾಗಿ ಭೇದಿಸಬಲ್ಲುದು. ||೧೭೨||

ಈ ಮಹಾದೇವನಾಮಕವಾದ ಹನ್ನೊಂದನೆಯ ಅಂಶವು ಶಿವಲಿಂಗದ ಅಭಿಷೇಕಫಲವನ್ನೂ, ಅದರ ಮಹಿಮೆಯನ್ನೂ ಬಹಳವಾಗಿ ತಿಳಿಯಪಡಿಸುವುದು. ಮತ್ತು ಇದರಲ್ಲಿರುವ ಸಕಲ ಅಂಶಗಳೂ, ಸಂಪೂರ್ಣ ವಾಕ್ಯಗಳೂ ಸಿದ್ಧಾಂತದ ಪರತತ್ತ್ವವನ್ನು ಪ್ರಕಾಶಪಡಿಸುವುವು ಎಂಬುದರಲ್ಲಿ ಸಂದೇಹವಿಲ್ಲ. ಆದ್ದರಿಂದಲೇ ಈ ಅಂಶವು ಪರಮ ಪವಿತ್ರವೂ, ಪೂಜ್ಯತಮವೂ ಮುಖ್ಯವೂ ಎನಿಸಿಕೊಂಡಿದೆ. ||೧೭೪||

ವೇದವೇದಾಂತಗಳಿಂದ ಪ್ರತಿಪಾದ್ಯನಾದ, ಸರ್ವೋತ್ಕೃಷ್ಟಸ್ವರೂಪಿಯಾದ ಮಹಾದೇವನಿಗೆ ವಂದನೆಮಾಡಿ ಮಾನವನು ನಾನಾರೀತಿ ಸ್ತೋತ್ರಮಾಡಬೇಕು.

## ಇತಿ ಶ್ರೀ ಶಿವರಹಸ್ಯೇ ಏಕಾದಶಾಂಶೇ ಮಹಾದೇವಾಖ್ಯೇ ಶಿವಗೌರೀಸಂವಾದೇ ಸರ್ವಧರ್ಮರಹಸ್ಯ ಶಿವಭಕ್ತಿಮಹಿಮಾನಿರೂಪಣಂ ನಾಮ ಪಂಚಾಶೋಽಧ್ಯಾಯಃ

---

ಹಾಗೆಯೇ ಗುರುಮುಖದಿಂದ ಉಪನಿಷತ್ಸಾರವನ್ನೂ, ಉಪನಿಷದರ್ಥಗಳ ಪೂರ್ವಾಪರವಿರೋಧ ಪರಿಹಾರಗಳನ್ನೂ ತಿಳಿದು ಅದರಂತೆ ಅನುಸಂಧಾನಮಾಡಬೇಕು. ಅನಂತರ ಭಕ್ತಿಪರವಶನಾಗಿ ಸದ್ಭಾವನೆಯಿಟ್ಟು ಪರಶಿವನನ್ನು ಸೋಽಹಂಭಾವನೆಯಿಂದ ಅನುಸಂಧಾನಮಾಡಬೇಕು ಹೀಗೆ ಮಾಡುವುದರಿಂದ ಮಾನವರು ತಮ್ಮ ಅಸ್ಥಿರವಾದ ಮಾನುಷತ್ವವನ್ನು ಕಳೆದುಕೊಂಡು, ಎಂದೂ ನಾಶವಿಲ್ಲದ, ದುಃಖ ಸಂಪರ್ಕವೇ ತೋರದ, ಪರಮ ಪದವಿಯನ್ನು ಹೊಂದುವರೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ||೧೭೪||

ಲಕ್ಷ್ಮೀಪತಿಯಾದ ಮಹಾವಿಷ್ಣುವು ಸಹಸ್ರ ಅಲಗುಗಳುಳ್ಳ ದಿವ್ಯ ಚಕ್ರವನ್ನು ಪಡೆಯಲು ಸಹಸ್ರ ಕಮಲಗಳಿಂದಲೂ, ತನ್ನ ಒಂದು ನೇತ್ರದಿಂದಲೂ ಪೂಜಿಸಿ, ಯಾವ ದೇವನನ್ನು ತೃಪ್ತಿಪಡಿಸಿ ತನ್ನ ಇಷ್ಟಾರ್ಥಸಿದ್ಧಿಯನ್ನು ಪಡೆದನೋ ಅಂತಹ ತ್ರಿಪುರಾರಿಯೂ, ವಿಶ್ವೇಶ್ವರನೂ ಆದ ಮಹಾದೇವನನ್ನು ಎಲ್ಲರೂ ಬಿಡದೆ ಧ್ಯಾನಮಾಡಿರಿ. ದೈತ್ಯಸಮೂಹವನ್ನೆಲ್ಲಾ ಧ್ವಂಸಗೊಳಿಸಿ ತನ್ನ ಭಕ್ತರ ಪಾಪರಾಶಿಯನ್ನು ನಿರ್ಮೂಲಗೊಳಿಸುವ ಆ ಮಹಾದೇವನನ್ನು ಬಿಟ್ಟರೆ, ಲೋಕದಲ್ಲಿ ಮತ್ತಾವ ದೇವರನ್ನು ತಾನೆ ಭಜಿಸಬಹುದು. ಎಲೈ ಮನಸ್ಸೇ, ನೀನು ಸದಾ ಪಾಪಪರಿಹಾರಕನಾದ ಮಹಾದೇವನ ಧ್ಯಾನದಲ್ಲಿಯೇ ಮಗ್ನನಾಗು. ಎಂದು ಕುಮಾರಸ್ವಾಮಿಯು ಆತ್ಮಶಿಕ್ಷಾಪೂರ್ವಕವಾಗಿ ಋಷಿಜನರಿಗೆ ಬೋಧಿಸಿದ ಶಿವತತ್ವಸಾರವನ್ನು ಸೂತ ಮಹಾಮುನಿಗಳು ಶೌನಕಾದಿಗಳಿಗೆ ತಿಳಿಸಿದರು. ||೧೭೫||

ಇಲ್ಲಿಗೆ ಶ್ರೀ ಶಿವರಹಸ್ಯದ ಮಹಾದೇವ ನಾಮಕವಾದ ಹನ್ನೊಂದನೆಯ ಅಂಶದಲ್ಲಿ ಶಿವಗೌರಿಸಂವಾದ ರೂಪವಾಗಿ ಸರ್ವಧರ್ಮರಹಸ್ಯವನ್ನೂ ತಿಳಿಯಪಡಿಸುವ ಐವತ್ತನೆಯ ಅಧ್ಯಾಯವು ಸಂಪೂರ್ಣವಾದುದು.

**ಶ್ರೀ ಕಾಶೀ ವಿಶ್ವೇಶ್ವರಾರ್ಪಣಮಸ್ತು**

